# ಕುಮ್ಮಟದುರ್ಗದ ನಾಯಕರು: ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕಿ

ಆಶಾ ವಿ.ಆರ್.

ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಪ್ರಾಧ್ಯಾಪಕರು





ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯



954-87
ASH K

# ಕುಮ್ಮಟದುರ್ಗದ ನಾಯಕರು:
# ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧದ ಕರಡು ಪ್ರತಿ)

ಸಂಶೋಧಕಿ
**ಆಶಾ ವಿ.ಆರ್.**

ಮಾರ್ಗದರ್ಶಕರು
**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
ಪ್ರಾಧ್ಯಾಪಕರು



**ಚರಿತ್ರೆ ವಿಭಾಗ**
ಸಮಾಜವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ-೫೮೩ ೨೭೬
೨೦೧೯

## ಸಂಶೋಧಕರ ಪ್ರಮಾಣಪತ್ರ

**ಕುಮ್ಮಟದುರ್ಗದ ನಾಯಕರು: ಚಾರಿತ್ರಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾ ಪ್ರಬಂಧದವನ್ನು **ಡಾ. ವಿರೂಪಾಕ್ಷಿ ಪೂಜಾರಹಳ್ಳಿ,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ **ಚರಿತ್ರೆ** ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Asha V.R

**(ಆಶಾ ವಿ.ಆರ್.)**

ದಿನಾಂಕ:

ಸ್ಥಳ: ವಿದ್ಯಾರಣ್ಯ

ಸಂಶೋಧನ ವಿದ್ಯಾರ್ಥಿನಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಕುಮ್ಮಟದುರ್ಗದ ನಾಯಕರು: ಚಾರಿತ್ರಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ಪಿಎಚ್.ಡಿ. ಪದವಿಗಾಗಿ **ಆಶಾ ವಿ.ಆರ್.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
ಮಾರ್ಗದರ್ಶಕರು, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

ದಿನಾಂಕ :

ಸ್ಥಳ : ವಿದ್ಯಾರಣ್ಯ

## ಪರಿವಿಡಿ

# ಅಧ್ಯಾಯ : ಒಂದು

## ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧.೪ ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

೧.೫ ಅಧ್ಯಯನದ ಸ್ವರೂಪ

## ಅಧ್ಯಾಯ: ಒಂದು

# ಪ್ರಸ್ತಾವನೆ

ಕರ್ನಾಟಕದ ಮಧ್ಯಕಾಲೀನ ಸಮಾಜ ಸಂಕೀರ್ಣ ಹಾಗೂ ಸಂಘರ್ಷಗಳ ಮತ್ತು ಸ್ಥಿತ್ಯಂತರದ ಕಾಲವಾಗಿತ್ತು. ಸಾಂಸ್ಕೃತಿಕ ಮತ್ತು ಸಾಹಿತ್ಯಿಕವಾಗಿ ಕೆಲವು ಚಳುವಳಿಗಾರರು, ಸಂತರುಗಳು ಸೇರಿದಂತೆ ಮಧ್ಯಕಾಲದಲ್ಲಿ ಪ್ರವೇಶಿಸಿ ಧರ್ಮ, ಮತ, ಜಾತಿಗಳ ನಡುವೆ ಸಮನ್ವಯತೆಯನ್ನು ಸಾಧಿಸಲು ಪ್ರಯತ್ನಿಸಿದರೂ ಅದು ಸಾಧ್ಯವಾಗಲಿಲ್ಲ. ಮಧ್ಯಕಾಲೀನ ಕರ್ನಾಟಕದಲ್ಲಿ ನಿರ್ವಹಿಸಿದ ಮುಸ್ಲಿಂ ಆಡಳಿತವು ಮೊದಲಿದ್ದ ವ್ಯವಸ್ಥೆಯನ್ನು ಹತ್ತಿಕ್ಕುವ ಪ್ರಯತ್ನ ಮಾಡುವುದರ ಜೊತೆಗೆ ಸ್ಥಳೀಯ ಅರಸರ ಸ್ವತ್ತನ್ನು ಹಾಗೂ ಅಧಿಕಾರವನ್ನು ಆಕ್ರಮಿಸಿಕೊಳ್ಳುವ ಪ್ರಯತ್ನದಲ್ಲಿ ತಕ್ಕಮಟ್ಟಿಗೆ ಯಶಸ್ವಿಯಾದರು. ಹಾಗೆಯೇ ಕೆಲವು ಸಮಕಾಲೀನ ಚಿಕ್ಕ ಪುಟ್ಟ ರಾಜ್ಯಗಳನ್ನು ವಶಮಾಡಿಕೊಂಡು, ಅಲ್ಲಿನ ಒಡನಾಟವನ್ನು ಹೊಸಕಿಹಾಕಿದರು. ಒಟ್ಟಿನಲ್ಲಿ ಮಧ್ಯಕಾಲವು ರಾಜಕೀಯ ಮತ್ತು ಸಾಂಸ್ಕೃತಿಕ ವ್ಯವಸ್ಥೆಯ ಬದಲಾವಣೆಗಳಿಗೆ ಒಳಗಾಯಿತು. ಪೂರ್ವದ ಸಾಮ್ರಾಜ್ಯಶಾಹಿಗಳು ಅಸ್ತಂಗತವಾದರು. ಅಂತಹ ಪರಿಣಾಮಗಳಿಂದ ದಕ್ಷಿಣ ಭಾರತದ ಬಹುತೇಕ ಭಾಗಗಳಲ್ಲಿ ಸ್ವತಂತ್ರಗೊಂಡ ಸಣ್ಣ ಪುಟ್ಟ ರಾಜ್ಯಗಳು ಹುಟ್ಟಿಕೊಂಡವು. ಕೇಂದ್ರೀಕೃತ ರಾಜ್ಯವ್ಯವಸ್ಥೆ ಮತ್ತು ಸ್ವಾಯತ್ತತೆಯನ್ನು ಬಯಸುವ ಸಣ್ಣಪುಟ್ಟ ಸಂಸ್ಥಾನಗಳ ನಡುವಿನ ಆಕರ್ಷಣೆ ಮತ್ತು ಹೊಂದಾಣಿಕೆಗಳು ಕೂಡ ತಮ್ಮ ಸೈದ್ಧಾಂತಿಕ ಗ್ರಹಿಕೆಗೆ ಅನುಗುಣವಾದ ಮೌಖಿಕ ದಾಖಲೆಗಳನ್ನು ಸೃಷ್ಟಿಸಿಕೊಂಡವು. ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಪರಿಸರದಲ್ಲಿರುವ ಆನೆಗೊಂದಿಗೆ ಸಮೀಪವಿರುವ ಕುಮ್ಮಟದುರ್ಗವನ್ನು ಕೇಂದ್ರವಾಗಿರಿಸಿಕೊಂಡು ಮುಮ್ಮಡಿಸಿಂಗನ ಮನೆತನದವರು ಆಳ್ವಿಕೆ ನಡೆಸಿದ್ದರಿಂದ ಇವರನ್ನು ಕುಮ್ಮಟದುರ್ಗದ ನಾಯಕರು ಎಂದು ಕರೆಯಲಾಗುತ್ತದೆ.

ಭಾರತವು ವಿವಿಧ ಸಂಸ್ಕೃತಿ, ಭಾಷೆ, ಜಾತಿ ವ್ಯವಸ್ಥೆಗಳನ್ನು ಹೊಂದಿದ್ದ ಹಲವಾರು ರಾಜವಂಶಗಳು ಹಾಗೂ ಪಾಳೆಯಪಟ್ಟುಗಳ ಆಳ್ವಿಕೆಗೆ ಒಳಪಟ್ಟಿತ್ತು. ಹಾಗಾಗಿ ಅಂತಹ ವಿವರಗಳನ್ನೆಲ್ಲ ನಿಖರವಾಗಿ ತುಲನೆ ಮಾಡಲು ಕಷ್ಟಕರವಾಗುತ್ತದೆ. ಅದರಲ್ಲೂ ಕರ್ನಾಟಕದ ಮಧ್ಯಕಾಲೀನ ಕಾಲವು ಸ್ಥಿತ್ಯಂತರದ ಕಾಲವಾಗಿದ್ದು, ಸಾಕಷ್ಟು ಚಳವಳಿಗಳು ಜನ್ಮ ತಾಳಿದ ಕಾಲವಾಗಿದೆ. ದಾಸ ಪರಂಪರೆ, ವಚನ ಚಳವಳಿಗಳು ಹಾಗೂ ಧರ್ಮಗಳ ನಡುವಿನ ಸಾಮರಸ್ಯತೆಯನ್ನು ಮೂಡಿಸುವ

ಭಕ್ತಿ, ಸೂಫಿ ಪಂಥಗಳು ನಂತರದ ಕಾಲದಲ್ಲಿ ಉದಯಿಸಿದವು. ಆದರೂ ಇಂತಹ ಯಾವ ಪರಿಣಾಮ ಮತ್ತು ಪ್ರಭಾವಗಳು ಉತ್ತರ ಭಾರತದ ಸುಲ್ತಾನರ ದಾಳಿಗಳು ತಮ್ಮ ಆಕ್ರಮಣಕಾರಿ ನೀತಿಗಳನ್ನು ಬದಲಾಯಿಸಲು ಸಾಧ್ಯವಾಗಲಿಲ್ಲ ಅವರು ನಿರಂತರ ದಾಳಿಗಳನ್ನು ಅನುಸರಿಸುವ ಮೂಲಕ ದಕ್ಷಿಣ ಭಾರತದ ಅರಸೊತ್ತಿಗೆಗಳನ್ನು ಒಂದೊಂದಾಗಿ ತಮ್ಮ ಅಧೀನ ಮಾಡಿಕೊಂಡರು ಎಂಬುದು ಮಾತ್ರ ವಾಸ್ತವ ಸಂಗತಿಗಳಾದವು.

ಮಧ್ಯಯುಗೀನ ಚರಿತ್ರೆಯನ್ನು ಕುರಿತಂತೆ ವಿದ್ವಾಂಸರುಗಳು ಸಾಕಷ್ಟು ಮಾಹಿತಿಗಳನ್ನು ಹೊರತರುವ ಪ್ರಯತ್ನ ಮಾಡಿದ್ದಾರೆ. ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಆರ್ಥಿಕ ಸಮೀಕ್ಷೆಗಳ ಸಂಗತಿಗಳ ಅವಲೋಕನ ಮಾಡುವುದರ ಜೊತೆಗೆ ಅವರ ಹಲವಾರು ಕೃತಿಗಳು ಬೆಳಕು ಚೆಲ್ಲಿವೆ. ರಾಬರ್ಟ್ ಸಿವೆಲ್ ಬರೆದ 'ಎ ಫಾರ್‌ಗಾಟನ್ ಎಂಫೈರ್ ವಿಜಯನಗರ' ಎಂಬ ಗ್ರಂಥವು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವು ಚಾರಿತ್ರಿಕ ಮಹತ್ವಗಳನ್ನು ಗಮನಿಸಲು ಸಹಾಯಕವಾಗುತ್ತದೆ. ಕೆ. ಅಭಿಶಂಕರ್ ಅವರ 'ಬಳ್ಳಾರಿ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್'ಗಳಲ್ಲಿ ವಿಜಯನಗರ ಮತ್ತು ಪೂರ್ವದ ಸ್ಥಿತಿಗಳ ಕುರಿತು ಮಾಹಿತಿ ದಾಖಲಾಗಿದೆ. ಡಬ್ಲ್ಯೂ ಫ್ರಾನ್ಸಿಸ್ 'ಬಳ್ಳಾರಿ ಜಿಲ್ಲಾ ಗ್ಯಾಸೆಟಿಯರ್' ಬರ್ಟನ್ ಸ್ಟೈನ್‌ರ 'ದಿ ನ್ಯೂವ್ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯಾ ವಿಜಯನಗರ', ಲಾಂಗ್ ಹರ್ಸ್ಟ್‌ರ 'ಹಂಪಿ ರೂಯಿನ್ಸ್', ಬರ್ಟನ್ ಸ್ಟೈನ್‌ರ 'ವಿಜಯನಗರ', ಜಿ.ಎಫ್. ದೀಕ್ಷಿತ್‌ರ 'ಕೀ ನೋಟ್ ಅಡ್ರಸ್ ಇನ್ ವಿಜಯನಗರ ಹಿಸ್ಟರಿ ಸೆಮಿನಾರ್ ಆಫ್ ಹಂಪಿ', ಸಿ.ಎಸ್. ಪಾಟೀಲ್ ಅವರ 'ಮುಮ್ಮಡಿಸಿಂಗ, ಕಂಪಿಲ ಮತ್ತು ಕುಮಾರರಾಮ' ಪುಸ್ತಕದಲ್ಲಿ ಕುಮ್ಮಟದರಸರ ರಾಜಕೀಯ ಇತಿಹಾಸ ಕುರಿತಿರುವ ಮಾಹಿತಿಗಳು ಪ್ರಕಟವಾಗಿವೆ. ಎಂ.ಎಚ್. ರಾಮಶರ್ಮ ಅವರ 'ಸ್ಟಡೀಸ್ ಇನ್ ವಿಜಯನಗರ ಹಿಸ್ಟರಿ' ಎಂಬ ಪುಸ್ತಕದಲ್ಲಿ ವಿಜಯನಗರದ ಪೂರ್ವ ಇತಿಹಾಸವನ್ನು ಕುರಿತಂತೆ ಪ್ರಮುಖ ವಿಚಾರಗಳನ್ನು ಚರ್ಚಿಸಿದ್ದಾರೆ. ವಿಸ್ಕಾನ್ಸಿನ್ ವಿಶ್ವವಿದ್ಯಾಲಯದ ಪ್ರೊ. ನಾರಾಯಣರಾವ್ ಮತ್ತು ಹಿಬ್ರೂ ವಿಶ್ವವಿದ್ಯಾಲಯದ ಪ್ರೊ. ಡೇವಿಡ್ ಶುಲ್ಮನ್‌ರವರು ತೆಲುಗಿನಲ್ಲಿರುವ ಕುಮಾರರಾಮನ ಕುರಿತಾದ ಮಾಹಿತಿಗಳನ್ನು ಸಂಗ್ರಹಿಸಿ ವ್ಯಾಖ್ಯಾನಿಸುವ ಕೆಲಸದಲ್ಲಿ ತೊಡಗಿದ್ದಾರೆ.

ಮಧ್ಯಯುಗೀನ ರಾಜ್ಯಗಳ ಅಧ್ಯಯನದ ಸ್ವರೂಪ ಮಹತ್ವದ್ದಾಗಿದೆ. ಕಾರಣ ಮಧ್ಯಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ ಜೀವನವನ್ನು ಅರ್ಥೈಸಿಕೊಳ್ಳುವಲ್ಲಿ ರಾಜ್ಯವು ಪ್ರಮುಖ ಪಾತ್ರವಹಿಸಿದೆ. ಬಹಳಷ್ಟು ಅಧ್ಯಯನಗಳು ಮಧ್ಯಕಾಲೀನ ಕರ್ನಾಟಕದ ರಾಜವಂಶಗಳನ್ನು ಕುರಿತಂತೆ ಕೇವಲ ಸಾಂಪ್ರದಾಯಿಕ ಹಾದಿಯಲ್ಲಿ ಮಾತ್ರ ನಿರೂಪಣೆಗೊಳ್ಳುತ್ತಾ ಬಂದಿವೆ. ಅವು ಪೂರ್ಣ ಪ್ರಮಾಣದ ವ್ಯವಸ್ಥೆಯನ್ನು ತಿಳಿಸುವಲ್ಲಿ ವಿಫಲವಾಗಿವೆ. ಕೆ.ಎ.ನೀಲಕಂಠಶಾಸ್ತ್ರಿಗಳು ಭಾರತದ ದಕ್ಷಿಣ ಭಾಗದ ರಾಜ್ಯಗಳ ಆಡಳಿತ ವ್ಯವಸ್ಥೆ ಮತ್ತು ಅವುಗಳ ಸ್ವರೂಪವನ್ನು ಕುರಿತು ಚರ್ಚಿಸಿದ್ದಾರೆ. ನಂತರ ಮಧ್ಯಕಾಲದ ರಾಜ್ಯಗಳ ಕುರಿತು ಹೆಚ್ಚು ಅಧ್ಯಯನ ಮಾಡಿದವರು ಟಿ.ವಿ. ಮಹಾಲಿಂಗಮ್ ಅವರು ತಮ್ಮ 'ಸೌಥ್ ಇಂಡಿಯನ್ ಪಾಲಿಟಿ' ಎಂಬ ಸಂಶೋಧನಾ ಗ್ರಂಥದಲ್ಲಿ 'ರಾಜರು

ಶಾಸನಗಳನ್ನು ಹಾಕಿಸುವುದರ ಮೂಲಕ ತಮ್ಮ ಪ್ರಭುತ್ವವನ್ನು, ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತಿದ್ದುದು ಮಧ್ಯಕಾಲೀನದವರೆಗೂ ಮುಂದುವರೆಯುತ್ತಾ ಬಂದಿತು' ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಭಾರತದಲ್ಲಿ ಆರ್ಯರು, ಗ್ರೀಕರು, ಹೂಣರು, ಪರ್ಶಿಯನ್ನರು, ಸಿಥಿಯನ್ನರು, ಮಂಗೋಲಿಯನ್ನರು, ಮಹಮ್ಮದೀಯರು, ಪೋರ್ಚುಗೀಸರು, ಡಚ್ಚರು, ಫ್ರೆಂಚರು, ಬ್ರಿಟಿಷರ ಆಗಮನ, ವಸಾಹತುಶಾಹಿ ವಿಸ್ತರಣೆ ವಿರುದ್ಧ ಪ್ರತಿರೋಧಗಳು ಹುಟ್ಟಿಕೊಂಡಿದ್ದವು. ಆ ನಂತರದ ದಾಳಿಗಳು ಹಾಗೂ ಪ್ರಭುತ್ವವನ್ನು ಕುರಿತಂತೆ ನಮ್ಮ ಇತಿಹಾಸವು ತಿಳಿಸಿಕೊಡುತ್ತದೆ. ಇವರ ದಾಳಿಗಳು ಒಂದಲ್ಲಾ ಒಂದು ಕಾರಣಕ್ಕಾಗಿ ಉತ್ತರ ಮತ್ತು ದಕ್ಷಿಣ ಭಾರತದ ಮೇಲೆ ಪ್ರಭಾವ ಬೀರಿದವು. ಮೊಟ್ಟ ಮೊದಲಿಗೆ ದೆಹಲಿ ಸುಲ್ತಾನರು ದಕ್ಷಿಣದ ಮೇಲೆ ದಂಡೆಯಾತ್ರೆಗಳನ್ನು ಕೈಗೊಳ್ಳುವ ಮೂಲಕ ದಕ್ಷಿಣ ಭಾರತದ ಹೊಸ ಬಗೆಯ ರಾಜಕೀಯ ವಿದ್ಯಮಾನಗಳು ರೂಪಗೊಂಡವು. ಈ ಸಂದರ್ಭವು ಇಡೀ ದಕ್ಷಿಣ ಭಾರತದ ಅರಸರನ್ನು ಭಯಭೀತರನ್ನಾಗಿಸಿತ್ತು. ಕಾರಣ ಖಿಲ್ಜಿ ಮತ್ತು ಮಲ್ಲಿಕಾಫರ್‌ನ ದಾಳಿಗಳು ದ್ವಾರಸಮುದ್ರದ ಹೊಯ್ಸಳರು, ವಾರಂಗಲ್‌ನ ಕಾಕತೀಯರು, ದೇವಗಿರಿ ಸೇವುಣರ ಪ್ರಭುತ್ವ ಮತ್ತು ರಾಜ್ಯ ವಿಸ್ತರಣೆಗೆ ಪ್ರಮುಖ ಅಡ್ಡಿಯಾಗಿದ್ದವು. ಇದೇ ಕಾಲಘಟ್ಟದಲ್ಲಿ ಆಂಧ್ರಪ್ರದೇಶದ ಭಾಗಗಳಲ್ಲಿ ರಾಜಕೀಯ ಸಂಘಟನೆಗಳು ವ್ಯಾಪಕವಾಗಿ ಬೆಳೆಯುತ್ತಾ ಹೋದವು. ಆಂಧ್ರದ ದಕ್ಷಿಣ ಭಾಗದಲ್ಲಿದ್ದ ಸಣ್ಣ ಪುಟ್ಟ ಪ್ರಭುಗಳಾಗಿದ್ದ ಪ್ರೋಲನಾಯಕ, ಪಾಪನಾಯಕರು ಹೊಯ್ಸಳರ ಸಹಾಯದಿಂದ ವಾರಂಗಲ್ಲು, ತೆಲಂಗಾಣ, ಪಾಂಡ್ಯ ರಾಜರ ತೊಂಡೈಮಂಡಲದ ಮೇಲೆ ದಾಳಿ ಮಾಡಿರುವ ಸಂಗತಿಗಳು ವಿರೂಪಾಕ್ಷಿ ಪೂಜಾರಹಳ್ಳಿ ಅವರ 'ವಿಜಯನಗರ ಕಾಲದ ಸಂಸ್ಕೃತಿ' ಎಂಬ ಸಂಶೋಧನಾ ಗ್ರಂಥದಲ್ಲಿ ವಿವರಗಳು ಪ್ರಕಟವಾಗಿವೆ. ಇದೇ ಕಾಲಘಟ್ಟವು ಕುಮ್ಮಟದರಸರ ಬೆಳವಣಿಗೆ ಹಾಗೂ ಪ್ರವರ್ಧಮಾನದ ಕಾಲವಾಗಿತ್ತು.

ಕರ್ನಾಟಕ ಇತಿಹಾಸದಲ್ಲಿ ಕುಮಾರರಾಮನ ಕಥೆಗಳು ಜನಜನಿತವಾಗಿವೆ. ಈತನು ಕೇವಲ ಐತಿಹಾಸಿಕ ವ್ಯಕ್ತಿ ಅಷ್ಟೇ ಅಲ್ಲದೆ, ದೈವಾಂಶ ಸಂಭೂತನಾಗಿ ಮೌಖಿಕ ಅಭಿವ್ಯಕ್ತಿಗಳಿಗೆ ಸಾಕ್ಷಿಯಾಗಿ ಒಬ್ಬ ಮಹಿಮಾ ಪುರುಷನಾಗಿ ಗುರುತಿಸಲ್ಪಟ್ಟಿದ್ದಾನೆ. ಮಧ್ಯಕಾಲೀನ ಕರ್ನಾಟಕದಲ್ಲಿ ಚಿಕ್ಕ ರಾಜ್ಯವಾಗಿದ್ದ ಕುಮ್ಮಟದುರ್ಗ ತನ್ನ ಸಮಕಾಲೀನ ದೊಡ್ಡ ರಾಜ್ಯಗಳಾದ ದ್ವಾರಸಮುದ್ರದ ಹೊಯ್ಸಳರ ರಾಜ್ಯ ದೇವಗಿರಿ ಸೇವುಣರ ರಾಜ್ಯ ಹಾಗೂ ವಾರಂಗಲ್‌ನ ಕಾಕತೀಯ ರಾಜ್ಯಗಳನ್ನೇ ಸೋಲಿಸಿ ನಂತರ ಸೋಲುಂಡು ಪರಾರಿಯಾಗಿ ಜೀವತೆತ್ತರು ಎಂದರೆ ಅತಿಶಯೋಕ್ತಿಯಲ್ಲ. ಕರ್ನಾಟಕದಲ್ಲಿ ಕೆಲವು ಜಿಲ್ಲೆಗಳನ್ನು ಹೊರತುಪಡಿಸಿದರೆ ಸಾಕಷ್ಟು ಭಾಗಗಳಲ್ಲಿ ಕುಮಾರರಾಮನ ವೀರಗಲ್ಲು ಶಾಸನಗಳು, ಶಿಲ್ಪಗಳು, ರುಂಡಾಕೃತಿಗಳು, ಕಂಡುಬರುತ್ತವೆ. ಈತನು ತಳಸಮುದಾಯದ ಸಾಂಸ್ಕೃತಿಕ ವೀರನಾಗಿ ಬೇಡರ ಕುಲಕ್ಕೆ ತಿಲಕವಿದ್ದಂತೆ ಕಂಡುಬಂದಿರುವುದು ಗಮನಾರ್ಹವಾಗಿದೆ. ಕುಮಾರರಾಮ ಚಾರಿತ್ರಿಕ ಅರಸನಾಗಿದ್ದರೂ ಆತನ ಜನಪರ ಕಾರ್ಯಗಳು, ಆತನ ಶಿಸ್ತು, ವ್ಯಕ್ತಿತ್ವ, ಪರನಾರಿ ಸೋದರತ್ವ, ನಂಬಿ ಬಂದವರ ಕೈಹಿಡಿಯುವಲ್ಲಿ ಜನರ ವಿಶ್ವಾಸ ಗಳಿಸಿದ್ದನು. ಕುಮಾರರಾಮ ತನ್ನ ಜೀವಿತ ಕಾಲದಲ್ಲೇ ದಂತ ಕಥೆಯಾಗಿದ್ದನೇನೋ ಎಂಬ ಮಾತು ಪ್ರಾಯಶಃ ಸತ್ಯ ಎನಿಸುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಕುಮ್ಮಟದುರ್ಗದ ಪೂರ್ವದ ಸ್ಥಿತಿಗತಿಗಳನ್ನು ಕುರಿತಂತೆ ಹಾಗೂ ಸಮಕಾಲೀನ ರಾಜಮನೆತನಗಳೊಂದಿಗೆ ಕುಮ್ಮಟದುರ್ಗದ ನಾಯಕರು ಹೊಂದಿದ ಸಂಬಂಧ, ಘರ್ಷಣೆಗಳನ್ನು ಕುರಿತಂತೆ ಶಾಸನ ಪುರಾತತ್ವ ಆಕರಗಳಾದ ದೇವಾಲಯ ಶಿಲ್ಪ ಹಾಗೂ ಇತರೆ ದಾಖಲೆಗಳನ್ನಲ್ಲದೆ ಕಾವ್ಯಗಳಲ್ಲಿ ಅವರ ಕುರಿತು ದಾಖಲಾದ ವಿವರಗಳನ್ನು ವಿಶ್ಲೇಷಿಸುವುದರ ಮೂಲಕ ಅವರ ಚರಿತ್ರೆ ಕಟ್ಟಿಕೊಡುವುದು ಮುಖ್ಯವಾಗಿದೆ. ಸಮಕಾಲೀನ ಅರಸರುಗಳಾದ ದ್ವಾರಸಮುದ್ರದ ಹೊಯ್ಸಳರು, ದೇವಗಿರಿ ಸೇವುಣರು, ವಾರಂಗಲ್‌ನ ಕಾಕತೀಯರು ಉತ್ತರ ಭಾರತದ ಸುಲ್ತಾನರಾದ ಅಲ್ಲಾವುದ್ದೀನ್ ಖಿಲ್ಜಿ ಮತ್ತು ಮಹಮದ್ ಬಿನ್ ತುಘಲಕ್‌ನ ದಾಳಿಗೆ ತತ್ತರಿಸಿ ಹೋಗಿದ್ದರೆ ಕುಮ್ಮಟದುರ್ಗ ಮಾತ್ರ ಪ್ರಬಲವಾಗಿ ಸ್ವತಂತ್ರವಾಗಿತ್ತು. ಕುಮ್ಮಟದುರ್ಗ ರಾಜ್ಯವು ಕ್ರಿ.ಶ.೧೨೮೦ ರಿಂದ ಕ್ರಿ.ಶ. ೧೩೨೭ ರವರೆಗೆ ಚಾರಿತ್ರಿಕ ಆಧಾರಗಳಲ್ಲಿ ಗುರುತಿಸಲ್ಪಟ್ಟಿದ್ದು, ಸುಮಾರು ೪೭ ವರ್ಷಗಳ ಕಾಲ ಇತಿಹಾಸವಿದೆ. ಈ ಕಾಲಾವಧಿಯಲ್ಲಿ ಮುಮ್ಮಡಿಸಿಂಗೆಯನಾಯಕ, ಕಂಪಿಲರಾಯ ಮತ್ತು ಕುಮಾರರಾಮರು ಚರಿತ್ರೆಯಲ್ಲಿ ಗುರುತಿಸಲ್ಪಡುವವರಾಗಿದ್ದು, ಆರಂಭದಲ್ಲಿ ಕುಮಾರರಾಮನನ್ನು ಜನಪದ ಮತ್ತು ಪುರಾಣ ಕೇಂದ್ರೀಕೃತ ದೃಷ್ಟಿಕೋನದಲ್ಲಿ ಮಾತ್ರ ಗುರುತಿಸಲಾಗುತ್ತಿತ್ತು. ಆದರೆ ಈಗಿನ ಸಂಶೋಧನೆಗಳ ಪ್ರಕಾರ ಧರ್ಮ ಸಮನ್ವಯಕಾರ ಜಾತ್ಯಾತೀತ ವ್ಯಕ್ತಿಯಾಗಿ ಹಲವಾರು ಸಮುದಾಯಗಳ ಭಾವನೆಗಳ ಪ್ರತೀಕವಾಗಿ ಸರ್ವಜನಾಂಗಗಳಿಂದಲೂ ಆರಾಧಿಸಿಕೊಳ್ಳುತ್ತಿರುವ ಏಕೈಕ ಐತಿಹಾಸಿಕ ಅರಸ ಕುಮಾರರಾಮನಾಗಿದ್ದಾನೆಂಬ ನೆಲೆಯಲ್ಲಿ ಇತಿಹಾಸ ಸಂಶೋಧನಾಕಾರರು ಗುರುತಿಸುವ ಪ್ರಯತ್ನಗಳನ್ನು ತಮ್ಮ ಅಧ್ಯಯನಗಳ ಮೂಲಕ ಕಟ್ಟಿಕೊಡುತ್ತಿದ್ದಾರೆ.

### ೧.೧. ಅಧ್ಯಯನದ ಉದ್ದೇಶ

ಇತಿಹಾಸದ ಕಾಲಘಟ್ಟದಲ್ಲಿ ನಾಯಕತನ, ಅಮರನಾಯಕತನ, ತಳವಾರ, ನಾಯಕರಾಗುವ ಮುನ್ನವೇ ವಿವಿಧ ಸಣ್ಣ ಪುಟ್ಟ ಮನೆತನಗಳು ಸ್ವತಂತ್ರವಾಗಿ ರಾಜ್ಯ ಕಟ್ಟಿ, ಆಳ್ವಿಕೆ ನಡೆಸಿರುವ ನಿದರ್ಶನಗಳುಂಟು. ಅವುಗಳ ಕುರಿತು ಇತ್ತೀಚೆಗಷ್ಟೆ ಅಧ್ಯಯನಗಳು ತಕ್ಕ ಮಟ್ಟಿಗೆ ನಡೆಯುತ್ತಿವೆ. ಅಷ್ಟೇ ಅಲ್ಲದೆ ದೊಡ್ಡ ದೊಡ್ಡ ರಾಜ್ಯಗಳನ್ನು ಎದುರು ಹಾಕಿಕೊಂಡು ಹೋರಾಟ ಮಾಡಿ ಮಣ್ಣಾಗಿರುವ ಎಷ್ಟೋ ಚರಿತ್ರೆಗಳು ಬೆಳಕಿಗೆ ಬರುತ್ತಿವೆ. ಪ್ರಮುಖವಾಗಿ ವಿಜಯನಗರ ಸಾಮ್ರಾಜ್ಯಕ್ಕೂ ಪೂರ್ವದಲ್ಲಿ ದೆಹಲಿ ಸುಲ್ತಾನರ ದಾಳಿಗಳನ್ನು ದಿಟ್ಟತನದಿಂದ ಎದುರಿಸಿದ ಕೀರ್ತಿ ಕುಮ್ಮಟದರಸರಿಗೆ ಸಲ್ಲುತ್ತದೆ. ಇದು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಕಾರಣವಾಗಿ ಚಿಕ್ಕ ರಾಜ್ಯವಾದರೂ ಇದರ ಸಾಧನೆ ಮಾತ್ರ ಅಪೂರ್ವವಾದುದು. ಹೊಯ್ಸಳ, ಸೇವುಣ, ಬಾದಾಮಿ ಚಾಲುಕ್ಯರ ನಡುವಿನ ರಾಜಕೀಯ ತಿಕ್ಕಾಟಗಳು ದ್ವಾರಸಮುದ್ರದ ಹೊಯ್ಸಳರಿಗೂ ತಗುಲಿದವು. ಉತ್ತರದಲ್ಲಿ ಸೇವುಣರ ದಾಳಿಗಳನ್ನು ಹೊಯ್ಸಳರು ಎದುರಿಸಬೇಕಿತ್ತು. ಮತ್ತೊಂದು ಕಡೆ ಕಾಕತೀಯರ ದಾಳಿಗಳು ದಕ್ಷಿಣದ ಕಡೆ ತಿರುಗಿದವು. ಇವರಿವರ ನಡುವಿನ ಘರ್ಷಣೆಗಳಲ್ಲಿ ತಮ್ಮ ಕಾರ್ಯಗಳನ್ನು ಸಾಧಿಸಿಕೊಂಡವರು ಕುಮ್ಮಟದುರ್ಗದ ನಾಯಕರು

ದ್ವಾರಸಮುದ್ರದ ಹೊಯ್ಸಳರ ಮೂರನೇ ನರಸಿಂಹ ಮತ್ತು ರಾಮನಾಥನ ಸಮಕಾಲೀನನಾಗಿದ್ದ ಮುಮ್ಮಡಿಸಿಂಗೆಯನಾಯಕ ಕುಮ್ಮಟದ ನಾಯಕರ ಮೂಲಪುರುಷನಾಗಿದ್ದಾನೆ. ಕುಮ್ಮಟದುರ್ಗವು ದುರ್ಗಮ ಪ್ರದೇಶವಾಗಿದ್ದು, ಪ್ರಸ್ತುತ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಮುಕ್ಕುಂಪಿ ಗ್ರಾಮದ ದಕ್ಷಿಣ ದಿಕ್ಕಿಗೆ ಸುಮಾರು ೨ ಕಿ.ಮೀ. ಅಂತರದಲ್ಲಿ ಕಂಡುಬರುತ್ತದೆ. ಇವರ ಸಮಕಾಲೀನರಾದ ಹೊಯ್ಸಳ ಹಾಗೂ ಸೇವುಣರ ನಡುವೆ ತಿಕ್ಕಾಟಗಳಾಗುತ್ತಿದ್ದ ಸಂದರ್ಭದಲ್ಲಿ ಮುಮ್ಮಡಿಸಿಂಗನು ತನ್ನದೇ ಸ್ವತಂತ್ರ ರಾಜ್ಯವನ್ನು ಕಟ್ಟಿಕೊಂಡನು. ಇಂತಹ ಸಂದರ್ಭ ಹೊಯ್ಸಳರು ಮತ್ತು ಸೇವುಣರಿಗೆ ಇದು 'ತಡೆರಾಜ್ಯ'ವಾಗಿ ಉದ್ಭವಿಸಿ, ತಮ್ಮ ತಮ್ಮ ರಾಜ್ಯಗಳ ವಿಸ್ತರಣೆಗೆ ತಡೆಯುಂಟಾದವು. ಕುಮ್ಮಟದುರ್ಗವು ಚಿಕ್ಕ ರಾಜ್ಯವಾಗಿದ್ದರೂ, ತನ್ನ ಶಕ್ತಿ ಸಾಮರ್ಥ್ಯದಲ್ಲಿ ಉತ್ತರದ ಸುಲ್ತಾನರನ್ನೂ ಬೆಚ್ಚಿ ಬೀಳಿಸುವಷ್ಟು ಗುರುತಿಸಿಕೊಂಡಿತ್ತು. ತನ್ನ ಸ್ವಂತ ಸಾಮರ್ಥ್ಯದಿಂದ ರಾಜ್ಯ ಕಟ್ಟಿದ ಮುಮ್ಮಡಿಸಿಂಗನು ಪ್ರಾರಂಭದಲ್ಲಿ ಸೇವುಣರ ಆಶ್ರಯದಲ್ಲಿದ್ದು 'ಹನೆಯ'ದಲ್ಲಿ ನೆಲೆಸಿ ಅಲ್ಲಿ ಆಳ್ವಿಕೆ ನಡೆಸಿದನೆಂಬ ಸಂಗತಿಯು ಗಂಗನ 'ಚನ್ನರಾಮ ಸಾಂಗತ್ಯ'ದಲ್ಲಿ ತಿಳಿದುಬಂದಿದೆ. ಆದರೆ ಇದು ರಾಜಧಾನಿಯಾಗಿರದೇ ಸಿಂಗೆಯನು ನೆಲೆಸಿದ್ದ ಪ್ರದೇಶವಾಗಿದ್ದು ನಂತರ ಇಲ್ಲಿಂದ ದೊರವದಿಗೆ ಬಂದು ಇದನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಳ್ಳುತ್ತಾನೆ. ಬಹುಶಃ ಇದು ಸಿಂಗೆಯನ ಆರಂಭದ ಚಿಕ್ಕ ರಾಜಧಾನಿಯೂ ಆಗಿದ್ದಿರಬಹುದು. ಈ ವಾಕ್ಯವನ್ನು ಕ್ರಿ.ಶ. ೧೨೮೦ ಮತ್ತು ಕ್ರಿ.ಶ. ೧೨೮೨ರಲ್ಲಿ ಸೇವುಣರು ದೊರವದಿ ಮೇಲೆ ದಾಳಿ ಮಾಡಿದ ಸಂಗತಿಗಳು ಪುಷ್ಟೀಕರಿಸುತ್ತವೆ. ನಂತರ ಮುಮ್ಮಡಿಸಿಂಗೆಯನ ನಂತರ ಈತನ ಮಗನಾದ ಕಂಪಿಲರಾಯನು ತನ್ನ ತಂದೆಯ ಸಾವಿನ ನಂತರ ತಮ್ಮ ಪರಿವಾರದವರೊಡನೆ ಜಟ್ಟಿಂಗರಾಮೇಶ್ವರಕ್ಕೆ ಬಂದು ಕೆಲವು ಕಾಲ ನೆಲೆಸಿ ಅಲ್ಲಿಂದ ಹೊಸಮಲೆದುರ್ಗಕ್ಕೆ ಬಂದು ಅದನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಳ್ಳುತ್ತಾನೆ. ನಂತರದಲ್ಲಿ ಕುಮ್ಮಟದುರ್ಗವನ್ನು ರಾಜಧಾನಿಯಾಗಿ ಮಾಡಿಕೊಳ್ಳುವ ಮೂಲಕ ತಮ್ಮ ಅಸ್ತಿತ್ವವನ್ನು ಭದ್ರವಾಗಿ ಉಳಿಸಿಕೊಳ್ಳಲು ಕೆಲವು ಯುದ್ಧಗಳನ್ನು ಕೈಗೊಂಡ ಮಾಹಿತಿಗಳಿವೆ. ಹೀಗಾಗಿ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಿದ ಫಲವಾಗಿ ದೊರವದಿಯು ಕುಮ್ಮಟದ ನಾಯಕರ ರಾಜಧಾನಿ ಆಗಿದ್ದು, ಇದಕ್ಕೆ ಪೂರಕವಾದ ಅಂಶಗಳನ್ನು ಚರ್ಚಿಸುವುದು ಉದ್ದೇಶವಾಗಿದೆ.

ಕುಮ್ಮಟದುರ್ಗದ ಪೂರ್ವದ ರಾಜಕೀಯ ಸ್ಥಿತಿಗತಿಗಳು ಕುಮ್ಮಟದ ನಾಯಕರನ್ನು ಬಲಪಡಿಸಿದವು. ಆಡಳಿತದ ಹಂತದಲ್ಲಿ ಮಹಾಮಾಂಡಲಿಕರವರೆಗೂ ತಲುಪಿದರೆಂದರೆ ತಪ್ಪಾಗಲಾರದು. ಇವರ ಪೂರ್ವದ ರಾಜಕೀಯ ಸ್ಥಿತಿಗಳು ಚಿಕ್ಕ ರಾಜ್ಯವನ್ನು ದಿಕ್ಕೆಡಿಸಿದಂತೆ ಮಾಡಿದರೂ ಅದನ್ನು ಸಮತೂಕಕ್ಕೆ ಕೊಂಡೊಯ್ಯುವ ಚಾಕಚಕ್ಯತೆ ಈ ಅರಸರಲ್ಲಿತ್ತು. ಇದಕ್ಕೆ ಪೂರಕವಾಗಿ ನೈಸರ್ಗಿಕ ಪೋಷಣೆಯೂ ಇವರ ಬೆಂಬಲಕ್ಕೆ ನಿಂತಿತು. ಶತ್ರುಗಳನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವ ತಂತ್ರಗಳನ್ನು ಮೈಗೂಡಿಸಿಕೊಂಡಿದ್ದರಿಂದಲೇ ಕುಮ್ಮಟದುರ್ಗ ಪ್ರದೇಶವನ್ನು ತಮ್ಮ ರಾಜಧಾನಿಯಾಗಿ ಗಟ್ಟಿಯಾಗಿ ಉಳಿಸಿಕೊಳ್ಳಲು ಕಾರಣವಾಯಿತು. ಷಣ್ಮುಖಪ್ಪ ಬೊದುರ ಅವರ ಹೊಸಗನ್ನಡ

ಸಾಹಿತ್ಯದಲ್ಲಿ ಕುಮಾರರಾಮ ಎಂಬ ಗ್ರಂಥದಲ್ಲಿ ಮುಮ್ಮಡಿಸಿಂಗೆನಾಯಕನು ಕುಮ್ಮಟದುರ್ಗವನ್ನು ಸ್ಥಾಪಿಸಿಕೊಂಡು ಸ್ವತಂತ್ರ ಆಳ್ವಿಕೆ ಮಾಡಿದನೆಂದು ತಿಳಿಸಲಾಗಿದೆ. ಆದರೆ ಇದಕ್ಕೂ ಪೂರ್ವದಲ್ಲಿ ಚಾಲುಕ್ಯರು, ಚೋಳರ ಅಧೀನದಲ್ಲಿ ಕುಮ್ಮಟದುರ್ಗವಿತ್ತು. ದೆಹಲಿಸುಲ್ತಾನನ ದಾಳಿಗೆ ಸೇವುಣರು, ಹೊಯ್ಸಳರು, ಕಾಕತೀಯರು ಕುಮ್ಮಟದುರ್ಗವನ್ನು ತನ್ನ ಅಧೀನದಲ್ಲಿ ಶಾಶ್ವತವಾಗಿರಿಸಿಕೊಳ್ಳಲು ಸಾಧ್ಯವಾಗದೇ ಅವನತಿ ಕಂಡರು. ಆ ವೇಳೆಗೆ ಕುಮ್ಮಟದುರ್ಗವು ಕುಮ್ಮಟದರಸರ ಅಧೀನವಾಗಿತ್ತು. ಅಂದರೆ ಕುಮ್ಮಟದುರ್ಗವು ಕುಮ್ಮಟದ ನಾಯಕರ ಪೂರ್ವದಲ್ಲಿಯೇ ಪರಿಚಿತವಾಗಿತ್ತು. ನಂತರ ಮುಮ್ಮಡಿಸಿಂಗನು ಸಮಕಾಲೀನ ಅರಸರೊಂದಿಗೆ ಕಾದಾಡಿ ಕುಮ್ಮಟದುರ್ಗವನ್ನು ವಶಪಡಿಸಿ ಕೊಂಡಿರಬೇಕು. ಈತನ ಮರಣಾನಂತರ ಕಂಪಿಲರಾಯ ಮತ್ತು ಕುಮಾರರಾಮ ಇದನ್ನು ಮರು ನಿರ್ಮಾಣ ಮಾಡಿಕೊಂಡು ರಾಜಧಾನಿಗೆ ಸೂಕ್ತ ಪ್ರದೇಶವಾಗಿದ್ದರಿಂದ ಪ್ರಮುಖ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ್ದಾರೆ. ಪ್ರಸ್ತುತವಾಗಿ ಸ್ಥಳೀಯರ ವಾದವೂ ಇದೇ ಆಗಿದ್ದು ಕುಮ್ಮಟದುರ್ಗದ ಮರುನಿರ್ಮಾಣ ಕುಮ್ಮಟದ ನಾಯಕರ ಕಾಲದಲ್ಲಿ ಆಗಿದೆ ಎಂದು ತಿಳಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಪ್ರಸ್ತುತ ಅಧ್ಯಯನವು ಕುಮ್ಮಟದುರ್ಗದ ಪೂರ್ವದ ರಾಜಕೀಯ ಸ್ಥಿತಿಗತಿಗಳನ್ನು ಒಳಗೊಂಡಿದ್ದು, ಆ ನಂತರ ಸಮಕಾಲೀನ ರಾಜರುಗಳೊಂದಿಗೆ ನಡೆದ ಘರ್ಷಣೆಗಳು ಅವರೊಂದಿಗಿನ ಸಂಬಂಧಗಳನ್ನು ಕುರಿತಂತೆ ಶಾಸನಗಳ ಮೂಲಕ ಅಧ್ಯಯನ ನಡೆಸುವ ಪ್ರಯತ್ನ ಮಾಡಲಾಗಿದೆ. ದೇವಗಿರಿ ಸೇವುಣರು ಹಾಗೂ ದ್ವಾರಸಮುದ್ರದ ಹೊಯ್ಸಳರ ನಡುವೆ ತೀವ್ರ ತಿಕ್ಕಾಟಗಳಲ್ಲಿ ನಿರಂತರತೆಯಿದ್ದರೂ ಕುಮ್ಮಟದರಸರನ್ನು ಮಣಿಸಲು ಸಾಧ್ಯವಾಗಲಿಲ್ಲ. ಸೇವುಣರ ರಾಮಚಂದ್ರನು ಉತ್ತರದ ಗುಜರಾತ್ ಹಾಗೂ ಮಾಳ್ವದ ಅರಸನನ್ನು ಸೋಲಿಸಿದರೂ ಕುಮ್ಮಟದ ಸಿಂಗೆಯನಾಯಕನನ್ನು ಸೋಲಿಸಲಾರದೆ ಅವನ ಜೊತೆ ಸ್ನೇಹ ಮಾಡಿಕೊಳ್ಳುತ್ತಾನೆ.[೧] ೧೨೮೭ರ ಲಕ್ಷ್ಮೇಶ್ವರ ಶಾಸನ ಪ್ರಕಾರ ಮುಮ್ಮಡಿಸಿಂಗೆಯನು ಸೇವುಣರ ಸೇನಾನಿಯಾದ ದಾಮೆಯನಾಯಕನನ್ನು ಸೋಲಿಸಿದ್ದು ಹಾಗೂ ೧೩೧೮ರ ನಂತರ ಕಂಪಿಲನು ಬಲ್ಲಾಳನನ್ನು ಸೋಲಿಸಿದ್ದು ಈ ಅಂಶಗಳು ಕುಮ್ಮಟದ ನಾಯಕರ ರಾಜಕೀಯ ಸ್ಥಿರತೆಯನ್ನು ತೋರಿಸುತ್ತವೆ. ಜೊತೆಗೆ ಹೊಯ್ಸಳರಿಗೂ, ಸೇವುಣರಿಗೂ ಕುಮ್ಮಟದ ನಾಯಕರನ್ನು ಮಣಿಸಲು ಸಾಧ್ಯವಾಗದೆ ಸ್ನೇಹವನ್ನು ತಾವೇ ಆಹ್ವಾನಿಸುವಂತಿತ್ತು. ಕರ್ನಾಟಕದ ಧಾರವಾಡ, ನೆರೆಹೊರೆ ಪ್ರದೇಶಗಳು ಈ ಸಂದರ್ಭದಲ್ಲಿ ಯಾರ ಬಿಗಿ ಹಿಡಿತಕ್ಕೂ ಒಳಪಟ್ಟಿರದೇ, ಅರಾಜಕತೆ ತಾಂಡವವಾಡುತ್ತಿತ್ತು. ಜೊತೆಗೆ ದೆಹಲಿಸುಲ್ತಾನರು ರಾಜಕೀಯ ಸಡಿಲತೆಯನ್ನು ತೋರಿಸಿದ ಸಂದರ್ಭದಲ್ಲೇ ಸೇವುಣರು ಮಾಂಡಲಿಕ ಅರಸರನ್ನೆಲ್ಲಾ ಸೋಲಿಸಿದಂತೆ ಕಾಣುತ್ತದೆ. ಆದರೆ ಕುಮ್ಮಟದ ನಾಯಕರನ್ನು ಸೋಲಿಸಲು ಸಾಧ್ಯವಾಗದ ಕಾರಣ ೧೩೦೦-೧೩೨೭ರ ಕಾಲವು ಶೂನ್ಯವಾಗಿತ್ತು. ಈ ಸಂದರ್ಭವನ್ನೇ ಬಳಸಿಕೊಂಡ ಕುಮ್ಮಟದ ನಾಯಕರು ಪ್ರಬಲಶಾಲಿಗಳಾಗಿ ಆಳ್ವಿಕೆ ನಡೆಸಿದರು. ಇವರು ಹೊಯ್ಸಳ ವಂಶದ ಶಾಖೆಯಾಗಿರದೇ ಮಾಂಡಳಿಕ ರಾಜ್ಯದಿಂದ ಸ್ವತಂತ್ರ ರಾಜ್ಯವನ್ನು ಕಟ್ಟಿಕೊಳ್ಳುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಹೊಂದಿದೆ.

ಮುಮ್ಮಡಿಸಿಂಗೆಯನಾಯಕನ ನಂತರ ಅವನ ಮಗನಾದ ಕಂಪಿಲರಾಯ ಹೊಸಮಲೆದುರ್ಗವನ್ನು ನಿರ್ಮಿಸಿ ಅಲ್ಲಿ ತನ್ನ ಆಳ್ವಿಕೆಯನ್ನು ಪ್ರಾರಂಭಿಸಿದನು. ಅಲ್ಲಿಂದ ತನ್ನ ದಾಳಿಗಳನ್ನು ಮುಂದುವರೆಸುತ್ತಾ ಸಮಕಾಲೀನ ಅರಸರುಗಳಾದ ಹೊಯ್ಸಳರು ಸೇವುಣರು, ಕಾಕತೀಯರು ಹಾಗೂ ಸುಲ್ತಾನರನ್ನು ಎದುರಿಸುವ ಮೂಲಕ ತನ್ನ ಮಗನಾದ ಕುಮಾರರಾಮನೊಡನೆ ಸೇರಿಕೊಂಡು ಹಲವು ಪ್ರದೇಶಗಳನ್ನು ತಮ್ಮ ವಶಮಾಡಿಕೊಂಡು ರಾಜ್ಯವನ್ನು ವಿಸ್ತಾರಗೊಳಿಸಿದರು. ಕುಮ್ಮಟದರಸರು ಆರಂಭದಲ್ಲಿ ಸೇವುಣರಿಗೆ ವಿಧೇಯರಾಗಿದ್ದು, ತದನಂತರ ಕೆಲವು ಕಾರಣಗಳು ಇವರ ನಡುವೆ ಯುದ್ಧಗಳನ್ನು ಹುಟ್ಟಿಹಾಕಿದವು. ಸುಮಾರು ಕ್ರಿ.ಶ. ೧೨೮೦ ರಿಂದ ಕ್ರಿ.ಶ. ೧೨೮೭ರ ವರೆವಿಗೂ ಮುಮ್ಮಡಿಸಿಂಗ ಮತ್ತು ಸೇವುಣರ ನಡುವೆ ನಿರಂತರ ಘರ್ಷಣೆಗಳು ನಡೆದವು. ಇದೇ ಕಾಲಘಟ್ಟದಲ್ಲಿ ಹೊಯ್ಸಳರೊಂದಿಗೆ ಮುಮ್ಮಡಿಸಿಂಗನ ಘರ್ಷಣೆಗಳಾದವು. ಆದರೆ ಕೆಲವು ಕಾಲ ಮಾತ್ರ ನಡೆದಿರುವುದು ಕಂಡುಬರುತ್ತದೆ. ಮುಮ್ಮಡಿಸಿಂಗ ಮತ್ತು ಸೇವುಣರ ನಡುವಿನ ದೀರ್ಘ ಘರ್ಷಣೆಗಳನ್ನು ಹಿರೇಕೋಗಿಲೂರಿನಲ್ಲಿ ದೊರೆತಿರುವ ಮೂರು ಶಾಸನಗಳು ಹಾಗೂ ಲಕ್ಷ್ಮೇಶ್ವರ ಶಾಸನಗಳು ದೃಢಪಡಿಸುತ್ತವೆ. ಮುಮ್ಮಡಿಸಿಂಗನು ಪ್ರಾರಂಭದಲ್ಲಿ ಸೇವುಣರ ಅಧೀನವಿದ್ದು, ಅವರಿಂದ ಸ್ವತಂತ್ರಗೊಳ್ಳುವುದು ಒಂದು ಅಂಶವಾದರೆ, ಸೇವುಣರ ಪ್ರದೇಶಗಳನ್ನು ತನ್ನ ಅಧೀನಕ್ಕೆ ಒಳಪಡಿಸಿ ಸ್ವತಂತ್ರ ಅರಸನಾಗಿ ಆಳುವುದು ಮತ್ತೊಂದು ಅಂಶವಾಗಿದೆ. ಸೇವುಣರ ಅಧೀನದಲ್ಲಿದ್ದ ದೊರವದಿಯು ಆಯಕಟ್ಟಿನ ಪ್ರದೇಶವಾಗಿತ್ತು. ರಾಜಧಾನಿಯಾಗಿ ಮಾಡಿಕೊಳ್ಳಲು ಪೂರಕವಾದ ವಾತಾವರಣವಿದ್ದರಿಂದ ದೊರವದಿಯನ್ನು ತನ್ನ ಅಧೀನಪಡಿಸಿಕೊಳ್ಳಲು ನಿರಂತರ ಯುದ್ಧಗಳನ್ನು ಕೈಗೊಳ್ಳುವ ಪ್ರಸಂಗ ಬಂದಿತು. ಸೇವುಣರ ಮೇಲಿನ ಮುಮ್ಮಡಿಸಿಂಗನ ಯುದ್ಧಗಳು ಸಂಪತ್ತಿಗಾಗಿ ನಡೆದಿರಲಿಲ್ಲ. ತನ್ನ ರಾಜ್ಯ ವಿಸ್ತಾರಗೊಳಿಸಲಿಕ್ಕಾಗಿ, ಸ್ವತಂತ್ರ ಆಳ್ವಿಕೆಗಾಗಿ ನಡೆದಿವೆ ಎಂಬ ಅಭಿಪ್ರಾಯವನ್ನು ತಿಳಿಸುವ ಉದ್ದೇಶವಿದೆ. ಈಗಾಗಲೇ ಕುಮ್ಮಟದುರ್ಗದ ನಾಯಕರನ್ನು ಕುರಿತಂತೆ ಸಾಕಷ್ಟು ಸಂಶೋಧನೆಗಳು ನಡೆದಿದ್ದು ಕುಮಾರರಾಮನನ್ನು ಶಾಸನಗಳು ಲಾವಣಿ, ಸಾಂಗತ್ಯ, ಭಜನೆ, ಯಕ್ಷಗಾನ, ಕೋಲಾಟ ಪದಗಳು, ನಾಟಕ, ಕಾದಂಬರಿ ಇತ್ಯಾದಿ ಸಾಹಿತ್ಯ ಪ್ರಕಾರಗಳ ಮೂಲಕ ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಈಗಾಗಲೇ ಕುಮ್ಮಟದ ನಾಯಕರ ಇತಿಹಾಸವನ್ನು ವಿಭಿನ್ನ ನೆಲೆಗಳಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಕುಮ್ಮಟದರಸರ ಮೂಲ, ವಂಶಾವಳಿ, ರಾಜಕೀಯ ಇತಿಹಾಸ, ಯುದ್ಧಗಳು, ಸಾಮಾಜಿಕವಾಗಿ ಅಲ್ಲಿದ್ದಂತಹ ಕೆಲವು ಆಚರಣೆಗಳು, ರಾಜರ ಆಡಳಿತ, ವಿನೋದಾವಳಿಗಳು, ಆರ್ಥಿಕತೆ, ವೃತ್ತಿಗಳು, ಕ್ರೀಡೆಗಳು ಹಾಗೂ ಸಾಂಸ್ಕೃತಿಕ ವಿಚಾರಗಳನ್ನು ಕುರಿತಂತೆ ಕಾವ್ಯಗಳ ಮೂಲಕ, ಸಾಂಗತ್ಯಗಳ ಮೂಲಕ ಪರಿಚಯಿಸಿದ್ದಾರೆ. ಇದೇ ಕಾಲಘಟ್ಟದಲ್ಲಿ ಬರುವಂತಹ ಕವಿಗಳ ಕಾವ್ಯಗಳಲ್ಲಿ ಕುಮ್ಮಟದುರ್ಗದ ರಾಜಕೀಯ, ಸಾಮಾಜ, ಆರ್ಥಿಕ ಸಂಗತಿಗಳು, ಯುದ್ಧಕಲೆಗಳು ಕ್ರೀಡೆಗಳ ಕುರಿತಂತೆ ವಿವಿಧ ಸಂಗತಿಗಳನ್ನು ಚರ್ಚಿಸಲಾಗುತ್ತದೆ. ನಂಜುಂಡನ 'ರಾಮನಾಥ ಚರಿತೆ'ಯು ಕುಮಾರರಾಮನು ಯುದ್ಧಕ್ಕೆ ಸಿದ್ಧನಾಗುತ್ತಿರುವುದು, ಹಾಗೂ ಅವರ ಸಡಗರವನ್ನು ಕುರಿತು ಪ್ರಶಂಸಿಸಿದ್ದಾನೆ. ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ

ಹೇಳುವ ಹಾಗೆ ಕುಮಾರರಾಮನು ಪಗಡೆ ಮತ್ತು ಚೆಂಡಾಟವನ್ನು ಆಡುತ್ತಿದ್ದು, ಇವು ಕಾಲದ ಪ್ರಮುಖ ಆಟಗಳಾಗಿದ್ದವು. ಪಾಂಡವರು ಪಗಡೆಯಾಟದಿಂದ ಅಂತ್ಯ ಕಂಡಂತೆ, ಕುಮಾರರಾಮನು ಪಗಡೆಯಾಟವಾಡಿ ದುರಂತ ಕಂಡಂತಹ ಸಂಗತಿಗಳನ್ನು ಸಾಹಿತ್ಯ ಕೃತಿಗಳು ಪರಿಚಯ ಮಾಡುತ್ತವೆ.

ಪ್ರಸ್ತುತ ಅಧ್ಯಯನದಲ್ಲಿ ಕುಮ್ಮಟದುರ್ಗದ ನಾಯಕರಿಗೆ ಪೂರಕವಾದಂತಹ ಪ್ರಾಥಮಿಕ ಆಕರಗಳನ್ನು ಬಳಸಿಕೊಳ್ಳುವ ಮೂಲಕ ವಿಭಿನ್ನ ನೆಲೆಗಳಲ್ಲಿ ಚರ್ಚಿಸುವುದು ಪ್ರಮುಖ ಉದ್ದೇಶವಾಗಿದೆ. ಕುಮ್ಮಟದುರ್ಗದ ಪೂರ್ವದ ರಾಜಕೀಯ ಸ್ಥಿತಿಗತಿಗಳು ಕುಮ್ಮಟದುರ್ಗದ ನಾಯಕರು ಸಬಲರಾಗಲು ಹೇಗೆ ಉತ್ತೇಜನ ನೀಡಿದವು ಎಂಬುದನ್ನು ಚಾರಿತ್ರಿಕ ನೆಲೆಗಟ್ಟಿನಲ್ಲಿ ತಿಳಿಸಲಾಗುವುದು.

ಕುಮ್ಮಟದ ನಾಯಕರ ಆಳ್ವಿಕೆಯ ಕಾಲಘಟ್ಟ ಕುರಿತಂತೆ ಚರ್ಚಿಸುವುದು. ಈಗಾಗಲೇ ತಿಳಿದಿರುವಂತೆ ಕುಮ್ಮಟದ ನಾಯಕರ ಕಾಲಾವಧಿಯನ್ನು ಕ್ರಿ.ಶ. ೧೨೮೦ರಿಂದ ಕ್ರಿ.ಶ. ೧೩೨೭ರವರೆಗೆ ಎಂದು ಗುರ್ತಿಸಲಾಗಿದೆ. ಕ್ರಿ.ಶ. ೧೨೮೦ಕ್ಕೂ ಪೂರ್ವದಲ್ಲಿ ಮುಮ್ಮಡಿಸಿಂಗನು ಸೇವುಣರ ಅಧೀನದಲ್ಲಿದ್ದಂತೆ ಕಂಡುಬರುತ್ತದೆ. ಅಂದರೆ ಆರಂಭದಲ್ಲಿ ರಾಯದುರ್ಗದ ಭಾಗದ ಹನೆಯಕ್ಕೆ ಬಂದು ನೆಲೆಸಿ ಸೇವುಣರ ವಿಧೇಯನಾಗಿದ್ದುಕೊಂಡು ಸ್ವತಂತ್ರನಾಗಲು ಹವಣಿಸುತ್ತಾನೆ. ಹನೆಯದಲ್ಲಿ ದೊರೆತ ಸಂಪತ್ತಿನ ಜೊತೆ ದೊರವದಿಗೆ ಬಂದು ನೆಲೆಸುತ್ತಾನೆ. ಈ ವೇಳೆಯಲ್ಲಿ ದೊರವದಿಯು ಸೇವುಣರ ಅಧೀನದಲ್ಲಿತ್ತು. ಇದರಿಂದ ಕುಪಿತಗೊಂಡ ಸೇವುಣರ ದಂಡನಾಯಕರನ್ನು ಮುಂದಿಟ್ಟು ಯುದ್ಧ ನಡೆಸುತ್ತಾರೆ. ಆದರೆ ಮುಮ್ಮಡಿಸಿಂಗನಾಯಕನು ಉದ್ದೇಶಪೂರ್ವಕವಾಗಿಯೇ ದೊರವದಿಗೆ ಬಂದು ನೆಲೆಸಿ ತಮ್ಮ ಅಧೀನ ಮಾಡಿಕೊಂಡು ಸ್ವತಂತ್ರ ಆಳ್ವಿಕೆ ಮಾಡಲು ಮುಂದಾಗುತ್ತಾನೆ. ಹೀಗಾಗಿ ಸೇವುಣರ ಮೇಲೆ ನಿರಂತರ ಯುದ್ಧ ಮಾಡಿ ದೊರವದಿ ಹಾಗೂ ನೆರೆಹೊರೆ ಪ್ರದೇಶಗಳನ್ನು ವಶಪಡಿಸಿಕೊಂಡು ಅಧಿಪತಿಯಾಗುತ್ತಾನೆ. ಸೇವುಣರಿಗೆ ಇವನಿಂದ ನಿರಂತರ ಸೋಲು ಲಭಿಸುತ್ತದೆ. ಹೀಗೆ ಕ್ರಿ.ಶ. ೧೨೮೭ರ ವರೆವಿಗೂ ಮುಮ್ಮಡಿಸಿಂಗನ ಆಳ್ವಿಕೆಯಿತ್ತು.[೨] ಅಂದರೆ ಲಕ್ಮೇಶ್ವರ ಶಾಸನದ ಪ್ರಕಾರ ಆತನ ಯುದ್ಧಗಳು ಅಂತ್ಯವಾಗುತ್ತವೆ. ತದನಂತರದಲ್ಲಿ ಈತನು ಮರಣ ಹೊಂದಿರಬೇಕು. ಇದೇ ವೇಳೆಯಲ್ಲಿ ಕುಮ್ಮಟದುರ್ಗವನ್ನು ಹೊಯ್ಸಳರಿಂದ ವಶಪಡಿಸಿಕೊಂಡಂತೆ ಕಾಣುತ್ತದೆ. ಈತನ ಮರಣಾನಂತರ ಕಂಪಿಲನು ತನ್ನ ಪರಿವಾರದವರೊಡನೆ ಆ ಎಲ್ಲಾ ಪ್ರದೇಶಗಳನ್ನು ಬಿಟ್ಟು ವಲಸೆ ಹೋದಾಗ ಜಟ್ಟಂಗ ರಾಮೇಶ್ವರದಲ್ಲಿ ನೆಲೆ ಕಾಣುತ್ತಾರೆ. ನಂತರ ಹೊಸಮಲೆದುರ್ಗಕ್ಕೆ ಬಂದು ನೆಲೆಸಿ ತಮ್ಮ ಆಳ್ವಿಕೆಯನ್ನು ಪ್ರಾರಂಭಿಸುವ ಕಾಲವೇ ಕ್ರಿ.ಶ. ೧೩೦೦ ಎಂದು ಅಂದಾಜಿಸಬಹುದು. ಈ ಕಾಲಾವಧಿಯಿಂದ ನಿರಂತರವಾಗಿ ಕ್ರಿ.ಶ. ೧೩೨೭ರ ವರೆಗೂ ಕಂಪಿಲರಾಯ ಮತ್ತು ಕುಮಾರರಾಮನ ಹೋರಾಟಗಳು ನಡೆಯುತ್ತವೆ. ಕುಮ್ಮಟದ ನಾಯಕರು ಈ ವೇಳೆಗಾಗಲೇ ಸ್ವತಂತ್ರಗೊಳ್ಳುತ್ತಾರೆ. ಆರಂಭದಲ್ಲಿ ಮಾಂಡಲಿಕರಾಗಿದ್ದು, ನಂತರದಲ್ಲಿ ಸ್ವತಂತ್ರ ಆಳ್ವಿಕೆಯನ್ನು ನಡೆಸುತ್ತಾ, ತಮ್ಮ ಅಧೀನರಾಗಿ ಮಾಂಡಲಿಕರನ್ನು ಹೊಂದಿದ್ದರು ಎಂದು ತಿಳಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಕುಮ್ಮಟದ ನಾಯಕರ ರಾಜಧಾನಿಗಳಿಗೆ

ಹೊಸಮಲೆದುರ್ಗ ಹಾಗೂ ಕುಮ್ಮಟದುರ್ಗ ಮಾತ್ರ ಸೇರಿವೆ. ಆದರೆ ಹನೆಯ, ದೊರವದಿ, ಜಟಂಗ ರಾಮೇಶ್ವರ ಪ್ರದೇಶಗಳಲ್ಲಿ ಕುಮ್ಮಟದ ನಾಯಕರ ಅಸ್ತಿತ್ವ ಹೇಗಿತ್ತು. ಈ ಮೂರು ಪ್ರದೇಶಗಳಲ್ಲಿ ರಾಜಧಾನಿಯಾಗುವ ಎಲ್ಲಾ ಲಕ್ಷಣಗಳನ್ನು ಹೊಂದಿದ್ದ ದೊರವದಿ ಪ್ರದೇಶವನ್ನು ಕೇಂದ್ರವಾಗಿರಿಸಿಕೊಂಡು ಹೇಳುವ ಉದ್ದೇಶವು ಪ್ರಸ್ತುತ ಪ್ರಬಂಧದ್ದಾಗಿದೆ. ಕುಮ್ಮಟದ ನಾಯಕರ ಮೂಲ, ಆಳ್ವಿಕೆ, ರಾಜಧಾನಿ, ಯುದ್ಧಗಳು ಇತ್ಯಾದಿ ಕುರಿತಂತೆ ಚಾರಿತ್ರಿಕವಾಗಿ ಚರ್ಚಿಸುತ್ತಾ, ಕುಮ್ಮಟದ ನಾಯಕರು ಬೇಡ ಕುಲಕ್ಕೆ ಸೇರಿದವರು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುವ ಮೂಲಕ ಶಾಸನಗಳ ಆಧಾರ, ವಿದ್ವಾಂಸರ ಅಭಿಪ್ರಾಯಗಳನ್ನು ಓರೆಗೆ ಹಚ್ಚುತ್ತಾ ಸಾಬೀತುಪಡಿಸುವ ಉದ್ದೇಶವಾಗಿದೆ.

* ಪ್ರಸ್ತುತ ಅಧ್ಯಯನದಲ್ಲಿ ಮುಖ್ಯ ಘಟ್ಟವಾದ ಕುಮ್ಮಟದ ನಾಯಕರ ಕಾಲದ ಸಾಂಸ್ಕೃತಿಕ ಅಂಶಗಳಾದ ಸಾಮಾಜಿಕವಾಗಿ ಸಮಾಜ ಮತ್ತು ಅಲ್ಲಿನ ಪದ್ಧತಿಗಳು, ಧರ್ಮ, ಜಾತಿವ್ಯವಸ್ಥೆ ನ್ಯಾಯಪಂಚಾಯಿತಿ ವ್ಯವಸ್ಥೆಯಲ್ಲಿ ಕುಮ್ಮಟದ ನಾಯಕರ ಪಾತ್ರ ಹೇಗಿತ್ತು, ಅಲ್ಲಿನ ಸಮಾಜದ ಆಚಾರ–ವಿಚಾರಗಳಲ್ಲಿ ಎಲ್ಲರೂ ಒಂದೇ ಎನ್ನುವ ಒಗ್ಗೂಡಿಕೆಯ ಮನೋಭಾವ, ಈತ ಚಾರಿತ್ರಿಕ ವ್ಯಕ್ತಿಯೆನಿಸಿಕೊಳ್ಳಲು ಸಾಂಸ್ಕೃತಿಕ ಅಂಶಗಳು ಹೇಗೆ ಕಾರಣವಾಗುತ್ತವೆ ಎಂಬುದರ ಕುರಿತು ಚರ್ಚಿಸುವ ಉದ್ದೇಶವಿದೆ.

* ಆರ್ಥಿಕತೆಯಲ್ಲಿ ಕೃಷಿ, ಕೈಗಾರಿಕೆ, ಕಂದಾಯ ವ್ಯವಸ್ಥೆ, ವ್ಯಾಪಾರ ಅಭಿವೃದ್ಧಿಗಳಲ್ಲಿ ಕುಮ್ಮಟದ ನಾಯಕರ ಪಾತ್ರ ಎಷ್ಟಿತ್ತು ಎಂಬ ಹಲವು ಪ್ರಶ್ನೆಗಳನ್ನು ಹಾಕಿಕೊಳ್ಳುವ ಮೂಲಕ ಅಲ್ಲಿನ ಆರ್ಥಿಕ, ಸಾಮಾಜಿಕ, ಚಿತ್ರಣಗಳನ್ನು ಚರ್ಚಿಸುವುದು, ಇವರ ಕಾಲದಲ್ಲಿ ಲೋಹದ ನಾಣ್ಯಗಳ ಉಪಯೋಗದ ಸುಳಿವನ್ನು ಹಿಡಿದಿಡುವ ಉದ್ದೇಶವೂ ಇದೆ. ಕುಮಾರರಾಮ ಜನಮಾನಸದಲ್ಲಿ ಬೆರೆತುಹೋಗಲು ಈ ಆರ್ಥಿಕ ಅಂಶಗಳೂ ಪ್ರಮುಖ ಕಾರಣ. ಏಕೆಂದರೆ ಆ ರಾಜ್ಯದ ಸಮಾಜ ಸುಧಾರಿಸಬೇಕೆಂದರೆ ಮುಖ್ಯವಾಗಿ ಆರ್ಥಿಕ ಸದೃಢತೆ ಇರಬೇಕು. ಇಂತಹ ಆರ್ಥಿಕತೆ ಅವರ ಕಾಲದಲ್ಲಿತ್ತು, ಇದು ಜನಸಾಮಾನ್ಯರಿಗೆ ಹೇಗೆ ಮಾದರಿಯಾಗಿತ್ತು ಎಂದು ತಿಳಿಸುವ ಉದ್ದೇಶವಿದೆ.

* ಕುಮ್ಮಟದ ನಾಯಕರನ್ನು ಚಾರಿತ್ರಿಕ ವ್ಯಕ್ತಿಯೆಂದು ಗುರುತಿಸಲು ಸಹಾಯಕವಾಗುವ ಸಾಹಿತ್ಯ ಕೃತಿಗಳು, ವೀರಗಲ್ಲುಗಳು, ಶಾಸನಗಳು ಇತರೆ ಸ್ಮಾರಕಗಳ ಸಂದೇಶ ಕುಮಾರರಾಮನನ್ನು ದೈವತ್ವಕ್ಕೆ ಏರಿಸುವುದರ ಹಿನ್ನೆಲೆಯನ್ನು ಚರ್ಚಿಸುವುದು ಪ್ರಮುಖ ಉದ್ದೇಶವಾಗಿದೆ. ಕುಮ್ಮಟದ ನಾಯಕರ ಕಾಲದಲ್ಲಿ ಧರ್ಮವು ರಾಜಧರ್ಮ ರೂಪಿಸಿದ ಮೌಲ್ಯಗಳನ್ನು ಪ್ರಜಾಧರ್ಮದಿಂದ ಬಯಸುತ್ತಿದ್ದ ನಿಷ್ಠೆಗಳನ್ನು ಪ್ರಜೆಗಳಲ್ಲಿ, ರಾಜರುಗಳಲ್ಲಿ, ಸಾಮಂತ ಅರಸರಲ್ಲಿ ಕಂಡುಬರುತ್ತಿದ್ದವು. ಇವರ ಕಾಲದಲ್ಲಿ ಸಹಬಾಳ್ವೆ, ದಯೆ, ಕರುಣೆಯನ್ನೇ ಧರ್ಮವೆಂದು ಭಾವಿಸಿದ ಜನ ಬದುಕಿನ ಸಾಂಸ್ಥಿಕ ಆಯಾಮಗಳನ್ನು, ಮೌಲ್ಯಗಳನ್ನು, ರಾಜಧರ್ಮವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.

೧೩ ಮತ್ತು ೧೪ನೇ ಶತಮಾನಗಳ ಮಧ್ಯಭಾಗದಲ್ಲಿ ಶೈವಧರ್ಮ, ವೈಷ್ಣವಧರ್ಮ, ಜೈನಧರ್ಮಗಳಿಗೆ ಆಶ್ರಯ ಕೊಟ್ಟ ಸಮಕಾಲೀನ ಅರಸರು ತಾವು ಆಶ್ರಯ ಕೊಟ್ಟ ಧರ್ಮದ ಜೊತೆಗೆ ತಾನು ಅನುಸರಿಸುವ ಧರ್ಮವನ್ನು ಪಾಲನೆ ಪೋಷಣೆ ಮಾಡುತ್ತಿದ್ದರು. ಇದರಂತೆ ಕುಮ್ಮಟದ ನಾಯಕರು ವೈದಿಕ ಧರ್ಮವನ್ನು ಅನುಸರಿಸುತ್ತಿದ್ದರಿಂದ ಸಹಜವಾಗಿ ಸಮಕಾಲೀನ ಅರಸರಲ್ಲಿ ಸಾಮ್ರಾಜ್ಯದ ವಿಸ್ತಾರದ ಜೊತೆಗೆ ತಾವು ಆಶ್ರಯ ಕೊಟ್ಟ ಧರ್ಮಗಳನ್ನು ಕಟ್ಟಿ ಉಳಿಸಿಕೊಳ್ಳಲು ಇದ್ದ ಸಮಸ್ಯೆಗಳನ್ನು ಕುರಿತು ತಿಳಿಸುವ ಉದ್ದೇಶವಿದೆ. ಅಂತಿಮವಾಗಿ ಕ್ರಿ.ಶ. ೧೩೨೭ ರಲ್ಲಿ ಕುಮ್ಮಟದುರ್ಗದ ಅವಸಾನವಾಗುತ್ತದೆ ಎಂದು ತಿಳಿದುಬರುತ್ತದೆ.

ಒಟ್ಟಾರೆ ಹೇಳುವುದಾದರೆ ಪ್ರಸ್ತುತ ಅಧ್ಯಯನವು ಕುಮಾರರಾಮನಿಗೆ ಸಂಬಂಧಿಸಿದಂತೆ ಹೊಸದಾಗಿ ಸಂಗ್ರಹಿಸಿರುವ ಮೌಖಿಕ ಗೀತೆಗಳನ್ನು ಸಂಗ್ರಹಿಸುವ ಮೂಲಕ ಹೊಸ ಆಯಾಮಗಳನ್ನು ಕಟ್ಟಿಕೊಡುವ ಉದ್ದೇಶವನ್ನು ಹೊಂದಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಕುಮ್ಮಟದುರ್ಗದ ವ್ಯಾಪ್ತಿಯು ಮಧ್ಯಕಾಲೀನ ಇತಿಹಾಸಕ್ಕೆ ಸಂಬಂಧಿಸಿದ್ದಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಕುಮ್ಮಟದ ನಾಯಕರ ಮೂಲ ನೆಲೆಗಳಾದ ಹನೆಯ ದೊರವದಿ, ಜಟಿಂಗ ರಾಮೇಶ್ವರ, ಹೊಸಮಲೆದುರ್ಗ, ಹಂಪಿ ಹಾಗೂ ಆನೆಗೊಂದಿಯನ್ನು ಸೇರಿಕೊಂಡಂತೆ ಕುಮ್ಮಟದುರ್ಗವು ತನ್ನದೇ ಆದ ಪ್ರಾದೇಶಿಕ ವ್ಯಾಪ್ತಿಯನ್ನು ಒಳಗೊಂಡಿತ್ತು. ಸಾಮಾನ್ಯವಾಗಿ ಇದು ಭೌಗೋಳಿಕ ವ್ಯಾಪ್ತಿಯಾದರೆ ಕ್ರಿ.ಶ. ೧೨೮೦ಕ್ಕೂ ಪೂರ್ವದ ಘಟನಾವಳಿಗಳಿಂದ ಕ್ರಿ.ಶ. ೧೩೨೭ರವರೆಗಿನ ಕಾಲಮಾನದ ವ್ಯಾಪ್ತಿಯನ್ನು ಪ್ರಸ್ತುತ ಪ್ರಬಂಧವು ಒಳಗೊಂಡಿರುವುದು. ವಿಜಯನಗರ, ವಿಜಯನಗರೋತ್ತರ ಸಾಹಿತ್ಯ ಕೃತಿಗಳು, ಶಾಸನಗಳು, ಹಸ್ತಪ್ರತಿಗಳು, ಕೈಫಿಯತ್ತುಗಳು ಮೊದಲಾದ ಆಕರಗಳನ್ನು ಹಾಗೂ ಸಮಕಾಲೀನ ಪ್ರಕಟಿತ ಕೃತಿಗಳು ಮತ್ತು ಲೇಖನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಕುಮ್ಮಟದುರ್ಗವನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗುವುದು. ಕುಮ್ಮಟದುರ್ಗದ ಪೂರ್ವ ಕಾಲದ ಅಧ್ಯಯನವನ್ನು ಇವರ ಸಮಕಾಲೀನ ಅರಸರ ಜೊತೆಗಿನ ಸಂಬಂಧ, ಸಂಘರ್ಷಗಳನ್ನು ಕುರಿತು ನಿಖರವಾದ ದಾಖಲೆಗಳ ಮುಖಾಂತರ ಚರ್ಚಿಸಲಾಗುವುದು. ಕುಮ್ಮಟದ ನಾಯಕರ ರಾಜಧಾನಿಗಳ ಕುರಿತಂತೆ ವಿಶ್ಲೇಷಿಸುವುದರ ಜೊತೆಗೆ ಇವರಿಗೆ ಪೋಷಕ ಪ್ರದೇಶಗಳಾಗಿದ್ದ ಕೆಲವನ್ನು ರಾಜಧಾನಿಗಳಾಗಿ ಗುರುತಿಸುವ ಪ್ರಯತ್ನಗಳನ್ನು ಮಾಡಲಾಗುತ್ತದೆ. ಕುಮ್ಮಟದ ನಾಯಕರ ಪೂರ್ವಾಪರ ಇತಿಹಾಸ, ಅಧಿಕಾರ, ರಾಜಕೀಯ ಏಳಿಗೆಗೆ ತೊಡುಕುಗಳು, ಯುದ್ಧಗಳು, ಒಪ್ಪಂದಗಳು, ರಾಜನೀತಿಗಳು ಮತ್ತು ಹಲವು ಅಂಶಗಳನ್ನು ಕುರಿತಂತೆ ಅವರ ವಿವಿಧ ಕ್ಷೇತ್ರಗಳ ಸ್ಥಿತಿಗತಿಗಳನ್ನು ಕುರಿತು ವಿಶ್ಲೇಷಿಸಲಾಗುವುದು. ಕುಮ್ಮಟದ ನಾಯಕರ ಕಾಲದಲ್ಲಿ ಸಾಮಾಜಿಕ ಸ್ಥಿತಿಗತಿಗಳನ್ನು ಕುರಿತಂತೆ ಸಮಾಜ, ಧರ್ಮ, ಜಾತಿ ವ್ಯವಸ್ಥೆ, ಬೇಟೆ, ಪಶುಪಾಲನೆ ಹಾಗೂ ಆರ್ಥಿಕತೆಯಲ್ಲಿ

ಕೃಷಿ, ಕೈಗಾರಿಕೆ, ವ್ಯಾಪಾರ, ಕಂದಾಯ ವ್ಯವಸ್ಥೆಯನ್ನು ಕುರಿತಂತೆ ಹೊಸ ವಿಚಾರಗಳನ್ನು ಹಾಗೂ ಲೋಹದ ನಾಣ್ಯಗಳ ಪರಿಚಯವಿದ್ದಿತೆಂಬ ವಿಚಾರವನ್ನು ಹೊಸದಾಗಿ ವಿಶ್ಲೇಷಿಸಲಾಗಿದೆ. ನಂತರದಲ್ಲಿ ಕುಮ್ಮಟದ ನಾಯಕರ ಕಾಲದ ಸಾಂಸ್ಕೃತಿಕ ಸಾಧನೆಗಳ ಕುರಿತಂತೆ ಚರ್ಚಿಸಲಾಗಿದ್ದು, ವಿಶೇಷವಾಗಿ ಕುಮ್ಮಟದ ನಾಯಕರು ಚಾರಿತ್ರಿಕ ವ್ಯಕ್ತಿಗಳಾಗಲು ಮೇಲಿನ ಎಲ್ಲಾ ಅಂಶಗಳು ಮುಖ್ಯವಾಗಿ ಅವಶ್ಯಕವಾಗಿವೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೧.೩. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ಮರುಶೋಧನೆ ಮತ್ತು ಮರು ವಿಶ್ಲೇಷಣೆಗೆ ಒಳಪಡುವಂತದ್ದಾಗಿದೆ. ಇಲ್ಲಿ ಪ್ರಾಥಮಿಕ ಆಕರಗಳನ್ನು ವ್ಯಾಪಕವಾಗಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಅನುಷಂಗಿಕ ಆಕರಗಳನ್ನು ಮತ್ತು ಕ್ಷೇತ್ರಕಾರ್ಯದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಇದೊಂದು ಸಮಗ್ರ ಅಧ್ಯಯನ, ವಿವರಣಾ ಮತ್ತು ವಿಮರ್ಶಾತ್ಮಕ ಅಧ್ಯಯನ ವಿಧಾನವಾಗಿದೆ. ಅಧ್ಯಯನಕ್ಕೆ ಪೂರಕವಾದ ಸಾಹಿತ್ಯ ಕೃತಿಗಳನ್ನು ಬಳಸಿಕೊಳ್ಳಲಾಗಿದ್ದು, ಸಂದರ್ಭಕ್ಕನುಸಾರ ಕೊನೆಟಿಪ್ಪಣಿಗಳನ್ನು ಕೊಡಲಾಗಿದೆ. ಅಧ್ಯಯನಕ್ಕೆ ಪೂರಕವಾದ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. ಬೇರೆ ಕೃತಿಗಳಿಂದ ಮಾಹಿತಿಗಳನ್ನು ಪಡೆದು ಉದ್ಧರಣೆ ಮಾಡಲಾಗಿದೆ. ಚರಿತ್ರೆಗೆ ಸಂಬಂಧಪಟ್ಟಂತೆ ರಾಜಪ್ರಭುತ್ವವನ್ನು ಸಾಂಸ್ಕೃತಿಕವಾಗಿ ವಿವಿಧ ಆಯಾಮಗಳ ಮೂಲಕ ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಪ್ರಯತ್ನವನ್ನು ಈ ಅಧ್ಯಯನದ ವಿಧಾನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಇದು ಚಾರಿತ್ರಿಕ ಸಂಶೋಧನ ವಿಧಿ-ವಿಧಾನಗಳನ್ನು ಹೊಂದಿದ್ದು, ಇಲ್ಲಿ ಐತಿಹಾಸಿಕ ಪದ್ಧತಿಯನ್ನು ಬಳಸಿಕೊಳ್ಳಲಾಗುವುದು. ಕುಮ್ಮಟದ ನಾಯಕರ ಕುರಿತು ಲಭ್ಯವಿರುವ ಮೌಖಿಕ ಆಧಾರಗಳು, ಮಾಹಿತಿಗಳು, ವಂಶಾವಳಿ, ಕಾಗದ ಪತ್ರಗಳನ್ನು ಸಂಗ್ರಹಿಸಿಕೊಂಡು ಅಂತರ್‌ಶಿಸ್ತೀಯ ವಿಧಾನದಲ್ಲಿ ಚರ್ಚಿಸಲಾಗುವುದು. ಹಾಗೆಯೇ ಸಂಶೋಧನಾ ಕೃತಿಗಳನ್ನು, ಶಾಸನ ಸಂಪುಟಗಳನ್ನು ಗಮನಿಸಿ ಅರಸರಿಗೆ ಸಂಬಂಧಿಸಿದ ವಿವರಗಳನ್ನು ಸಂಗ್ರಹಿಸಿಕೊಳ್ಳಲಾಗುವುದು. ಕುಮ್ಮಟದುರ್ಗದ ನಾಯಕರ ಅಧ್ಯಯನ ವ್ಯಾಪಕವಾದ ಕಾರ್ಯಕ್ಷೇತ್ರವನ್ನು ಆ ಕಾಲದ ಪ್ರಾಚ್ಯಾವಶೇಷಗಳನ್ನು ಗಮನಿಸಿ ಅಧ್ಯಯನದ ನೆಲೆಯಲ್ಲಿ ಸ್ಥೂಲವಾಗಿ ವಿಶ್ಲೇಷಿಸಲಾಗುವುದು.

### ೧.೪. ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಈವರೆಗೂ ಸ್ಥಳಿಯ ಚರಿತ್ರೆಗಳನ್ನು ಕುರಿತ ಅಧ್ಯಯನಗಳು ನಡೆಯುತ್ತಿದ್ದು, ಇದಕ್ಕೆ ಸಾಕ್ಷಿಯಾದ ಶಾಸನಗಳು, ಕಾವ್ಯಗಳು, ಹಲವು ಶಿಲ್ಪ ಸ್ಮಾರಕಗಳು ಚರಿತ್ರೆಯನ್ನೇ ಮರು ಸೃಷ್ಟಿ ಮಾಡುತ್ತಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕುಮ್ಮಟದುರ್ಗದ ನಾಯಕರ ಇತಿಹಾಸವನ್ನು ಸಾರುತ್ತವೆ. ಚರಿತ್ರೆಯ ಅಧ್ಯಯನವು ವೈಜ್ಞಾನಿಕ ಹಾಗೂ ವೈಚಾರಿಕ ದೃಷ್ಟಿಕೋನದಲ್ಲಿ ಸಾಗುತ್ತಿದೆ. ಪಾಳೆಯಗಾರರನ್ನು ಕುರಿತಂತೆ ಕೆಲವು ವಿದ್ವಾಂಸರು, ಸಂಶೋಧಕರು, ಸಾಹಿತಿಗಳು, ಅಧ್ಯಯನ ಮಾಡಿ, ಚರಿತ್ರೆಯನ್ನು ಹೊರತಂದಿದ್ದಾರೆ. ಇಲ್ಲಿಯವರೆಗೂ ಕುಮಾರರಾಮನನ್ನು ಕುರಿತು ರಚನೆಯಾದ ಸಾಹಿತ್ಯ ಆಕರ

ಗ್ರಂಥಗಳನ್ನು ಗುರುತಿಸಲಾಗಿದ್ದು, ನಂಜುಂಡನ ರಾಮನಾಥ ಚರಿತ್ರೆ(ಕ್ರಿ.ಶ. ೧೫೧೨-೨೫), ಪಾಂಚಾಳ ಗಂಗನ ಚನ್ನರಾಮ ಸಾಂಗತ್ಯ, ಹಳೆಯ ಕುಮಾರರಾಮನ ಸಾಂಗತ್ಯ(ಕ್ರಿ.ಶ. ೧೬೫೦), ಹಂಪೆಯ ಚರಪತಿ ಮಹಾಲಿಂಗಸ್ವಾಮಿಯ ಬಾಲರಾಮನ ಸಾಂಗತ್ಯ (ಕ್ರಿ.ಶ. ೧೭೫೦)ಗಳು ಕುಮ್ಮಟದುರ್ಗದ ಅರಸರನ್ನು ಕುರಿತಂತೆ ಬೇರೆ ಬೇರೆ ರೀತಿಯ ಚಿತ್ರಣಗಳನ್ನು ನೀಡಿವೆ.

ಕುಮ್ಮಟದುರ್ಗದ ಮೂಲ ವಂಶಾವಳಿ ಕುರಿತಂತೆ ವಿದ್ವಾಂಸರಲ್ಲಿ ಬಹಳಷ್ಟು ಚರ್ಚೆಗಳು ನಡೆದಿವೆ. ಕುಮ್ಮಟದ ನಾಯಕರನ್ನು 'ಮರಳೆನವರು', 'ಮುಮ್ಮಡಿ'ಯವರೆಂದು ಎಂ.ಎಂ. ಕಲಬುರ್ಗಿ ಅವರು ಸಂಪಾದಿಸಿರುವ ಕೈಫಿಯತ್ತುಗಳು ಮಾಹಿತಿಗಳನ್ನು ನೀಡುತ್ತವೆ. ಲಕ್ಷ್ಮಣ್ ತೆಲಗಾವಿ ಹಾಗೂ ಎಂ.ವಿ. ಶ್ರೀನಿವಾಸ ಅವರು ಸಂಪಾದಿಸಿರುವ ಹುಲ್ಲೂರು ಶ್ರೀನಿವಾಸ ಜೋಯಿಸರ ಲೇಖನಗಳು ಕುಮ್ಮಟದುರ್ಗದ ನಾಯಕರು ಮೂಲತಃ ಬೇಡ (ನಾಯಕ) ಸಮುದಾಯದವರೆಂದು ಬಲವಾಗಿ ಪ್ರತಿಪಾದಿಸುತ್ತವೆ. ಹಾಗೆಯೇ ಪುವ್ವಲ ವಂಶಸ್ಥರು ಎಂಬ ಅಭಿಪ್ರಾಯಗಳನ್ನು ಸಹ ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಜೋಯಿಸರ ಲೇಖನಗಳಲ್ಲಿ ಕುಮಾರರಾಮನ ವಂಶದವರಿಗೂ ಹಾಗೂ ಚಿತ್ರದುರ್ಗದ ಪಾಳೆಯಗಾರರರಿಗೂ ಸಂಬಂಧವನ್ನು ಕಲ್ಪಿಸಿದ್ದು, ತರೀಕೆರೆ, ಗುಡೇಕೋಟೆ, ಹರಪನಹಳ್ಳಿ, ಪಾಳೆಗಾರರು ಕುಲಸ್ಥರೆಂದು ಹೇಳಿದ್ದಾರೆ. ಇಲ್ಲಿಯವರೆಗೂ ಪ್ರಕಟವಾಗಿರುವ ಸಾಂಗತ್ಯಗಳು ಕುಮ್ಮಟದ ನಾಯಕರನ್ನು ನಾಯಕ ಸಮುದಾಯದವರೆಂದು ಖಚಿತಪಡಿಸುತ್ತವೆ. ಇವರು ಬೇಡ ಸಮುದಾಯಕ್ಕೆ ಸೇರಿದವರೆಂದು ಖಾತ್ರಿಪಡಿಸಲು ಕ್ರಿ.ಶ. ೧೩೧೫ ರ ಕುಮ್ಮಟದುರ್ಗದ ವೀರಗಲ್ಲು ಶಾಸನವನ್ನು ಅಧ್ಯಯನ ಮಾಡಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ವರದರಾಜರಾವ್, ಜಾಗೀರ್‌ದಾರ್, ತುಬಾಕಿ ಸಿ.ಎಸ್. ಪಾಟೀಲ್ ಹಾಗೂ ಸಿ. ಮಹದೇವ ಅವರ ಅಭಿಪ್ರಾಯಗಳನ್ನು ಅಧ್ಯಯನಕ್ಕೆ ಬಳಸಿಕೊಂಡು ಚರ್ಚಿಸಲಾಗಿದೆ. ಇದಕ್ಕೆ ಪೂರಕವಾದ ಮತ್ತೊಂದು ಶಾಸನ ಕೂಡಲಿಯ ಕಲ್ಲುಮಠದ ಶಾಸನವನ್ನು ಬಳಸಿಕೊಳ್ಳಲಾಗಿದೆ.

ಕ್ರಿ.ಶ. ೧೮೦೦ ರಿಂದ ೧೯೭೭ರವರೆಗಿನ ಇಂಗ್ಲೀಷ್ ಮತ್ತು ಕನ್ನಡ ಭಾಷೆಯಲ್ಲಿರುವ ಭಾರತದ ಗೆಜೆಟಿಯರ್‌ಗಳು ಹಾಗೂ ಕರ್ನಾಟಕ ರಾಜ್ಯ ಗೆಜೆಟಿಯರ್‌ಗಳನ್ನು ಸಮಗ್ರವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ಕಾಲಘಟ್ಟದಲ್ಲಿ ದಕ್ಷಿಣ ಭಾರತವನ್ನು ಕುರಿತು ಅಧ್ಯಯನ ಮಾಡಿರುವ ಪ್ರಕಾರ ಕುಮ್ಮಟದುರ್ಗವು ಚಿಕ್ಕ ರಾಜ್ಯವಾಗಿತ್ತು. ಸೇವುಣರು, ಕಾಕತೀಯರು, ಹೊಯ್ಸಳರ ಸಮಕಾಲೀನರಾಗಿದ್ದು, ಆ ಕಾಲಘಟ್ಟದ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಕೆಲ ಸ್ಥಿತ್ಯಂತರಗಳನ್ನು ಎದುರಿಸಬೇಕಾಗಿತ್ತು ಎಂಬ ಅಂಶಗಳು ಕ್ರೂಢೀಕರಣಗೊಂಡಿವೆ.

ಕುಮ್ಮಟದ ನಾಯಕರನ್ನು ಕುರಿತಂತೆ ಹಲವಾರು ಕಾಲಘಟ್ಟಗಳಲ್ಲಿ ತಮ್ಮದೇ ಆದ ದೃಷ್ಟಿಕೋನಗಳಲ್ಲಿ ಪ್ರಮುಖ ಗ್ರಂಥಗಳು ರಚನೆಯಾಗುತ್ತಾ ಬಂದವು. ರಾಷ್ಟ್ರೀಯವಾದಿಗಳು, ವಸಾಹತುಶಾಹಿ ಚರಿತ್ರಾಕಾರರು ಹಾಗೂ ಅಲಕ್ಷಿತ ಅಧ್ಯಯನದ ಮಾದರಿಗಳು ತಲೆಯೆತ್ತಿದವು. ವಸಾಹತುಶಾಹಿ ಕಾಲಘಟ್ಟದಲ್ಲಿ ರಚನೆಯಾದಂತಹ ಕೃತಿಗಳು ವಿಜಯನಗರ ಪೂರ್ವದ ಮತ್ತು

ಆರಂಭದ ಮಾಹಿತಿಗಳನ್ನು ಹೊರಹಾಕುತ್ತಾ ಹೋಗುತ್ತವೆ. ನ್ಯೂನಿಜ್, ಫೆರಿಸ್ತಾ, ಬಾರ್ಬೋಸಾ, ಅಬ್ದುಲ್ ರಜಾಕ್, ನಿಕೆಟಿನ್, ಇಬನ್‌ಬತೂತ, ಫ್ರಾನ್ಸಿಸ್ ಬುಕಾನೆನ್, ಬಾರ್ನಿ ಮತ್ತು ಇಸಾಮಿ ಅವರ ಹೇಳಿಕೆಗಳು ಕುಮ್ಮಟದರಸರು ಚಾರಿತ್ರಿಕ ಅರಸರು, ಇವರಿಗೂ ಯುದ್ಧಕಲೆ ತಿಳಿದಿತ್ತು ಎಂಬ ಅಂಶ ಖಚಿತವಾಗುತ್ತದೆ. ಅಂದರೆ ಮುಸಲ್ಮಾನರ ವಿರುದ್ಧ ಹೋರಾಡಿ ಮಡಿದ ಎಂಬ ಸಂಗತಿಯು ತಿಳಿದುಬರುತ್ತದೆ. ಬರ್ಟನ್ ಸ್ಟೈನ್ ಅವರ 'ವಿಜಯನಗರ' ಡೆರೆಟ್ ಅವರ 'ದಿ ಹೊಯ್ಸಳಾಸ್', ರಾಬರ್ಟ್ ಸಿವೆಲ್‌ರ 'ಮರೆತುಹೋದ ಸಾಮ್ರಾಜ್ಯ', ಲಾಂಗ್ ಹರ್ಸ್ಟ್‌ರ 'ಹಂಪಿ ರೂನಿಸ್' ಎಂಬ ಪ್ರಮುಖ ಆಕರಗಳನ್ನು ಬಳಸಿಕೊಂಡು ಚರ್ಚಿಸಲಾಗಿದೆ. ನ್ಯೂನಿಜ್‌ರು ಕುಮ್ಮಟದುರ್ಗವನ್ನು 'Buffer state' ಎಂದು ಕರೆದಿದ್ದು, ಅಂದರೆ Small, neutral state between two other states that helps to keep peace between them (ಎರಡು ಪ್ರಬಲ ರಾಷ್ಟ್ರಗಳ ನಡುವೆ ಇದ್ದು, ಅವುಗಳ ಘರ್ಷಣೆ ತಡೆಯುವ ದೇಶ).[೩]

ಕುಮ್ಮಟದುರ್ಗ ರಾಜ್ಯವು ಚಿಕ್ಕದಾಗಿದ್ದರೂ ಅತ್ಯಂತ ಪ್ರಬಲವಾಗಿತ್ತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಪೂರ್ವದಲ್ಲಿ ದೆಹಲಿ ಸುಲ್ತಾನರ ದಾಳಿಗಳನ್ನು ಎದುರಿಸಿದ ಕಲಿಗಳ ನಾಡು ಕುಮ್ಮಟದುರ್ಗ ಐತಿಹಾಸಿಕ ಆಧಾರಗಳ ಪ್ರಕಾರ ಕುಮ್ಮಟದರಸರು ಕ್ರಿ.ಶ. ೧೨೮೦ ರಿಂದ ಕ್ರಿಶಕ ೧೩೨೭ರವರೆಗೆ ಸುಮಾರು ೪೭ ವರ್ಷಗಳ ಕಾಲ ಆಳ್ವಿಕೆ ನಡೆಸಿದ್ದಾರೆ. ಕ್ರಿ.ಶ. ೧೨೯೬ ರಲ್ಲಿ ಮಲ್ಲಿಕಾಫರನು ದಂಡೆಯಾತ್ರೆ ಮಾಡಿದಾಗ ಕಂಪಿಲರಾಯ ದಿಟ್ಟತನದಿಂದ ಎದುರಿಸಿದನು. ಆರಂಭದಲ್ಲಿ ಕುಮಾರರಾಮನನ್ನು ಪುರಾಣ ವ್ಯಕ್ತಿಯಾಗಿ, ಜನಪದ ವೀರ, ಸಾಂಸ್ಕೃತಿಕ ವೀರನೆಂತಲೂ ಗುರ್ತಿಸಲಾಗುತ್ತಿತ್ತು. ಆದರೆ ಕುಮಾರರಾಮ ಐತಿಹಾಸಿಕ ವ್ಯಕ್ತಿಯೇ? ಎಂಬ ಪ್ರಶ್ನೆ ಬಂದಾಗ ನಿರರ್ಗಳವಾಗಿ ಹೌದು ಎಂದು ಉತ್ತರ ಕೊಡುವಷ್ಟು ಆಧಾರಗಳು ದೊರೆತಿವೆ. ವಿದೇಶಿ ಇತಿಹಾಸಕಾರರಾದ ಬರಾನಿ, ಇಬನ್‌ಬತೂತ, ನ್ಯೂನಿಜ್, ಫೆರಿಸ್ತಾರ ಗ್ರಂಥಗಳು ಕಂಪಿಲನನ್ನು ಹಾಗೂ ಕಂಪಿಲನು ಮುಸಲ್ಮಾನರೊಂದಿಗೆ ಯುದ್ಧ ಮಾಡಿ ಮಡಿದನೆಂಬ ಸಂಗತಿಯನ್ನು ತಿಳಿಸುತ್ತವೆ. ಈ ಹೇಳಿಕೆಯನ್ನು ಲಕ್ಷ್ಮೇಶ್ವರ ಶಾಸನವು ಹಾಗೂ ಕೆಲವು ಸಾಹಿತ್ಯ ಕೃತಿಗಳು ಪುಷ್ಠೀಕರಿಸುತ್ತವೆ. ಅಂದರೆ ಕ್ರಿ.ಶ. ೧೩೨೭ರಲ್ಲಿ ದೆಹಲಿ ಸುಲ್ತಾನರ ವಿರುದ್ಧ ನಡೆದ ಯುದ್ಧವೇ ಇಲ್ಲಿ ಅಂತಿಮವಾಗಿತ್ತು ಎಂಬುದು ತಿಳಿದುಬರುತ್ತದೆ. ಕುಮಾರರಾಮ ಕಾಲವಾಗುವ ಸಮಯದಲ್ಲೇ ಕಂಪಿಲರಾಯನ ಮರಣವಾಗಿದೆ. ಬಹುಶಃ ದೆಹಲಿ ಸುಲ್ತಾನರ ವಿರುದ್ಧ ಹೋರಾಡಿದ ಮೂರನೇ ಬಾರಿಯ ಯುದ್ಧದಲ್ಲಿಯೇ ಇಬ್ಬರ ಮರಣವಾಗಿದೆ ಎಂಬುದು ಪ್ರಸ್ತುತ ಅಧ್ಯಯನದ ಅಭಿಪ್ರಾಯವಾಗಿದೆ. ಅಂದರೆ ವಿದೇಶಿ ಬರಹಗಾರರ ಹೇಳಿಕೆಗೆ ಪೂರಕವಾಗಿದೆ. ಮೊದಲಿಗೆ ವಿದೇಶಿ ಯಾತ್ರಿಕರಾದ ಬರಾನಿ, ಇಬನ್‌ಬತೂತ, ನ್ಯೂನಿಜ್, ಫೆರಿಸ್ತಾರ ಗ್ರಂಥಗಳು ಕೆಲವು ಸುಳಿವು ನೀಡುತ್ತವೆ. ಚರಿತ್ರೆಯ ದಿಗ್ಗಜರಾದ ಬಿ.ಎಲ್.ರೈಸ್, ಎಂ.ಹೆಚ್.ಕೃಷ್ಣ, ರಾಮಶರ್ಮ, ಕಿಟೆಲ್ ಮೊದಲಾದವರು ಕುಮಾರರಾಮನಿಗೆ ಸಂಬಂಧಿಸಿದ ಕೆಲವು ಮಾಹಿತಿಗಳನ್ನು ತಿಳಿಸಿಕೊಡುವ ಪ್ರಯತ್ನ ಮಾಡಿದ್ದಾರೆ.[೪] ಕುಮ್ಮಟದರಸರ ಪರಿವಾರವನ್ನು ಕುರಿತಂತೆ ಪ್ರಾಚೀನ ಸಾಂಗತ್ಯಗಳಾದ ನಂಜುಂಡನ ರಾಮನಾಥ

ಚರಿತೆ ಪ್ರಮುಖವಾದುದು. ಕುಮ್ಮಟ ಹಾಗೂ ಕುಮಾರರಾಮನ ಬಗ್ಗೆ ಮೊದಲು ತಿಳಿಸಿದವರೆ ನಂಜುಂಡ. ಈತನೇ ಕುಮ್ಮಟದರಸರ ಅಧ್ಯಯನಕ್ಕೆ ಮೊದಲ ಇತಿಹಾಸಕಾರನಾಗುತ್ತಾನೆ. ಪಾಂಚಾಳಗಂಗ ಹಾಗೂ ಮಹಾಲಿಂಗಸ್ವಾಮಿ ವಿರಚಿತ ಸಾಂಗತ್ಯಗಳು, ಕುಮಾರರಾಮನನ್ನು ಚಾರಿತ್ರಿಕ ವ್ಯಕ್ತಿಯಾಗಿಯೂ, ಪೌರಾಣಿಕ ನೆಲೆಯಲ್ಲಿಯೂ ಕಂಡಿರುವುದು ಸಾಮಾನ್ಯವಾಗಿದೆ. ಅಲ್ಲಿನ ಸಮಾಜದ ನಂಬಿಕೆಗಳ ಸಂಕೋಲೆ, ಶಕುನಗಳು, ಒಳಿತು, ಕೆಡುಕುಗಳನ್ನು ಕಾವ್ಯಗಳ ಸುತ್ತ ಹೆಣೆಯುತ್ತಾ ಬಂದಿದ್ದಾರೆ. ಇವು ಜನಪದ ಕಥೆಗಳಿಗೆ ಸಾಕ್ಷಿಯಾಗಿದ್ದರೂ ವಿಭಿನ್ನ ಮುಖಗಳಲ್ಲಿ ರಾಜಕೀಯ ಸ್ಥಿರತೆಯನ್ನು ಕಾಪಾಡುವುದು, ಪ್ರಜೆಗಳ ಯೋಗಕ್ಷೇಮ, ಸೈನಿಕರ ಶುಶ್ರೂಷೆ, ಶಪಥ, ಸ್ತ್ರೀ ಮನೋಭಿಲಾಷೆಗಳನ್ನು ಎತ್ತಿ ಹಿಡಿಯುತ್ತವೆ. ಕುಮ್ಮಟದರಸರ ಸಂದಿಗ್ಧ ಪರಿಸ್ಥಿತಿ, ಪರೋಪಕಾರಿ ಮನೋಭಾವನೆ, ಯುದ್ಧದ ಅನಿವಾರ್ಯತೆಗಳನ್ನು ಪರರಿಗಾಗಿ ಸೃಷ್ಟಿಸಿಕೊಳ್ಳುವ ಸಂಗತಿಗಳು ಅನಾವರಣಗೊಳ್ಳುತ್ತಾ ಹೋಗುತ್ತವೆ.[೫]

ರಾಷ್ಟ್ರೀಯವಾದಿ ಚಿಂತನೆಗಳನ್ನು ಮೈಗೂಡಿಸಿಕೊಂಡ ದೇಶೀ ಬರಹಗಾರರು ವಿಜಯನಗರದ ಅಡಿಪಾಯ, ಅದಕ್ಕೆ ಕಾರಣೀಭೂತ ಅಂಶಗಳನ್ನು ತಮ್ಮ ಗ್ರಂಥಗಳಲ್ಲಿ ಚರ್ಚಿಸುತ್ತಾರೆ. ವಸುಂಧರಾ ಫಿಲಿಯೋಜಾ ಅವರ 'ವಿಜಯನಗರ ಸಾಮ್ರಾಜ್ಯ ಸ್ಥಾಪನೆ', ಪಿ.ಬಿ. ದೇಸಾಯಿ ಅವರ 'ಎ ಹಿಸ್ಟರಿ ಆಫ್ ಕರ್ನಾಟಕ', ಎಂ.ಎಚ್. ರಾಮಶರ್ಮರ 'ಸ್ಟಡೀಸ್ ಇನ್ ವಿಜಯನಗರ ಹಿಸ್ಟರಿ' ಮತ್ತು 'ದಿ ಹಿಸ್ಟರಿ ಆಫ್ ವಿಜಯನಗರ', ಸೂರ್ಯನಾರಾಯಣರಾವ್ ಅವರ 'ನೆವರ್ ಟು ಬಿ ಫರ್‌ಗಾಟನ್ ಎಂಪೈರ್', ಡಿ.ವಿ. ದೇವರಾಜ್ ಹಾಗೂ ಸಿ.ಎಸ್. ಪಾಟೀಲ್‌ರ 'ವಿಜಯನಗರ ಪ್ರೋಗ್ರೆಸ್ ರಿಸರ್ಚ್', ದೀಕ್ಷಿತ್‌ರ 'ಕೀ ನೋಟ್ಸ್ ಅಡ್ರೆಸ್ ಇನ್ ವಿಜಯನಗರ ಹಿಸ್ಟರಿ ಸೆಮಿನಾರ್ ಅಟ್ ಹಂಪಿ', ರಾಯ್ ಅವರ 'ದಿ ಖಿಲ್ಜಿ ಡೈನಾಸ್ಟಿ', ಸಿ.ಎಸ್. ಪಾಟೀಲರ 'ಮುಮ್ಮಡಿಸಿಂಗ, ಕಂಪಿಲ ಅಂಡ್ ಕುಮಾರರಾಮ' ಹಾಗೂ ನೀಲಕಂಠಶಾಸ್ತ್ರಿ, ಬಿ.ಎಲ್. ರೈಸ್, ಬಿ.ಎ. ಸಾಲೆತ್ತೋರೆ, ಶ್ರೀಕಂಠಯ್ಯ ಹಾಗೂ ರಾಬರ್ಟ್ ಸಿವೆಲ್, 'ಆನ್ಯುವಲ್ ರಿಪೋರ್ಟ್ ಆನ್ ಇಂಡಿಯನ್ ಎಪಿಗ್ರಫಿ', 'ಆನ್ಯುವಲ್ ರಿಪೋರ್ಟ್ ಆನ್ ಸೌತ್ ಇಂಡಿಯನ್ ಎಪಿಗ್ರಫಿ', ಎಲ್.ಡಿ. ಬರ್ನೆಟ್ ಅವರ 'ಅನ್‌ಸ್ಕ್ರಿಪ್‌ಷನ್ ಇನ್ ವಿಕ್ಟೋರಿಯಾ ಆಂಡ್ ಆಲ್ಬರ್ಟ್ ಮ್ಯೂಸಿಯಂ' ಡೆರೆಟ್ ಅವರ 'ದಿ ಹೊಯ್ಸಳಾಸ್' 'ಆನ್ಯುವಲ್ ರಿಪೋರ್ಟ್ಸ್ ಆಫ್ ದಿ ಮೈಸೂರು ಆರ್ಕ್ಯಾಲಾಜಿಕಲ್ ಡಿಪಾರ್ಟ್‌ಮೆಂಟ್ 'ಕರ್ನಾಟಕ ಇನ್‌ಸ್ಕ್ರಿಪ್‌ಷನ್ಸ್', 'ಮೈಸೂರು ಇನ್‌ಸ್ಕ್ರಿಪ್‌ಷನ್ಸ್', 'ಎಪಿಗ್ರಫಿಯಾ ಇಂಡಿಕಾ', 'ಎಪಿಗ್ರಫಿಯಾ ಕರ್ನಾಟಿಕಾ' ಇತ್ಯಾದಿ ಮೌಲ್ಯಯುತ ಗ್ರಂಥಗಳನ್ನು ಬಳಸಿಕೊಂಡು ಮಧ್ಯಕಾಲೀನ ರಾಜಕೀಯ ಪೈಪೋಟಿಗಳು ಕುಮ್ಮಟದರಸರ ಮೂಲಕ ವಿಜಯನಗರ ಸ್ಥಾಪನೆಯ ಸಂಗತಿಗಳನ್ನು ತಿಳಿಸಿಕೊಡುತ್ತವೆ.

ನಿಘಂಟುಗಳಾದ ಚಂದ್ರಶೇಖರ ಕಂಬಾರ ಅವರ 'ಕನ್ನಡ ಜಾನಪದ ವಿಶ್ವಕೋಶ', ಅರವಿಂದ ಮಾಲಗತ್ತಿ ಅವರ 'ಕನ್ನಡ ವಿಷಯ ವಿಶ್ವಕೋಶ' (ಜಾನಪದ), ಹಿ.ಚಿ. ಬೋರಲಿಂಗಯ್ಯ ಅವರ 'ಕರ್ನಾಟಕ ಜನಪದ ಕಲೆಗಳ ಕೋಶ' ವೆಂಕಟೇಶ ಇಂದ್ವಾಡಿ ಅವರ 'ಸಾಂಸ್ಕೃತಿಕ ಪದಕೋಶ–೨ ಮುಂತಾದ ಆಕರಗಳನ್ನು ಅವಲೋಕಿಸಿ ಪ್ರಸ್ತುತ ಅಧ್ಯಯನಕ್ಕೆ ಅವಶ್ಯವಿರುವ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ.

ಕುಮಾರರಾಮನಿಗೆ ಸಂಬಂಧಪಟ್ಟಂತೆ ಹಲವಾರು ಆಕರಗಳು ತೆಲುಗು ಭಾಷೆಯಲ್ಲಿ ರಚನೆಯಾಗಿದ್ದು, ಮುಖ್ಯವಾಗಿ 'ಕುಮಾರರಾಮುನಿ ಕಥಾ' ಎಂಬ ತೆಲುಗು ಸಾಂಗತ್ಯ ಹಾಗೆಯೇ ಇನ್ನಿತರ ಕೆಲವು ಕೃತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಇನ್ನೂ ಕೆಲವರು ಮಹತ್ವದ ಕೃತಿಗಳನ್ನು ಸಂಪಾದನೆ ಮಾಡಿದ್ದಾರೆ. ಮುಖ್ಯವಾಗಿ ಎಂ.ಹೆಚ್. ರಾಮಶರ್ಮ, ವರದರಾಜರಾವ್‌ರ ಅವರ 'ಕುಮಾರರಾಮನ ಸಾಂಗತ್ಯಗಳು', 'ಹುಲ್ಲೂರು ಶ್ರೀನಿವಾಸ ಜೋಯಿಸರ ಲೇಖನಗಳು' ಬಿ.ಎಸ್.ಗದ್ದಗಿಮಠ, ಅನಂತರಂಗಾಚಾರ್ ಅವರ 'ಕುಮಾರರಾಮ ಸಾಂಗತ್ಯ ಸಂಗ್ರಹ' ಚದುರಂಗರ 'ಕುಮಾರರಾಮ' ಕೃತಿಗಳು ಕುಮಾರರಾಮನಿಗೆ ಪೂರಕವಾದ ಕೆಲವು ಮೂಲ ಅಂಶಗಳನ್ನು ಪ್ರಕಟಿಸಿರುವ ಮಾಹಿತಿಗಳನ್ನು ಬಳಸಿಕೊಂಡು ಓರೆಗೆ ಹಚ್ಚಲಾಗಿದೆ. ಕುಮಾರರಾಮನನ್ನು ಜನಪದ ವೀರನಾಗಿ ನೋಡುವ ಪ್ರಮುಖ ಕಾವ್ಯಗಳಾದ ಕೆ.ಎಂ.ಮೇತ್ರಿಯವರ 'ಕುಮಾರರಾಮನ ಕಾವ್ಯಗಳು' ಬಿ.ಎಸ್.ಗದ್ದಗಿಮಠ ಅವರ 'ಕುಮಾರರಾಮನ ದುಂದುಮೆ' ಅಂಬಳಿಕೆ ಹಿರಿಯಣ್ಣ ಅವರ 'ಚೆನ್ನಿಗರಾಮ ಕಾಟುಗರಾಮ' ಜಯಪ್ರಕಾಶ ಮಾವಿನ ಕುಳಿ ಅವರ 'ತಂಪಿಲ ರಾಜನ ಪದಗಳು' ಡಿ.ಲಿಂಗಯ್ಯ ಅವರ 'ಚನ್ನಿಗರಾಮ' ಕೃತಿಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕ ಆಕರಗಳಾಗಿವೆ.

ಕುಮ್ಮಟದರಸರಿಗೆ ಪೂರಕವಾದ ಮಾಹಿತಿಗಳನ್ನು ಒದಗಿಸುವ ಪ್ರಮುಖ ನಾಟಕಗಳಾದ 'ಗಂಡುಗಲಿ ಕುಮಾರರಾಮ' ಕಂಪಿಲರಾಜನ ಕಥೆಯ ಹರಿಕಾರರು ನಡೆಸುವ ಜನಪದ ನಾಟಕ ವರದರಾಜರಾಯರ ಕುಮ್ಮಟ ಕೇಸರಿ, ಆಲೂರು ವೆಂಕಟರಾಯರ 'ರಣರಂಗಸಿಂಗ ಕುಮಾರರಾಮ' ಹುಯಿಲಗೋಳ ನಾರಾಯಣರಾವ್ ಅವರ 'ರತ್ನಾಜಿ' ಪ್ರಸ್ತುತ ಅಧ್ಯಯನದ ಸಮೀಕ್ಷೆಗೆ ಸಹಕಾರಿಯಾಗಿವೆ. ಕುಮ್ಮಟದುರ್ಗದ ಅರಸರಿಗೆ ಸಂಬಂಧಿಸಿದಂತೆ ಇಲ್ಲಿಯವರೆವಿಗೂ ಸುಮಾರು ೭೦ ಕ್ಕೂ ಹೆಚ್ಚು ಲೇಖನಗಳು ಹೊರಬಂದಿದ್ದು, ಹುಲ್ಲೂರು ಶ್ರೀನಿವಾಸ ಜೋಯಿಸರು ಸುಮಾರು ೨೦ ಲೇಖನಗಳನ್ನು ರಚಿಸಿದ್ದಾರೆ. ಎಂ.ಹೆಚ್.ರಾಮಶರ್ಮ ಅವರ ಸುಮಾರು ಆರು ಲೇಖನಗಳು, ಪುರುಷೋತ್ತಮ ಬಿಳಿಮಲೆ ಅವರ 'ಕುಮಾರರಾಮ ಮತ್ತು ಕುಮ್ಮಟದುರ್ಗ' ಇತ್ಯಾದಿ ಲೇಖನಗಳನ್ನು ಸಮಗ್ರವಾಗಿ ಬಳಸಿಕೊಳ್ಳಲಾಗಿದೆ. ಕೆಲವು ಪತ್ರಿಕೆಗಳಾದ ಪ್ರಜಾವಾಣಿ, ಕನ್ನಡ ಸಾಹಿತ್ಯ ಪರಿಷತ್ತು, ವಾಗ್ಭೂಷಣ, ಸಂಯುಕ್ತ ಕರ್ನಾಟಕ, ಸುಬೋಧ, ಜಯ ಕರ್ನಾಟಕ, ಪ್ರಬುದ್ಧ ಕರ್ನಾಟಕ, ವಾಲ್ಮೀಕಿ ಸಂದೇಶ, ಕರ್ಮವೀರ, ಶರಣ ಸಾಹಿತ್ಯ ಹಾಗೂ ಕೆಲವು ಸ್ಮರಣ ಸಂಚಿಕೆಗಳಾದ ವಾಲ್ಮೀಕಿ ಬಂಧು, ವಾಲ್ಮೀಕಿ ಜ್ಯೋತಿ, ಬಿಚ್ಚುಗತ್ತಿ, ವಾಲ್ಮೀಕಿ ಮಂದಾರ, ಹರ್ತಿಕೋಟೆ ವೀರೇಂದ್ರಸಿಂಹ ಸಂಗ್ರಹ ಮಾಡಿರುವ 'ದುರ್ಗದ ಧವಳ ಕೀರ್ತಿ', ನೇಗಿನಹಾಳ ಅವರ 'ನೇಗಿನಹಾಳ ಪ್ರಬಂಧಗಳು' ಮುಂತಾದವುಗಳ ಸಮೀಕ್ಷೆ ನಡೆಸುವ ಮೂಲಕ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಮೌಖಿಕ ಆಧಾರಗಳು, ಸ್ಥಳೀಯರ ನಂಬಿಕೆ, ಆಚರಣೆಗಳು ಹಾಗೂ ಕನ್ನಡ ಭಾಷೆಯನ್ನು ಹೊರತುಪಡಿಸಿ ತೆಲುಗು, ತಮಿಳು, ತುಳು ಭಾಷೆಗಳಲ್ಲಿ ಬುಡ್ಗ ಜಂಗಮರ ಬುರ‍್ರಕಥೆ, 'ಗೊಂದಲಿಗರ ಹಾಡು', 'ರಾಮಸ್ವಾಮಿ ಕಥೆ', 'ಕಂಪಲಿರಾಮನ ಕಥೆ', 'ಕುಮಾರರಾಮನ ಕಥೆ', 'ಹರ್ಲಿರಾಮನ

ಕಥೆ' ಹಾಗೂ ದರೋಜಿ ಈರಮ್ಮನ ಕುಮಾರರಾಮನ ಹಾಡುಗಳಿಂದ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ.

ಕಾವ್ಯಗಳಾದ ಎಚ್. ದೇವೀರಪ್ಪ ಅವರ 'ನಂಜುಂಡ ಕವಿ ವಿರಚಿತ ರಾಮನಾಥ ಚರಿತೆ', ಬಿ.ಎಸ್. ಗದ್ದಗಿಮಠ ಅವರ 'ಕುಮಾರರಾಮನ ದುಂದುಮೆ', ಮರುಳಸಿದ್ದಪ್ಪ ಕೆ. ಅವರ 'ಲಾವಣಿಗಳು', ಕೆ.ಎಂ. ಮೇತ್ರಿ ಅವರ 'ಬುಡಕಟ್ಟು ಮಹಾಕಾವ್ಯಗಳಲ್ಲಿ ಕುಮಾರರಾಮ', ಎಂ.ಎಂ. ಕಲಬುರ್ಗಿ ಅವರ 'ಹೊಸ ಕುಮಾರರಾಮನ ಸಾಂಗತ್ಯ', ಕೃಷ್ಣಮೂರ್ತಿ ಹನೂರು ಅವರ 'ಸಾವಿರದ ಸಿರಿ ಬೆಳಗು', ಶಂಕರ ನಾರಾಯಣ ಅವರ 'ಜನಪದ ಮಹಾಕಾವ್ಯ', ಕ.ರಾ.ಕೃ ಅವರ 'ಅಸಮಗ್ರ ಲಾವಣಿಗಳು' ಜನಪದೀಯವಾದ ಕುಮಾರರಾಮನ ಸಂಗತಿಗಳನ್ನು ಪ್ರಸ್ತುತ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

ಗದ್ಯ ಕೃತಿಗಳಾದ ದೇ. ಜವರೇಗೌಡ ಅವರ 'ಕಡುಗಲಿ ಕುಮಾರರಾಮ', ಹುಲ್ಲೂರು ಶ್ರೀನಿವಾಸ ಜೋಯಿಸರ 'ಕಡುಗಲಿ ಕುಮಾರರಾಮ', ವೈ.ಹ. ರಾಮಶರ್ಮ ಅವರ 'ರಣಧೀರ ರಾಮನಾಥ', ಸಿ.ಆರ್. ಹೊಸಳ್ಳಯ್ಯ ಅವರ 'ಅಮರ ಕೀರ್ತಿ', ಜಿ. ವರದರಾಜರಾವ್‌ರ 'ಕುಮ್ಮಟ ಕೇಸರಿ' ಮತ್ತು 'ಕುಮ್ಮಟದುರ್ಗ', ಟಿ.ಆರ್. ಕರಿಬಸವಯ್ಯ ಅವರ 'ಕುಮಾರರಾಮ', ಶ್ರೀಧರ ಕೋಟಿ ರವರ 'ಕುಮಾರರಾಮ' ಇತ್ಯಾದಿ ಕೃತಿಗಳನ್ನು ಸಮೀಕ್ಷೆಗೆ ಒಳಪಡಿಸುವ ಮೂಲಕ ಪ್ರಸ್ತುತ ಅಧ್ಯಯನಕ್ಕೆ ಹೊಸ ವಿಚಾರಗಳನ್ನು ಸೇರಿಸುವ ಉದ್ದೇಶವಿದೆ. ನಾಟಕಗಳಾದ ಚದುರಂಗರ 'ಕುಮಾರರಾಮ' ಶ್ರೀಕಂಠ ಕೂಡಿಗೆ ಅವರ 'ವಾಸುದೇವ ಭೂಪಾಲಂ ಅವರ ಸಮಗ್ರ ಸಾಹಿತ್ಯ' ಎಸ್. ಉಮಾಪತಿ ಅವರ 'ಎರಡು ಐತಿಹಾಸಿಕ ನಾಟಕಗಳು', ವೀರಣ್ಣ ರಾಜೂರ ಅವರ 'ರತ್ನಾಜಿ ಮತ್ತು ಕೆಳದಿ ಚನ್ನಮ್ಮ', ಕನಕಗಿರಿ ವಾದಿರಾಜರ 'ಕುಮಾರರಾಮ', ಎಂ. ವಿಜಯಲಕ್ಷ್ಮಿ ಅವರ 'ಚದುರಂಗರ ಸಮಗ್ರ ನಾಟಕಗಳು' ಕೆ. ವಾದಿರಾಜರ 'ಗುಂಡುಗಲಿ ಕುಮಾರರಾಮ', ಮಧ್ವಕುಮಾರ ಅವರ 'ಕಡುಗಲಿ ಕುಮಾರರಾಮ' ಮುಂತಾದ ಆಕರಗಳನ್ನು ಸಮಗ್ರವಾಗಿ ಬಳಸಿಕೊಳ್ಳಲಾಗಿದೆ.

ಕಾದಂಬರಿಗಳಾದ ರುದ್ರಮೂರ್ತಿಶಾಸ್ತ್ರಿ ಅವರ 'ಕುಮಾರರಾಮ' ಕೊರಟಿ ಶ್ರೀನಿವಾಸರಾವ್ ಅವರ 'ಕುಮಾರರಾಮ' ಮತ್ತು ಕಾದಂಬರಿಯಾದ 'ಕನ್ನಡಿಗರ ಕಾಳರಾತ್ರಿ' ಇತ್ಯಾದಿ ಆಕರಗಳು ಅಧ್ಯಯನದ ಸಮೀಕ್ಷೆಗೆ ಸಹಕಾರಿಯಾಗಿವೆ.

ಎಂ.ಎಂ. ಕಲಬುರ್ಗಿ ಅವರ 'ಹಳೆಯ ಕುಮಾರರಾಮನ ಸಾಂಗತ್ಯ', ಎಂ. ಚಿದಾನಂದಮೂರ್ತಿ ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಎಚ್. ದೇವೀರಪ್ಪ ಅವರ 'ರಾಮನಾಥ ಚರಿತೆ ಅಧ್ಯಯನ', ಸಿ. ಮಹದೇವ ಅವರ 'ಕರ್ನಾಟಕ ಪುರಾತತ್ವ ಶೋಧ', ಪುರುಷೋತ್ತಮ ಬಿಳಿಮಲೆ ಅವರ 'ಕುಮಾರರಾಮ ಮತ್ತು ಕುಮ್ಮಟದುರ್ಗ', ಸಿ. ಮಹದೇವ ಅವರ 'ಕುಮ್ಮಟದುರ್ಗದ ಅರಸರು', ಲಕ್ಷ್ಮಣ್ ತೆಲಗಾವಿ ಅವರ 'ಹರತಿಸಿರಿ', ಜಿ. ವರದರಾಜರಾವ್‌ರ 'ಕುಮಾರರಾಮನ

ಸಾಂಗತ್ಯಗಳು', ಎಂ.ಎಂ. ಕಲಬುರ್ಗಿ[೬] ಅವರ 'ಹೊಸ ಕುಮಾರರಾಮನ ಸಾಂಗತ್ಯ'[೭], ಜಿ. ವರದರಾಜರಾವ್‌ರ 'ಕುಮ್ಮಟ ಕೇಸರಿ', ವಿರೂಪಾಕ್ಷಿ ಪೂಜಾರಹಳ್ಳಿ ಅವರ 'ವಿಜಯನಗರ ಕಾಲದ ಸಂಸ್ಕೃತಿ', 'ಬಳ್ಳಾರಿ ಜಿಲ್ಲೆಯ ಪಾಳೆಯಗಾರರು' ಮತ್ತು 'ಬೇಟೆ ಮತ್ತು ಬೇಡರು', ಸಾವಿತ್ರಿ ಎಸ್.ಎಂ.ರ 'ಕುಮಾರರಾಮ ಸಂಪ್ರದಾಯದ ಅಧ್ಯಯನ', ಅಂಬಳಿಕೆ ಹಿರಿಯಣ್ಣರ 'ತಂಬೂರಿ ಸಂಪ್ರದಾಯಿಕ ಕಾವ್ಯಗಳು' ಎಂ.ಎನ್. ತಳವಾರರ 'ನಂಜುಂಡ ಕವಿಯ ರಾಮನಾಥ ಚರಿತೆ', ಕೆ.ಎಂ. ಮೇತ್ರಿ ಅವರ 'ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ', ರಾಮೇಗೌಡ ಅವರ 'ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು' ಹರ್ಲಾಪುರ ಸುರೇಶ ಅವರ 'ಕೈಫಿಯತ್ತುಗಳಲ್ಲಿ ಕುಮಾರರಾಮ', ದೇ. ಜವರೇಗೌಡ ಅವರ 'ನಂಜುಂಡಕವಿ', ವಿರೂಪಾಕ್ಷಿ ಪೂಜಾರಹಳ್ಳಿ ಅವರ 'ವಾಲ್ಮೀಕಿ ಸಿರಿ', ಕುಂ.ಬಾ. ಸದಾಶಿವಪ್ಪ ಅವರ 'ವಿಶ್ವದ ವಿಭೂತಿ ಪುರುಷರು', ಸೂರ್ಯನಾಥ ಕಾಮತ್‌ರ 'ಸೂರ್ಯಕೀರ್ತಿ' ರಂ.ಶ್ರೀ ಮುಗಳಿ ಅವರ 'ಕನ್ನಡ ಕಾವ್ಯ ಸಂಚಯ', ಡಂಕಿನ್ ಝಳಕಿ ಅವರ 'ಭಾರತದಲ್ಲಿ ಜಾತಿ ವ್ಯವಸ್ಥೆ ಇದೆಯೇ', ರಹಮತ್ ತರೀಕೆರೆ ಅವರ 'ಕರ್ನಾಟಕದ ಶಾಕ್ತಪಂಥ' ಇತ್ಯಾದಿ ಆಕರಗಳನ್ನು ಕುರಿತಂತೆ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಲೇಖನಗಳಾದ ಹುಲ್ಲೂರು ಶ್ರೀನಿವಾಸ ಜೋಯಿಸರ 'ಐತಿಹಾಸಿಕ ಲೇಖನಗಳು' ವಿರೂಪಾಕ್ಷಿ ಪೂಜಾರಹಳ್ಳಿ ಅವರ 'ಬಳ್ಳಾರಿ ಜಿಲ್ಲೆಯ ಪಾಳೆಯಗಾರರು', ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಅವರ 'ಹುಲ್ಲೂರು ಶ್ರೀನಿವಾಸ ಜೋಯಿಸರ ಲೇಖನಗಳು', ಎಸ್.ವೈ. ಸೋಮಶೇಖರ್ ಅವರ 'ಕುಮ್ಮಟದ ಅರಸರು', ಮೊಗಳ್ಳಿ ಗಣೇಶ್ ಮತ್ತು ಹಿ.ಚಿ. ಬೋರಲಿಂಗಯ್ಯ ಅವರ 'ಮೌಖಿಕ ಪರಂಪರೆಯ ದೇಶೀ ಕಥನಗಳು', ಎಂ.ವಿ. ಚಿತ್ರಲಿಂಗಯ್ಯ ಅವರ 'ಪರನಾರಿ ಸೋದರನ ಕಥೆ', ಆರ್.ಬಿ. ಕಿತ್ತೂರ್ ಅವರ 'ವಾಲ್ಮೀಕಿ ವಂಶಜರು', ಎಂ.ವಿ. ಚಿತ್ರಲಿಂಗಯ್ಯ ಅವರ 'ಮುಮ್ಮಡಿ ಸಿಂಗೇನಾಯಕ', ಕೆ. ಅಭಿಶಂಕರ್ ಅವರ 'ಕಂಪಿಲಿ/ಕುಮ್ಮಟ: ಚಿಕ್ಕ ರಾಜ್ಯದ ದೊಡ್ಡ ಮಾರ್ಮಿಕ ಪಾತ್ರ' ಕೋಲುಕಾರ ನೇ.ಹ. ಅವರ 'ವಾಲ್ಮೀಕಿ ಸಂದೇಶ', ಬಿ.ಆರ್. ತುಬಾಕಿ ಅವರ 'ಕುಮ್ಮಟದುರ್ಗ ವಿಜಯನಗರದ ಅಡಿಗಲ್ಲು', ಕೆ.ಎಸ್. ತಳವಾರ ಅವರ 'ಗಂಡುಗಲಿ ಕುಮಾರರಾಮ', ಹರ್ತಿಕೋಟೆ ವೀರೇಂದ್ರಸಿಂಹ ಅವರ 'ನಾಯಕ ಜನಾಂಗದ ಪರಂಪರೆ', ಪಾಂಡುರಂಗರಾವ್ ದೇಸಾಯಿ ಅವರ 'ಕರ್ನಾಟಕದ ಪ್ರಥಮ ಸ್ವಾತಂತ್ರ್ಯ ವೀರ', ಲಕ್ಷ್ಮಣ್ ತೆಲಗಾವಿ ಅವರ 'ಹರತಿಸಿರಿ' ಹಾಗೂ 'ಕನ್ನಡ ಕಡುಗಲಿ ಕುಮಾರರಾಮನ ಚಾರಿತ್ರಿಕತೆ', ಎಂ.ಬಿ. ನೇಗಿನಹಾಳ ಅವರ 'ಕನ್ನಡ ಸಾಹಿತ್ಯ ಕೃತಿಗಳಲ್ಲಿ ಬೇಡ ಜನಾಂಗ', ತಿಪ್ಪೇಸ್ವಾಮಿ ಅವರ 'ಬೇಡರ ಧರ್ಮಪೀಠಗಳು, ಮಠಗಳು, ದೇವಾಲಯಗಳು', ಕಪಟರಾಳ ಕೃಷ್ಣರಾಯ ಅವರ 'ಕಂಪಲಿರಾಯನೂ ಅವನ ಸ್ಥಾನಮಾನವೂ', ಸುರೇಶ ಬ. ಹರ್ಲಾಪುರ ಅವರ 'ಪರನಾರಿ ಸೋದರ ಕುಮಾರರಾಮ', ಶರಣಬಸಪ್ಪ ಕೋಲ್ಕಾರ್ ಅವರ ಲೇಖನಗಳ ಸಮೀಕ್ಷೆಯು ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ನೀಡಿವೆ.

ಪಿಎಚ್.ಡಿ. ಮಹಾಪ್ರಬಂಧಗಳಾದ ಮಂಜುನಾಥ ಟಿ.ಎಂ. ಅವರ 'ಕುಮ್ಮಟದ ನಾಯಕರು: ಒಂದು ಸಾಂಸ್ಕೃತಿಕ ಅಧ್ಯಯನ', ಹರ್ಲಾಪುರ ಸುರೇಶ್ ಬಿ. ಅವರ 'ಕುಮಾರರಾಮನ ಅಧ್ಯಯನ

ಆಕರಗಳು', ಡಿ.ಬಿ. ಕರಡೋಣಿ ಅವರ 'ಜನಪದ ಸಾಹಿತ್ಯದಲ್ಲಿ ಕುಮಾರರಾಮ', ಅಮರೇಶರ 'ಕುಮಾರರಾಮನ ಕಾವ್ಯಗಳು' ಇತ್ಯಾದಿ ಪ್ರಬಂಧಗಳನ್ನು ಆಧಾರವಾಗಿಟ್ಟುಕೊಂಡು ಪರಾಮರ್ಶಿಸಲಾಗಿದೆ.

ಒಟ್ಟಾರೆ ಕುಮ್ಮಟದುರ್ಗದ ನಾಯಕರ ಅನೇಕ ಸಂಗತಿಗಳನ್ನು ಕುರಿತಂತೆ ಈಗಾಗಲೇ ಸಾಕಷ್ಟು ವಿಚಾರಗಳನ್ನು ವಿದ್ವಾಂಸರು ಬೆಳಕಿಗೆ ತಂದಿದ್ದಾರೆ. ಇಂತಹ ಸಂಗತಿಗಳನ್ನು ಆಧಾರವಾಗಿಟ್ಟುಕೊಂಡು ವಿಭಿನ್ನ ನಿಲುವುಗಳನ್ನು ವ್ಯಕ್ತಪಡಿಸುವ ಮೂಲಕ ಪ್ರಬಂಧ ರಚಿಸಲಾಗುತ್ತದೆ.

### ೧.೫. ಅಧ್ಯಯನದ ಸ್ವರೂಪ

ಕುಮ್ಮಟದುರ್ಗ ನಾಯಕರ ಬಗ್ಗೆ ಈಗಾಗಲೇ ಅಧ್ಯಯನ ಮಾಡಿರುವ ವಿದ್ವಾಂಸರು ಅವರ ಕೃತಿಗಳನ್ನು ಅವಲೋಕಿಸಿ ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸಿ ಮೌಖಿಕ ಆಕರಗಳನ್ನು ಬಳಸಿಕೊಂಡು ಅಧ್ಯಯನದ ವಸ್ತು ವಿಷಯಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಪ್ರಬಂಧವು ಎಂಟು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೇ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ, ಹಾಗೂ ಅಧ್ಯಯನಗಳ ಸಮೀಕ್ಷೆಯನ್ನು ಒಳಗೊಂಡಿರುತ್ತದೆ.

ಎರಡನೇ ಅಧ್ಯಾಯದಲ್ಲಿ ಕುಮ್ಮಟದುರ್ಗದ ಪೂರ್ವದ ರಾಜಕೀಯ ಸ್ಥಿತಿಗಳು ಹಾಗೂ ಸಮಕಾಲೀನ ರಾಜಮನೆತನಗಳಾದ ದ್ವಾರಸಮುದ್ರದ ಹೊಯ್ಸಳರು, ದೇವಗಿರಿಯ ಸೇವುಣರೊಂದಿಗೆ ಕುಮ್ಮಟದುರ್ಗದ ಅರಸರ ಸಂಬಂಧ ಹಾಗೂ ಸಂಘರ್ಷಗಳ ಕುರಿತಂತೆ ಅವಲೋಕನ ನಡೆಸಲಾಗುವುದು. ಹಾಗೆಯೇ ಕುಮ್ಮಟದುರ್ಗದರಸರ ಪೂರ್ವದಲ್ಲಿ ಕುಮ್ಮಟದುರ್ಗದ ನಾಯಕರೊಂದಿಗೆ ಯಾವುದೇ ಸಂಬಂಧವಿಲ್ಲದಿದ್ದರೂ ಕೆಲವು ಅರಸು ಮನೆತನಗಳ ಅಧೀನದಲ್ಲಿ ಕುಮ್ಮಟದುರ್ಗವು ಇತ್ತು ಎಂಬ ಸಂಗತಿ ಚರ್ಚೆಯಾದರೆ, ಕುಮ್ಮಟದರಸರನ್ನು ಅಲ್ಲಿನ ರಾಜಕೀಯ ಸನ್ನಿವೇಶಗಳು ಸಂದಿಗ್ಧ ಪರಿಸ್ಥಿತಿಗೆ ತಂದೊಡ್ಡಿದವು. ರಾಜಕೀಯ ಏಳುಬೀಳುಗಳು ಇವರನ್ನು ಹಂತ ಹಂತವಾಗಿ ಗಟ್ಟಿಗೊಳಿಸುತ್ತಾ ಹೋಗಿದ್ದವು. ಇಂತಹ ಪರಿಸ್ಥಿತಿಗಳಿಗೆ ತಮ್ಮನ್ನು ಯುದ್ಧ, ಸಂಘರ್ಷಗಳಲ್ಲಿ ತೊಡಗಿಸಿಕೊಳ್ಳುವ ಅನಿವಾರ್ಯತೆಗಳು ಕುಮ್ಮಟದರಸರಿಗೆ ಅವಶ್ಯಕವಾಗಿದ್ದವು ಎಂಬ ಸಂಗತಿಗಳನ್ನು ಕುರಿತು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಕುಮ್ಮಟದುರ್ಗದ ರಾಜಕೀಯ ಇತಿಹಾಸದಲ್ಲಿ ಮುಮ್ಮಡಿ ಸಿಂಗೆಯನಾಯಕ, ಕಂಪಿಲರಾಯ ಮತ್ತು ಕುಮಾರರಾಮನ ಹಿನ್ನೆಲೆ, ವಂಶಾವಳಿ, ರಾಜಕೀಯ ಏಳಿಗೆ, ಯುದ್ಧಗಳು, ಒಪ್ಪಂದಗಳು ಒಳಪಟ್ಟ ಪ್ರದೇಶಗಳನ್ನು ಕುರಿತು ವಿವರಿಸಲಾಗಿದೆ. ಶಾಸನಗಳ ಖಚಿತವಾದ ಹೇಳಿಕೆಯಂತೆ ಕುಮ್ಮಟದರಸರು ಚಾರಿತ್ರಿಕ ವ್ಯಕ್ತಿಗಳಾಗಿದ್ದು, ತಮ್ಮ ಸಮಕಾಲೀನ ಅರಸರೊಂದಿಗೆ ಕೆಲವು ಕಾಲ ಮಾತ್ರ ವಿಧೇಯರಾಗಿದ್ದು, ದೀರ್ಘ ವರ್ಷಗಳ ಕಾಲ ಘರ್ಷಣೆಗಳನ್ನೇ ನಡೆಸುತ್ತಾ ಬಂದರು. ಇವರು ಸಂಪತ್ತಿಗಾಗಿ ಯುದ್ಧಗಳನ್ನು ಕೈಗೊಳ್ಳದೆ, ತಾವು ಸ್ವತಂತ್ರರಾಗಲು, ತಮ್ಮ ರಾಜ್ಯ ವಿಸ್ತರಣೆಗಾಗಿ ಯುದ್ಧಗಳನ್ನು ಮಾಡಿದರು. ಕುಮ್ಮಟದರಸರ ಕಾಲಾವಧಿಯಲ್ಲಿ

ನಿರ್ವಾತ ಕಾಲಘಟ್ಟವಿತ್ತು. ಆ ಕಾಲವನ್ನು ಸದುಪಯೋಗಪಡಿಸಿಕೊಂಡು ಹೇಗೆ ತಮ್ಮನ್ನು ಗುರ್ತಿಸಿಕೊಂಡರೆಂಬ ಪ್ರಮುಖ ಸಂಗತಿಗಳನ್ನು ಕುರಿತು ತಿಳಿಸಲಾಗುತ್ತದೆ. ಕಂಪಿಲರಾಯ ಮತ್ತು ಕುಮಾರರಾಮ ಇಬ್ಬರೂ ಸೇರಿ ದೆಹಲಿಸುಲ್ತಾನರ ಮೇಲೆ ಧಾಳಿ ಮಾಡಿ ಅಂತ್ಯವನ್ನು ಕಂಡಂತಹ ಕಾಲ, ಸನ್ನಿವೇಶಗಳು ಹಾಗೂ ಇವರ ಅಂತ್ಯವನ್ನು ಸಂದರ್ಭವನ್ನಾಗಿ ಇತರರು ಹೇಗೆ ಬಳಸಿಕೊಂಡರು ಎಂಬುದನ್ನು ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕುಮ್ಮಟದುರ್ಗದ ನಾಯಕರ ರಾಜಧಾನಿಗಳಾದ ಕುಮ್ಮಟದುರ್ಗ ಹೊಸಮಲೆ, ಜಟಿಂಗರಾಮೇಶ್ವರ ಕುರಿತ ಹಿನ್ನೆಲೆ, ಸ್ಥಾಪನೆಯ ಕುರಿತಂತೆ ಹಲವು ರೀತಿಯಲ್ಲಿ ಚರ್ಚಿಸಿದ್ದು, ಹನೆಯ, ದೊರವದಿ ಪ್ರದೇಶಗಳು ಕುಮ್ಮಟದುರ್ಗದರಸರ ಅಧೀನದಲ್ಲಿದ್ದು, ರಾಜಧಾನಿಯಾಗಿತ್ತೋ ಇಲ್ಲವೋ ಎಂಬ ಸಂಗತಿಗಳು ಹಾಗೂ ಅದಕ್ಕೆ ಕಾರಣಗಳನ್ನು ಕುರಿತು ಶಾಸನಗಳು, ಕೆಲವು ವಿದ್ವಾಂಸರುಗಳ ಅಭಿಪ್ರಾಯಗಳನ್ನು ವಿಶ್ಲೇಷಿಸುವುದರ ಮೂಲಕ ಚರ್ಚಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಕುಮ್ಮಟದುರ್ಗದ ಅರಸರ ಆಡಳಿತವನ್ನು ಕುರಿತಂತೆ, ಸಾಮಾಜಿಕವಾಗಿ ಬೇಟೆ, ಸಮಾಜ, ಜಾತಿ ವ್ಯವಸ್ಥೆ, ಸಮಾಜದ ಸ್ಥಿತಿಗತಿಗಳು, ಆಚರಣೆಗಳನ್ನು ಕುರಿತಂತೆ ತಿಳಿಸುವುದು ಹಾಗೂ ಆರ್ಥಿಕವಾಗಿ ತೆರಿಗೆ ಪದ್ಧತಿ, ಕೃಷಿ, ಕೈಗಾರಿಕೆ, ವ್ಯಾಪಾರ ಅಭಿವೃದ್ಧಿ, ಕರಕುಶಲ ವೃತ್ತಿಗಳು ಸೇರಿದಂತೆ ಜಾತಿ ಆಧಾರಿತ ವೃತ್ತಿಗಳನ್ನು ಕುರಿತು ಹಾಗೂ ನಾಣ್ಯಗಳ ಬಳಕೆಯಿದ್ದಿರಬಹುದು ಎಂಬ ಪೂರಕ ಮಾಹಿತಿಗಳ ಮೂಲಕ ಪುಷ್ಟಿ ನೀಡುವತ್ತ ಗಮನಹರಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಕುಮ್ಮಟದುರ್ಗದ ಅರಸರ ಬಗೆಗೆ ರಚನೆಯಾಗಿರುವ ಮೌಖಿಕ ಸಾಹಿತ್ಯದಲ್ಲಿ ಮಧ್ಯಕಾಲೀನ ಸಾಹಿತ್ಯ ಪ್ರಕಾರದಲ್ಲಿ ನಂಜುಂಡನ ರಾಮನಾಥ ಚರಿತೆ, ಬಾಲರಾಮನ ಸಾಂಗತ್ಯ, ಪಾಂಚಾಳಗಂಗನ ಚೆನ್ನರಾಮನ ಸಾಂಗತ್ಯ ಕೃತಿಗಳಲ್ಲಿ ಕುಮ್ಮಟದ ಅರಸರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಅಂಶಗಳನ್ನು ಗುರುತಿಸಲಾಗಿದೆ.

ಆಧುನಿಕ ಸಾಹಿತ್ಯ ಪ್ರಕಾರಗಳಾದ ನಾಟಕಗಳು, ಕಾದಂಬರಿಗಳು ಕಥನಗೀತೆಗಳು ಜನಪದ ಪ್ರಕಾರಗಳಲ್ಲಿ ಲಾವಣಿಗಳು, ಯಕ್ಷಗಾನ, ಕೋಲಾಟದ ಪದಗಳಲ್ಲಿ ಕುಮಾರರಾಮನ ವೀರತ್ವ, ಶೌರ್ಯಗಳನ್ನು ತಿಳಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ಕುಮ್ಮಟದುರ್ಗದ ಅರಸರ ಕಾಲದ ಕಲೆ ಮತ್ತು ವಾಸ್ತುಶಿಲ್ಪಗಳಾದ ದೇವಾಲಯಗಳು ರಚನಾ ವಿಧಾನಗಳನ್ನು ತಿಳಿಸಲಾಗಿದೆ. ನಂತರ ವೀರಗಲ್ಲುಗಳು, ಮಾಸ್ತಿಗಲ್ಲುಗಳು ದೊರೆತಿರುವ ಪ್ರದೇಶಗಳ ವಿವರಣೆ, ಕುಮ್ಮಟದರಸರ ಕಾಲದಲ್ಲಿ ನಿರ್ಮಾಣವಾದ ಕೆರೆ, ಕಟ್ಟೆ, ಬಾವಿ, ಕೋಟೆ-ಕೊತ್ತಲುಗಳು, ಉಪ್ಪರಿಗೆಗಳು, ಬತೇರಿಗಳನ್ನು ತಿಳಿಸಲಾಗಿದೆ.

ಎಂಟನೇ ಅಧ್ಯಾಯವು ಸಮಾರೋಪವಾಗಿದ್ದು ಇಲ್ಲಿ ತಳೆದ ನಿಲುವುಗಳನ್ನು ವಿಶ್ಲೇಷಿಸಲಾಗುವುದು. ಅನುಬಂಧದಲ್ಲಿ ವಕ್ತೃವಿವರ, ಪರಾಮರ್ಶನ ಗ್ರಂಥಗಳು, ನಕ್ಷೆಗಳು, ಛಾಯಾಚಿತ್ರಗಳನ್ನು ನೀಡಲಾಗುವುದು.

**ಕೊನೆ ಟಿಪ್ಪಣಿಗಳು**

೧. ಭಾರತದ ಗೆಜೆಟಿಯರ್ ಕರ್ನಾಟಕ ರಾಜ್ಯ, ಪು. ೮೪

೨. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ವ್ಯಾಲ್ಯೂಂ-xx, ಪು. ೨೨೨

೩. ಇಂಗ್ಲೀಷ್-ಇಂಗ್ಲೀಷ್-ಕನ್ನಡ ಡಿಕ್ಷನರಿ, ಪು. ೧೭೦

೪. ದೀಕ್ಷಿತ್ ಜಿ. ಎಸ್. (ಸಂ): ಸಂಗಮರ ಕಾಲದ ವಿಜಯನಗರ, ಜಿ.ಎಂ.ಶ್ರೀ. ಪ್ರತಿಷ್ಠಾ, ಬೆಂಗಳೂರು, ೧೯೯೧ ತಾ ೫ ರಿಂದ ೮ ರವರೆಗೆ ವಿಜಯನಗರ ಸ್ಥಾಪನೆಗಿಂತ ಮೊದಲು ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿಯನ್ನು ತಿಳಿಸಿದ್ದಾರೆ.

೫. ವೆಂಕಟರಮಣಪ್ಪ ಎನ್ ಅವರ ವಿಜಯನಗರ : ದಿ ಆಂಜನ್ ಆಫ್ ದಿ ಸಿಟಿ ಅಂಡ್ ದಿ ಎಂಪೈರ್ (೧೯೯೩ ಮದ್ರಾಸ್) ಮತ್ತು ಕಂಪ್ಲಿ ಮತ್ತು ಹಂಪಿ ಬಗ್ಗೆ ಪ್ರತ್ಯೇಕ ಅಧ್ಯಯನ ಮಾಡಿ ಕೃತಿಯನ್ನು ಪ್ರಕಟಿಸಿದ್ದಾರೆ.

೬. ಕಲಬುರಗಿ ಎಂ.ಎಂ. (ಸಂ): ಕೊಮಾರ ರಾಮಯ್ಯನ ಚರಿತ್ರೆ ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧. ಪು: ೧ ರಿಂದ ೫೦ ರವರೆಗೆ ಪ್ರಸ್ತಾವನೆಯನ್ನು ಗಮನಸಿಬಹುದು. ಇಲ್ಲಿ ಕಿರಾತ ಕಂಪಿಲರಾಯ ಬೇಟೆಗಾರ, ಹರಿಯಾಲದೇವಿ ಬಗ್ಗೆ ವಿವರಗಳಿವೆ.

೭. ಕಲಬುರಗಿ ಎಂ. ಎಂ. (ಸಂ), ಮಹಾಲಿಂಗಸ್ವಾಮಿ ವಿರಚಿತ ಬಾಲರಾಮನ ಸಾಂಗತ್ಯ, ಪ್ರಸಾರಂಗ, ಕನ್ನಡ ವಿವಿ ಹಂಪಿ ೨೦೦೭ ಪು.೧ ರಿಂದ ೪೧೧ ರವರೆಗೆ ಹಾಗೂ ಪ್ರಸ್ತಾವನೆ ೪ ಪುಟಗಳಲ್ಲಿ ಕೊಮಾರರಾಮ ಕುಮ್ಮಟದ ಬಗ್ಗೆ ಚರ್ಚಿಸಿದ್ದಾರೆ, ಕಲಬುರಗಿ ಎಂ.ಎಂ. ವೀರಣ್ಣ ರಾಜೂರ, ಹೊಸ ಕೊಮಾರರಾಮನ ಸಾಂಗತ್ಯ, ೨೦೦೦ ಪ್ರಸಾರಾಂಗ, ಕವಿವಿ ಹಂಪಿ ಪು. ೭ ರಿಂದ ೩೦ ರವರೆಗೆ ಪ್ರಸ್ತಾವನೆಯಲ್ಲಿ ಈ ಬಗ್ಗೆ ಚರ್ಚಿಸಲಾಗಿದೆ (ಐತಿಹಾಸಿಕ ಘಟನೆಗಳು)



# ಅಧ್ಯಾಯ : ಎರಡು

# ಕುಮ್ಮಟದುರ್ಗದ ಪೂರ್ವದ ರಾಜಕೀಯ ಪರಿಸ್ಥಿತಿಗಳು ಹಾಗೂ ಸಮಕಾಲೀನ ರಾಜಮನೆತನಗಳು

೨.೧ ಕುಮ್ಮಟದುರ್ಗದ ಪೂರ್ವದ ರಾಜಕೀಯ ಸ್ಥಿತಿಗತಿಗಳು

೨.೨ ದ್ವಾರಸಮುದ್ರದ ಹೊಯ್ಸಳರು

೨.೩ ದೇವಗಿರಿಯ ಸೇವುಣರು

# ಅಧ್ಯಾಯ: ಎರಡು

# ಕುಮ್ಮಟದುರ್ಗ ಪೂರ್ವದ ರಾಜಕೀಯ ಪರಿಸ್ಥಿತಿಗಳು ಹಾಗೂ ಸಮಕಾಲೀನ ರಾಜಮನೆತನಗಳು

ಕರ್ನಾಟಕದ ಸಾರ್ವಭೌಮತ್ವವನ್ನು ಪಡೆಯುವಲ್ಲಿ ಹಲವಾರು ಶಕ್ತಿ ಸಾಮ್ರಾಜ್ಯಗಳು ವಿಫಲವಾಗಿವೆ. ಹಾಗೆಯೇ ಕೆಲವು ಸಾಮ್ರಾಜ್ಯಗಳು ನಿಜವಾಗಿಯೂ ಸಾರ್ವಭೌಮತ್ವವನ್ನು ಪಡೆದಿರುವುದು ಹೇಗೆ ಎಂಬ ಸಂಗತಿ ಚಾಲುಕ್ಯರು, ಸೇವುಣರು, ಯಾದವರು, ರಾಷ್ಟ್ರಕೂಟರು, ವಿಜಯನಗರದ ಅರಸರು, ಚೋಳರು, ಪಾಂಡ್ಯರ ರಾಜಕೀಯ ಚರಿತ್ರೆಯನ್ನು ಅಧ್ಯಯನ ಮಾಡಿದಾಗ ತಿಳಿದುಬರುತ್ತದೆ. ಕರ್ನಾಟಕ ಇತಿಹಾಸದ ಪುಟಗಳಲ್ಲಿ ಚಾಲುಕ್ಯರ ಪಾತ್ರವು ಪ್ರಮುಖವಾಗಿ ಕಂಡುಬರುತ್ತದೆ. ಬಾದಾಮಿ ಚಾಲುಕ್ಯರು ಕ್ರಿ.ಶ. ೫ ರಿಂದ ೮ನೇ ಶತಮಾನದವರೆಗೂ ರಾಜಕೀಯವಾಗಿ ಪ್ರಭಾವ ಬೀರಿದರು. ನಂತರ ಕಲ್ಯಾಣದ ಚಾಲುಕ್ಯರು ೧೦ನೆಯ ಶತಮಾನದ ಕೊನೆಯ ವೇಳೆಯಲ್ಲಿ ಅಧಿಕಾರಕ್ಕೆ ಬಂದು ೧೨ನೆಯ ಶತಮಾನದವರೆಗೆ ಅಂದರೆ ಸುಮಾರು ೨ ಶತಮಾನಗಳ ಕಾಲ ರಾಜಕೀಯವಾಗಿ ತಮ್ಮ ಛಾಪನ್ನು ಮೂಡಿಸಿದರು. ಶಾಸನೋಕ್ತ ಕಲ್ಯಾಣದ ಚಾಲುಕ್ಯರ ವಂಶವೃಕ್ಷವನ್ನು ಗಮನಿಸಿದಾಗ ಬಾದಾಮಿ ಚಾಲುಕ್ಯರ ರಾಜ ೨ನೇ ವಿಕ್ರಮಾದಿತ್ಯನಿಗೆ ಭೀಮನೆಂಬ ತಮ್ಮನಿದ್ದನೆಂದೂ ಹಾಗೂ ಅವನ ವಂಶಜ ಕಲ್ಯಾಣ ಚಾಲುಕ್ಯ ಶಾಖೆಯ ಸ್ಥಾಪನೆಗೆ ಕಾರಣನಾದ ಎಂಬ ವಿವರವು ಎರಡನೇ ತೈಲಪನ ಕಾಲದ ಶಾಸನ ಉಲ್ಲೇಖದಿಂದ ತಿಳಿದುಬರುತ್ತದೆ.[೧] ಬಾದಾಮಿ ಚಾಲುಕ್ಯರು ಮತ್ತು ಕಲ್ಯಾಣದ ಚಾಲುಕ್ಯರ ನಡುವಿನ ರಾಷ್ಟ್ರಕೂಟರ ಆಳ್ವಿಕೆಯ ಸುಮಾರು ೨೨೦ ವರ್ಷಗಳ ಕಾಲವು ಕರ್ನಾಟಕ ಇತಿಹಾಸ ಪುಟಗಳಲ್ಲಿ ಗುರ್ತಿಸಿಕೊಂಡಿದೆ.

## ೨.೧. ಕುಮ್ಮಟದುರ್ಗ ಪೂರ್ವದ ರಾಜಕೀಯ ಸ್ಥಿತಿಗತಿಗಳು

ಕರ್ನಾಟಕ ಇತಿಹಾಸವು ಕೆಲವು ಮಹತ್ವದ ಕಾರ್ಯಗಳನ್ನು ಶತಮಾನದುದ್ದಕ್ಕೂ ಸಾಧಿಸಿದೆ. ಅದರಲ್ಲಿಯೂ ಸುಮಾರು ೮ನೇ ಶತಮಾನದಿಂದ ೧೪ನೇ ಶತಮಾನಗಳ ಅವಧಿಯಲ್ಲಿ ನಡೆದ ಘಟನಾವಳಿಗಳು ಬಹು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಕರ್ನಾಟಕದ ಉತ್ತರ ಭಾಗಗಳ ರಾಜಕೀಯ ಪ್ರಭಾವ ವಿಂಧ್ಯಾ ಪರ್ವತದ ದಕ್ಷಿಣ ಭಾಗಗಳ ಮೇಲೆ ಬೀರುತ್ತಾ ಹೋದಂತೆ ದಕ್ಷಿಣ

ಭಾಗಗಳು ರಾಜಕೀಯ ಒತ್ತಡವನ್ನು ಹೇರುವ ಕೇಂದ್ರಗಳಾದವು ಎಂದರೆ ತಪ್ಪಾಗಲಾರದು. ಬಾದಾಮಿ ಚಾಲುಕ್ಯರ ರಾಜಕೀಯ ಹೋರಾಟಗಳ ನಂತರ ರಾಷ್ಟ್ರಕೂಟರು ಅವರ ನಂತರ ಕಲ್ಯಾಣದ ಚಾಲುಕ್ಯರು ಕೃಷ್ಣಾ ಮತ್ತು ಗೋದಾವರಿ ನಡುವಿನ ಪ್ರದೇಶಗಳಲ್ಲಿ ತಮ್ಮ ರಾಜಕೀಯ ಪ್ರಭಾವವನ್ನು ಬೀರಿದರು. ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರ ರಾಜಕೀಯ ಹಿತಾಸಕ್ತಿಗಳು ಎಷ್ಟರ ಮಟ್ಟಿಗೆ ಇದ್ದುವೆಂದರೆ ಆಗಾಗ ದಕ್ಷಿಣದ ರಾಜ್ಯಗಳಾದ ಪಲ್ಲವ, ಪಾಂಡ್ಯ, ಚೋಳರ ಮೇಲೆ ಯುದ್ಧಗಳ ಫಲಿತಾಂಶಗಳು ಕಣ್ಮುಂದೆ ಬರುತ್ತವೆ. ಪ್ರಸ್ತುತ ಅಧ್ಯಾಯದಲ್ಲಿ ರಾಜಕೀಯ ಶಕ್ತಿಗಳಾದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರ ರಾಜಕೀಯ ಬೆಳವಣಿಗೆಯ ಆರಂಭಿಕ ಹಂತ ಹಾಗೂ ದ್ವಾರಸಮುದ್ರದ ಹೊಯ್ಸಳರು, ದೇವಗಿರಿಯ ಸೇವುಣರು ವಾರಂಗಲ್ಲಿನ ಕಾಕತೀಯರ ರಾಜಕೀಯ ಬೆಳವಣಿಗೆಗಳು ಮತ್ತು ಇವರ ವಿಜಯನಗರ ಪೂರ್ವದ ಅತಿ ಚಿಕ್ಕ ರಾಜ್ಯವಾಗಿದ್ದ ಕುಮ್ಮಟದುರ್ಗದ ಅರಸರೊಂದಿಗಿನ ಸಂಬಂಧಗಳು ಹಾಗೂ ಯುದ್ಧಗಳ ಸಂಗತಿಗಳನ್ನು ಕುರಿತಂತೆ ತಿಳಿಸುವುದು ಮುಖ್ಯವಾಗಿವೆ.

ಅಖಂಡ ಭಾರತವನ್ನಾಳಿದ ವ್ಯಕ್ತಿಗಳು ವಿರಳವಾದರೂ ಮೌರ್ಯರ ಅಶೋಕ, ಗುಪ್ತರ ದೊರೆ ಸಮುದ್ರಗುಪ್ತ, ದೆಹಲಿ ಸುಲ್ತಾನರು, ಮೊಘಲರ ತರುವಾಯ ಬ್ರಿಟಿಷರು ಆಳಿದ್ದನ್ನು ಸ್ಮರಿಸಬಹುದು. ಇವರೆಲ್ಲ ಕೇವಲ ಒಂದು ಪ್ರದೇಶಕ್ಕೆ ಸೀಮಿತವಾಗಿಲ್ಲ, ತಮ್ಮದೇ ಆದ ಯುದ್ಧ ಪರಾಕ್ರಮಗಳಿಂದ ವಿಸ್ತಾರವಾದ ರಾಜ್ಯವನ್ನು ಕಟ್ಟಿಕೊಂಡಿದ್ದರೂ ಕೆಲವೊಮ್ಮೆ ವಿಫಲವಾದ ಉದಾಹರಣೆಗಳೂ ಇವೆ. ಐಕ್ಯತೆಯ ಮಂತ್ರವನ್ನು ಕಾಣಲು ಸಾಧ್ಯವಾಗಿರದ ಸಂದರ್ಭದಲ್ಲಿ ಕನ್ನಡಿಗರನ್ನು ಒಂದುಗೂಡಿಸುವ ಸ್ವತಂತ್ರ ಜೀವನವನ್ನು ಸೃಷ್ಟಿಸಿಕೊಂಡವರಲ್ಲಿ ಪ್ರಮುಖರೆಂದರೆ ಮಯೂರವರ್ಮ, ಇಮ್ಮಡಿ ಪುಲಕೇಶಿ, ಮೂರನೆಯ ಗೋವಿಂದ, ಇಮ್ಮಡಿ ಸೋಮೇಶ್ವರ, ವಿಷ್ಣುವರ್ಧನ, ಮೂರನೆಯ ವೀರಬಲ್ಲಾಳ, ಕುಮಾರರಾಮ, ಪ್ರೌಢದೇವರಾಯ, ಕೃಷ್ಣದೇವರಾಯ, ಮತ್ತಿ ತಿಮ್ಮಣ್ಣನಾಯಕ, ಮದಕರಿನಾಯಕ, ನಾಲ್ವಡಿ ಕೃಷ್ಣರಾಜ ಒಡೆಯರು ಮೊದಲಾದವರನ್ನು ಸ್ಮರಿಸುವುದು ಅವಶ್ಯಕವಾಗಿದೆ. ಏಕೆಂದರೆ, ತಮ್ಮ ತಮ್ಮ ನಾಡಿನ ಭದ್ರತೆಗಾಗಿ ಹೋರಾಡಿದರು ಹಾಗೂ ಪ್ರಜೆಗಳ ಕ್ಷೇಮಕ್ಕಾಗಿ ಪರಕೀಯರನ್ನು ಸದೆಬಡಿಯುವ ಕಾರ್ಯಗಳೂ ಇವರಿಂದ ನಡೆದವು.

ವಿಜಯನಗರ ಪೂರ್ವದಲ್ಲಿ ಮುಸ್ಲಿಂರ ದಾಳಿಗಳು ದಕ್ಷಿಣ ಭಾರತದಲ್ಲಿ ಭಯದ ವಾತಾವರಣವನ್ನು ಸೃಷ್ಟಿಸಿದ್ದವು. ಉತ್ತರ ಭಾರತದಿಂದ ಮುಸ್ಲಿಂರ ದಂಡಯಾತ್ರೆಗಳು ಪ್ರಾರಂಭವಾಗುವ ಮೂಲಕ ದಕ್ಷಿಣ ಭಾರತಕ್ಕೂ ಸಹ ಇಸ್ಲಾಂ ಧರ್ಮವು ಪ್ರವೇಶಿಸಿತು. ದೆಹಲಿ ಸುಲ್ತಾನರಾದ ಅಲ್ಲಾವುದ್ದೀನ್ ಖಿಲ್ಜಿ, ಮೊಹಮ್ಮದ್ ಬಿನ್ ತುಘಲಕ್‌ರ ದಾಳಿಗಳು ದೇವಗಿರಿ ಯಾದವರು, ದ್ವಾರಸಮುದ್ರದ ಹೊಯ್ಸಳರು, ವಾರಂಗಲ್‌ನ ಕಾಕತೀಯರನ್ನು ತಮ್ಮ ಕಪಿಮುಷ್ಟಿಯಲ್ಲಿರಿಸಿಕೊಳ್ಳಲು ಹವಣಿಸಿದ್ದವು. ಇವರು ದೆಹಲಿ ಸುಲ್ತಾನರಿಗೆ ಸಮಕಾಲೀನರಾಗಿದ್ದರೂ ಆಯಾ ರಾಜ್ಯಗಳಲ್ಲಿ ಆಡಳಿತದ ಭೀತಿ

ಎದುರಾಗಿತ್ತು. ಕಾರಣ ಮಲ್ಲಿಕಾಫರನ ದಾಳಿಗಳಿಗೆ ತತ್ತರಿಸಿ ಹೋಗಿದ್ದವು. ಇದೇ ಕಾಲಕ್ಕೆ ಕುಮ್ಮಟದುರ್ಗದ ಅರಸರು ಸಾಮಂತ ಅರಸರಾಗಿ ತಮ್ಮದೇ ಚಿಕ್ಕ ರಾಜ್ಯವನ್ನು ಆಳುತ್ತಾ ತಮ್ಮದೇ ನೈತಿಕತೆಯ ಸಂದೇಶವನ್ನು ಅಸ್ತ್ರವನ್ನಾಗಿಸಿಕೊಂಡಿದ್ದರೆಂದರೆ ತಪ್ಪಾಗಲಾರದು. ಈ ಕಾಲಕ್ಕಾಗಲೇ ತೆಲಂಗಾಣ, ರಾಯಲಸೀಮೆ, ಕೃಷ್ಣಾ, ತುಂಗಭದ್ರಾ ಪ್ರದೇಶಗಳು ರಾಜಕೀಯ ಸಂಘಟನೆಗಳಾಗಿ ಬೆಳೆಯತೊಡಗಿದ್ದವು. ಉತ್ತರ ಭಾರತದ ದಾಳಿಗಳನ್ನು ಮುಸ್ಲಿಂ ಸಂಘಟನೆ ಎಂದುಕೊಂಡರೆ ದಕ್ಷಿಣ ಭಾರತದಲ್ಲಿದ್ದ ರಾಜಕೀಯ ಸಂಘಟನೆಗಳು ಹಿಂದೂ ಸಂಘಟನೆಗಳಾಗಿದ್ದವು. ದೆಹಲಿ ಸುಲ್ತಾನರ ಈ ದಾಳಿಗಳು ಕೇವಲ ಆಕ್ರಮಣ ಅಥವಾ ಸಂಪತ್ತಿನ ಲೂಟಿಯ ಉದ್ದೇಶವಾಗಿರಲಿಲ್ಲ. ಇದರ ಜೊತೆಗೆ ಹಿಂದೂ ನಾಡನ್ನು ಪರಿವರ್ತಿಸುವುದು ಇಸ್ಲಾಂ ಧರ್ಮವನ್ನು ಪ್ರಚಾರಗೊಳಿಸುವ ಮೂಲಕ ಮತಾಂತರ ಪ್ರಕ್ರಿಯೆಯನ್ನು ಆರಂಭಿಸುವುದು ಇವರ ಉದ್ದೇಶವಾಗಿತ್ತು. ಇಂತಹ ಧಾರ್ಮಿಕ ಸಂದಿಗ್ಧತೆಗಳಲ್ಲೂ ಅತಿ ಚಿಕ್ಕ ರಾಜ್ಯದ ಕುಮ್ಮಟದರಸರು ಹಿಂದೂ ಧರ್ಮವನ್ನು, ಹಿಂದೂಗಳ ನೈತಿಕತೆ, ಆದರ್ಶ, ಮಾತೃವಾತ್ಸಲ್ಯ, ಗುರು ಹಿರಿಯರಿಗೆ ಗೌರವ, ಪರನಾರಿ ಸೋದರತ್ವದ ಸಾರವನ್ನು ತಿಳಿಸುವ ಹಾಗೂ ಉಳಿಸುವ ಪ್ರಯತ್ನ ಒಳ್ಳೆಯ ಬೆಳವಣಿಗೆಯಾಗಿತ್ತು. ಈ ಸಂದರ್ಭ ಹಾಗೂ ಪೂರ್ವದಲ್ಲಿ ಹಿಂದೂ ಧರ್ಮದ ಜೊತೆಗೆ ಜೈನ ಧರ್ಮ, ವೈಷ್ಣವ, ಶೈವರ ಪ್ರಭಾವಗಳಿದ್ದರೂ ಹಿಂದೂ ಧರ್ಮದ ಸಾರವನ್ನು ಅರ್ಥೈಸುವ ಪ್ರಯತ್ನ ಕುಮ್ಮಟದರಸರ ಜೊತೆಗೆ ದಕ್ಷಿಣ ಭಾರತದ ಅರಸರದ್ದಾಗಿತ್ತು.

ಆರಂಭದಲ್ಲಿ ರಾಷ್ಟ್ರಕೂಟರು ವೆಂಗಿ ಚಾಲುಕ್ಯರ ಮೇಲೆ ದಾಳಿ ಮಾಡುವ ಮೂಲಕ ಕರಾವಳಿ ಪ್ರದೇಶಗಳ ಮೇಲೆ ಕಣ್ಣಿಟ್ಟರು. ಇದೇ ಕಾರ್ಯವನ್ನು ಕಲ್ಯಾಣದ ಚಾಲುಕ್ಯರು ಮುಂದುವರೆಸುತ್ತಾ ದಕ್ಷಿಣ ರಾಜ್ಯಗಳ ಮೇಲೆ ದಾಳಿ ಮಾಡುವ ಮೂಲಕ ಯುದ್ಧಗಳಿಗೆ ಸಾಕ್ಷಿಯಾದರು. ಕಲ್ಯಾಣದ ಚಾಲುಕ್ಯರಿಗೆ ಸಂಬಂಧಿಸಿದಂತೆ ಕೆಲವು ಶಾಸನಗಳು ಹೇಳುವಂತೆ ಬಾದಾಮಿ ಚಾಲುಕ್ಯರು ಮತ್ತು ಕಲ್ಯಾಣದ ಚಾಲುಕ್ಯರು ಇಬ್ಬರು ಸಂಬಂಧಿಕರಾಗಿದ್ದರು. ಅಂದರೆ ಬಾದಾಮಿ ಚಾಲುಕ್ಯರ ಅರಸನಾದ ೨ನೇ ವಿಕ್ರಮಾದಿತ್ಯನ ಸೋದರನು ಭೀಮ ಎಂಬ ಒಬ್ಬ ಸೋದರನಿದ್ದನೆಂದು, ಆತನ ವಂಶಜನೇ ಎರಡನೇ ತೈಲಪನು ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯ ಸ್ಥಾಪನೆಗೆ ಕಾರಣನಾದನೆಂದು ಹೇಳಲಾಗಿದೆ. ಬಾದಾಮಿ ಚಾಲುಕ್ಯರು ಮತ್ತು ಕಲ್ಯಾಣ ಚಾಲುಕ್ಯರ ನಡುವಿನ ಕಾಲವು ರಾಷ್ಟ್ರಕೂಟರಿಗೆ ಸೇರಿತ್ತು. ಇವರು ಸುಮಾರು ೨೨೦ ವರ್ಷಗಳ ಕಾಲ ಆಳ್ವಿಕೆ ಮಾಡಿರಬಹುದೆಂಬ ಅಂದಾಜಿದೆ. ಅಂದರೆ ಸುಮಾರು ೮ನೇ ಶತಮಾನದ ಮಧ್ಯಭಾಗದಿಂದ ಹತ್ತನೆಯ ಶತಮಾನದ ಕೊನೆಯವರೆಗೂ ಆಳ್ವಿಕೆ ನಡೆಸಿದರೆನ್ನಲಾಗಿದೆ. ಅಂದಿನ ಅಸ್ಥಿರವಾದ ರಾಜಕೀಯದಲ್ಲಿ ಹಲವು ಸಣ್ಣಪುಟ್ಟ ರಾಜಮನೆತನಗಳಿಂದ ಗಂಗರು, ವೆಂಗಿ ಚಾಲುಕ್ಯರು, ಪಲ್ಲವರು, ಗೂರ್ಜಾರರು, ಪ್ರತಿಹಾರರು ಹಾಗೂ ಚೋಳರು ಆಳ್ವಿಕೆ ನಡೆಸುತ್ತಿದ್ದರೂ ರಾಷ್ಟ್ರಕೂಟರು ಮಾತ್ರ ಕೆಲವು ಕಾಲ ರಾಜಕೀಯವಾಗಿ ಹತೋಟಿಯನ್ನು ಸಾಧಿಸಿದ್ದರೆಂದು ತಿಳಿದುಬರುತ್ತದೆ.

ಕಲ್ಯಾಣದ ಚಾಲುಕ್ಯರು ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದರಿಂದ ಕಲ್ಯಾಣದ ಚಾಲುಕ್ಯರು ಎಂದು ಕರೆಯುವುದು ಉಚಿತವಾಗಿದೆ. ಇವರನ್ನು ಬಾದಾಮಿ ಚಾಲುಕ್ಯರ ಮನೆತನದಿಂದಲೇ ಬಂದಿರುವರೆಂದು ಕೆಲವು ಶಾಸನಗಳು ಹೇಳುತ್ತವೆ. ಕಲ್ಯಾಣ ಎಂಬುದು ಬೀದರ್ ಜಿಲ್ಲೆಯಲ್ಲಿ ಕಂಡುಬರುತ್ತದೆ. ಈ ಸಾಮ್ರಾಜ್ಯದ ಮೊದಲ ಅರಸನಾದ ಎರಡನೇ ತೈಲನು ಬಾದಾಮಿ ಚಾಲುಕ್ಯರ ವಂಶಕ್ಕೆ ಸೇರಿದವನೆಂದು ಕೆಲವು ಸಾಹಿತ್ಯಿಕ ಆಧಾರಗಳು ಸೇರಿದಂತೆ ಕೆಲವು ಶಾಸನಗಳು ದೃಢಪಡಿಸಿವೆ. ಆದರೆ ಬಾದಾಮಿ ಚಾಲುಕ್ಯರಿಗೆ ಸಂಬಂಧಿಸಿದ ದಾಖಲೆಗಳು ಮೂಲವನ್ನು ಕುರಿತಂತೆ ಎಲ್ಲಿಯೂ ಕಂಡುಬಂದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಚಾಲುಕ್ಯರು ಪುಲಕೇಶಿ, ಬಿಟ್ಟರಸ ಈ ರೀತಿಯ ಕನ್ನಡ ನಾಮಧೇಯಗಳು ಇವರು ಕನ್ನಡದವರೇ ಎಂದು ವಾದಿಸುತ್ತವೆ. ಎರಡನೇ ತೈಲಪನು ಸುಮಾರು ಕ್ರಿ.ಶ. ೯೭೩ರಲ್ಲಿ ಆಳ್ವಿಕೆ ಪ್ರಾರಂಭಿಸಿದನು. ಅಂದರೆ ರಾಷ್ಟ್ರಕೂಟರ ದೊರೆ ೨ನೇ ಕರ್ಕನ ಮೇಲೆ ದಾಳಿ ಮಾಡುವ ಮುಖಾಂತರ ಎರಡನೇ ತೈಲಪನು ಇಡೀ ಸಾಮ್ರಾಜ್ಯವನ್ನು ತನ್ನ ವಶಕ್ಕೆ ತೆಗೆದುಕೊಂಡನು. ರಾಷ್ಟ್ರಕೂಟ ಸಾಮ್ರಾಜ್ಯ ಅವರ ಗೆಳೆಯರು ಮತ್ತು ಅವರ ವೈರಿಗಳು ಎಲ್ಲಕ್ಕೂ ವಾರಸುದಾರನಾದನು[೨] ಎಂದು ನೀಲಕಂಠಶಾಸ್ತ್ರಿಗಳು ಹೇಳಿರುವುದುಂಟು. ಆದರೂ ರಾಷ್ಟ್ರಕೂಟರನ್ನು ರಕ್ಷಿಸಲು ಇವರ ಜೊತೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದ ತಲಕಾಡಿನ ಗಂಗರ ದೊರೆ ಗಂಗ ಮಾರಸಿಂಹನು ೨ನೇ ತೈಲಪನ ವಿರುದ್ಧ ದಂಗೆ ಎದ್ದರೂ ಈ ವೇಳೆಗಾಗಲೇ ಶಕ್ತಿಹೀನರಾಗಿದ್ದ ರಾಷ್ಟ್ರಕೂಟರು ಮೇಲೇಳಲು ಸಾಧ್ಯವಾಗಲೇ ಇಲ್ಲ.

ಆರಂಭದಿಂದಲೂ ಚಾಲುಕ್ಯರು ಮತ್ತು ತಲಕಾಡಿನ ಗಂಗರ ನಡುವೆ ರಾಷ್ಟ್ರಕೂಟರ ರಾಜ್ಯದ ಉಳಿವಿಗಾಗಿ ಕೆಲವು ಜಗಳಗಳು ನಡೆಯುತ್ತಲೇ ಇದ್ದವು. ಇದರಂತೆಯೇ ಚೋಳರು ಮತ್ತು ವೆಂಗಿ ಚಾಲುಕ್ಯರ ರಾಜಕೀಯದಲ್ಲಿ ಕಲ್ಯಾಣದ ಚಾಲುಕ್ಯರು ತಲೆಹಾಕಿದರು. ಚೋಳರ ಕೆಂಗಣ್ಣಿಗೆ ಗುರಿಯಾಗಿ ಕಲ್ಯಾಣದ ಚಾಲುಕ್ಯರ ಹಲವು ಪ್ರದೇಶಗಳ ಮೇಲೆ ದಾಳಿ ಮಾಡಿದ ಚೋಳರ ರಾಜ ರಾಜೇಂದ್ರನು ಬನವಾಸಿ, ಮಾನ್ಯಖೇಟ ಭಾಗಗಳನ್ನು ವಶಪಡಿಸಿಕೊಂಡನು. ಕಲ್ಯಾಣಿ ಚಾಲುಕ್ಯರ ದೊರೆಯಾದ ಸತ್ಯಾಶ್ರಯನು ಸತ್ತು ಹೋದಂತೆ ಕಾಣುತ್ತದೆ. ಈತನಿಗೆ ಮಕ್ಕಳಿಲ್ಲದ ಕಾರಣ ಅಳಿಯನಾದ ಐದನೇ ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದಾಗ ಈತನ ದೌರ್ಬಲ್ಯವನ್ನರಿತ ಚೋಳರು ಮತ್ತು ಪರಮಾರರು ದಾಳಿ ಮಾಡಿದರೆಂದು ತಿಳಿದುಬರುತ್ತದೆ. ನಂತರ ಜಯಸಿಂಹನು ಕಲ್ಯಾಣಿ ಚಾಲುಕ್ಯರ ದೊರೆಯಾಗಿ ಆಳ್ವಿಕೆ ನಡೆಸುತ್ತಾನೆ. ಹಂತ ಹಂತವಾಗಿ ಚೋಳರು ಕಲ್ಯಾಣಿ ಚಾಲುಕ್ಯರ ಮೇಲೆ ದಾಳಿ ಮಾಡುತ್ತಲೇ ಬಂದರು. ಕ್ರಿ.ಶ. ೧೦೬೪ರಲ್ಲಿ ಎರಡನೇ ರಾಜೇಂದ್ರನ ಸಹೋದರನಾದ ವೀರ ರಾಜೇಂದ್ರನು ಕಲ್ಯಾಣಿ ಚಾಲುಕ್ಯರ ಅರಸನಾದ ಮೇಲೆ ಹಲವು ಪ್ರದೇಶಗಳಲ್ಲಿ ಚಾಲುಕ್ಯ, ಚೋಳ ಸೇನೆಗಳು ಘರ್ಷಿಸುವುದನ್ನು ಕುರಿತು ಶಾಸನಗಳು ಹೇಳುತ್ತವೆ. ಆದರೆ ಚೋಳ ಶಾಸನಗಳು ಹೇಳುವ ಪ್ರಕಾರ ಚಾಲುಕ್ಯರಿಗಿಂತ ಚೋಳರೇ ವಿಜಯದಲ್ಲಿ ಮುಂದಿದ್ದರು ಎಂದು ಸಾಬೀತುಪಡಿಸುತ್ತವೆ. ಕ್ರಿ.ಶ. ೧೦೫೪ರಲ್ಲಿ ಚೋಳರು ಮತ್ತು ಚಾಲುಕ್ಯರ ನಡುವೆ ಯುದ್ಧವಾದಾಗ ಚೋಳರ ರಾಜ ರಾಜೇಂದ್ರನು ಹಲವು ಚಾಲುಕ್ಯ ಸೇನಾನಿಗಳನ್ನು ಕೊಂದುಹಾಕಿದನೆಂದು ಶಾಸನ ಹೇಳುತ್ತದೆ.

ಹಾಗೆಯೇ ಈ ಯುದ್ಧರಂಗದಲ್ಲೇ ರಾಜೇಂದ್ರ ತನ್ನನ್ನು ರಾಜನೆಂದು ಘೋಷಿಸಿಕೊಂಡನು. ಅಲ್ಲಿಯೇ ಪಟ್ಟಾಭಿಷಿಕ್ತನಾದನೆಂದು ಹೇಳುತ್ತದೆ. ಅಲ್ಲಿಂದ ಹಿಂದಿರುಗಬೇಕಾದರೆ ರಾಜೇಂದ್ರನು ಬಳ್ಳಾರಿ ಜಿಲ್ಲೆಯ ಕುಮ್ಮಟದುರ್ಗಕ್ಕೆ ಮುತ್ತಿಗೆ ಹಾಕಿದನು. ಸೋಮೇಶ್ವರನು ಅವನನ್ನು ಅಟ್ಟಿಸಿಕೊಂಡು ಹೋಗಿ ಚಾಲುಕ್ಯ ಗಡಿಯಿಂದಾಚೆಗೆ ಓಡಿಸಿದನು[೩] ಎಂದು ತಿಳಿಸಲಾಗಿದೆ. ಕಲ್ಯಾಣಿ ಚಾಲುಕ್ಯರ ಅಧೀನದಲ್ಲಿ ಕುಮ್ಮಟದುರ್ಗವಿತ್ತು. ಇಲ್ಲಿ ಕಲ್ಯಾಣಿ ಚಾಲುಕ್ಯರಿಗಾಗಲಿ ಅಥವಾ ಚೋಳರಿಗಾಗಲೀ ಕುಮ್ಮಟದರಸರ ಜೊತೆ ಯಾವ ಸಂಬಂಧಗಳೂ ಇರಲಿಲ್ಲ ಎನ್ನುವುದಕ್ಕಿಂತ ಕುಮ್ಮಟದರಸರು ಇವರ ಸಮಕಾಲೀನರಲ್ಲ ಎಂಬ ವಿಚಾರವು ಮಾತ್ರ ಸ್ಪಷ್ಟವಾಗುತ್ತದೆ. ಕುಮ್ಮಟದುರ್ಗವು ಕುಮ್ಮಟದರಸರಿಗಿಂತಲೂ ಮುಂಚಿತವಾಗಿಯೇ ಹಲವು ರಾಜರುಗಳ ಅಧೀನದ ಪ್ರದೇಶವಾಗಿತ್ತು ಹಾಗೂ ಕುಮ್ಮಟದರಸರಿಂದ ಕುಮ್ಮಟದುರ್ಗ ಮರುನಿರ್ಮಾಣವಾಗಿರಬಹುದು ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಕ್ರಿ.ಶ. ೧೧೫೩ರ ವೇಳೆಗಾಗಲೇ ಕಲ್ಯಾಣಿ ಚಾಲುಕ್ಯರ ದೊರೆ ೩ನೇ ತೈಲನು ಕಲಚೂರಿಗಳ ಬಿಜ್ಜಳ ದಂಗೆಯನ್ನು ಎದುರಿಸಬೇಕಾಯಿತು. ಹಾಗೆಯೇ ಈ ವೇಳೆಗಾಗಲೇ ಬಿಜ್ಜಳನ ಜೊತೆಗೆ ಕಾಕತೀಯರು, ಹೊಯ್ಸಳರು, ಶಿಲಾಹಾರರು ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿದ್ದರು.

ಕಲಚೂರಿಗಳು ಕಲ್ಯಾಣಿ ಚಾಲುಕ್ಯರ ಮುಖ್ಯ ಸಾಮಂತರಲ್ಲಿ ಒಬ್ಬರಾಗಿದ್ದರು. ಇವರು ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಆಳ್ವಿಕೆ ನಡೆಸಿದ್ದಾರೆ.[೪] ಕರ್ನಾಟಕದಲ್ಲಿ ಕಲಚೂರಿಗಳ ಕಾಲಾವಧಿ ಕ್ರಿ.ಶ. ೧೧೬೨ ರಿಂದ ಕ್ರಿಶಕ ೧೧೮೪ ರವರೆಗೂ ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಲಚೂರಿಗಳ ಮೂಲವನ್ನು ತಿಳಿಯುವುದು ಸದ್ಯಕ್ಕೆ ಅನವಶ್ಯಕವಾಗಿದ್ದು, ಇವರ ಸಂಬಂಧವು ಕೆಲವು ರಾಜಮನೆತನಗಳೊಂದಿಗೆ ಬೆಳೆದಿದ್ದುದು ಕಂಡುಬರುತ್ತದೆ. ಕಲಚೂರಿಗಳ ಅರಸನಾದ ಪೆರ್ಮಾಡಿಯ ಕಾಲ ಕ್ರಿ.ಶ. ೧೧೧೮ ರಿಂದ ಕ್ರಿಶಕ ೧೧೩೦ ರವರೆಗಿನ ಈ ಅವಧಿಯಲ್ಲಿ ಕಲ್ಯಾಣಿ ಚಾಲುಕ್ಯರೊಂದಿಗೆ ತಮ್ಮ ವೈವಾಹಿಕ ಸಂಬಂಧವನ್ನು ಬೆಳೆಸಿಕೊಂಡಂತೆ ಕಾಣುತ್ತದೆ. ಪೆರ್ಮಾಡಿಯ ಮಗನಾದ ಎರಡನೇ ಬಿಜ್ಜಳ ರಾಜನಾದಾಗ ಹಾನಗಲ್ಲಿನ ಕದಂಬರು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿದ್ದರು. ಆದರೆ ಇವರ ಮೇಲೆ ದಾಳಿ ಮಾಡಿ ಅವರನ್ನು ತನ್ನ ಅಧೀನ ಮಾಡಿಕೊಂಡನು. ಬಿಜ್ಜಳನು ಕಲ್ಯಾಣಿ ಚಾಲುಕ್ಯರಿಗೆ ವಿಧೇಯನಾಗಿ ತೋರಿಸಿಕೊಂಡಿದ್ದರೂ ಇವರ ಸಿಂಹಾಸನವನ್ನು ಏರುವ ಹಂಬಲವಿದ್ದಿತು. ಹೀಗಾಗಿ ಚಾಲುಕ್ಯರ ಸಾಮಂತರ ಸ್ನೇಹ ಬೆಳೆಸತೊಡಗಿದನು. ಹಾಗೆಯೇ ಚಾಲುಕ್ಯರ ಸಿಂಹಾಸನ ಪಡೆಯಲಿಕ್ಕಾಗಿ ಕಾಕಾತೀಯರೊಂದಿಗೆ ಒಂದು ಒಳಸಂಚು ಮಾಡಿದ್ದನೆಂದು[೫], ಚಾಲುಕ್ಯರ ಕುಟುಂಬದ ಕೆಲವರನ್ನು ಕೊಲೆ ಮಾಡಿದನು ಎಂಬ ಸಂಗತಿಯನ್ನು ಬಿಜ್ಜಳ ವಂಶದವರ ಶಾಸನಗಳಿಂದ ತಿಳಿದುಬರುತ್ತದೆ. ಹೀಗೆ ಚಾಲುಕ್ಯರೊಂದಿಗೆ ಹೊಯ್ಸಳರೊಂದಿಗೆ ಘರ್ಷಣೆಗೈಯುತ್ತಾ, ಸುಮಾರು ಕ್ರಿ.ಶ. ೧೧೮೭ರ ವೇಳೆಗೆ ಕರ್ನಾಟಕದಲ್ಲಿ ಕಲಚೂರಿಗಳ ಸ್ವತಂತ್ರ ಆಳ್ವಿಕೆ ಕೊನೆಯಾಗುವ ವೇಳೆಗೆ ತುಂಗಭದ್ರೆಯ ದಕ್ಷಿಣ ಭಾಗ ಮತ್ತು ಉತ್ತರ ಭಾಗಗಳಲ್ಲಿ ದ್ವಾರಸಮುದ್ರದ ಹೊಯ್ಸಳರು ಮತ್ತು ದೇವಗಿರಿ ಸೇವುಣರ ಪಾತ್ರ ಹಿರಿದಾಗುತ್ತಾ ಹೋಯಿತು. ಆದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ

ಕುಮ್ಮಟದರಸರ ಕಾಲಕ್ಕೂ ಕಲಚೂರಿಗಳ ಕಾಲಕ್ಕೂ ಅಜಗಜಾಂತರವಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಕುಮ್ಮಟದುರ್ಗದ ಅರಸರ ಯಾವುದೇ ಪ್ರದೇಶಗಳಾಗಲೀ ಇವರ ಅಧೀನದಲ್ಲಿರಲಿಲ್ಲ. ಇವರ ಸಂಬಂಧ ಕುರಿತು ಯಾವ ದಾಖಲೆಗಳೂ ಇಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಕರ್ನಾಟಕದ ಕಲಚೂರಿಗಳ ಅಂತಿಮ ಕಾಲಾವಧಿಯಿಂದ ಸುಮಾರು ೧೦೦ ವರ್ಷಗಳ ಅಂತರವಿದೆ.

## ೨.೨. ದ್ವಾರಸಮುದ್ರದ ಹೊಯ್ಸಳರು

ದೇಶೀಯ ರಾಜಮನೆತನದವರ ಗುಂಪಿಗೆ ಸೇರಿದವರು ಹೊಯ್ಸಳರು. ದಕ್ಷಿಣ ಕರ್ನಾಟಕದ ಭಾಗದಲ್ಲಿ ಹೊಯ್ಸಳ ರಾಜ್ಯದ ಅಸ್ತಿತ್ವ ಮತ್ತು ಏಳಿಗೆಯನ್ನು ಮೂರು ಶತಮಾನಗಳ ಕಾಲ ರಾಜ್ಯಭಾರ ಮಾಡಿರುವುದನ್ನು ಅವರು ಬಿಟ್ಟುಹೋಗಿರುವ ಕಲೆ ಮತ್ತು ಸಾಂಸ್ಕೃತಿಕ ಸ್ಮಾರಕಗಳಿಂದ ತಿಳಿಯಬಹುದು. ಹೊಯ್ಸಳರಿಗೆ 'ಮಲೆಪೆರೊಳ್‌ಗಂಡ' ಎಂಬ ಬಿರುದು ಇದ್ದು, ಪಶ್ಚಿಮ ಘಟ್ಟಗಳಲ್ಲಿ ವಾಸಿಸಿದ್ದ ಗಿರಿಜನರಾದ 'ಮಲೆಪರ'ನ್ನು ಸೋಲಿಸಿದ್ದರಿಂದ ಇವರಿಗೆ ಈ ಬಿರುದು ಬಂದಿತು. ೧೧ನೆಯ ಶತಮಾನದ ಆದಿಭಾಗದಿಂದಲೂ ಚೋಳರ ಪ್ರಾಬಲ್ಯವಿದ್ದುದು ಕಂಡುಬರುತ್ತದೆ. ಇದೇ ವೇಳೆಯಲ್ಲಿ ಪ್ರಬಲರಾಗುತ್ತಿದ್ದ ಗಂಗರು ಚೋಳರೊಡನೆ ಸೆಣಸಾಟಕ್ಕೆ ಇಳಿದಾಗ, ಚೋಳರ ದಾಳಿಯನ್ನು ಎದುರಿಸಲಾಗದೆ ಹೊಯ್ಸಳರ ಮೊರೆ ಹೋದಾಗ ಹೊಯ್ಸಳರು ಚೋಳರನ್ನು ಹತ್ತಿಕ್ಕುವ ಪ್ರಯತ್ನ ಮಾಡಿದರು. ಹೀಗಾಗಿ ಚೋಳರು ಮತ್ತು ಹೊಯ್ಸಳರು ಇಬ್ಬರೂ ಅಧಿಕಾರಕ್ಕಾಗಿ ಸೆಣಸಾಟ ನಡೆಸಿದಾಗ ಚೋಳರು ತಲಕಾಡಿನಿಂದ ಓಡಿಹೋದರು. ತದನಂತರ ೧೨ನೇ ಶತಮಾನದ ಆರಂಭದ ವೇಳೆಗೆ ಹೊಯ್ಸಳರು ತಲೆಯೆತ್ತಿದರಾದರೂ ಆರಂಭದಲ್ಲಿ ಒಂದು ಶತಮಾನ ಕಾಲ ಚಾಲುಕ್ಯರ ಸಾಮಂತ ಅರಸರಾಗಿಯೇ ಇರಬೇಕಾಯಿತು. ಹೊಯ್ಸಳರ ಶಾಸನಗಳಲ್ಲಿ ಆರಂಭದ ಕಾಲವನ್ನು ಕುರಿತು ಕೆಲವು ಸಾಂಪ್ರದಾಯಿಕ ಉಲ್ಲೇಖಗಳು ನಮೂದಾಗಿವೆ. ಮುಖ್ಯವಾಗಿ ಹೊಯ್ಸಳರ ಅರಸನಾದ ವಿನಯಾದಿತ್ಯನ ಕಾಲದಿಂದ ಎರಡನೆಯ ವೀರಬಲ್ಲಾಳನ ಕಾಲದವರೆಗೂ ಚಾಲುಕ್ಯರಿಗೆ ಅಧೀನರಾಗಿದ್ದರೆಂಬ ಸಂಗತಿಗಳನ್ನು ಶಾಸನಗಳೇ ಉಲ್ಲೇಖಿಸಿವೆ. ಕೆಲವು ಸಾಂಪ್ರದಾಯಿಕ ಅಭಿಪ್ರಾಯಗಳಿಗೂ ಶಾಸನಗಳಿಗೂ ಹೋಲಿಕೆಗಳಿವೆ. ಅಂದರೆ ಈಗಿನ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನಲ್ಲಿ ಕಂಡುಬರುವ 'ಅಂಗಡಿ' ಎಂಬ ಗ್ರಾಮವು ಆಗಿನ 'ಸೊಸೆವೂರು' ಹೊಯ್ಸಳರ ಜನ್ಮಸ್ಥಳವಾಗಿತ್ತೆಂದು ಹೇಳಿಕೊಂಡಿರುವುದು ಗಮನಕ್ಕೆ ಬರುತ್ತದೆ. 'ಸಳ' ಎಂಬುವವನೇ ಹೊಯ್ಸಳರ ಸ್ಥಾಪಕನೆಂದು ಹೇಳಲಾಗುತ್ತದೆ. ಯದು ವಂಶೋಜ್ವಲ ತಿಲಕನಾದ ಸಳನು ಶಶಕಪುರದ ವಾಸಂತಿಕಾ ದೇವಿಯನ್ನು ಗಂಧ, ಪುಷ್ಪ, ಪರಿಮಳಗಳಿಂದ ಅರ್ಚಿಸುತ್ತಿದ್ದಾಗ ಅರಣ್ಯದಿಂದ ಒಂದು ಹುಲಿ ಅಲ್ಲಿಗೆ ಬಂದಿತು. ಅಲ್ಲಿಯೇ ಇದ್ದ ಜೈನ ಮುನಿಯೊಬ್ಬ ಸಳನಿಗೆ ತನ್ನ ಕುಂಚವನ್ನು ಕೊಟ್ಟು 'ಪೊಯ್-ಸಳ' ಎಂದನು. ಆಗ ಹುಲಿಯ ಸಂಹಾರವಾಯಿತು. ಅಂದಿನಿಂದ ಯದುವಂಶದ ರಾಜರಿಗೆ 'ಪೊಯ್ಸಳ' ಎಂಬ ಹೆಸರು ಬಂದಿತು. ಇವರ ಅತಿ ಹೆಚ್ಚು ಶಾಸನಗಳಲ್ಲಿ ಸ್ವಲ್ಪ ಏರುಪೇರುಗಳಿದ್ದರೂ ಇದೇ ಘಟನೆಯು ಉಲ್ಲೇಖವಾಗಿರುವುದು ಕಂಡುಬರುತ್ತದೆ. ಇನ್ನು ಕೆಲವು ಶಾಸನಗಳಲ್ಲಿ ಇದೇ ವಿಷಯವನ್ನು ಕುರಿತು ಮತ್ತೊಂದು ರೀತಿಯಲ್ಲಿ ಹೇಳಲಾಗಿದೆ. ಸಳನು

ಪಶ್ಚಿಮ ಘಟ್ಟಗಳಲ್ಲಿ ಬೇಟೆಯಾಡುತ್ತಿದ್ದ ಸಮಯದಲ್ಲಿ ಒಂದು ಮೊಲವು ಹುಲಿಯನ್ನು ಅಟ್ಟಿಸಿಕೊಂಡು ಹೋಗುತ್ತಿದ್ದುದು ಕಂಡು ಆಶ್ಚರ್ಯಚಕಿತಗೊಂಡು ಇದು ಒಂದು ವೀರಭೂಮಿಯೇ ಇರಬೇಕೆಂದು ತಿಳಿದ ಸಂದರ್ಭದಲ್ಲಿಯೇ ಭಯದಿಂದ ಕೂಗಿಕೊಳ್ಳುತ್ತಿದ್ದ ಮುನಿಯೊಬ್ಬನು ಪೊಯ್-ಸಳ ಎಂದಾಗ ಅಲ್ಲಿಯೇ ಇದ್ದ ಸಳನು ಕತ್ತಿಯಿಂದ ಹುಲಿಯನ್ನು ತಿವಿದು ಕೊಂದುಹಾಕಿದನು. ಇದೇ ಸ್ಥಳವನ್ನೇ ಶಶಕಪುರ ಎಂದು ಕರೆಯಲಾಯಿತು.

ಸಳನು ಹೊಯ್ಸಳರ ಅಧಿಪತಿಯಾಗಿದ್ದ ಅಥವಾ ರಾಜ್ಯಭಾರ ಮಾಡುತ್ತಿದ್ದ ಎಂಬ ಸಂಗತಿಯು ಬೇರೆ ಯಾವ ಶಾಸನಗಳಿಂದಲೂ ತಿಳಿದುಬಂದಿಲ್ಲ. ಆದರೆ ನೃಪಕಾಮನ ನಂತರ ವಿನಯಾದಿತ್ಯ, ಎರೆಯಂಗ ಹೀಗೆ ಒಬ್ಬರ ನಂತರ ಮತ್ತೊಬ್ಬರು ರಾಜ್ಯಭಾರ ಮಾಡಿರುವುದು ಶಾಸನದಲ್ಲಿ ದಾಖಾಲಾಗಿರುವುದು ಕಂಡುಬರುತ್ತದೆ. ಇವರು ನಿಧಾನವಾಗಿಯೇ ದಕ್ಷಿಣದಲ್ಲಿ ಆಳ್ವಿಕೆಗೆ ಬರಬೇಕಾಯಿತು. ಇದೇ ಭಾಗದಲ್ಲಿ ಆಳ್ವಿಕೆ ಮಾಡುತ್ತಿದ್ದ ಕೊಂಗಾಳ್ವರು ಮತ್ತು ಚೆಂಗಾಳ್ವರನ್ನು ಸೋಲಿಸುವ ಮೂಲಕ ಏಳಿಗೆಯನ್ನು ಕಾಣಬೇಕಾಯಿತು. ಕೆಲವು ದಾಖಲೆಗಳ ಪ್ರಕಾರ ಹೇಳುವುದಾದರೆ ಸುಮಾರು ಕ್ರಿ.ಶ. ೧೦೦೬ರ ವೇಳೆಗೆ ಹೊಯ್ಸಳರ ವಂಶದ ಮೊದಲ ಅರಸ ನೃಪಕಾಮನು ಆಳ್ವಿಕೆಗೆ ಇಳಿದಿರಬೇಕು ಎನಿಸುತ್ತದೆ. ಈತನ ಕುರಿತು ದಾಖಲೆಗಳಿವೆ. ನಂತರದಲ್ಲಿ ನೃಪಕಾಮನ ಮಗ ವಿನಯಾದಿತ್ಯನು ಪಟ್ಟಕ್ಕೆ ಬಂದಾಗ ಕ್ರಿ.ಶ. ೧೦೪೭ರಿಂದ ಸುಮಾರು ೫೦ ವರ್ಷಗಳ ಕಾಲ ದೀರ್ಘವಾದ ಆಳ್ವಿಕೆ ನಡೆಸುವುದು ದಾಖಲೆಗಳಿಂದ ಖಚಿತವಾಗುತ್ತದೆ. ಹೊಯ್ಸಳರು ಆರಂಭದಿಂದಲೂ ಅನ್ಯ ರಾಜರ ಜೊತೆ ಸಂಬಂಧವನ್ನು ಉತ್ತಮವಾಗಿಸಿಕೊಂಡಿರುವುದು ತಿಳಿದುಬರುತ್ತದೆ. ಆರಂಭದಲ್ಲಿ ಗಂಗರ ಜೊತೆ ಉತ್ತಮ ಬಾಂಧವ್ಯ ಬೆಳೆಸಿಕೊಂಡಿದ್ದರೆಂದು ಗಂಗವಾಡಿಯ ಮುಖ್ಯಸ್ಥರಾಗಿದ್ದರೆಂದು ಹೊಯ್ಸಳರಿಗೆ ಸಂಬಂಧಿಸಿದ ಕೆಲವು ದಾಖಲೆಗಳು ತಿಳಿಸಿಕೊಡುತ್ತವೆ. ವಿನಯಾದಿತ್ಯನ ಕಾಲದಲ್ಲಿ ಕಲ್ಯಾಣಿ ಚಾಲುಕ್ಯರೊಡನೆ ಉತ್ತಮ ಸಂಬಂಧವಿತ್ತೆಂದು ತಿಳಿಯುತ್ತದೆ. ಕಲ್ಯಾಣಿ ಚಾಲುಕ್ಯರ ಅರಸನಾದ ಒಂದನೆಯ ಸೋಮೇಶ್ವರನ ಹಿರಿಯ ರಾಣಿ ಹೊಯ್ಸಳದೇವಿಯ ಹೆಸರಿನಲ್ಲಿ ಕ್ರಿ.ಶ. ೧೦೫೫ರ ಶಾಸನವೊಂದು ದೊರೆತಿದೆ. ಇದರ ಪ್ರಕಾರ ಹೊಯ್ಸಳದೇವಿಯು ಹೊಯ್ಸಳ ಅರಸರ ಸೋದರಿಯೋ, ಮಗಳೋ ಆಗಿರಬೇಕು ಎಂದೆನಿಸುತ್ತದೆ. ಹೀಗಾಗಿ ಚಾಲುಕ್ಯರ ಮತ್ತು ಹೊಯ್ಸಳರ ನಡುವಿನ ಸಂಬಂಧ ಭದ್ರವಾಗಿತ್ತು. ಆದರೆ ಈ ಸಂಬಂಧವು ಶಾಶ್ವತವಾಗಿರಲಿಲ್ಲ. ಒಂದನೇ ಸೋಮೇಶ್ವರನ ಮರಣದ ನಂತರ ಚಾಲುಕ್ಯರ ಅಧಿಕಾರಕ್ಕೆ ಪೈಪೋಟಿಗಳುಂಟಾದವು. ಈ ಸಂದರ್ಭವನ್ನು ಬಳಸಿಕೊಂಡ ಹೊಯ್ಸಳರ ಅರಸ ವಿನಯಾದಿತ್ಯ ಸೋಮೇಶ್ವರನ ಮಗನಾದ ಎರಡನೇ ಸೋಮೇಶ್ವರನ ಪರವಾಗಿ ಸೇನೆ ಕಳುಹಿಸಲು ಮುಂದಾದನು. ಆದರೆ ಕ್ರಿ.ಶ. ೧೦೭೬ರಲ್ಲಿ ಎರಡನೇ ಸೋಮೇಶ್ವರನು ಕಾಲವಾದನು. ಹೀಗಾಗಿ ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದನು. ನಂತರದಲ್ಲಿ ವಿನಯಾದಿತ್ಯನ ಮಗ ಎರೆಯಂಗನು ಪ್ರಾರಂಭದಿಂದಲೇ ಕೆಲವು ಪ್ರದೇಶಗಳ ಮೇಲೆ ದಾಳಿ ಮಾಡುವುದರ ಜೊತೆಗೆ ಚಾಲುಕ್ಯರ ಮೇಲೆ ದಾಳಿ ಮಾಡಲು ಮಾತ್ರ ಎರೆಯಂಗನು ತನ್ನ ಮಕ್ಕಳಿಂದ ತಡೆಹಿಡಿದನು.

ಕಲ್ಯಾಣಿ ಚಾಲುಕ್ಯರ ನಂತರ ಅಂದರೆ ಕ್ರಿ.ಶ. ೧೨ನೆಯ ಶತಮಾನದ ಕೊನೆಯಲ್ಲಿ ದಕ್ಷಿಣ ಭಾರತದಲ್ಲಿ ಅನೇಕ ಹಿಂದೂ ಅರಸು ಮನೆತನಗಳು ಅಸ್ತಿತ್ವಕ್ಕೆ ಬಂದವು. ಈ ವೇಳೆಯಲ್ಲಿ ಉತ್ತರದ ದೇವಗಿರಿಯಲ್ಲಿ ಯಾದವರು(ಸೇವುಣರು) ಆಳ್ವಿಕೆ ಮಾಡುತ್ತಿದ್ದರು. ಆದರೆ ದ್ವಾರಸಮುದ್ರದಲ್ಲಿ ಹೊಯ್ಸಳರು 'ತೆಂಕಣ ಚಕ್ರವರ್ತಿಗಳು' ಎಂಬ ಹೆಸರಿನಿಂದ ಆಳ್ವಿಕೆ ಮಾಡುತ್ತಿದ್ದರು. ಹೊಯ್ಸಳರು ಉತ್ತರ ಭಾಗದ ಗಡಿಗಳನ್ನು ಸಂರಕ್ಷಿಸಲು ಅಸಮರ್ಥರಾಗತೊಡಗಿದರು. ಕಾರಣ ದೇವಗಿರಿ ಸೇವುಣರು ಪದೇ ಪದೇ ದಾಳಿ ಮಾಡುತ್ತಿದ್ದುದು ಒಂದು ಹಾಗೂ ಹೊಯ್ಸಳರ ಮೂರನೆಯ ನರಸಿಂಹನಿಗೂ ಮತ್ತು ರಾಮನಾಥನಿಗೂ ರಾಜ್ಯ ಹಂಚಿಕೆಯಲ್ಲಿ ಕಲಹವಿದ್ದುದು ಮತ್ತೊಂದು ಕಾರಣ. ಹೀಗಾಗಿ ಈ ಕಾರಣದಿಂದಲೇ ಹೊಯ್ಸಳರು ತಮ್ಮ ಉತ್ತರಭಾಗದ ಗಡಿಗಳನ್ನು ರಕ್ಷಿಸಿಕೊಳ್ಳದೇ ಸೇವುಣರು ರಾಜ್ಯದೊಳಗೆ ನುಗ್ಗಲು ದಾರಿಯಾಯಿತು. ಹೀಗೆ ಹೊಯ್ಸಳರ ಸೇವುಣರ ತಿಕ್ಕಾಟದಲ್ಲಿ ಬುದ್ಧಿವಂತಿಕೆಯನ್ನು ಉಪಯೋಗಿಸಿದ್ದುದು ಕುಮ್ಮಟದುರ್ಗ ಎಂಬ ಒಂದು ಚಿಕ್ಕ ರಾಜ್ಯ. ಈ ರಾಜ್ಯವು ಹೊಯ್ಸಳರ, ಸೇವುಣರ, ಕಾಕತೀಯರ ನಡುವಿನಲ್ಲಿ ತಲೆಯೆತ್ತಿತ್ತು. ಹೀಗಾಗಿ 'ತಡೆರಾಜ್ಯ' ಎಂತಲೂ ಇದನ್ನು ಕರೆಯುವುದರಲ್ಲಿ ಅರ್ಥವಿದೆ.

ಹೊಯ್ಸಳರು ಮತ್ತು ಕುಮ್ಮಟದುರ್ಗದ ನಾಯಕರಿಗೂ ಸಂಬಂಧವಿದ್ದುದರ ಬಗ್ಗೆ ಹಲವು ಶಾಸನಗಳು ದೊರೆತಿವೆ. ಆದರೆ ಇವೆರಡೂ ರಾಜ್ಯಗಳ ನಡುವೆ ಯಾವ ತರಹದ ಸಂಬಂಧವಿತ್ತು ಎನ್ನುವುದರ ಕುರಿತು ಖಚಿತವಾಗಿ ಶಾಸನಗಳ ಆಧಾರದ ಮೇಲೆ ಇವರ ಸಂಬಂಧವನ್ನು ಅರ್ಥೈಸಬಹುದಾಗಿದೆ.

## ಹೊಯ್ಸಳರು ಮತ್ತು ಕುಮ್ಮಟದುರ್ಗದ ನಡುವಿನ ಸಂಬಂಧ

ಹೊಯ್ಸಳರು ಮತ್ತು ಮುಮ್ಮಡಿಸಿಂಗರ ನಡುವಿನ ಸಂಬಂಧಗಳು ಯಾವ ಕಾರಣಕ್ಕಾಗಿ ಹದಗೆಟ್ಟವೆಂದು ಸ್ಪಷ್ಟೀಕರಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಮುಮ್ಮಡಿಸಿಂಗ ಮತ್ತು ಹೊಯ್ಸಳರ ನಡುವಿನ ಯುದ್ಧಗಳು ಯಾವ ಕಾರಣಕ್ಕಾಗಿ ನಡೆದವೆಂದು ಯಾವ ಶಾಸನಗಳಿಂದಲೂ ತಿಳಿದುಬಂದಿಲ್ಲ. ಅಥವಾ ಸ್ಪಷ್ಟೀಕರಣಕೊಡಲು ಸಾಧ್ಯವಾಗಿಲ್ಲ. ಆದರೆ ಸೇವುಣರ ಜೊತೆಗಿನ ಮುಮ್ಮಡಿಸಿಂಗನ ಕಾದಾಟಗಳಷ್ಟು ಹೊಯ್ಸಳರೊಂದಿಗೆ ನಡೆದಿರುವುದಿಲ್ಲ.

ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಬನ್ನಿಕೋಡು ಗ್ರಾಮದಲ್ಲಿನ ವೀರಗಲ್ಲು ಶಾಸನವು[೬] ಮುಮ್ಮಡಿಸಿಂಗನು ಬನ್ನಿಕೋಡು ಗ್ರಾಮದ ಮೇಲೆ ಕ್ರಿಶಕ ೧೨೮೧ ಸೆಪ್ಟೆಂಬರ್ ೧೭ ರಂದು ದಾಳಿ ಮಾಡುತ್ತಾನೆ ಎಂದು ತಿಳಿಸುತ್ತದೆ. ಮುಮ್ಮಡಿಸಿಂಗನು ದಾಳಿಮಾಡಿ ಗೋವುಗಳನ್ನು ವಶಮಾಡಿಕೊಳ್ಳುತ್ತಾನೆ. ಆದರೆ ಆ ಊರಿನ ಬೇಡರ ಯುವಕನಾದ ಬೀರಬೋವನ ಮಗ ಬೊಮನಾಯಕನು ಗೋವುಗಳನ್ನು ಬಿಡಿಸಿಕೊಳ್ಳಲು ಹೋಗಿ ಮುಮ್ಮಡಿಸಿಂಗನೊಂದಿಗೆ ಕಾದಾಡಿ ಸೋತು ಮಡಿದನೆಂದು ಹೇಳುತ್ತದೆ. ಈ ಬನ್ನಿಕೋಡು ಗ್ರಾಮವು ಹೊಯ್ಸಳರ ಅಧೀನದಲ್ಲಿತ್ತೆಂದು ಸಿಂಗೆಯನು ಹೊಯ್ಸಳರ ಅಧೀನದಲ್ಲಿನ ಪ್ರದೇಶಗಳ ಮೇಲೆ ಯಾವ ಕಾರಣಕ್ಕಾಗಿ ದಾಳಿ

ಮಾಡಿದನೆಂದು ಸ್ಪಷ್ಟವಾಗಿಲ್ಲದಿದ್ದರೂ ಗೋಗ್ರಹಣಕ್ಕಾಗಿಯೇ ಈ ದಾಳಿ ಮಾಡಿದ್ದಿರಬಹುದು ಎಂಬ ಅಭಿಪ್ರಾಯವಿದೆ.

ಮುಮ್ಮಡಿಸಿಂಗ ಮತ್ತು ಹೊಯ್ಸಳರ ನಡುವಿನ ಮತ್ತೊಂದು ಕದನವನ್ನು ನಿರೂಪಿಸುವ ಶಾಸನವು ಹೊಳಲ್ಕೆರೆ ತಾಲ್ಲೂಕಿನ ಲೋಕದೊಳಲು ಗ್ರಾಮದ ಸಿದ್ದೇಶ್ವರ ದೇವಾಲಯದ ಬಳಿ ಇದೆ. ಈ ವೀರಗಲ್ಲು ಶಾಸನ[5]ದಲ್ಲಿ ಮುಮ್ಮಡಿಸಿಂಗನು ಲೋಕದೊಳಲು ಗ್ರಾಮದ ಮೇಲೆ ಮುತ್ತಿಗೆ ಹಾಕಿದಾಗ ಆ ಗ್ರಾಮದ ಬೇಡರ ಯುವಕನಾದ ಸಂಗಯ್ಯನಾಯಕನು ಸಿಂಗೆಯನ ದಾಳಿಯನ್ನು ತಡೆಯಲು ಹೋಗಿ ಹತನಾಗುತ್ತಾನೆ. ಸಂಗಯ್ಯನಾಯಕನ ಗ್ರಾಮವು ಸಹ ಹೊಯ್ಸಳರ ಅಧೀನಕ್ಕೆ ಒಳಪಟ್ಟಿತ್ತು. ಆದರೆ ಇಲ್ಲಿ ಸಿಂಗೆಯನು ಯಾವ ಕಾರಣಕ್ಕಾಗಿ ದಾಳಿ ಮಾಡಿದನೆಂದು ತಿಳಿದಿಲ್ಲ. ಆದರೆ ಇದನ್ನು ಎಂ.ವಿ.ಚಿತ್ರಲಿಂಗಯ್ಯ ಅವರು ಎರಡನೇ ಗೋಗ್ರಹಣ[6] ಎಂದು ಕರೆದಿದ್ದಾರೆ. ಆದರೆ ಈ ಯುದ್ಧವು ಗೋವು ಸಂಬಂಧಿತವಾಗಿ ನಡೆದಿದೆ ಎಂಬ ಯಾವ ಹೇಳಿಕೆಯೂ ಇಲ್ಲದ ಕಾರಣ ಎರಡನೇ ಗೋಗ್ರಹಣ ಎಂದು ಒಪ್ಪುವುದು ಕಷ್ಟವಾಗುತ್ತದೆ. ಹಾಗೆಯೇ ಹಿರಿಯೂರಿನ ಬಳಿ ಜವಗೊಂಡನಹಳ್ಳಿಯ ಬಳಿ ದೊರೆತಿರುವ ಶಾಸನವು ಮುಮ್ಮಡಿಸಿಂಗನು ಚಿತ್ರದುರ್ಗದ ಕಡೆ ದಾಳಿ ಮಾಡಲು ಹೊರಟಾಗ ಹೊಯ್ಸಳರ ಅಧೀನ ಪ್ರದೇಶಗಳ ಮೇಲೆ ಕಣ್ಣಿಟ್ಟಿದ್ದನೆಂದು ಕಾಣುತ್ತದೆ. ಹೀಗಾಗಿ ಮಾರ್ಗ ಮಧ್ಯದಲ್ಲಿ ಬರುವ ಚಳ್ಳಕೆರೆ ಗ್ರಾಮದ ಮೇಲೆ ದಾಳಿ ಮಾಡಿದಾಗ ಆ ಊರಿನ ಕೇತಮಲ್ಲಸೆಟ್ಟಿಯ ಮನೆಯ ಕುರುಬರ ಜಕ್ಕಯ್ಯನಾಯಕನ ತಮ್ಮ ತಿಪ್ಪೆಯನಾಯಕನು ಹೋರಾಡಿ ಮಡಿಯುತ್ತಾನೆ. ಮುಮ್ಮಡಿಸಿಂಗನ ಮೇಲಿನ ಎಲ್ಲಾ ದಾಳಿಗಳನ್ನು ಗಮನಿಸಿದಾಗ ಉದ್ದೇಶಪೂರ್ವಕವಾಗಿಯೇ ದಾಳಿ ಮಾಡಿರುವುದು ತಿಳಿದುಬರುತ್ತದೆ. ಮುಮ್ಮಡಿಸಿಂಗನು ಪ್ರಾರಂಭದಿಂದಲೂ ಸೇವುಣರೊಂದಿಗೆ ವಿಧೇಯದಿಂದಲೇ ಇದ್ದನು. ಆದರೂ ಕೆಲವು ಘರ್ಷಣೆಗಳಾಗಿವೆ. ಆದರೆ ಹೊಯ್ಸಳರ ಮೇಲಿನ ದಾಳಿಗಳು ಸೇವುಣರ ಮೇಲಿದ್ದ ವಿಧೇಯತೆ ಮುಮ್ಮಡಿಸಿಂಗನನ್ನು ಕಟ್ಟಿ ಹಾಕಿದ್ದವೆಂದು ಅನಿಸುತ್ತದೆ. ಹಾಗೆಯೇ ಹೊಯ್ಸಳರ ಅಧೀನದಲ್ಲಿರುವ ಪ್ರದೇಶಗಳಲ್ಲಿ ಶಾಸನಗಳು ತಿಳಿಸಿರುವಂತೆ ಬೇಡರು ಅಥವಾ ನಾಯಕರು ಹೆಚ್ಚಾಗಿ ಇರುವುದರಿಂದ ಅಂತಹ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಮುಂದಾಗಿರಬಹುದು. ಆದರೆ ಹೊಯ್ಸಳರೊಂದಿಗಿನ ಮುಮ್ಮಡಿಸಿಂಗನ ಯುದ್ಧಗಳು ಕಂಪಿಲರಾಯನಿಗೆ ವರ್ಗಾವಣೆಯಾದವೆಂದು ಶಾಸನಗಳ ಆಧಾರದ ಮೇಲೆ ತಿಳಿಯುತ್ತದೆ. ಹೊಯ್ಸಳರ ದೊರೆ ೩ನೇ ಬಲ್ಲಾಳನ ಮೈದುನನಾಗಿದ್ದ ಸೋಮೆಯ ದಂಡನಾಯಕನ ಮೇಲೆ ಕಂಪಿಲರಾಯನು ದಂಡೆತ್ತಿ ಹೋಗಿರುವುದನ್ನು ಹೊಳೆನರಸೀಪುರ ಶಾಸನವು ತಿಳಿಸಿಕೊಡುತ್ತದೆ. ಸೋಮೆಯ ದಣ್ಣಾಯಕನು ಚಿತ್ರದುರ್ಗದ ಪ್ರಾಂತ್ಯಾಧಿಕಾರಿಯಾಗಿದ್ದು ಕಂಪಿಲನು ಈ ವೇಳೆಯಲ್ಲಿ ಸೇವುಣರಿಗೆ ವಿಧೇಯನಾಗಿದ್ದು, ಸೇವುಣರ ಪರವಾಗಿಯೇ ಹೊಯ್ಸಳರ ಮೇಲೆ ಯುದ್ಧ ಸಾರಿ ದಂಡೆತ್ತಿ ಬಂದನೆಂದು ಅರ್ಥೈಸುವುದು ಉಚಿತವಾಗಿದೆ. ಕಂಪಿಲರಾಯನ ದಾಳಿಗಳು ಹೆಚ್ಚಾಗಿ ಹೊಯ್ಸಳರ ಮೇಲೆ ನಡೆದಿರುವುದು ಖಚಿತವಾಗುತ್ತದೆ.

ಇವರ ನಡುವಿನ ಯುದ್ಧಗಳಿಗೆ ಚಿಟ್ಟನಹಳ್ಳಿ ಶಾಸನವು[೯] ಸಾಕ್ಷಿಯಾಗಿದೆ. ಈ ಶಾಸನವು ಸಹ ಮೇಲಿನ ಸಂಗತಿಯನ್ನೇ ತಿಳಿಸುತ್ತದೆ. ಶಿವಮೊಗ್ಗ ಜಿಲ್ಲೆಯ ಹೊಸ ನಗರ ತಾಲ್ಲೂಕಿನ ಹೊಸಕೋಟೆ ಗ್ರಾಮದಲ್ಲಿ[೧೦] ದೊರೆತಿರುವ ಶಾಸನವು ಹೊಯ್ಸಳರು ಮತ್ತು ಕಂಪಿಲನ ಘರ್ಷಣೆಯನ್ನೇ ಹೇಳುತ್ತದೆ. ಕಂಪಿಲನಿಗೂ ೩ನೇ ಬಲ್ಲಾಳನ ನಡುವಿನ ಯುದ್ಧದಲ್ಲಿ ಬಲ್ಲಾಳನ ಸ್ಥಾನಪತಿಯಾಗಿದ್ದ 'ಕುರುಕನಾಯಕ'ನು ರಣರಂಗದಲ್ಲೇ ಸಾವನ್ನಪ್ಪುತ್ತಾನೆ. ಇದರಿಂದಾಗಿ ಇಲ್ಲಿ ಕಂಪಿಲನಿಂದ ಹೊಯ್ಸಳರಿಗೆ ಸೋಲುಂಟಾಗುತ್ತದೆಂದು ತಿಳಿದುಬರುತ್ತದೆ. ಹಾಗೆಯೇ ಬಲ್ಲಾಳನ ಸಾಮಂತರಾದ ಬೇಬೆದಣ್ಣಾಯ್ಕರು ಮತ್ತು ಸಿಂಗೆಯದಣ್ಣಾಯ್ಕರ ಮೇಲೂ ಕಂಪಿಲನ ದಾಳಿಯಾಗಿದ್ದು, ಇದು ಕಂಪಿಲ ಮತ್ತು ಹೊಯ್ಸಳರ ದ್ವೇಷವನ್ನು ಇಮ್ಮಡಿಯಾಗಿಸುತ್ತದೆ. ಕೂಡಲಿಯ ಶಾಸನ ಹಾಗೂ ಯರಬಳ್ಳಿ ಶಾಸನಗಳೂ ಸಹ ಹೊಯ್ಸಳರಿಗೂ ಮತ್ತು ಕುಮ್ಮಟದ ನಾಯಕರಿಗೂ ಸಂಘರ್ಷಗಳಾದವೆಂದು ಖಚಿತಪಡಿಸುತ್ತವೆ. ಇಲ್ಲಿ ಗಮನಿಸಬೇಕಾದ ಸಂಗತಿಗಳೆಂದರೆ ಹೊಯ್ಸಳರ ಅರಸ ೩ನೇ ಬಲ್ಲಾಳನು ಸೇವುಣರಿಗೆ ಕಡುವೈರಿಯಾಗಿದ್ದನು. ಇದೇ ವೇಳೆಯಲ್ಲಿ ಕಂಪಿಲನು ಸೇವುಣರ ಸೇನಾನಾಯಕ[೧೧]ನಾಗಿದ್ದನು. ನಂತರ ಕಂಪಿಲನು ಅರಸನಾಗಿ ಹೊಯ್ಸಳರ ಮೇಲೆ ದಾಳಿ ಮಾಡಲು ಹವಣಿಸುತ್ತಿದ್ದನೆಂದೂ ಹೀಗಾಗಿ ಕಂಪಿಲನ ಈ ಚಟುವಟಿಕೆಗಳು ಬಲ್ಲಾಳನನ್ನು ಕೆರಳಿಸಿದ್ದರಿಂದ ಬಲ್ಲಾಳನು ದಾಳಿ ಮಾಡಿ ಕಂಪಿಲನನ್ನು ಸೋಲಿಸಿದನು.

ಕಂಪಿಲ ಮತ್ತು ಬಲ್ಲಾಳರ ನಡುವೆ ಪರಸ್ಪರ ಒಪ್ಪಂದಗಳು ಸಹ ಆದವು. ಆದರೆ ಕುಮ್ಮಟದರಸರು ಹಾಗೂ ಹೊಯ್ಸಳರೊಂದಿಗಿನ ಸಂಬಂಧಗಳು ಹದಗೆಟ್ಟಿದ್ದವು. ಇವರ ನಡುವೆ ಉತ್ತಮ ಸಂಬಂಧಗಳಿರಲಿಲ್ಲ ಎಂಬುದು ಕೆಲವು ದಾಖಲೆಗಳ ಮೂಲಕ ಖಚಿತವಾಗಿದೆ. ಆದರೆ ಗಮನಿಸಬೇಕಾದ ಅಂಶವೇನೆಂದರೆ ಮುಮ್ಮಡಿಸಿಂಗನು ಹೊಯ್ಸಳರ ಪ್ರದೇಶಗಳ ಮೇಲೆ ದಾಳಿ ಮಾಡಿದ ಮಾರ್ಗವನ್ನೇ ಕಂಪಿಲನು ಅನುಸರಿಸಿದ ಎಂಬುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ.

### ೨.೩. ದೇವಗಿರಿಯ ಸೇವುಣರು

ದೇವಗಿರಿ ಯಾದವರೆಂದರೆ ಕರ್ನಾಟಕದ ಸೇವುಣರೆಂದೇ ಪ್ರಸಿದ್ಧರಾಗಿರುವುದು ಭಾರತದ ಇತಿಹಾಸದಿಂದ ತಿಳಿದುಬರುತ್ತದೆ. ಸಾಮಾನ್ಯವಾಗಿ ಚರಿತ್ರಾಕಾರರೆಲ್ಲರೂ ಸೇವುಣರನ್ನು 'ದೇವಗಿರಿ ಯಾದವರೆಂದೇ' ಕರೆದಿರುವುದು ವಿಶೇಷವಾಗಿದೆ. ಚರಿತ್ರಾಕಾರರಾದ ಜೆ.ಎಫ್.ಫ್ಲೀಟ್ ಸೇರಿದಂತೆ ಮಹಮ್ಮದೀಯ ಚರಿತ್ರಾಕಾರರು ಸಹ ಯಾದವರೆಂದೇ ಕರೆದಿರುವುದು ತಿಳಿದುಬರುತ್ತದೆ. ಆದರೆ ಹೇಮಾದ್ರಿಯ ರಾಜಪ್ರಶಸ್ತಿಯು ಹೇಳುವಂತೆ ಸೇವುಣರ ಎರಡನೆಯ ದೊರೆಯಾದ ಸೇವುಣ ಚಂದ್ರನಿಂದಲೇ ಸೇವುಣ ಎಂಬ ಹೆಸರು ಬಂದಿದೆ[೧೨] ಎಂದು ತಿಳಿಸುತ್ತದೆ. ಇವರ ಅನೇಕ ಶಾಸನಗಳು ಸಹ ಪ್ರತಿ ಬಿರುದಿಗೂ ಸೇವುಣ ಎಂದೇ ಸೇರಿರುವುದು ಕಾಣುತ್ತದೆ. ಸೇವುಣರ ಸಮಕಾಲೀನ ರಾಜವಂಶಗಳು ಸಹ ಸೇವುಣ ಎಂದೇ ಕರೆದಿರುವುದು ವಿಶೇಷವಾಗಿದೆ. ಆದರೆ ಮಹಮ್ಮದೀಯ ಚರಿತ್ರಕಾರರುಗಳಾದ ಬರಾನಿ, ಖುಸ್ರು, ಫೆರಿಸ್ತಾ ಹೀಗೆ ಹಲವರು ಇವರನ್ನು

ಯಾದವರೆಂದೇ ಕರೆದಿರುವುದು ಗಮನಕ್ಕೆ ಬರುತ್ತದೆ. ಚರಿತ್ರಾಕಾರರ ಹೇಳಿಕೆಗಳಿಗಿಂತ ಮುಖ್ಯವಾಗಿ ಶಾಸನಗಳಿಗೆ ಪ್ರಾಮುಖ್ಯತೆ ಕೊಡಬೇಕಾಗಿರುವುದರಿಂದ ಸೇವುಣರು ಎಂದೇ ಕರೆಯುವುದು ಸೂಕ್ತವೆನಿಸುತ್ತದೆ. ಶಾಸನಗಳಲ್ಲಿ ಸೇವುಣ, ಸೇಗುಣ, ಸೇಮುಣ, ಸೇಗುಣ್ಣ ಎಂಬ ವಿವಿಧ ರೂಪಗಳಲ್ಲಿ ಕಾಣಬರುತ್ತದೆ.[೧೩] ಸೇವುಣರು ಮರಾಠಿಯವರು ಅಂದರೆ ದೇವಗಿರಿಗೆ ಸೇರಿದವರೆಂದು ಕೆಲವು ಪ್ರಮುಖ ಚರಿತ್ರಾಕಾರರಾದ ಅಲ್ತೇಕರ್, ಫ್ಲೀಟ್ ಮತ್ತು ಭಂಡಾರ್‌ಕರ್ ಸೇರಿದಂತೆ ಮುಂತಾದ ಚರಿತ್ರೆಕಾರರು ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಆದರೆ ಇವುಗಳ ಬಗ್ಗೆ ಹೆಚ್ಚಾಗಿ ಚರ್ಚೆ ನಡೆದಿರುವುದು ಕಡಿಮೆಯೇ ಅನಿಸುತ್ತದೆ. ಅಂತಿಮವಾಗಿ ಹೇಳುವುದಾದರೆ ಸೇವುಣರ ಶಾಸನಗಳು ಇತ್ತೀಚಿಗೆ ಹೊರಹಾಕಿರುವ ಮಾಹಿತಿಗಳ ಪ್ರಕಾರ ಸೇವುಣರನ್ನು ಕನ್ನಡಿಗರೆಂದೇ ಗುರ್ತಿಸಿರುವುದು. ಹೀಗಾಗಿ ಶಾಸನಗಳ ಹೆಚ್ಚಿನ ಮಾಹಿತಿಗಳ ಆಧಾರದ ಮೇಲೆ ಸೇವುಣರು ಕನ್ನಡಿಗರೆಂದೇ ಗುರ್ತಿಸುವುದು ಸೂಕ್ತವಾಗುತ್ತದೆ.

ಸೇವುಣರು ತಮ್ಮ ರಾಜಕೀಯ ವೃತ್ತಿಯನ್ನು ಕ್ರಿ.ಶ. ೧೦ನೇ ಶತಮಾನದಿಂದಲೇ ಪ್ರಾರಂಭಿಸಿದ್ದರು. ಆದರೆ ಇವರು ಸ್ವತಂತ್ರ ರಾಜರಾಗಿ ಬೆಳಕಿಗೆ ಬಂದದ್ದು, ಕ್ರಿ.ಶ. ೧೨ನೇ ಶತಮಾನ ಎಂಬುದು ಶಾಸನಗಳಿಂದಲೇ ವಿಧಿತವಾಗುತ್ತದೆ. ಪೂರ್ವದಲ್ಲಿ ಕಲ್ಯಾಣಿ ಚಾಲುಕ್ಯರ ಆಡಳಿತವಿದ್ದುದು ನಿಜವಾದರೂ ಈ ವೇಳೆಗಾಗಲೇ ಚಾಲುಕ್ಯರ ಅವನತಿಯ ಕಾಲ ಪ್ರಾರಂಭವಾಗಿತ್ತು. ಕೆಲವು ಚಿಕ್ಕ ರಾಜವಂಶಗಳು ಅಧಿಕಾರಕ್ಕೆ ಬರಲು ಪ್ರಯತ್ನಪಟ್ಟವಾದರೂ ಚಾಲುಕ್ಯರ ಕೊನೆ ಅರಸ ೪ನೇ ಸೋಮೇಶ್ವರನು ಅಧಿಕಾರಕ್ಕೆ ಬರುತ್ತಾನೆ. ಆದರೆ ಚಾಲುಕ್ಯರ ಸಾಮ್ರಾಜ್ಯವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಹೀಗಾಗಿ ಚಾಲುಕ್ಯ ಸಾಮ್ರಾಜ್ಯವು ೩ನೇ ತೈಲಪನ ಆಳ್ವಿಕೆಯಿಂದ ಕೊನೆಗೊಂಡಿತು. ಈ ನಂತರದಲ್ಲಿ ಚಾಲುಕ್ಯರ ಬದಲಿಗೆ ಅಧಿಕಾರಕ್ಕಾಗಿ ಹೊಯ್ಸಳರು ಮತ್ತು ಸೇವುಣರ ನಡುವೆ ಪೈಪೋಟಿ ಆರಂಭವಾದವು.

ಸೇವುಣರ ಮೂಲವನ್ನು ಪೌರಾಣಿಕವಾಗಿ ವಿಶ್ಲೇಷಿಸುವುದಾದರೆ ಇಲ್ಲಿಯೂ ಸಹ ಯಾದವರೆಂದೇ ಹೇಳಿಕೊಂಡಿರುವುದು, ದ್ವಾರಕೆಯಿಂದ ಬಂದವರೆಂದೂ, ಯದುವಿನಿಂದ ಬಂದವರೆಂದೂ ಹೇಳಿರುವುದು ಸೇವುಣರು 'ಯಾದವ ನಾರಾಯಣ' ಎಂಬ ಬಿರುದು ಧರಿಸಿರುವ ಆಧಾರದ ಮೇಲೆ ಹೇಳಲಾಗುತ್ತದೆ. ಯಾದವನಾದ ವಿಷ್ಣು ಕೃಷ್ಣನಿಂದಾಗಿ ಮನೆತನವು ವಿಷ್ಣು ವಂಶೋದ್ಭವ, "ವಿಷ್ಣುವಿನ ವಂಶದಲ್ಲಿ ಹುಟ್ಟಿದವರು" ಎಂಬ ಬಿರುದನ್ನು ಧರಿಸಿದರು[೧೪]. ಆದರೆ ಮೇಲಿನ ಹೇಳಿಕೆಯನ್ನು ನಂಬುವುದು ಕಷ್ಟವಾಗುತ್ತದೆ. ಕಾರಣ ಈ ಪೌರಾಣಿಕ ಹೇಳಿಕೆಗಳು ಐತಿಹಾಸಿಕ ಮಾಹಿತಿಗಳಿಗೆ ಹಾಗೂ ಶಾಸನಗಳಿಗೆ ಹೊಂದಾಣಿಕೆ ಆಗುವುದಿಲ್ಲ. ಸೇವುಣರ ಸಮಕಾಲೀನ ಕೆಲವು ರಾಜವಂಶಗಳು ಪೌರಾಣಿಕ ಹಿನ್ನೆಲೆಯನ್ನು ಹೊಂದಿರುವ ಕಾರಣ ಸೇವುಣರೂ ಸಹ ಪೌರಾಣಿಕತೆಯನ್ನು ಸೃಷ್ಟಿಸಿರಬಹುದೇನೋ ಅನಿಸುತ್ತದೆ. ಹೀಗಾಗಿ ಇವರು ಉತ್ತರದಿಂದ ದಕ್ಷಿಣಕ್ಕೆ ಬಂದವರೆಂದು ಹೇಳಲು ಸಾಧ್ಯವಾಗುವುದಿಲ್ಲ. ಇದರ ಬದಲಿಗೆ ಶಾಸನಗಳು ತಿಳಿಸುವ

ಪ್ರಕಾರ ಮೂಲತಃ ಕನ್ನಡಿಗರೆಂದೇ ಅಭಿಪ್ರಾಯಪಡುವುದು ಸೂಕ್ತವೆನಿಸುತ್ತದೆ. ಈ ವಂಶಕ್ಕೆ ಸೇರಿದ ಕೆಲವು ಹೆಸರುಗಳಾದ ಭಿಲ್ಲಮ, ಲಚ್ಚಿಯವ್ವ, ರಾಜಗಿ, ದಡಿಯಪ್ಪ ಎಂಬ ಹೆಸರುಗಳು ಕನ್ನಡತನವನ್ನು ಸೂಚಿಸುತ್ತವೆ. ಸಮಕಾಲೀನ ರಾಜವಂಶಗಳು ಸಹ ಅಂದರೆ ಕಾಕತೀಯರು ಮತ್ತು ಹೊಯ್ಸಳರಿಬ್ಬರೂ ತಮ್ಮ ತಮ್ಮ ದಾಖಲೆಗಳಲ್ಲಿ ಸೇವುಣರೆಂದೇ ಕರೆದಿರುವುದು ಸೇವುಣರು ಕನ್ನಡಿಗರೆಂದು ಹೇಳುವ ಹೇಳಿಕೆಗೆ ಸೂಕ್ತವಾಗಿದೆ. ಹೀಗಾಗಿ ಅಂತಿಮವಾಗಿ ಹೇಳುವುದಾದರೆ ದೇವಗಿರಿಯು ಪ್ರಾರಂಭದಿಂದಲೂ ಸೇವುಣರ ರಾಜಧಾನಿಯಾಗಿರಲಿಲ್ಲವಾದ ಕಾರಣ ಇವರು ಮರಾಠಿಗರಲ್ಲ, ಮೂಲ ಮಾತ್ರ ಕರ್ನಾಟಕವಾಗಿದ್ದು, ಶಾಸನಗಳಲ್ಲಿಯೂ ಕನ್ನಡಿಗರೆಂಬ ವಿಚಾರ ಹೊರಬಿದ್ದಿದ್ದು, ರಾಜಕೀಯಕ್ಕೆ ಪ್ರವೇಶಿಸಿ ೨೦೦ ವರ್ಷಗಳ ನಂತರದಲ್ಲಿ ದೇವಗಿರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿರುವ ಮಾಹಿತಿಗಳೇ ಸತ್ಯವೆನಿಸುತ್ತವೆ.

ಸೇವುಣ ಅರಸರ ಕಾಲ ನಿರ್ಣಯವನ್ನು ಕುರಿತಂತೆ ಅನೇಕ ಹೊಸ ಶಾಸನಗಳು ಪ್ರಕಟವಾಗಿವೆ. ಹಾಗೆಯೇ ಕೆಲವು ವಿದ್ವಾಂಸರುಗಳಾದ ಭಂಡಾರಕರ್ ಮತ್ತು ಫ್ಲೀಟ್‌ರವರ ಅಭಿಪ್ರಾಯದಂತೆ ಕಾಲವನ್ನು ನಿರ್ಣಯ ಮಾಡಿದರೂ, ಅದು ಅಷ್ಟು ಸಮಂಜಸವಲ್ಲ ಎಂದೆನಿಸುತ್ತದೆ. ಕಾರಣವೇನೆಂದರೆ ಇತ್ತೀಚಿನ ಶಾಸನಗಳಿಂದ ಸೇವುಣ ರಾಜರ ಕಾಲವನ್ನು ನಿರ್ಣಯ ಮಾಡಲು ಸಾಧ್ಯವಾಗುತ್ತಿದೆ. ಸೇವುಣರ ಕಾಲ ನಿರ್ಣಯಗೊಳಿಸಲು ಸುಮಾರು ಐನೂರು ಶಾಸನಗಳು ಉಪಯೋಗಕ್ಕೆ ಬರುತ್ತವೆ. ಆದರೆ ಈ ವಂಶದ ಆರಂಭದ ಸುಮಾರು ೨೦ ಅರಸರುಗಳಿಗೆ ಸಂಬಂಧಿಸಿದಂತೆ ಸುಮಾರು ೧೨ ಶಾಸನಗಳು ಸಂಬಂಧಪಟ್ಟಿವೆ. ಹೀಗಾಗಿ ಖಚಿತವಾಗಿ ಸೇವುಣ ಅರಸರ ಕಾಲ ನಿರ್ಣಯ ಮಾಡುವುದು ಕಷ್ಟದ ಕೆಲಸವಾಗಿದೆ.

ಆದರೂ ಕೆಲವು ಶಾಸನಗಳು ಕಾಲ ನಿರ್ಣಯಿಸಲು ಪುಷ್ಟಿ ನೀಡುತ್ತವೆ. ಸೇವುಣರ ವಂಶಾವಳಿಯನ್ನು ಸಮಕಾಲೀನ ರಾಜವಂಶಗಳ ಕುರಿತಂತೆ ಕೆಲವು ಶಾಸನಗಳ ಮಾಹಿತಿಗಳ ಆಧಾರದ ಮೇಲೆ ತಿಳಿಸುವ ಪ್ರಯತ್ನ ಮಾಡಲಾಗಿದೆ. ಸೇವುಣರ ಅತ್ಯಂತ ಪ್ರಾಚೀನ ಶಾಸನವೆಂದರೆ 'ಸಂಗಮ್‌ನೇರ್' ಶಾಸನ.[೧೫] ಈ ಶಾಸನದ ಕಾಲವು ಕ್ರಿ.ಶ. ೧೦೦೦ ಆಗಿದೆ. ಈ ಶಾಸನವು ಚಾಲುಕ್ಯರ ಎರಡನೆಯ ತೈಲನ ಸಮಕಾಲೀನನಾಗಿದ್ದನೆಂದು ಇವನಿಂದ ಸೇವುಣರ ಭಿಲ್ಲಮನು ಪಂಚಮಹಾಶಬ್ದಗಳನ್ನು ಪಡೆದುಕೊಂಡನೆಂದು ತಿಳಿಸುತ್ತದೆ. ಈ ಮಾಹಿತಿಯ ಆಧಾರದ ಮೇಲೆ ಭಿಲ್ಲಮನ ಕಾಲ ಕ್ರಿ.ಶ. ೧೦೦೦ ಎಂದು ಅಂದಾಜಿಸಬಹುದು. ಈತನಿಗೂ ಪೂರ್ವದಲ್ಲಿ ಸುಮಾರು ಏಳು ಜನ ಅರಸರು ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ. ಅಂದರೆ ಅವರ ಸಮಕಾಲೀನ ರಾಜರುಗಳಿಗೆ ಸಂಬಂಧಿಸಿದ ಶಾಸನಗಳಲ್ಲಿ ಎರಡನೇ ಭಿಲ್ಲಮನ ಪೂರ್ವದ ಅರಸರ ಉಲ್ಲೇಖವಾಗಿದೆ. ಅಂದರೆ ದೃಢಪ್ರಹಾರ ೧ನೇ ಸೇವುಣ ಚಂದ್ರ ದಡಿಯಪ್ಪ ೧ನೇ ಭಿಲ್ಲಮನ ರಾಜ ಮತ್ತು ವಡ್ಡಿಗರು ಆಳ್ವಿಕೆ ನಡೆಸಿದ್ದರೆಂದು ತಿಳಿಯುತ್ತದೆ. ಎರಡನೆಯ ಭಿಲ್ಲಮನ ಪೂರ್ವದ ಅರಸರಲ್ಲಿ ವಡ್ಡಿಗನು ರಾಷ್ಟ್ರಕೂಟರ ಸಮಕಾಲೀನ ಅರಸನಾದ ೩ನೇ ಕೃಷ್ಣನ ಕಾಲ

ಕ್ರಿ.ಶ. ೯೩೯-೯೬೭. ೨ನೇ ಕೃಷ್ಣನ ಸ್ನೇಹಿತನು ವಡ್ಡಿಗನಾಗಿದ್ದ. ಹೀಗಾಗಿ ವಡ್ಡಿಗನ ನಂತರ ಎರಡನೇ ಭಿಲ್ಲಮನು ಆಳ್ವಿಕೆಗೆ ಬರುತ್ತಾನೆ. ಈತನ ನಂತರ ವೇಸುಗಿ ಮತ್ತು ೩ನೆಯ ಭಿಲ್ಲಮರು ಆಳ್ವಿಕೆಗೆ ಬರುತ್ತಾರೆ. ಮೂರನೇಯ ಭಿಲ್ಲಮನಿಗೆ ಸಂಬಂಧಪಟ್ಟಂತೆ ೨ ಶಾಸನಗಳು ದೊರೆತಿದ್ದು, ಶಾಸನಗಳ ಕಾಲ ಕ್ರಿ.ಶ. ೧೦೨೫ ರಿಂದ ೧೦೫೨ ಅಂದರೆ ಕ್ರಿ.ಶ. ೧೦೨೫ ಕ್ಕೂ ಪೂರ್ವದಲ್ಲಿ ವೇಸುಗಿ ಆಳ್ವಿಕೆ ನಡೆಸುತ್ತಿದ್ದ ಎಂದು ಅಂದಾಜಿಸಬಹುದು. ಅಂದರೆ ಕ್ರಿ.ಶ. ೧೦೦೦ ರಿಂದ ಕ್ರಿ.ಶ. ೧೦೨೫ರವರೆಗೆ ವೇಸುಗಿಯ ಆಳ್ವಿಕೆಯ ಕಾಲ ಎಂದು ಗುರ್ತಿಸಬಹುದು. ಒಬ್ಬೊಬ್ಬ ರಾಜನಿಗೂ ಸುಮಾರು ೨೦-೨೫ವರ್ಷಗಳ ಅಂತರವಿದ್ದು. ೨ನೇ ಭಿಲ್ಲಮನ ಪೂರ್ವದಲ್ಲಿ ಸುಮಾರು ೭ ಜನ ರಾಜರುಗಳ ಆಳ್ವಿಕೆ ಸುಮಾರು ೧೭೦ ರಿಂದ ೧೭೫ ವರ್ಷಗಳ ಆಳ್ವಿಕೆಯ ಕಾಲವನ್ನು ಸೂಚಿಸಬಹುದು. ಅಂದರೆ ಕೆಲವು ರಾಜರುಗಳು ೨೫ ವರ್ಷಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿರುವುದು ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಉದಾಹರಣೆಗೆ ೩ನೆಯ ಭಿಲ್ಲಮನ ಕಾಲಕ್ಕೆ ಸೇರಿದ ೨ ಶಾಸನಗಳು ದೊರೆತಿವೆ. ಮೊದಲ ಶಾಸನ ಕಾಲ ಕ್ರಿ.ಶ. ೧೦೨೫ ರಿಂದ ಎರಡನೇ ಶಾಸನ ಕ್ರಿ.ಶ. ೧೦೫೨ ರವರೆಗೆ ಕಾಲದ ಅಂದಾಜು ಮಾಡಿದರೆ ಸುಮಾರು ೨೭ ವರ್ಷ ಆಳ್ವಿಕೆ ಮಾಡಿರಬಹುದು ಎನಿಸುತ್ತದೆ. ಹೀಗಾಗಿ ಖಚಿತವಾದಂತಹ ಮಾಹಿತಿಗಳು ಇಲ್ಲವಾದರೂ ಸಮಕಾಲೀನ ರಾಜರ ಕುರಿತಂತೆ ಶಾಸನಗಳನ್ನು ವಿಶ್ಲೇಷಿಸಿದಾಗ ಮಾತ್ರ ಸೇವುಣ ರಾಜರ ಕಾಲನಿರ್ಣಯ ಮಾಡಲು ಸಾಧ್ಯವಾಗುತ್ತದೆ.

ಸೇವುಣರು ರಾಜಕೀಯವಾಗಿ ಕರ್ನಾಟಕದೊಂದಿಗೆ ಉತ್ತಮ ಸಂಬಂಧ ಹೊಂದಿದ್ದರೆಂದು 'ಕರ್ನಾಟಕರಾಯ ವಂಶಾಭಿರಾಮ' ಎಂಬ ಬಿರುದನ್ನು ಧರಿಸಿದ್ದರೆಂದು ತಿಳಿದುಬರುತ್ತದೆ.[೧೬] ಸೇವುಣರಿಗೆ ಸಂಬಂಧಿಸಿದಂತೆ ಹೆಚ್ಚು ಹೆಚ್ಚು ಶಾಸನಗಳು ಕನ್ನಡದಲ್ಲಿವೆ. ಈ ಮನೆತನದ ಮೊದಲನೆಯ ಅರಸ ಸೇವುಣ ಚಂದ್ರ ಆಗಿರುವುದರಿಂದ ಆತನಿಂದಲೇ ಸೇವುಣ ಎಂಬ ಹೆಸರು ಮುಂದುವರೆದಿರಬೇಕೆಂದು ಅನಿಸುತ್ತದೆ. ಸೇವುಣ ಚಂದ್ರನ ನಂತರ ಬಂದ ರಾಜರುಗಳಲ್ಲಿ ಕೆಲವರನ್ನು ಕುರಿತು ಅಸ್ಪಷ್ಟ ಮಾಹಿತಿಗಳಿವೆ. ಆದರೆ ಸೇವುಣ ರಾಜನಾದ ೨ನೇ ಮಲ್ಲುಗಿಯ ವೇಳೆಯಲ್ಲಿ ಸೇವುಣರ ರಾಜಕೀಯ ರಂಗದಲ್ಲಿ ಪರಿಣಾಮಕಾರಿಯಾದಂತಹ ಬೆಳವಣಿಗೆಗಳನ್ನು ಕಂಡುಕೊಂಡರು. ಈ ಕಾಲಾವಧಿಯಲ್ಲಿ ನೆರೆ ರಾಜ್ಯಗಳಾದ ಕಲಚೂರಿಗಳು, ಕಲ್ಯಾಣಿ ಚಾಲುಕ್ಯರು ಹಾಗೂ ಕಾಕತೀಯರ ನಡುವೆ ಸಿಂಹಾಸನಕ್ಕಾಗಿ ಕಿತ್ತಾಟಗಳು ಪ್ರಾರಂಭವಾದವು. ಇಂತಹ ಸಂದರ್ಭವನ್ನು ಬಳಸಿಕೊಂಡ ಸೇವುಣರು ಹಂತಹಂತವಾಗಿ ಕೆಲವು ಪ್ರದೇಶಗಳನ್ನು ವಶಮಾಡಿಕೊಳ್ಳುತ್ತಾ ಬಂದರು. ಸೇವುಣರು ಹೊಯ್ಸಳರ ಬದ್ಧ ವೈರಿಗಳಾಗಿದ್ದರಿಂದ ಆಗಾಗ ಯುದ್ಧಗಳನ್ನು ನಡೆಸುತ್ತಲೇ ಇದ್ದರು. ಹೊಯ್ಸಳರ ಅಧೀನದ ಪ್ರದೇಶಗಳಿಗಾಗಿ ಹಂಬಲಿಸುತ್ತಿದ್ದ ಸೇವುಣ ರಾಜ ರಾಮಚಂದ್ರನು ಹೊಯ್ಸಳ ರಾಜಧಾನಿ ದೋರಸಮುದ್ರದ ಮೇಲೆ ಆಗಾಗ ದಾಳಿ ಮಾಡುತ್ತಲೇ ಇದ್ದನು. ಆದರೂ ಅದು ವಶವಾಗಲಿಲ್ಲ. ಬದಲಿಗೆ ಕುಮ್ಮಟದ ನಾಯಕನಾದ ಮುಮ್ಮಡಿಸಿಂಗೆಯನ ಮೇಲೆ ದಾಳಿ ಮಾಡಿ ಸೋಲಿಸಿದನು. ಅನೇಕ ಬಾರಿ ಈ ದುರ್ಗದ ಮೇಲೆ

ದಾಳಿ ಮಾಡಿ ಸೋತು ಕೊನೆಗೆ ಕ್ರಿ.ಶ. ೧೨೮೭ರಲ್ಲಿ ವಶಮಾಡಿಕೊಂಡನು. ಹಿರೇಕೋಗಿಲೂರು ಶಾಸನದಲ್ಲಿ ಹೇಳಿರುವಂತೆ ಸೇವುಣ ದೊರೆ ರಾಮಚಂದ್ರನ ಮಂತ್ರಿಯಾಗಿದ್ದ ಚಾಂವುಡರಸನಿಗೂ ಮತ್ತು ಮುಮ್ಮಡಿಸಿಂಗೇಯನಿಗೂ ಯುದ್ಧವಾಯಿತು.[೧೭]

ಮುಮ್ಮಡಿಸಿಂಗನ ಪ್ರದೇಶವಾದ ದೊರವದಿಯ ಮೇಲೆ ದಾಳಿ ಮಾಡಿ ಕುದುರೆಗಳನ್ನು ಕೊಂದಾಗ ಪ್ರತ್ಯುತ್ತರವಾಗಿ ಚಾವುಂಡರಸನ ಮೇಲೆ ಮುಮ್ಮಡಿಸಿಂಗೆಯನು ದಾಳಿ ಮಾಡಿ ಕೊಲ್ಲುತ್ತಾನೆ. ದೊರವದಿ ಪ್ರದೇಶವು ಸಿಂಗೇಯನ ಅಧೀನದಲ್ಲಿತ್ತೆಂದು ಹಿರೇಕೋಗಿಲೂರು ಶಾಸನದಿಂದ ತಿಳಿದುಬರುವುದರ ಜೊತೆಗೆ ದೊರವದಿ ಪ್ರದೇಶವು ಭೌಗೋಳಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು, ಬೆಟ್ಟಗುಡ್ಡಗಳಿಂದ ಆವೃತಗೊಂಡಿತ್ತು ಹಾಗೂ ಶತ್ರುಗಳನ್ನು ತಡೆಯುವಲ್ಲಿ ನೈಸರ್ಗಿಕ ವಾತಾವರಣವಿತ್ತು. ಹೀಗಾಗಿಯೇ ಸಿಂಗನು ಸೇವುಣರಿಗೆ ವಿಧೇಯನಾಗಿದ್ದರೂ ಸೇವುಣರ ವಿರುದ್ಧ ಕಾದಾಡಿರುವುದು ಕಂಡುಬರುತ್ತದೆ. ಸೇವುಣರ ಸೈನ್ಯಾಧಿಪತಿ ಆಗಿದ್ದ ಕನ್ನರದೇವನು ಸುಮಾರು ಎರಡು ಬಾರಿ ಮುಮ್ಮಡಿಸಿಂಗನ ಮೇಲೆ ದಾಳಿ ಮಾಡುವ ಸಂಗತಿಯನ್ನು ಹಿರೇಕೋಗಿಲೂರು ಗ್ರಾಮದ ಶಾಸನಗಳು ಹೇಳುತ್ತವೆ. ಬಹುಶಃ ಚಾವುಂಡರಸನ ಸೋಲು ಸೇವುಣರ ಕನ್ನರದೇವನು ಸಿಂಗೇಯನ ಮೇಲೆ ದಾಳಿ ಮಾಡಲು ಪ್ರೇರೇಪಿಸಿರಬೇಕು. ಹೀಗಾಗಿ ಕನ್ನರದೇವನು ಸಿಂಗೇಯನ ಮೇಲೆ ಕ್ರಿ.ಶ. ೧೨೮೨ರಲ್ಲಿ ದಾಳಿ ಮಾಡಿದಾಗ ಕನ್ನರದೇವನ ಪರವಾಗಿದ್ದ ಮತ್ತೊಬ್ಬ ದಂಡನಾಯಕ ಕೂಚರಸನ ಮಗ ವಣದೇವರಸನು ಪ್ರತಿ ದಾಳಿ ಮಾಡಿದನು. ಆಗ ಸಿಂಗೆಯನ ದಾಳಿಗೆ ಸೇವುಣ ಸೇನೆ ತತ್ತರಿಸಿ ಹೋಗುತ್ತದೆ. ಈ ಸೋಲಿನಿಂದ ವಣದೇವರಸನು ಸಾವನ್ನಪ್ಪುತ್ತಾನೆ. ಇದರಿಂದಾಗಿ ಅವಮಾನಗೊಂಡ ಕನ್ನರದೇವನು ಮತ್ತೊಮ್ಮೆ ಸಿಂಗೆಯನ ಮೇಲೆ ದಾಳಿ ಮಾಡುತ್ತಾನೆ. ಆದರೆ ಪುನಃ ಸೋಲನ್ನು ಅನುಭವಿಸಿ ವಾಪಾಸ್ಸಾದಾಗ ಸಿಂಗೆಯನು ಚಾವುಂಡರಸನ ಮೈದುನನಾದ ಗೋಪರಸನನ್ನು ನಗಾವಿಕಳಸಾಪುರದಲ್ಲಿ ಕೊಂದು ಆ ಪ್ರದೇಶವನ್ನು ತನ್ನದಾಗಿಸಿಕೊಳ್ಳುತ್ತಾನೆ. ನಂತರದಲ್ಲಿ ಲಕ್ಷ್ಮೇಶ್ವರ ಶಾಸನ ತಿಳಿಸುವಂತೆ ಸೇವುಣರ ಸೇನೆ ಪುಲಿಗೆರೆಯಲ್ಲಿದ್ದಾಗ ಅದೇ ಸಂದರ್ಭದಲ್ಲಿ ಸಿಂಗೇಯನ ಮೇಲೆ ದಾಳಿ ಮಾಡಿದಾಗ, ಅಲ್ಲಿನ ನಾಯಕನಾದ ಮಹಾದೇವರಾಯನ ಮಗ ದ್ಯಾಮೋನಾಯ್ಕನು ಸಿಂಗೆಯನ ವಿರುದ್ಧ ಹೋರಾಡಬೇಕಾದಾಗ ವೀರಮರಣವನ್ನಪ್ಪಿದ್ದನು. ಇದರಿಂದ ಈ ಪ್ರದೇಶವು ಸಿಂಗೇಯನ ವಶಕ್ಕೆ ಸೇರಿರಬೇಕು ಎನಿಸುತ್ತದೆ. ಅಂದರೆ ಸೇವುಣರಿಗೆ ಅತಿ ಚಿಕ್ಕ ರಾಜ್ಯದ ಒಡೆಯನನ್ನು ಸೋಲಿಸುವುದು ಕಷ್ಟವಾಗಿರಲಿಲ್ಲ. ಆದರೆ ಕುಮ್ಮಟದರಸರ ಹೊಡೆತದ ರಭಸಕ್ಕೆ ಸಮಕಾಲೀನ ರಾಜ್ಯಗಳು ಮಣಿಯಲೇಬೇಕಿತ್ತು. ಮೇಲಿನ ದಾಳಿಗಳನ್ನು ಗಮನಿಸಿದಾಗ ಧಾರವಾಡ, ಗದಗ ಜಿಲ್ಲೆಯ ಅನೇಕ ಭಾಗಗಳು ಮುಮ್ಮಡಿಸಿಂಗೆಯನ ವಶದಲ್ಲಿದ್ದವೆಂಬ ಸಂಗತಿ ಅರಿವಾಗುತ್ತದೆ. ಇದರ ಮೂಲಕ ಕುಮ್ಮಟದರಸರು ಹಾಗೂ ಸೇವುಣರ ಸಂಬಂಧವು ಕಂಪಿಲರಾಯನ ಕಾಲಾವಧಿಯಲ್ಲಿ ಮಾತ್ರ ಉತ್ತಮವಾಗಿತ್ತು ಎಂದು ಖಚಿತಪಡಿಸಬಹುದು.

ಹರಿಹರ ಶಾಸನ[೧೮] ಹೇಳುವಂತೆ ಕಂಪಿಲರಾಯನು ಸುಮಾರು ಕ್ರಿ.ಶ. ೧೩೦೦ರ ವೇಳೆಗೆ ಸೇವುಣರ ಸಾಮಂತನಾಗಿದ್ದನೆಂದೂ, ಈ ಸಂದರ್ಭದಲ್ಲಿ ಕಂಪಿಲನು ದತ್ತಿಯನ್ನು ನವೀಕರಿಸಿದನೆಂದು ಹೇಳಲಾಗುತ್ತದೆ. ಅಂದರೆ ಪೂರ್ವದಲ್ಲಿ ಮುಮ್ಮಡಿಸಿಂಗನು ಸೇವುಣರ ವಿಧೇಯನಾಗಿದ್ದು, ನಂತರ ಸ್ವತಂತ್ರರಾಜನೇ ಆಗಿದ್ದಿರಬೇಕು. ಹೀಗಾಗಿ ಸಿಂಗೆಯನನ್ನು ಅಧೀನನನ್ನಾಗಿ ಮಾಡಿಕೊಳ್ಳಲು ಸೇವುಣರು ಹವಣಿಸಿರಬೇಕು. ಸಿಂಗೆಯನ ಕೊನೆಯ ಹಂತದಲ್ಲಿ ಸೇವುಣರು ಕುಮ್ಮಟದರಸರನ್ನು ಸಾಮಂತರನ್ನಾಗಿ ಮಾಡಿಕೊಂಡ ಮೇಲೆ ಕಂಪಿಲನ ಅವಧಿಯಲ್ಲಿ ಸೇವುಣರಿಗೆ ಕಂಪಿಲನು ಸಾಮಂತನಾಗಿ ನಡೆದುಕೊಂಡಿರಬೇಕು ಎಂಬುದು ಪ್ರಸ್ತುತ ಅಧ್ಯಯನದ ಅಭಿಪ್ರಾಯವಾಗಿದೆ. ಒಟ್ಟಾರೆ ಹೇಳುವುದಾದರೆ ಕುಮ್ಮಟದರಸರು ಹೊಯ್ಸಳರಿಗಿಂತ ಸೇವುಣರೊಡನೆ ಕೆಲವು ಕಾಲವಾದರೂ ಉತ್ತಮ ಸಂಬಂಧವನ್ನು ಹೊಂದಿದ್ದರು.

ಕುಮ್ಮಟದುರ್ಗದ ಪೂರ್ವದ ರಾಜಕೀಯ ಪೈಪೋಟಿಗಳು ಅಲ್ಲಿನ ಸಾರ್ವಭೌಮತ್ವವನ್ನು ಸೂಚಿಸುವಂತಿದ್ದವು. ಬಾದಾಮಿ ಚಾಲುಕ್ಯರು ರಾಷ್ಟ್ರಕೂಟರು ಹಾಗೂ ಕಲ್ಯಾಣಿ ಚಾಲುಕ್ಯರ ನಿರಂತರ ಹೋರಾಟಗಳು ದಕ್ಷಿಣ ಭಾರತದ ದಿಗ್ಗಜರೆನಿಸಿಕೊಳ್ಳಲು ಹವಣಿಸುತ್ತಿದ್ದವು. ಕುಮ್ಮಟದುರ್ಗವು ಮುಮ್ಮಡಿಸಿಂಗೆಯನ ಅಧೀನಕ್ಕೆ ಒಳಪಡುವ ಮುನ್ನವೆ ಪೂರ್ವದ ರಾಜರುಗಳಿಗೆ ಪರಿಚಯವಿತ್ತು ಹಾಗೂ ಕೆಲವು ರಾಜರುಗಳ ಅಧೀನದಲ್ಲಿದ್ದಿತೆಂಬ ವಿಚಾರಗಳು ಕಲ್ಯಾಣಿ ಚಾಲುಕ್ಯರ ಕಾಲದ ಶಾಸನಗಳಿಂದ ಮಾಹಿತಿಗಳು ದೊರೆಯುತ್ತವೆ. ಆರಂಭದಲ್ಲಿ ಮುಮ್ಮಡಿಸಿಂಗನು ಸೇವುಣರಿಗೆ ವಿಧೇಯನಾಗಿದ್ದಂತೆ ಕಂಡುಬಂದರೂ ಕಾಲಾನಂತರದಲ್ಲಿ ಸೇವುಣರ ವಿರುದ್ಧ ಹೋರಾಡಿರುವುದನ್ನೇ ಶಾಸನಗಳ ಮೂಲಕ ನಿರ್ಣಯಿಸಬಹುದು. ಕಾರಣ ಮುಮ್ಮಡಿಸಿಂಗ ಹಾಗೂ ಸೇವುಣರ ನಡುವಿನ ಯುದ್ಧಗಳನ್ನು ಕುರಿತಂತೆ ಸುಮಾರು ಐದು ಶಾಸನಗಳು ಮಾಹಿತಿಗಳನ್ನು ನೀಡುತ್ತವೆ. ಇಲ್ಲಿ ನೇರವಾಗಿ ಇವರಿಬ್ಬರ ನಡುವೆ ಯುದ್ಧ ನಡೆದಿಲ್ಲವಾದರೂ ಪರೋಕ್ಷವಾಗಿ ನಡೆದಿರುವುದನ್ನು ಗುರುತಿಸಬಹುದು. ನಂತರದಲ್ಲಿ ಕುಮ್ಮಟದರಸರು 'ಹೊಯ್ಸಳರ ಬಂಧು' ಎಂಬ ಹೇಳಿಕೆಯು ಸರಿ ಎನಿಸಿದರೂ ಇಲ್ಲಿ ಮುಮ್ಮಡಿಸಿಂಗ ಹಾಗೂ ಹೊಯ್ಸಳರ ನಡುವಿನ ಯುದ್ಧಗಳು ಮೇಲಿನ ಹೇಳಿಕೆಗೆ ವಿರುದ್ಧವಾಗಿವೆ. ಏಕೆಂದರೆ ಸುಮಾರು ಮೂರು ಶಾಸನಗಳು ಇವರಿಬ್ಬರ ನಡುವೆ ಯುದ್ಧ ನಡೆದಿರುವುದನ್ನು ಪ್ರಸ್ತಾಪಿಸುತ್ತವೆ. ಅಂದರೆ ಮುಮ್ಮಡಿಸಿಂಗನು ಸೇವುಣರಿಗಿಂತ ಹೊಯ್ಸಳರೊಂದಿಗೆ ಹೆಚ್ಚು ಬಾಂಧವ್ಯವನ್ನು ಹೊಂದಿದ್ದು ಕಂಪಿಲರಾಯನ ಕಾಲಾವಧಿಯಲ್ಲಿ ಇವು ತದ್ವಿರುದ್ಧವಾದವೆಂದು ಅನಿಸುತ್ತದೆ. ಕಂಪಿಲರಾಯ ಹಾಗೂ ಹೊಯ್ಸಳರ ನಡುವಿನ ಯುದ್ಧಗಳನ್ನು ಉಲ್ಲೇಖಿಸುವ ಶಾಸನಗಳು ಇವರಿಬ್ಬರ ನಡುವಿನ ಘರ್ಷಣೆಗಳನ್ನು ಇಮ್ಮಡಿಗೊಳಿಸುತ್ತವೆ. ಹಾಗೆಯೇ ಹುಲ್ಲೂರು ಶ್ರೀನಿವಾಸ ಜೋಯಿಸರು ಕುಮ್ಮಟ ನಾಯಕರಿಗೆ ಪುವ್ವಲ ಅರಸರು ಎಂದು ಕರೆದಿದ್ದಾರೆ.[೧೯]

ಮುಮ್ಮಡಿಸಿಂಗನು ಆರಂಭದಲ್ಲಿ ಸೇವುಣರಿಗೆ ವಿಧೇಯನಾಗಿದ್ದು, ಅಲ್ಲಿ ಸೇವುಣ ಅರಸನೊಂದಿಗೆ ಬೇಟೆಗೆ ಹೋದಾಗ ದೊರೆತ ಸಂಪತ್ತನ್ನು ಸಂಗ್ರಹಿಸಲಿಕ್ಕಾಗಿ, ಸಂರಕ್ಷಣೆ ಮಾಡಿಕೊಳ್ಳಲಿಕ್ಕಾಗಿ

ಅಲ್ಲಿಂದ ಹೊರಬಂದು ದೊರವದಿಯಲ್ಲಿ ನೆಲೆಸಿ ಹೊಯ್ಸಳರಿಗೆ ವಿಧೇಯನಾಗಿರಬಹುದು. ದೊರವದಿಯು ಹೊಯ್ಸಳರ ಅಧೀನ ಪ್ರದೇಶವಾಗಿತ್ತು. ಇದನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ತನ್ನ ರಾಜ್ಯವನ್ನು ವಿಸ್ತರಿಸುವ ಸಲುವಾಗಿ ರಾಜಧಾನಿಯನ್ನಾಗಿಯೂ ಮಾಡಿಕೊಂಡಿದ್ದಿರಬಹುದು. ಜೊತೆಗೆ ಮೊದಲಿನಿಂದಲೂ ಹೊಯ್ಸಳರು ಹಾಗೂ ಸೇವುಣರು ಬದ್ಧವೈರಿಗಳಾಗಿದ್ದರು. ದೊರವದಿಯು ಹೊಯ್ಸಳರ ಅಧೀನದಲ್ಲಿದ್ದುದನ್ನು ಮುಮ್ಮಡಿಸಿಂಗೆಯನು ವಶಮಾಡಿಕೊಂಡಿದ್ದ. ಬಹುಶಃ ಈ ಕಾರಣಕ್ಕಾಗಿಯೇ ಸೇವುಣರು ಹೊಯ್ಸಳರ ಅಧೀನದ ದೊರವದಿಯನ್ನು ತಮ್ಮ ತೆಕ್ಕೆಗೆ ಪಡೆಯಲು ಮುಮ್ಮಡಿಸಿಂಗನ ಮೇಲೆ ದಾಳಿ ಮಾಡಿರಬಹುದು. ನಂತರದಲ್ಲಿ ಇದೇ ಸೇಡನ್ನು ತೀರಿಸಿಕೊಳ್ಳಲು ಮುಮ್ಮಡಿಸಿಂಗನೆ ಮೊದಲಿನಿಂದಲೂ ಯುದ್ಧಗಳನ್ನು ಮುಂದುವರಿಸಿದಂತೆ ಕಾಣುತ್ತದೆ.

ಕಂಪಿಲರಾಯನ ವೇಳೆಗಾಗಲೇ ಹೊಯ್ಸಳರೊಂದಿಗಿನ ಯುದ್ಧಗಳೇ ಹೆಚ್ಚು ಕಾಣಸಿಗುತ್ತವೆ. ಇಲ್ಲಿ "ಹೊಯ್ಸಳರ ಬಂಧು" ಎಂದು ಗುರ್ತಿಸುವ ರಾಮಘಡದ ಶಾಸನದ ಹೇಳಿಕೆಯೂ ಮೇಲಿನ ಹೇಳಿಕೆಗೆ ವಿರುದ್ಧವಾಗಿದ್ದು, ಈತನ ಅತಿ ಹೆಚ್ಚು ದಾಳಿಗಳು ಹೊಯ್ಸಳರೊಂದಿಗೆ ನಡೆದಿರುವುದು ಗಮನಾರ್ಹವೆನಿಸುತ್ತದೆ. ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ ಕಂಪಿಲರಾಯನು ತನ್ನ ತಂದೆಯಾದ ಮುಮ್ಮಡಿಸಿಂಗನು ಹೊಯ್ಸಳರೊಂದಿಗೆ ನಡೆಸಿರುವ ಕೆಲವು ಯದ್ಧಗಳಿಗೂ ಹಾಗೂ ಕಂಪಿಲರಾಯ ಹೊಯ್ಸಳರೊಂದಿಗೆ ನಡೆಸಿರುವ ಕೆಲವು ಯದ್ಧಗಳಿಗೂ ಪ್ರಾದೇಶಿಕವಾಗಿಯೂ ಅಲ್ಲಿನ ನಾಯಕರುಗಳಿಗೂ ಸಂಬಂಧವಿದೆ. ಅಂತಿಮವಾಗಿ ಪ್ರಸ್ತುತ ಅಧ್ಯಾಯದಲ್ಲಿ ಕಂಡುಕೊಳ್ಳುವ ವಿಚಾರವೆಂದರೆ ಮುಮ್ಮಡಿಸಿಂಗನು ಸೇವುಣರಿಗೆ ಪ್ರಾರಂಭದಲ್ಲಿ ವಿಧೇಯನಾಗಿದ್ದು, ನಂತರದಲ್ಲಿ ವಿರೋಧಿಯಾಗಿರುವುದು ಹಾಗೂ ಕಂಪಿಲರಾಯನು ಸೇವುಣರಿಗೆ ವಿಧೇಯನಾಗಿದ್ದುದಲ್ಲದೆ ಸೇವುಣರ ಸಾಮಂತ ದೊರೆಯ ದತ್ತಿಯನ್ನು ನವೀಕರಿಸಿದ್ದನೆಂಬುದು ಕಂಪಿಲರಾಯ ಮತ್ತು ಸೇವುಣರ ನಡುವಿನ ಬಾಂಧವ್ಯವನ್ನು ವಕ್ತಪಡಿಸುತ್ತದೆ. ಆದರೆ ಹೊಯ್ಸಳರು ಮತ್ತು ಕಂಪಿಲನೊಂದಿಗಿನ ಸಂಬಂಧಗಳು ಮಾತ್ರ ಹದಗೆಟ್ಟಿದ್ದವು. ಹೊಯ್ಸಳರು ಮತ್ತು ಕಂಪಿಲರಾಯನ ಸಂಬಂಧವನ್ನು ಕುರಿತು ಸಂದರ್ಭಕ್ಕನುಸಾರವಾಗಿ ಮುಂದಿನ ಅಧ್ಯಾಯಗಳಲ್ಲಿ ವಿಮರ್ಶಾತ್ಮಕವಾಗಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.[೨೦]

ಕುಮ್ಮಟದರಸರು ತಮ್ಮ ರಾಜಕೀಯ ಏಳಿಗೆಯ ಪೂರ್ವದಲ್ಲೇ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಹವಣಿಸಿದರಾದರೂ ಚಿಕ್ಕ ರಾಜ್ಯವಾಗಿದ್ದ ಕಾರಣ ಸಾಮಂತ ಅರಸರುಗಳಾಗಿಯೇ ಹಲವು ಕಾಲ ಉಳಿದುಕೊಳ್ಳಬೇಕಾಯಿತು. ಮುಮ್ಮಡಿಸಿಂಗ ಮತ್ತು ಕಂಪಿಲರಾಯರ ಯುದ್ಧಗಳು ನೆರೆಹೊರೆ ರಾಜ್ಯಗಳ ನಿದ್ದೆಗೆಡಿಸಿದ್ದವು. ಯುದ್ಧದ ಅನಿವಾರ್ಯತೆಗಳು ಕುಮ್ಮಟದರಸರಿಗೆ ಅವಶ್ಯವಾಗಿದ್ದವು. ಇದರಿಂದಾಗಿ ಹೊಯ್ಸಳರು ಮತ್ತು ಸೇವುಣರಿಂದ ತಮ್ಮನ್ನು ಮೊದಲು ರಕ್ಷಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಇಲ್ಲಿ ರಾಜ್ಯ ರಚನೆಯ ಉದ್ದೇಶವೊಂದೆ ಪ್ರಮುಖ

ಕಾರಣವಾಗಿರಲಿಲ್ಲ. ಉತ್ತರದ, ದಕ್ಷಿಣದ ಅರಸರುಗಳು ಹಾಗೂ ಮುಸಲ್ಮಾನರ ದಾಳಿಗಳು ಕುಮ್ಮಟದರಸರನ್ನು ಪರಿಪಕ್ವವಾಗುವಂತೆ ಮಾಡುವುದರ ಜೊತೆಗೆ ತಮ್ಮದೇ ಸಂಘರ್ಷದ ದಾರಿಯನ್ನು ಹಿಡಿದರು. ಕುಮ್ಮಟದರಸರ ಚಿಕ್ಕ ರಾಜ್ಯವು ಭಾರತದ ಇತಿಹಾಸದ ಪ್ರಭಾವಿ ರಾಜ್ಯಗಳ ಮೇಲೆ ದಾಳಿ ಮಾಡಿರುವುದು ಸುಲಭದ ಮಾತಾಗಿರಲಿಲ್ಲ. ಕುಮ್ಮಟದರಸರಲ್ಲಿದ್ದ ಸಾಮಾಜಿಕ ಒಗ್ಗಟ್ಟು, ಧರ್ಮ ಇತ್ಯಾದಿ ಅಂಶಗಳು ಸಹ ಪೂರಕವಾಗಿದ್ದವು. ದೆಹಲಿ ಸುಲ್ತಾನರ ದಾಳಿಯ ಮೂಲಕ ಇಸ್ಲಾಂ ಧರ್ಮ ಭಾರತದ ಎರಡೂ ಭಾಗಗಳಲ್ಲಿ ಅಸ್ತಿತ್ವವನ್ನು ಕಂಡುಕೊಳ್ಳತೊಡಗಿತು. ದಕ್ಷಿಣ ಭಾರತದಲ್ಲಿ ಜೈನ ಧರ್ಮ, ಬೌದ್ಧ ಧರ್ಮದ ಆಚಾರ, ಸಂಪ್ರದಾಯಗಳು ಮನೆ ಮಾಡಿದ್ದವು. ಅನ್ಯ ಧರ್ಮಗಳ ನಡುವೆ ಹಿಂದೂ ಧರ್ಮವು ಕಣ್ಮರೆಯಾದಂತಹ ಅನುಭವಗಳನ್ನು ತಂದೊಡ್ಡಿತ್ತು.

ಕುಮ್ಮಟದರಸರು ವಿಜಯನಗರ ಪೂರ್ವದಲ್ಲಿ ಹಿಂದೂ ಧರ್ಮದ ವಿಚಾರಶೀಲತೆ, ಆಚಾರ, ಸಂಪ್ರದಾಯಗಳಿಗೆ ಚ್ಯುತಿ ಬಾರದಂತೆ ಉಳಿಸಿಕೊಂಡು ಬಂದರು. ಚಿಕ್ಕ ರಾಜ್ಯವನ್ನು ಹೊಂದಿದ್ದರೂ ಇವರ ಸಂಘರ್ಷದ ಹಾದಿ ದೊಡ್ಡದಾಗಿತ್ತು. ಹೀಗಾಗಿಯೇ ಇದು 'ತಡೆ ರಾಜ್ಯ' ಎಂದು ಕರೆಸಿಕೊಂಡಿದೆ.[೨೧]

ಕುಮ್ಮಟದರಸರ ಪೂರ್ವದ ಸ್ಥಿತಿಗತಿಗಳು ಹಾಗೂ ಸಮಕಾಲೀನ ಚಿತ್ರಣಗಳು ಇವರನ್ನು ಸಂದಿಗ್ಧ ಪರಿಸ್ಥಿತಿಗಳಿಗೆ ಸಿಲುಕುವಂತೆ ಮಾಡಿದವು. ಈ ಕಾರಣಗಳಿಂದಾಗಿಯೇ ತಮ್ಮನ್ನು ಉಳಿಸಿಕೊಳ್ಳುವ ಪರಿಪಾಠವನ್ನು ಬೆಳೆಸಿಕೊಳ್ಳುವುದರ ಜೊತೆಗೆ ಅಲ್ಲಿನ ಸಮಾಜ, ಧರ್ಮ, ನೈತಿಕತೆಯನ್ನು ಪರಿಪಕ್ವಗೊಳಿಸಲು ಪ್ರಮುಖ ಕಾರಣರಾದರು.

ನಂತರದಲ್ಲಿ ಇವರು ಸ್ವತಂತ್ರರಾಗುತ್ತಾರೆ. ಅಂದರೆ ಕ್ರಿ.ಶ. ೧೨೮೦ರ ಪೂರ್ವದಲ್ಲಿ ಸೇವುಣರಿಗೆ ವಿಧೇಯನಾಗಿದ್ದು, ನಂತರ ಸೇವುಣರು ಮತ್ತು ಹೊಯ್ಸಳರ ವಿರುದ್ಧವಾಗಿ ಅನೇಕ ಯುದ್ಧಗಳನ್ನು ಕ್ರಿ.ಶ. ೧೨೮೭ರವರೆಗೆ ಕೈಗೊಳ್ಳುತ್ತಾನೆ. ಅಂದರೆ ಈ ಕಾಲಘಟ್ಟದಲ್ಲಿ ಕುಮ್ಮಟದುರ್ಗ, ದೊರವದಿ, ಧಾರವಾಡ ಹಾಗೂ ದುರ್ಗದ ನೆರೆಹೊರೆಯ ಪ್ರದೇಶಗಳು ಈತನ ಅಧೀನದಲ್ಲಿದ್ದವು. ಆದರೆ ೧೨೮೭ರಲ್ಲಿ ಮುಮ್ಮಡಿಸಿಂಗನ ಕಾಲವಾಗಿರಬೇಕು. ಕಾರಣ ಈ ಕಾಲದಿಂದ ಕ್ರಿ.ಶ. ೧೩೦೦ರ ವರೆವಿಗೂ ಯಾವುದೇ ಯುದ್ಧ ಸಂಘರ್ಷಗಳನ್ನು ಕುರಿತಂತೆ ಶಾಸನಗಳು ಕಂಡುಬಂದಿಲ್ಲ. ಈ ಸಂದರ್ಭದಲ್ಲಿ ಕಂಪಿಲರಾಯ ಜಟ್ಟಂಗರಾಮೇಶ್ವರಕ್ಕೆ ವಲಸೆ ಬಂದು ಆ ನಂತರ ಹೊಸಮಲೆದುರ್ಗದಲ್ಲಿ ನೆಲೆಸಿ ತನ್ನ ಆಳ್ವಿಕೆಯನ್ನು ಪ್ರಾರಂಭಿಸಿರಬೇಕು. ಅಂದರೆ ಕ್ರಿ.ಶ. ೧೨೮೭ರಿಂದ ಕ್ರಿ.ಶ. ೧೩೦೦ರವರೆಗಿನ ಕಾಲವು ಕುಮ್ಮಟದರಸರ ಪಾಲಿಗೆ ನಿರ್ವಾತ ಕಾಲವಾಗಿತ್ತು. ಈ ಸಂದರ್ಭದಲ್ಲಿಯೇ ಧಾರವಾಡದ ಭಾಗಗಳಲ್ಲಿ ಹೊಯ್ಸಳರು ಮಾಂಡಲಿಕರನ್ನೇ ನಾಮಶೇಷ ಮಾಡಿದ್ದರು. ಆದರೆ ಕುಮ್ಮಟದರಸರು ಮಾತ್ರ ಮಾಂಡಲೀಕರಾಗಿ ಸಮಕಾಲೀನ ಅರಸರಿಗೆ ಮಣಿಯದೇ ಸ್ವತಂತ್ರರಾಗಿ, ತಮಗೂ ಮಾಂಡಲಿಕರನ್ನು ನೇಮಿಸಿಕೊಳ್ಳುವಷ್ಟು ಬೆಳಕಿಗೆ ಬಂದಿದ್ದರೆಂಬುದು ಪ್ರಸ್ತುತ ಅಧ್ಯಯನದ ಅಭಿಪ್ರಾಯವಾಗಿದೆ.

**ಕೊನೆ ಟಿಪ್ಪಣಿಗಳು**

೧. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಕಾಶನ, ಮೈಸೂರು, ೧೯೬೮ ಪು. ೧೦೩.

೨. ಯಾಜ್ದಾನಿ. ಜಿ (ಸಂ), ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್,(ಸಂ) ಪು. ೩೨೨

೩. ಷೇಕ್ ಅಲಿ ಬಿ., ಬಿ.ಸುರೇಂದ್ರರಾವ್, ಕರ್ನಾಟಕ ಚರಿತ್ರೆ (ಸಂ)೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೬೧

೪. ಕಲಚೂರಿಗಳ ವಂಶಾನುಕ್ರಮಣಿಕೆಗೆ ಆಧಾರ, ಡಾ.ಎಸ್.ಎಚ್.ರಿತ್ತಿ ಮತ್ತು ಆನಂದ ಕುಂಬಾರ, ಅವರ ಕೃತಿ ಇನ್ಸ್‌ಕ್ರಿಪ್‌ಷನ್ಸ್ ಫ್ರಂ ಸೋಲಾಪುರ ಧಾರವಾಡ, ೧೯೮೮

೫. ದೇಸಾಯಿ. ಪಿ.ಬಿ ಮತ್ತು ಇತರರು (ಸಂ) ಎ ಹಿಸ್ಟರಿ ಆಫ್ ಕರ್ನಾಟಕ ಫ್ರಂ ಪ್ರಿ ಹಿಸ್ಟರಿ ಟು ಯುನಿಫಿಕೇಷನ್ ಧಾರವಾಡ, ೧೯೭೦, ಪು. ೧೯೩

೬. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ದಾವಣಗೆರೆ, ಪು. ೭೬

೭. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ಹೊಳಲ್ಕೆರೆ, ಪು. ೩೭

೮. ವಾಲ್ಮೀಕಿ ಸಂದೇಶ ಜುಲೈ - ಆಗಸ್ಟ್ -೧೯೮೬, ಪು. ೧೯

೯. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೬, ಕೃಷ್ಣರಾಜಪೇಟೆ, ಪು. ೧೦೦

೧೦. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೮, ನಗರ, ಪು. ೧೯

೧೧. ಷೇಕ್ ಅಲಿ ಬಿ., ಬಿ.ಸುರೇಂದ್ರ ರಾವ್, ಕರ್ನಾಟಕ ಚರಿತ್ರೆ (ಸಂ)೨ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭, ಪು. ೧೨೯

೧೨. ಭಂಡಾರಕರ್‌ರವರ ಗ್ರಂಥ, ಶ್ಲೋಕ ೨೨

೧೩. ನರಸಿಂಹಮೂರ್ತಿ ಎ.ವಿ., ಕರ್ನಾಟಕದ ಸೇವುಣರ ಇತಿಹಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ ೧೯೭೧, ಪು. ೯

೧೪. ಕರ್ನಾಟಕ ಚರಿತ್ರೆ ಸಂ(೨), ೧೯೯೭, ಪು. ೭೬

೧೫. ಎಪಿಗ್ರಾಫಿಯಾ ಇಂಡಿಕಾ, ಸಂಪುಟ ೨, ಪು. ೨೧೨

೧೬. ಕರ್ನಾಟಕ ಚರಿತ್ರೆ ಸಂ(೨) ಬಿ. ಷೇಕ್ ಅಲಿ, ಬಿ. ಸುರೇಂದ್ರರಾವ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೭೭

೧೭. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೭, ಭಾಗ-೧, ಚನ್ನಗಿರಿ-೨೪

೧೮. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ದಾವಣಗೆರೆ, ಪು. ೨೬

೧೯. ಹುಲ್ಲೂರು ಶ್ರೀನಿವಾಸ ಜೋಯಿಸರು ಕುಮ್ಮಟ ನಾಯಕರಿಗೆ ಪುವ್ವಲ ಅರಸರು ಎಂದು ಕರೆದಿದ್ದಾರೆ. ನೋಡಿ: ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು: ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ., ೧೯೯೫, ಪು. ೯೬, ೧೦೦, ೧೨೦, ೪೫೫, ೫೩೧, ೫೩೯.

೨೦ ನೋಡಿ: ನಿಂಗಣ್ಣ ಬಿ.ಸಿ. : ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ೨೦೦೮, ಸಿದ್ಧಲಿಂಗೇಶ್ವರ ಪ್ರಕಾಶನ ಗುಲಬರ್ಗ, ಪು.೪೭ ರಲ್ಲಿ ನಂಜುಂಡ ಕವಿ ಚಂಗಾಳ್ವ ವಂಶದ ದೊರೆಯ ವೀರ ಯೋಧನಾಗಿದ್ದವನು. ಇವನ ಕಾಲ ಕ್ರಿ.ಶ. ೧೫೨೫ರ ವೇಳೆಯಲ್ಲಿ ಜೈನ ಆಗಿದ್ದು ನಂತರ ಶೈವನಾಗುತ್ತಾನೆ. ಕುಮಾರರಾಮನ ಸಾಂಗತ್ಯದಲ್ಲಿ ಹರಿಹರದೇವಿ, ಕುಮಾರದೇವ, ಕಂಪಿಲದೇವ, ರತ್ನಾಜಿ, ಮಾತಂಗಿ, ಭಟ್ಟಂಗಿ ರಾಮ, ಡೆಲ್ಲಿ ಸುಲ್ತಾನನ ಮಗಳು, ಬೈಚಪ್ಪ, ಕಂಪಿಲರಾಯ, ಕುಮಾರರಾಮನ ಕುದರೆ ಬೊಲ್ಲನ ಬಗ್ಗೆ ವಿವರಗಳಿವೆ.

೨೧. Buffer State : A small and usually newtral country between two rival powers: poland prior to WWII aeted as a Buffer State between Germany and the USSR. ಇಲ್ಲಿ ಹೊಯ್ಸಳರು ದೇವಗಿರಿ ಯಾದವರು, ದೆಹಲಿ ಸುಲ್ತಾನರು, ವಾರಂಗಲ್ಲಿನ ಕಾಕತೀಯರು ಇದ್ದಾರೆ. ಇವರಲ್ಲಿ ಎರಡು ಪ್ರಬಲ ರಾಜ್ಯಗಳಿಗೆ ಇದು ತಡೆ ರಾಜ್ಯವಾಗಿತ್ತು. ನೋಡಿ: Satish sanjoo (Ed) Dictionary Of History, Anmol Publications, New Delhi, 1992, P.48.



# ಅಧ್ಯಾಯ : ಮೂರು

# ಕುಮ್ಮಟದುರ್ಗದ ನಾಯಕರ ರಾಜಕೀಯ ಇತಿಹಾಸ

## ಅಧ್ಯಾಯ: ಮೂರು

# ಕುಮ್ಮಟದುರ್ಗದ ನಾಯಕರ ರಾಜಕೀಯ ಇತಿಹಾಸ

ಕರ್ನಾಟಕದ ಚರಿತ್ರೆಯಲ್ಲಿ ಪ್ರಮುಖ ಮನೆತನಗಳಾದ ಬಾದಾಮಿ ಚಾಲುಕ್ಯರು, ಮಾನ್ಯಖೇಟದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ದೇವಗಿರಿ ಯಾದವರು ಹಾಗೂ ದ್ವಾರಸಮುದ್ರದ ಹೊಯ್ಸಳರು ಸಾಲುಸಾಲಾಗಿ ಕರ್ನಾಟಕದ ಮೇಲೆ ರಾಜಕೀಯ ಹಿಡಿತವನ್ನು ಸಾಧಿಸಿದರು. ಬಹುಶಃ ೧೩ ಮತ್ತು ೧೪ನೇ ಶತಮಾನಗಳ ಅವಧಿಯಲ್ಲಿ ಕರ್ನಾಟಕವೊಂದೇ ಹಿಂದೂ ಧರ್ಮ ಸಂಸ್ಕೃತಿಯನ್ನು ಉಳಿಸಿಕೊಂಡ ನಾಡಾಗಿತ್ತು ಎಂದರೆ ತಪ್ಪಾಗಲಾರದು. ಈ ದೃಷ್ಟಿಯಿಂದ ನೋಡುವುದಾದರೆ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಚಾಲುಕ್ಯರ ಪಾತ್ರ ಪ್ರಮುಖವೆನಿಸಿದೆ. ಬಾದಾಮಿ ಚಾಲುಕ್ಯರು ಕ್ರಿ.ಶ. ೬ನೇ ಶತಮಾನದಿಂದ ಸತತವಾಗಿ ೩ ಶತಮಾನಗಳ ಕಾಲ ಆಳ್ವಿಕೆ ನಡೆಸಿದರು. ನಂತರ ೧೦ನೆಯ ಶತಮಾನದ ಅಂತ್ಯದಿಂದ ೧೨ನೇ ಶತಮಾನದ ಅಂತ್ಯ ಭಾಗದಲ್ಲಿ ಕಲ್ಯಾಣ ಚಾಲುಕ್ಯರು ಅವನತಿಯ ಹಾದಿಯನ್ನು ಹಿಡಿದಾಗ ದಕ್ಷಿಣ ಭಾರತದಾದ್ಯಂತ ಹಿಂದೂ ರಾಜ ಮನೆತನಗಳು ಬೆಳಕಿಗೆ ಬಂದವು. ದೇವಗಿರಿ ಯಾದವರು ಉತ್ತರ ಭಾಗದಲ್ಲಿ ದ್ವಾರಸಮುದ್ರದಲ್ಲಿ ಹೊಯ್ಸಳರು ಬೆಳಕಿಗೆ ಬಂದರು. ಪೂರ್ವ ಭಾಗದಲ್ಲಿ ವಾರಂಗಲ್ಲಿನ ಕಾಕತೀಯರು ಆಳ್ವಿಕೆ ನಡೆಸುತ್ತಿದ್ದರು. ದಕ್ಷಿಣ ಅಥವಾ ತೀರ ದಕ್ಷಿಣ ಭಾಗದಲ್ಲಿ ಮಧುರೆಯ ಪಾಂಡ್ಯರು ಮತ್ತು ಚೋಳರು ಆಳ್ವಿಕೆಗೆ ಬಂದಿದ್ದು ಕಂಡುಬರುತ್ತದೆ. ಈ ಕಾಲಾವಧಿಯಲ್ಲಿ ರಾಜ್ಯ ಹಂಚಿಕೆಯ ವಿಚಾರದಲ್ಲಿ ಹೊಯ್ಸಳರಲ್ಲಿ ಅಂತಃಕಲಹಗಳು ಉಂಟಾಗಿದ್ದವು.

ಹೊಯ್ಸಳರ ಮೂರನೆಯ ನರಸಿಂಹ ಮತ್ತು ರಾಮನಾಥನ ನಡುವಿನ ಕಲಹಗಳ ಕಾರಣದಿಂದಾಗಿ ತಮ್ಮ ಉತ್ತರದ ಗಡಿ ಭಾಗಗಳನ್ನು ಹೊಯ್ಸಳರು ನಿರ್ಲಕ್ಷಿಸಿದ್ದರಿಂದ ದೇವಗಿರಿಯ ಸೇವುಣರು ದಾಳಿ ಮಾಡಲು ಮುಂದಾದರು. ಈ ರಾಜ್ಯಗಳ ಮಧ್ಯಭಾಗದಲ್ಲಿ ಕಂಡುಬರುವ ಕುಮ್ಮಟದುರ್ಗ ಸ್ವತಂತ್ರವಾಗಿ ಆಳ್ವಿಕೆಗೆ ಬಂದಿತು. ಈ ಸಂದರ್ಭದಲ್ಲಿ ದೇವಗಿರಿಯ ಯಾದವ ರಾಮಚಂದ್ರನು ಮುಮ್ಮಡಿಸಿಂಗನ ವಿರುದ್ಧ ಮಾಡಿದ ಕದನವನ್ನು ಕುರಿತು ಕ್ರಿ.ಶ. ೧೨೮೩ರ ಲಕ್ಷ್ಮೇಶ್ವರ ಶಾಸನ ತಿಳಿಸಿಕೊಟ್ಟಿದೆ. ಶಾಸನಗಳು, ಸಾಂಗತ್ಯಗಳು, ಲಾವಣಿಗಳು, ಕೃತಿ, ಕಾವ್ಯಗಳು ತಿಳಿಸಿಕೊಟ್ಟಂತೆ ಕುಮ್ಮಟದುರ್ಗವು ಸ್ವತಂತ್ರವಾಗಿ ಒಂದು ಪುಟ್ಟ ರಾಜ್ಯವಾಗಿದ್ದು, ತಡೆ ರಾಜ್ಯವಾಗಿ ಕಾಲಕಾಲಕ್ಕೆ

ಹತ್ತಾರು ರಾಜ್ಯಗಳು ದಾಳಿ ಮಾಡಿದರೂ ಸಮರ್ಥವಾಗಿ ಹೋರಾಡಿದ ಬಗೆಯನ್ನು ಹಾಗೂ ಇವರ ಪೂರ್ವಕಾಲೀನ ಹಿನ್ನೆಲೆಯ ನಿಲುವುಗಳನ್ನು ಕಂಡುಕೊಳ್ಳಬಹುದು.

ಕುಮ್ಮಟದುರ್ಗದ ಅರಸರನ್ನು ಕುರಿತು ಚರಿತ್ರಾಕಾರರು ತಮ್ಮದೇ ದೃಷ್ಟಿಕೋನದಲ್ಲಿ ತಿಳಿಸಲೆತ್ನಿಸಿದ್ದಾರೆ. ಮೊದಲಿಗೆ ಕುಮ್ಮಟನಾಯಕರ ಮೂಲವನ್ನು ಪರಿಶೀಲಿಸುವುದಾದರೆ ಯಾವ ಇತಿಹಾಸಕಾರರಲ್ಲೂ ಒಮ್ಮತ ಅಭಿಪ್ರಾಯವಿಲ್ಲ. ಸಾಂಗತ್ಯಗಳು ಬೇಡರೆಂದು ತಿಳಿಸಿದರೆ ಶಾಸನಗಳು ಇವುಗಳಿಗೆ ಪೂರಕವಾಗಿ ನಾಯಕರೆಂದು ತಿಳಿಸಿಕೊಟ್ಟಿವೆ. ಆದರೆ ಕೈಫಿಯತ್ತುಗಳಲ್ಲಿ 'ಬೇಡರು' 'ಮರುಳೆಯನವರು' 'ಮುಮ್ಮಡಿ ಮನೆ'ಯವರೆಂದು ಉಲ್ಲೇಖಿಸಿವೆ.[೧] ಇಲ್ಲಿಯವರೆಗೂ ಕ್ರೋಢೀಕರಿಸಿರುವ ಕೃತಿ ಕಾವ್ಯಗಳು, ಶಾಸನಗಳು ಮತ್ತು ಕೈಫಿಯತ್ತುಗಳಲ್ಲಿ ದಾಖಲಾಗಿರುವ ವಿಷಯಗಳನ್ನು ಪರಿಶೀಲಿಸಿದಾಗ ಕುಮ್ಮಟದ ನಾಯಕರು ಯಾವ ಕುಲಕ್ಕೆ ಸೇರಿರಬಹುದು ಎಂಬ ಅನುಮಾನವು ದೂರವಾಗುವುದರಲ್ಲಿ ಸಂದೇಹವಿಲ್ಲ.

**ಮೂಲ**

ನಂಜುಂಡ ಕವಿಯ ಪ್ರಕಾರ ಸೇವುಣ ರಾಜಕುಮಾರನೊಬ್ಬ ಪುಳಿಂದ (ಬೇಡ) ಯುವತಿಯನ್ನು ಮದುವೆಯಾದ್ದರಿಂದ ಬಹಿಷ್ಕರಿಸಲ್ಪಟ್ಟು ಚಿತ್ರಕೂಟದ ದೊರೆಯನ್ನು ಆಶ್ರಯಿಸಿದನೆಂದೂ ಈ ವಂಶದಲ್ಲಿ ಮುಮ್ಮಡಿಸಿಂಗನ ಜನನವಾಯಿತೆಂದೂ ತಿಳಿದುಬರುತ್ತದೆ. ಇದಕ್ಕೆ ಚಾರಿತ್ರಿಕ ಆಧಾರ ಇಲ್ಲದ್ದರಿಂದ ಈ ಹೇಳಿಕೆ ಕಾಲ್ಪನಿಕ ಎಂದು ಚರಿತ್ರಾಕಾರರ ಹೇಳಿಕೆ.[೨] ಮುಮ್ಮಡಿಸಿಂಗನು ಬೇಡ ಕುಲದವನಲ್ಲ, ಒಂದು ವೇಳೆ ಬೇಡ ಕುಲದವನಾಗಿದ್ದರೂ ಇದಕ್ಕೆ ಐತಿಹಾಸಿಕ ಆಧಾರವಿಲ್ಲ ಎಂಬುದು ಇತಿಹಾಸಕಾರರ ನಿಲುವು ಆದರೆ ಕವಿಯು 'ಪುಳಿಂದ' ಎಂಬ ಪದವನ್ನು ಉಲ್ಲೇಖಿಸಿದ್ದು, ಅನ್ಯ ಪದವನ್ನು ಉದ್ದೇಶಪೂರ್ವಕವಾಗಿಯೇ ಬಳಸಿಲ್ಲ ಬದಲಾಗಿ ಕುಮ್ಮಟದ ನಾಯಕರು ಬೇಡರ ಕುಲಕ್ಕೆ ಸೇರಿದ್ದಾರೆ ಎಂಬುದನ್ನು ಒಪ್ಪಿಕೊಳ್ಳಬಹುದು.

ಹುಲ್ಲೂರು ಶ್ರೀನಿವಾಸ ಜೋಯಿಸರ ಪ್ರಕಾರ ಕುಮ್ಮಟದ ನಾಯಕರು ಮೂಲತಃ ನಾಯಕ ಮತದವರೆಂದು ಇವರನ್ನು ಪೂವ್ವಲ ಅರಸರೆಂದು ಕರೆದಿದ್ದಾರೆ. ಇವರೇ ಪುಳಿಂದರು, ವ್ಯಾಧರು, ಕಿರಾತರು ಬೇಡರಾಗಿದ್ದು, ಕಾಮಗೇತಿ ವಂಶಸ್ಥರಾಗಿದ್ದಾರೆ. ಇವರ ಮೂಲಪುರುಷ ವಾಲ್ಮೀಕಿ ಈ ವಾಲ್ಮೀಕಿ ಋಷಿಯು ಮೊದಲು ಅರಣ್ಯದಲ್ಲಿ ಸದ್ವೃತ್ತಿಯಿಂದ ಜೀವಿಸುತ್ತಿರಲು ೧) ಕಾಮಗೇತಿ ೨) ಮಂದ ೩) ಮಳ ೪) ಮುಚ್ಚ ೫) ಮೀನಿಗ ೬) ಮಲ್ಲ ೭) ಮಲ್ಯ ಎಂಬ ಏಳು ಜನ ಪುತ್ರರು ಜನಿಸಿದರು. ಇವರಲ್ಲಿ ಜೇಷ್ಠನಾದ ಕಾಮಗೇತಿಗೆ ಕಣ್ಣಪ್ಪನೆಂಬ ಸತ್ಪುತ್ರನು ಜನಿಸಿದನು. ಇವನೇ ೬೩ ಪುರಾತನರಲ್ಲಿ ಶಿವನಿಗೆ ತನ್ನ ಕಣ್ಣುಗಳನ್ನು ಕಿತ್ತುಕೊಟ್ಟ ಶಿವಭಕ್ತ. ಇವನ ಹೆಂಡತಿ ಸೂರಮ್ಮ ಇವರ ವಂಶವು ಅಭಿವೃದ್ಧಿಯಾಗಿ ೨೮ ಬೆಡಗುಗಳಾದವು. ಇವುಗಳಲ್ಲಿ ಪೂವಲವೆಂಬುದು ಒಂದು ಬೆಡಗು. ಈ ಬೆಡಗಿಗೆ ಸೇರಿದವನು ಮುಮ್ಮಡಿಸಿಂಗೇಯನಾಯಕ ಈ ವಂಶದವರಿಗೆ ಪೂವಲ ಕುಲದ ಅರಸರು ಎಂಬ ಹೆಸರು ಬಂದಿದೆ[೩].

ಜೋಯಿಸರು ಕುಮ್ಮಟದ ನಾಯಕರು ಮತ್ತು ಚಿತ್ರದುರ್ಗ ಪಾಳೆಯಗಾರರು ಇಬ್ಬರೂ ಕುಲಸ್ಥರು ಹಾಗೂ ಹರಪನಹಳ್ಳಿ, ಗುಡೇಕೋಟೆ ಮತ್ತು ತರೀಕೆರೆ ಪಾಳೆಯಗಾರರು ಸಹ ಇವರ ಕುಲಸ್ಥರೆಂದು ಹೇಳಲಾಗಿದೆ. ಮೇಲಿನ ಹೇಳಿಕೆಗಳನ್ನು ಪರಿಶೀಲಿಸಿದಾಗ ಕುಮ್ಮಟದ ನಾಯಕರನ್ನು ಬೇಡರು ಎಂದು ಹೇಳುವುದರಲ್ಲಿ ಹೊಸತೇನು ಕಂಡುಬಂದಿಲ್ಲ ಅನಿಸುತ್ತದೆ. ಏಕೆಂದರೆ ಸಾಂಗತ್ಯಗಳ ರಚನೆ ಕಾಲದಿಂದಲೂ ಇಂದಿನವರೆಗೂ ಬೇಡರೆಂದು ಹೇಳುವುದು ಸಹಜವಾಗಿ ಕಂಡುಬಂದಿದೆ. ಈಗಾಗಲೇ ಲೇಖಕರಿಂದ ರಚನೆಯಾಗಿರುವ ಕಾವ್ಯಗಳು ಬೇಡರು ಎಂದಷ್ಟೇ ಸೂಚಿಸಿರುವುದು ಸ್ಪಷ್ಟವಾಗುತ್ತದೆ.

**ವಂಶಾವಳಿ**

ಕೈಫಿಯತ್ತುಗಳು, ಸಮಕಾಲೀನ ಶಾಸನಗಳು ಮತ್ತು ಕಾವ್ಯಗಳು ಕುಮ್ಮಟದ ನಾಯಕರ ವಂಶಾವಳಿಯನ್ನು ಕುರಿತು ಹತ್ತು ಹಲವು ಚಿತ್ರಣಗಳನ್ನು ಬಿಂಬಿಸುತ್ತವೆ. ಜೋಯಿಸರು ತಮ್ಮ ಲೇಖನದಲ್ಲಿ ಬಾಲಕುಮಾರರಾಮನ ಸಾಂಗತ್ಯದ ಆಧಾರದ ಮೇಲೆ ಕಾಮಗೇತಿ ವಂಶದ ಮೂಲ ಪುರುಷ ಕಸ್ತೂರಿ ನಾಯಕರಾದರೆ, ಆನೇ ರಾಜನು ಹೆಬ್ಬುಲಿ ಮುಮ್ಮಡಿಸಿಂಗ ಎಂದು ತಿಳಿಸಿದ್ದಾರೆ. ಇಲ್ಲಿ ವಿಜಯನಗರ ಕಾಲದ ನಂತರ ಬರುವ ನಾಯಕರೊಂದಿಗಿನ ಸಂಬಂಧವನ್ನು ಉಲ್ಲೇಖಿಸಲಾಗಿದೆ. ಹೀಗಾಗಿ ಇದನ್ನು ನಾವು ಕಡೆಗಣಿಸುವಂತಿಲ್ಲ ಏಕೆಂದರೆ ದರೋಜಿ ಗ್ರಾಮದ ಕೈಫಿಯತ್ತು ಮತ್ತು ಅಂತಾಪುರ ಕೈಫಿಯತ್ತುಗಳು ಸಹ ವಿಜಯನಗರ ಕಾಲದ ನಂತರ ರಾಜರಿಗೆ ಸಂಬಂಧ ಕಲ್ಪಿಸುವ ಅರ್ಥದಲ್ಲಿ ವಂಶಾವಳಿಯ ಚಿತ್ರಣವನ್ನು ತೋರಿಸಿವೆ.

ಕೊಮಾರರಾಯ

(ಮೂಲಪುರುಷ)

ಬೊಮ್ಮಂತರಾಜ

(ಭೂಮರಾಜ)

| | | | | | | |
|---|---|---|---|---|---|---|
| ಹಿರೇ ಬೊಮ್ಮಂತರಾಜ | ಬಿಸಾಳ ನಾಯಕ | ರಾಜಪ್ಪ ನಾಯಕ | ವೀರಪ್ಪ ನಾಯಕ | ಇಮ್ಮಡಿ ನಾಯಕ | ಮಲ್ಲಿಕಾರ್ಜುನ ನಾಯಕ | ಚಿನ್ನಯ್ಯ ರಾಜು[೪] |

ಈ ಚಿತ್ರಣಕ್ಕೆ ಪುಷ್ಟಿ ನೀಡುವ ಮತ್ತೊಂದು ಐತಿಹ್ಯವನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ. "ಕರ್ನಾಟಕದ ಕುಮ್ಮಟದುರ್ಗದ ಮುಮ್ಮಡಿಸಿಂಗ ಮಂಚಾಲದೇವಿಯರ ಸುಪುತ್ರ ಮಹಾರಾಜ 'ವೀರರಾಜದೇವ' ಹಸ್ತಿನಾಪುರದ ಭಾಗದಲ್ಲಿ ಹುದುಗಿ ಹೋಗಿದ್ದ ಸಿಂಹಾಸನವನ್ನು ತಂದು ರಾಜ್ಯಭಾರ ಮಾಡಿದ. ಕ್ರಿ.ಶ. ೧೩೨೭ರಲ್ಲಿ ಕುಮ್ಮಟದುರ್ಗ ಪತನವಾಯಿತು. ಆಗ ತನ್ನ ಬಂಧುವಾದ ವಾಸವಿ ಪೆನುಗೊಂಡೆಯ ಪಾಳೆಯಗಾರ ವೀರಪ್ಪನಾಯಕರಲ್ಲಿ ತಂದು ಭೂಗತ ನೆಲೆಯಲ್ಲಿ ಸುರಕ್ಷಿತವಾಗಿಟ್ಟ, ಇದನ್ನು ತಿಳಿದ ವಿದ್ಯಾರಣ್ಯರು ಅದರ ಉತ್ಖನನ ಮಾಡಿಸಿದರು. ವಿಜಯನಗರದ ಅರಸರು ರಾಜ್ಯಭಾರ ಮಾಡಿದರು"[೫] ಎಂದು ತಿಳಿಸಲಾಗಿದೆ. ಇದಕ್ಕೆ ಪೂರಕವಾಗಿ ಮಂಚಾಲಮ್ಮ

ಈಗಿನ ಮಂತ್ರಾಲಯದಲ್ಲಿ ನೆಲೆಸಿದ್ದಾಳೆ. ಈಕೆಯೇ ಮುಮ್ಮಡಿಸಿಂಗನ ಪತ್ನಿ ಮಂಚಾಲದೇವಿಯಾಗಿದ್ದು, ೧೬ನೇ ಶತಮಾನದ ವೇಳೆಗೆ ಶ್ರೀ ರಾಘವೇಂದ್ರ ಸ್ವಾಮಿಗಳು ಮಂಚಾಲದೇವಿಯ ಕ್ಷೇತ್ರದಲ್ಲಿಯೇ ನೆಲೆಸಿದ್ದರು. ಈಗಿನ ಮಂತ್ರಾಲಯದ ಮಂಚಾಲಮ್ಮ ಮುಮ್ಮಡಿಸಿಂಗನ ಪತ್ನಿ ಹಾಗೂ ಕಂಪಿಲದೇವನ ತಾಯಿಯೆಂದೇ ಸ್ಥಳೀಯರು ನಂಬಿದ್ದಾರೆ. ಮಂಚಾಲಮ್ಮ ಮುಮ್ಮಡಿಸಿಂಗನ ಪತ್ನಿ ಎಂಬ ಹೇಳಿಕೆಯನ್ನು 'ಕೊಮಾರರಾಮಯ್ಯನ ಚರಿತ್ರೆ' ಪುಷ್ಟೀಕರಿಸುತ್ತದೆ.

ಶೌರ್ಯ, ವೀರತನಕ್ಕೆ ಕುಮಾರರಾಮ ಹೆಸರಾಗಿದ್ದಾನೆ. ವಿಜಯನಗರ ಕಾಲದ ನಾಯಕರುಗಳು ಶೌರ್ಯಪರಾಕ್ರಮವನ್ನು ಪ್ರದರ್ಶಿಸಬೇಕಾದರೆ ಕುಮಾರರಾಮನ ಹೋರಾಟಗಳು ಮಾದರಿಯಾಗಿ ಲಾವಣಿಗಳಾಗಿ ಹೊರಹೊಮ್ಮಿದವು. ಇದನ್ನೇ ಅನುಸರಿಸಿದ ನಾಯಕರುಗಳು ಕುಮಾರರಾಮನನ್ನು ತಮ್ಮ ಮೂಲಪುರುಷನ್ನಾಗಿ ಮಾಡಿಕೊಂಡಿರಬಹುದೆಂಬ ಅನಿಸಿಕೆಗಳು ಅಕ್ಷರಶಃ ಸತ್ಯವೆನಿಸುತ್ತವೆ.

ಕಂಪಿಲದೇವ ಲಿಂಗಗಳನ್ನು ಪ್ರತಿಷ್ಠಾಪಿಸಿದನೆಂದು ತಂದೆ ಮುಮ್ಮಡಿಸಿಂಗೆಯನಾಯಕ ತಾಯಿ ಮಾದನಾಯಕಿತಿ ಮತ್ತು ಪೆರುಮೆಯನಾಯಕರ ಹೆಸರಿನಲ್ಲಿ ಪ್ರತಿಷ್ಠಾಪಿಸಿರುವ ವಿಚಾರವನ್ನು ಹಂಪಿಯ ಹೇಮಕೂಟ ಶಾಸನದಲ್ಲಿ ತಿಳಿಯಬಹುದು. ರಾಮಘಡ ಶಾಸನವು ಗುಜ್ಜಲ ಹರಿಹರದೇವಿಯ ಮಗ ರಾಮನಾಥ ಎಂಬ ವಿಚಾರವು ಹಾಗೂ ರಾಮನಾಥ ದೇವಾಲಯವನ್ನು ಕಟ್ಟಿಸಿರುವ ವಿಚಾರಗಳನ್ನು ಹೇಳುತ್ತದೆ. ಹೇಮಕೂಟ ಶಾಸನ ಹಾಗೂ ರಾಮಘಡ ಶಾಸನಗಳನ್ನು ಆಧಾರವಾಗಿರಿಸಿಕೊಂಡು ಪಾಟೀಲರು ವಂಶಾವಳಿಯನ್ನು ತಿಳಿಸುತ್ತಾರೆ.

ಪೆರುಮೆಯ ನಾಯಕ (?)

|

ಮುಮ್ಮಡಿಸಿಂಗೆಯನಾಯಕ

(ಹೆಂಡತಿ – ಮಾದನಾಯಕತಿ)

|

ಖಂಡೆಯರಾಯ/ಕಂಪಿಲದೇವ

(ಹೆಂಡತಿ – ಗುಜಲ ಹರಿಹರದೇವಿ)

|

ಕುಮಾರರಾಮನಾಥ[೬]

ಈ ವಂಶಾವಳಿಯನ್ನು ಒರೆಗೆ ಹಚ್ಚಿದಾಗ ಮುಮ್ಮಡಿಸಿಂಗೆಯನಾಯಕನ ಮಗ ಖಂಡೆಯರಾಯ ಅಥವಾ ಕಂಪಿಲರಾಯ ಇವನ ಮಗ ರಾಮನಾಥ ಅಥವಾ ಕುಮಾರರಾಮ ಎಂಬ ವಿಚಾರ ಸ್ಪಷ್ಟವಾಗಿ ಗೋಚರವಾಗುತ್ತದೆ. ಆದರೆ ಹೇಮಕೂಟ ಶಾಸನ ಹೇಳುವಂತೆ ಪೆರುಮೆಯ ನಾಯಕ ಯಾರು ಎಂಬುದು ಪ್ರಶ್ನಾರ್ಥಕವಾಗಿಯೇ ಉಳಿದಿದೆ. ಇಲ್ಲಿ ಪೆರುಮೆಯ ನಾಯಕ ಯಾರು ಎಂಬ ಪ್ರಶ್ನೆಗೆ ಕೆಲವು ವಿದ್ವಾಂಸರುಗಳು ಸಿಂಗೆಯನಾಯಕನ ತಂದೆ ಇರಬಹುದು ಅಥವಾ

ಅವನ ಸೋದರನಿರಬಹುದು ಎಂಬ ಅಭಿಪ್ರಾಯವನ್ನು ತಳೆದಿದ್ದಾರೆ. ಆಳವಾಗಿ ಪರಿಶೀಲನೆ ಮಾಡಿದಾಗ ಪೆರುಮೆಯನಾಯಕ ತಾಯಿ ಮಾದನಾಯಕಿತಿಯ ಸೋದರನಿರಬಹುದು ಅಥವಾ ಹತ್ತಿರದ ಸಂಬಂಧಿಯಿರಬಹುದು ಎನಿಸುತ್ತದೆ. ಏಕೆಂದರೆ ಪೆರುಮೆಯನಾಯಕನು ಕಂಪಿಲರಾಯನಿಗೆ ತಾತ/ಚಿಕ್ಕಪ್ಪ /ದೊಡ್ಡಪ್ಪ/ ಮಾವನಾಗಿದ್ದಿದ್ದರೆ, ಅದೇ ರೀತಿ ಶಾಸನವನ್ನು ಹಾಕಿಸಬೇಕಿತ್ತು. ಆದರೆ ಕಂಪಿಲನು ಕೇವಲ ಪೆರುಮೆಯನಾಯಕ ಎಂದು ಹಾಕಿಸಿರುವುದರಿಂದ ಈತ ಹತ್ತಿರದ ಸಂಬಂಧಿ ಇರಬಹುದು. ತಾತನಾಗಲು ಸಾಧ್ಯವಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಮೇಲಿನ ನಿರ್ಣಯಗಳನ್ನು ಹೊರತುಪಡಿಸಿದರೆ ಭಟ್ಟರಹಳ್ಳಿ ಕೈಫಿಯತ್ತು (ಕುಮಾರರಾಮನ ಕೈಫಿಯತ್ತು) ಸ್ಪಷ್ಟ ವಂಶಾವಳಿಯನ್ನು ಕೊಡಲು ಸೋತಿದೆ.

ಖಂಡೆಯರಾಯ

(ಮೂಲಪುರುಷ)

।

ಖಂಡೆಯರಾಯ

।

ಮುತ್ತಿನ ಮುಮ್ಮಣಿರಾಯ

।

ನರಸಿಂಗರಾಯ

।

ಕೋವಿನ ತಿಮ್ಮನಾಯಕ

।

ಹೆಬ್ಬುಲಿ ಕಂಪಲಿರಾಯ

।

ಕುಮಾರರಾಮ[೭]

ಇಲ್ಲಿ ಮೂಲಪುರುಷ ಖಂಡೆಯರಾಯನಾಗಿದ್ದು, ಬಹುಶಃ ಮುಮ್ಮಡಿಸಿಂಗೆಯನಾಯಕನಿಗೆ ಖಂಡೆರಾಯ ಎಂಬ ಬಿರುದು ಇದ್ದಿರಬಹುದು ಎಂದು ಊಹಾತ್ಮಕವಾಗಿ ನೋಡಿದರೂ. ಇದು ಸಾಧ್ಯವಿಲ್ಲ. ಮುಮ್ಮಡಿಸಿಂಗೆಯನ ಹೆಸರು ಸ್ಪಷ್ಟವಾಗಿ ತಿಳಿಯಲು ಸಮಸ್ಯೆ ಆಗಿದ್ದಿರಬಹುದು. ಹೀಗಾಗಿ ಬರೆಯುವಾಗ ಖಂಡೆಯರಾಯ ಎಂಬುದನ್ನು ಎರಡು ಬಾರಿ ಬರೆದಿರಬಹುದು ಎಂದು

ಅನಿಸುತ್ತದೆ. ಇಲ್ಲಿ ಕಂಪಿಲರಾಯನಿಗೂ ಮೊದಲು ೪ ಜನ ಅರಸರು ಕಂಡುಬರುತ್ತಾರೆ. ಬಹುಶಃ ಕಾಲಾವಧಿಯಲ್ಲಿ ವ್ಯತ್ಯಾಸವಾಗಿ ಮುಮ್ಮಡಿಸಿಂಗನ ನಂತರ ಒಬ್ಬರು, ಇಲ್ಲವಾದಲ್ಲಿ ಇಬ್ಬರು ಅರಸರು ಆಳ್ವಿಕೆ ಮಾಡಿದ್ದಿರಬಹುದು. ಆದರೆ ೪ ಜನ ಅರಸರು ಇವರಿಬ್ಬರ ನಡುವಿನಲ್ಲಿ ಕಾಣಿಸಿಕೊಂಡಿದ್ದಾರೆ. ಹೀಗಾಗಿ ಸಂದರ್ಭಕ್ಕೆ ಅನುಗುಣವಾಗಿ ಇದನ್ನು ರಚಿಸಿರುವ ಬರವಣಿಗೆಯಾಗಿದ್ದಿರಬಹುದು ಎಂದು ಅನಿಸುತ್ತದೆ.

ಪೆರುಮೆಯ ನಾಯಕನನ್ನು ಹೊರತುಪಡಿಸಿದರೆ ಅಂತಿಮವಾಗಿ ಕುಮ್ಮಟನಾಯಕರ ವಂಶಾವಳಿಯನ್ನು ಕೆಲವು ಶಾಸನ ಕೈಫಿಯತ್ತು ಹಾಗೂ ಸಾಂಗತ್ಯಗಳಲ್ಲಿ ಉಲ್ಲೇಖವಾಗಿರುವ ಹೆಸರುಗಳ ಆಧಾರದ ಮೇಲೆ ಒಂದು ಚಿಕ್ಕ ವಂಶಾವಳಿಯನ್ನು ತೋರಿಸಬಹುದು. ಪೆರುಮೆಯನಾಯಕ ಎಂಬ ಹೆಸರು ಪ್ರಶ್ನಾರ್ಥಕವಾಗಿದ್ದು, 'ಪೆರುಮೆ' ಅಥವಾ 'ಪೆರ್ಮ' ಎಂಬ ಪದ ಹಿರಿಯ/ ಹೆಮ್ಮೆ ಎಂಬ ಅರ್ಥಕೊಡುತ್ತದೆ. 'ಪೆರ್ಮಗ' ಎಂದರೆ ಹಿರಿಯ ಮಗ ಎಂಬ ಅರ್ಥವನ್ನು ಸೂಚಿಸುತ್ತದೆ. ಹೀಗಾಗಿ ಇಲ್ಲಿ ಪೆರುಮೆಯ ನಾಯಕ ಒಬ್ಬ ಹಿರಿಯ ವ್ಯಕ್ತಿಯಾಗಿದ್ದಿರಬಹುದು. ಮುಮ್ಮಡಿಸಿಂಗೆಯನಿಂದ ವಂಶಾವಳಿ ನಿಖರವಾಗಿ ಸಿಕ್ಕಿರುವುದರಿಂದ ಮುಮ್ಮಡಿಸಿಂಗೇಯನ ಮಗ ಕಂಪಿಲರಾಯ, ಈತನ ಮಗ ಕುಮಾರರಾಮನಾಥ ಎಂಬ ಸಂಗತಿ ಸ್ಪಷ್ಟವಾಗುತ್ತದೆ.

**ಶಾಸನಗಳ ಪ್ರಕಾರ ಕುಮ್ಮಟದ ನಾಯಕರನ್ನು ಕುರಿತ ಮಾಹಿತಿಗಳು**

ಶಾಸನಗಳನ್ನು ಕುಮ್ಮಟದರಸರ ಕಾಲದ ಪ್ರಮುಖ ದಾಖಲೆಗಳನ್ನಾಗಿ ಕಾಣಬಹುದು. ಇವು ಮೂಲವನ್ನು ಬೇಡ ಕುಲಕ್ಕೆ ಮಾತ್ರ ಕುಮ್ಮಟದರಸರನ್ನು ಸೀಮಿತವಾಗಿರಿಸಿಲ್ಲ, ಹೊಯ್ಸಳರ ಒಂದು ಶಾಖೆಗೆ ಸೇರಿದ್ದಾರೆ ಎನ್ನುವ ವಿಚಾರವು ತಿಳಿದುಬರುತ್ತದೆ. ಈ ಶಾಸನಗಳನ್ನು ಓದಿರುವ ಶಾಸನತಜ್ಞರ ಅಭಿಪ್ರಾಯದ ಆಧಾರದ ಮೇಲೆ ಮೂಲವನ್ನು ಸ್ಪಷ್ಟವಾಗಿ ಗುರ್ತಿಸುವುದು ಕಷ್ಟಸಾಧ್ಯವಾದರೂ ಶಾಸನಗಳಲ್ಲಿ 'ನಾಯಕಾಚಾರ್ಯ್ಯ' ಎಂಬ ಪದವನ್ನು ಆಧರಿಸಿ ಇವರು ಬೇಡರು ಎಂದು ಸ್ಪಷ್ಟಪಡಿಸಲಾಗುತ್ತದೆ.

ಕುಮ್ಮಟದುರ್ಗದಲ್ಲಿ ದೊರೆತ ಕ್ರಿ.ಶಕ ೧೩೧೫ರ ವೀರಗಲ್ಲು ಶಾಸನವೊಂದನ್ನು ಆಧರಿಸಿ ಸೀತಾರಾಮ ಜಾಗೀರ್‌ದಾರ್ ಹಾಗೂ ವರದರಾಜರಾವ್ ಅವರು ಕುಮ್ಮಟದ ನಾಯಕರು ಹೊಯ್ಸಳ ವಂಶದ ಒಂದು ಶಾಖೆಗೆ ಸೇರಿದವರೆಂದು ತಿಳಿಸುತ್ತಾರೆ.[೮]

ಸ್ವಸ್ತಿಶ್ರೀಮತಿ ಯಾದವನಾರಯಣ ಭುಜಭಳ ಪ(ರಾ)
ಕ್ರಮಪ್ರತಾಪ ಚಕ್ರವರ್ತಿ ಶ್ರೀಮನು ಮಹಾಮಂ(ಡಲಿಕ) ಹೊ
ಯ್ಸಸ(ಣ) ವೀರಕಂಪಿಲದೇವರು ಕುಮ್ಮಟದಲ್ಲಿ ರಾಜ್ಯಂಗೆಯು

ಎಂದು ಸೀತಾರಾಂ ಜಾಗೀರ್‌ದಾರ್ ತಿಳಿಸಿದರೆ ಸಿ.ಎಸ್.ಪಾಟೀಲರು

ಸ್ವಸ್ತಿಶ್ರೀ ಯಾದವ ನಾರಾಯಣ ಭುಜಭಳ ಮ
–ಳ ಪ್ರತಾಪ ಚಕ್ರವರ್ತಿ ಶ್ರೀಮನು ಮಹಾನಾಯಕಾಚಾ

ರ್ಯ್ಯ ಶ್ರೀ ವೀರ ಕಂಪಿಲದೇವನು ಕಮ್ಮಟದಲ್ಲಿ ರಾಜ್ಯಂಗೆಯ್ಯು– ಎಂದು ತಿಳಿಸಿದ್ದಾರ್ರೆ.

ಜಾಗೀರ್‌ದಾರರು ಓದಿದ ಮಾಂಡಲಿಕ ಹೊಯ್ಸಸ(ಣ) ಎಂಬುವುದನ್ನು ಸಿ.ಎಸ್. ಪಾಟೀಲರು 'ನಾಯಕಾಚಾರ್ಯ್ಯ' ಎಂದು ಓದಿದ್ದಾರೆ. ಇಲ್ಲಿ ವಿವಾದಕ್ಕೆ ಅವಕಾಶ ನೀಡಿದ ಈ ಪದವು ತುಂಬಾ ಮಹತ್ವದ್ದು, ಸಿ.ಎಸ್.ಪಾಟೀಲರ ಓದಿಗೆ ಹೆಚ್ಚು ಪೂರಕವಾದ ಇನ್ನೊಂದು ಶಾಸನ ಇದೇ ಕುಮ್ಮಟದುರ್ಗದಲ್ಲಿ ದೊರೆತಿದೆ[೧೦].

ಸ್ವಸ್ತಿಶ್ರೀಮತು ನಾಯಕಾಚಾರ್ಯ್ಯ
(ಲ)ದೇವನು ಸುರತಾಣನ ದಳವ

ಇಲ್ಲಿ ಇದನ್ನು ಗಮನಿಸಿದಾಗ ಸಿ.ಎಸ್.ಪಾಟೀಲರ ಹೇಳಿಕೆ ಸರಿ ಎನಿಸುತ್ತದೆ.

ಜಾಗೀರ್‌ದಾರರು ತಮ್ಮ ವಾದಕ್ಕೆ ಸಂಡೂರ ತಾಲೂಕಿನ ರಾಮಘಡದಲ್ಲಿ ದೊರೆತ ಕ್ರಿ.ಶ. ೧೩೨೩ ರ ವೀರಗಲ್ಲು ಶಾಸನವನ್ನು ಬಳಸಿ ಹೊಯ್ಸಳರ ಮತ್ತು ಕುಮ್ಮಟ ಅರಸರ ಸಂಬಂಧದ ಬಗ್ಗೆ ಮಹತ್ವದ ಅಂಶ ಉಲ್ಲೇಖಿಸುತ್ತಾ ವಿಶ್ಲೇಷಿಸುವರು.[೧೧]

ಶ್ರೀ ವೀರ ಕಂಪಿಲದೇವನ ಮೇಲೆ ಬಲ್ಲಾಳರಾಯನು (ದಂಡೆತ್ತಿ) ಬಂದಲ್ಲಿ
ಯಿಬ್ಬರ ದಾಯದ ದಂಡಿನೊಳಗೆ ದಂಡಿನ ಬಯಿಚಯ್ಯನು

ಎಂಬ ಸಾಲುಗಳಲ್ಲಿನ 'ಯಿಬ್ಬರು ದಾಯದ ದಂಡಿನೊಳಗೆ' ಎಂಬ ಪದಗಳು ಪ್ರಮುಖವೆನಿಸಿವೆ. ಇದರಿಂದ ವೀರಕಂಪಿಲದೇವ ಮತ್ತು ಬಲ್ಲಾಳನು ದಾಯಾದಿಗಳಾಗಿದ್ದರು ಎಂಬುದನ್ನು ತಿಳಿದುಕೊಳ್ಳಬಹುದು. ಇಲ್ಲಿ ಜಾಗೀರುದಾರರ ಮಾಂಡಲಿಕ ಹೊಯ್ಸಸ(ಣ) ಮತ್ತು ದಾಯದ ಇವೆರಡನ್ನು ಒಟ್ಟಿಗೆ ಸೇರಿಸಿದರೆ ಅವು ಪರಸ್ಪರ ಪೂರಕ ಎನಿಸಿ ಮುಮ್ಮಡಿಸಿಂಗೆಯನಾಯಕನ ಮೂಲವು ಹೊಯ್ಸಳ ವಂಶದ ಒಂದು ಶಾಖೆಯಲ್ಲಿದ್ದಿರಬಹುದೆಂಬ ಊಹೆ ನಿಜವೆನಿಸುತ್ತದೆ.[೧೨] ಜಾಗೀರ್‌ದಾರರ ಊಹೆ ನಿಜವೆನಿಸಿದರೂ ಪದಗಳ ಅರ್ಥಗ್ರಹಿಕೆಯಲ್ಲಿ ಸ್ವಲ್ಪ ಎಡವಿದ್ದಿರಬಹುದು. ಕಾರಣ 'ಯಿಬ್ಬರ ದಾಯದ ದಂಡಿನೊಳಗೆ' ಈ ಪದಗಳನ್ನು ಸೂಕ್ಷ್ಮವಾಗಿ ಅರ್ಥೈಸಿ ನೋಡಿದಾಗ 'ದಾಯ' ಎಂದರೆ 'ಸಮಯ', 'ಅವಕಾಶ' ಮತ್ತು 'ಕುತಂತ್ರ' ಎಂಬ ನಾನಾರ್ಥಗಳು ದೊರೆಯುತ್ತವೆ. 'ಯಿಬ್ಬರ ದಾಯದ ದಂಡು' ಎಂದರೆ ಇಬ್ಬರ ಕುತಂತ್ರದ ಅಥವ ಸಮಯಾವಕಾಶಕ್ಕಾಗಿ ಕಾಯುತ್ತಿದ್ದ ಸೇನೆಗಳು ಎಂಬ ಅರ್ಥವನ್ನು ಸೂಚಿಸಬಹುದು. ಜಾಗೀರ್‌ದಾರರು ಮತ್ತು ಪಾಟೀಲರ ಎರಡೂ ಹೇಳಿಕೆಗಳನ್ನು ಒರೆಗೆ ಹಚ್ಚಿ ನೋಡಿದಾಗ ಪಾಟೀಲರ ಹೇಳಿಕೆ ಸರಿಯೆನಿಸುವುದರಲ್ಲಿ ಸಂದೇಹವೇ ಇಲ್ಲ. ಶಾಸನಗಳು ಕುಮ್ಮಟದರಸರು ಬೇಡ ಎನ್ನುವುದನ್ನು ಅಸ್ಪಷ್ಟವಾಗಿಸಿದ್ದರು, ಅರ್ಥಗ್ರಹಿಕೆಯಲ್ಲಿ ಬೇಡ ಎನ್ನುವುದೇ ಸೂಕ್ತವಾಗಿದೆ.

ಕೂಡಲಿಯ ಕಲ್ಲುಮಠದ ವೀರಗಲ್ಲು ಶಾಸನವನ್ನು ನೋಡಿದಾಗ ಪಾಟೀಲರ ಅಭಿಪ್ರಾಯದಂತೆ 'ನಾಯಕಾಚಾರ್ಯ್ಯ' ಎಂಬ ಓದನ್ನು ಗಟ್ಟಿಗೊಳಿಸುತ್ತದೆ. ಇಲ್ಲಿ ಬಲ್ಲಾಳನಿಗೂ ಕಂಪಿಲನಿಗೂ ನಡೆದ ಶಿರಗುಪ್ಪಿ ಕದನವನ್ನು ಉಲ್ಲೇಖಿಸುತ್ತದೆ.[೧೩] "ಶ್ರೀ ಮನ್ಮಹಾಮಾಂಡಲಿಕ ಖಂಡೆಯರಾಯನವರ

ಸ್ವಯಂಭು ನಾಯಕಾಚಾರ್ಯನ ಮಲಚೆ-ಲೆಗಂ ಗಂಡಗೋವೆ ಮೀಸೆಯರ ಗಂಡ ಪಿಂಗಳೆರಾಯ ರಕ್ಕಪಾಲಕಿ ವೀರಕಂಪಿಲದೇವ" ಎಂಬ ಉಲ್ಲೇಖದ ಹಿನ್ನೆಲೆ ಕುಮ್ಮಟದರಸರು ಬೇಡಕುಲಕ್ಕೆ ಸೇರಿದವರೆಂದು ಹೇಳಲಾಗುತ್ತದೆ. ಕ್ರಿಶ. ೧೫೨೮ರ ರಾಮಘಡ ಶಾಸನವು ಮನೆತನದ ವಂಶಾವಳಿಯ ವಿವರಗಳನ್ನು ನೀಡುವಾಗ ಹೊಸಮಲೆದುರ್ಗದ ಮುಮ್ಮಡಿಸಿಂಗನ ಮಗ ಖಂಡೆಯರಾಯ/ ಕಂಪಿಲರಾಯ ಈತನ ಪಟ್ಟದರಾಣಿ ವೀರ ಗುಜ್ಜಲ ಹರಿಹರದೇವಿಯರನ್ನು ಹೆಸರಿಸುತ್ತದೆ.[೧೪] ಈ ಶಾಸನವು ಬೇಡರು ಎಂದು ಗುರ್ತಿಸಲು ಪೂರಕ ಮಾಹಿತಿಯನ್ನು ಕೊಟ್ಟಿದ್ದು ಹರಿಹರದೇವಿಯು ಗಜ್ಜಲ ಬೆಡಗಿನವಳು. ಗುಜ್ಜಲ ಬೆಡಗು ಬೇಡರ ಜಾತಿಗೆ ಸೇರಿರುವ ಒಂದು ಬೆಡಗಾಗಿರುವುದರಿಂದ ಹಾಗೂ ಮತ್ತೊಂದು ಬೆಡಗು ಪೂವ್ವಲ ಬೆಡಗಿನವರಾಗಿರುವುದರಿಂದ ಕುಮ್ಮಟದರಸರು ಬೇಡಕುಲಕ್ಕೆ ಸೇರಿದವರೆಂದು ನಂಜುಂಡ ಕವಿಯು ಅಭಿಪ್ರಾಯ ಪಡುತ್ತಾರೆ. ಲಿಖಿತ, ಮೌಖಿಕ ಸಾಹಿತ್ಯ ರಚನೆಗಳ ಆಧಾರದ ಮೇಲೆ ಕುಮ್ಮಟದರಸರು ಮೂಲತಃ ಬೇಡ ಕುಲಕ್ಕೆ ಸೇರಿದವರೆಂದೂ ಈ ಹೇಳಿಕೆಗೆ ಶಾಸನಗಳು ಪೂರಕವಾಗಿವೆ ಎಂದರೆ ತಪ್ಪಾಗಲಾರದು. ಗಂಗಾವತಿಯಿಂದ ಕೊಪ್ಪಳಕ್ಕೆ ಹೋಗುವ ಮಾರ್ಗ ಮಧ್ಯದಲ್ಲಿ ಮುಕ್ಕುಂಪಿಗೆ ಹೊಂದಿಕೊಂಡಿರುವ ಕುಮ್ಮಟದುರ್ಗ ಹಾಗೂ ಅಲ್ಲಿನ ನೆರೆಹೊರೆ ಪ್ರದೇಶಗಳಲ್ಲಿ ಕುಮಾರರಾಮನನ್ನು ಆರಾಧ್ಯ ದೈವನನ್ನಾಗಿ ಆರಾಧಿಸುತ್ತಿರುವುದು ಹಲವು ಜನಾಂಗದವರಲ್ಲಿ ಪ್ರಸ್ತುತದಲ್ಲಿ ಕಾಣುತ್ತೇವೆ. ಆದರೆ ಮೂಲ ಬೇಡರ ಕುಲದಿಂದ ಬಂದವರೆಂಬ ಹೇಳಿಕೆಗೆ ಶಾಸನಗಳು ಕೈಫಿಯತ್ತುಗಳು, ಲಿಖಿತ, ಮೌಖಿಕ ಮಾಹಿತಿಗಳು ಸಹಕರಿಸಿವೆ.

**ಕೈಫಿಯತ್ತುಗಳಲ್ಲಿ ಸಿಗುವ ಮಾಹಿತಿಗಳು**

ಕೈಫಿಯತ್ತುಗಳು, ಕಾವ್ಯಗಳು, ಶಾಸನಗಳ ಧಾಟಿಯಲ್ಲಿ ರಚನೆಯಾಗಿದ್ದರೂ ಪ್ರಮುಖವಾಗಿ ಮುಮ್ಮಡಿಸಿಂಗನ ಆರಂಭದ ಕಾಲವೇ ಹೆಚ್ಚು ಬೆಳಕಿಗೆ ಬಂದಿವೆ. ಸುಮಾರು ೮ ಕೈಫಿಯತ್ತುಗಳನ್ನು ಪರಿಶೀಲಿಸಿದರೂ ಮುಮ್ಮಡಿಸಿಂಗನ ಆರಂಭದ ಹೆಜ್ಜೆಗಳನ್ನೇ ಬಿಂಬಿಸುತ್ತವೆ. ಕುಮ್ಮಟದ ಅರಸರ ಮೂಲಕ್ಕೆ ಸಂಬಂಧಿಸಿದಂತೆ ಕೈಫಿಯತ್ತುಗಳ ನಿಲುವು ಬೇಡರು ಎನ್ನುವ ಪದವನ್ನೇ ಹೆಚ್ಚು ಪರಿಚಯಿಸಿರುವುದು ಕಂಡುಬಂದಿದೆ.

ಈ ಕುರಿತು ತಾಲ್ಲೂಕು ಕಂಪಲಿ ಕೈಫಿಯತ್ತಿನ ಪ್ರಕಾರ "ರಾಯದುರ್ಗಕ್ಕೆ ಉತ್ತರ ನಾಲ್ಕು ಹರದಾರಿಯಿರುವ ಮಲ್ಲಪಂಥಿ ದೇಶ ಅರ್ಥಮತಿ ಅಂದರೆ ಅರಣ್ಯ ಪರಿಧಿ ಎಂದರೆ ಸಾಲು ಆಗಿಯಿರುವಂಥಾಯೆಂದು ಗ್ರಾಮಗಳಲ್ಲಿ ಬ್ಯಾಡರು, ದಾಯಾದಿಗಳು, ಯಿರಲಾಗಿ, ಅದರಲ್ಲೂ ಮುಖ್ಯಸ್ಥನಾಗಿಯಿರುವ ಸಿಂಗ ನಾಯಕನ ಕುರಿತು ಕಡ್ಮಿದಾಯಾದಿಗಳು ಗ್ರಾಮಗಳು ಹೆಚ್ಚು ಕಡ್ಮಿಯೆಂದು ಪಾಲು ಹಂಚಿಕೊಂಡುಯೆಂದು ಕೇಳಲಾಗಿಯೀತನು ಗ್ರಾಮಗಳು ಹಂಚಿಕೊಟ್ಟು ತಾನು ಸ್ವಧಾ ಹೆಂಡತಿ ಸಹ ಅಲ್ಪ ಸಾಹಸ ಯಿರಬಾರದೆಂದು ತನ್ನ ಗ್ರಾಮಕ್ಕೆ ವಾಯುವ್ಯ ದಿಕ್ಕಿಗೆ ತುಂಗಭದ್ರಾ ನದಿ ದಡದಲ್ಲಿಯಿರುವಂಥ ದೇವಗಿರಿಯಲ್ಲಿಯಿರುವ ರಾಮದೇವರಾಯನನ್ನು ಕಂಡು ಅಲ್ಲಿ ತನ್ನ ಆದ್ಯಂತವೂ ವೋತ್ರ ಹೇಳಿ ಕೊಂಡದರಿಂದ ಬಹಳ ಸಂತೋಷ ಪಟ್ಟು ಕಂದಾಯಕ್ಕೆ ಗ, ೫೦೨

ವರಹ ಸಂಬಳ ನಿಗದಿ ಮಾಡಿಕೊಂಡುಯಿದ್ದರು."[೧೫] ಈ ವಾಕ್ಯವನ್ನು ಗಮನಿಸಿದಾಗ ಮುಮ್ಮಡಿಸಿಂಗನಿಗೆ ಬ್ಯಾಡರು ದಾಯಾದಿಗಳಾಗಿದ್ದರು. ರಾಜ್ಯ ಹಂಚಿಕೆ ವಿಚಾರದಲ್ಲಿ ಅವರಿಂದ ದೂರ ಬಂದನೆಂದು ತಿಳಿಸಿದ್ದು ಬ್ಯಾಡರು ಮತ್ತು ದಾಯಾದಿಗಳು ಎಂಬ ಎರಡು ಪದಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಮುಮ್ಮಡಿಸಿಂಗ ಮೂಲತಃ ಬೇಡರೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

ದರೋಜಿ ಗ್ರಾಮದ ಕೈಫಿಯತ್ತು ಮತ್ತು ಅಂತಾಪುರ ಕೈಫಿಯತ್ತುಗಳಲ್ಲಿ ಕುಮಾರರಾಮ ಮೂಲ ಪುರುಷನೆಂದು ಕಂಡುಬರುವುದು. ಇವನ ವಂಶಸ್ಥ ಬೊಮ್ಮಂತರಾಜ ಮರಳನವರಿಗೆ ಏಳು ಮಕ್ಕಳಿರುವುದು ಇವನ ಹೆಸರಿನ ಕೊನೆಯಲ್ಲಿ 'ನಾಯಕ' ಎಂಬ ಪದವಿರುವುದು ಸ್ಪಷ್ಟವಾಗಿ ಕಾಣುತ್ತದೆ. ಕೃಷ್ಣದೇವರಾಯನಿಂದ ಈ ಬೊಮ್ಮಂತರಾಜನು ಗುಡೇಕೋಟೆ, ಜರಿಮಲೆ, ಸೊಂಡೂರು, ಕುತ್ತೂರು, ವಡ್ಡುದರೋದಿ, ಉಜ್ಜನಿ ಹಾಗೂ ಬಾಣಾರಾವಿ ಪ್ರದೇಶಗಳನ್ನು ಬಹುಮಾನವಾಗಿ ಪಡೆದುಕೊಂಡು ತನ್ನ ಏಳು ಮಕ್ಕಳನ್ನು ಆ ಪ್ರದೇಶಗಳಿಗೆ ನೇಮಿಸಿದ್ದ ಎಂಬ ಸಂಗತಿ ತಿಳಿದು ಬಂದಿದೆ.

ಕೈಫಿಯತ್ತಿನಲ್ಲಿ ನಮೂದಿಸಿರುವುದನ್ನು ಪರಿಶೀಲನೆಗೆ ಒಳಪಡಿಸಿದಾಗ ಈ ವಂಶಾವಳಿ ವಿಜಯನಗರೋತ್ತರ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಕುಮಾರರಾಮನನ್ನು ಇಲ್ಲಿ ಮೂಲಪುರುಷನಾಗಿ ತೋರಿಸಿದ್ದು, ಇವನ ವಂಶಸ್ಥರೆಲ್ಲರೂ ನಾಯಕರಾಗಿರುವುದರಿಂದ ಕುಮಾರರಾಮನು ನಾಯಕ ಜಾತಿಗೆ ಸೇರಿದವನು ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಭಟ್ಟರಹಳ್ಳಿ ಕೈಫಿಯತ್ತು ಹೇಳುವ ಪ್ರಕಾರ ಮುಮ್ಮಡಿ ಎನ್ನುವುದು ಕುಮ್ಮಟದರಸರ ಮನೆಯ ಅಡ್ಡ ಹೆಸರೆಂದು ಸೂಚಿಸಿದರೆ ತಾಲ್ಲೂಕು ಕಂಪಲಿ ಕೈಫಿಯತ್ತು 'ಮುಮ್ಮಡಿ' ಎನ್ನುವುದು ಮುಮ್ಮಡಿಸಿಂಗನಿಗಿದ್ದ ಬಿರುದಾಗಿದ್ದು, ದೇವಗಿರಿಯ ರಾಮದೇವರಾಯ ಈತನಿಗೆ ನೀಡಿದ ಬಿರುದಾಗಿದೆ. ಎಂದೂ ಭಟ್ಟರಹಳ್ಳಿ ಕೈಫಿಯತ್ತು 'ಮುಮ್ಮಡಿ' ಪದವನ್ನು ಅರ್ಥೈಸುವುದರಲ್ಲಿ ಸೋತಿದೆ ಎಂದು ಹೇಳಬಹುದು. ಕಾರಣ 'ಮುಮ್ಮಡಿ' ಮನೆತನದ ಹೆಸರಾಗಿದ್ದಿದ್ದರೆ ಕುಮ್ಮಟದ ಎಲ್ಲಾ ಅರಸರಿಗೂ ಇರಬೇಕಿತ್ತು. ಆದರೆ ಇಲ್ಲಿ ಕಂಡುಬಂದಿರುವುದು ಮುಮ್ಮಡಿಸಿಂಗನಿಗೆ ಮಾತ್ರ ಎಂಬುದು ಸ್ಪಷ್ಟವಾಗಿ ಅರಿವಾಗುತ್ತದೆ. ಒಟ್ಟಾರೆ ಕೈಫಿಯತ್ತುಗಳು ಹೇಳುವ ಪ್ರಕಾರ ಕುಮ್ಮಟದರಸರು ಮೂಲತಃ ಬೇಡರು, ಮರುಳೆಯನವರು, ಮುಮ್ಮಡಿಯವರು ಎಂಬ ನಾನಾ ಪದಗಳನ್ನು ಬಳಕೆ ಮಾಡಿರುವುದರಿಂದ ಇವೆಲ್ಲವೂ ಬೇಡರ ಕುಲಕ್ಕೆ ಸಂಬಂಧಿಸಿದ ಬೆಡಗುಗಳು ಹಾಗೂ ಅದಕ್ಕೆ ಹತ್ತಿರದ ಪದಗಳಾಗಿರುವುದರಿಂದ ಕುಮ್ಮಟದರಸರು ಬೇಡರು ಎನ್ನುವುದು ಅಕ್ಷರಶಃ ಸತ್ಯವೆನಿಸುತ್ತದೆ.

### ೩.೧. ಮುಮ್ಮಡಿಸಿಂಗೆಯನಾಯಕ [ಕ್ರಿಶಕ ೧೨೮೦–೧೩೦೦]

ಕುಮ್ಮಟದುರ್ಗವು ಪರ್ವತ ಗುಡ್ಡಗಳಿಂದ ಕೂಡಿದ ಪ್ರದೇಶವಾಗಿದ್ದು, ಪ್ರಾಕೃತಿಕವಾಗಿ ರಕ್ಷಣೆ ಪಡೆದಿದೆ. ಇದು ಕೊಪ್ಪಳ ಜಿಲ್ಲೆಗೆ ಸೇರುವ ಗಂಗಾವತಿ ತಾಲೂಕಿನ ಗಡಿಭಾಗದಲ್ಲಿ ಮುಕ್ಕುಂಪಿ ಗ್ರಾಮದ ದಕ್ಷಿಣಕ್ಕೆ ಒಂದು ಮೈಲಿ ಅಂತರದಲ್ಲಿ ಕಂಡುಬರುವುದು. ದ್ವಾರಸಮುದ್ರದ ಹೊಯ್ಸಳರು

ಮತ್ತು ದೇವಗಿರಿ ಸೇವುಣರ ನಡುವಿನ ಪ್ರದೇಶವಾಗಿದ್ದು (ಯಾದವ) ಸೇವುಣರ ರಾಜ್ಯ ವಿಸ್ತರಣೆಗೆ ತಡೆಯಾಗಿದ್ದರಿಂದ ಇದನ್ನು 'ತಡೆರಾಜ್ಯ' ಎಂದು ಮೊದಲಬಾರಿಗೆ ನೀಲಕಂಠಶಾಸ್ತ್ರಿಗಳು ಈ ಪದವನ್ನು ಬಳಸಿದರು. ಹೀಗಾಗಿ ಸೇವುಣರಿಗೆ ಪ್ರಮುಖ ಸಮಸ್ಯೆ ಆಗಿದ್ದ ಹಾಗೂ ಚಿಕ್ಕರಾಜ್ಯವಾಗಿದ್ದ ಕುಮ್ಮಟದುರ್ಗದ ಮೂಲ ಪುರುಷ ಮುಮ್ಮಡಿ ಸಿಂಗೆಯನಾಯಕ 'ಮುಮ್ಮಡಿ' ಎಂಬ ಪದವು ಹೇಗೆ ಬಂತು ಎನ್ನುವುದು ಪ್ರಶ್ನಾರ್ಥಕವಾಗಿದ್ದರೂ, ತಾಲೂಕು ಕಂಪಲಿ ಕೈಫಿಯತ್ತು ದೇವಗಿರಿ ಯಾದವರ ರಾಮದೇವರಾಯ ಮುಮ್ಮಡಿಸಿಂಗನ ಶೌರ್ಯಪರಾಕ್ರಮವನ್ನು ಮೆಚ್ಚಿಕೊಟ್ಟಿರುವ ಬಿರುದೆಂದು ಉಲ್ಲೇಖಿಸುತ್ತದೆ. ಆದರೆ ಭಟ್ಟರಹಳ್ಳಿ ಕೈಫಿಯತ್ತು ಕುಮ್ಮಟರಸರ ಮನೆತನದ ಅಡ್ಡ ಹೆಸರು ಎಂದು ಸೂಚಿಸುತ್ತದೆ. ಕೈಫಿಯತ್ತುಗಳ ವಂಶಾವಳಿಗಳನ್ನು ಗಮನಿಸಿದಾಗ 'ಮುಮ್ಮಡಿ' ಎಂಬ ಪದ ಸಿಂಗೆಯನಾಯಕನಿಗೆ ಮಾತ್ರ ಹೊಂದಿಕೊಂಡಿದ್ದು, ಬೇರೆ ಯಾರ ಹೆಸರಿನಲ್ಲೂ 'ಮುಮ್ಮಡಿ' ಪದವನ್ನು ಕಾಣಲು ಸಾಧ್ಯವಿಲ್ಲ. ಹೀಗಾಗಿ 'ಮುಮ್ಮಡಿ' ಎನ್ನುವುದು ಸಿಂಗೆನಾಯಕನ ಶೌರ್ಯವನ್ನು ಮೆಚ್ಚಿ ದೇವರಾಯ ನೀಡಿದ ಬಿರುದೇ ಇರಬಹುದು ಎಂಬುದರಲ್ಲಿ ಸಂದೇಹವಿಲ್ಲ. ಇದು ಯಾವುದೇ ಮನೆತನದ ಹೆಸರಾಗಲು ಸಾಧ್ಯವಿಲ್ಲ ಕಾರಣ ಸಿಂಗೆನಾಯಕನಿಗೆ ಮಾತ್ರ ಈ ಪದವು ಸೀಮಿತವಾಗಿರುವುದರಿಂದ ಇದು ಬಿರುದು ಎಂಬುದು ಸ್ಪಷ್ಟವಾಗುತ್ತದೆ.

ಮುಮ್ಮಡಿಸಿಂಗೆಯನನ್ನು ಮೊದಲ ಬಾರಿಗೆ ಪರಿಚಯಿಸುವ ಶಾಸನವನ್ನು ಹಿರೇಕೋಗಿಲೂರಿನಲ್ಲಿ ಕಾಣುತ್ತೇವೆ.[೧೬] ಮುಮ್ಮಡಿಸಿಂಗೆಯನ ರಾಜಧಾನಿ ಕುರಿತಂತೆ ಅಧ್ಯಯನ ಮಾಡಿದಾಗ ಮೊದಲು ಕಣ್ಮುಂದೆ ಕಾಣಸಿಗುವುದು ಪಾಂಚಾಳಗಂಗನ ಚೆನ್ನರಾಮ ಸಾಂಗತ್ಯ. ಇದರ ಪ್ರಕಾರ ಮುಮ್ಮಡಿಸಿಂಗೆಯ ಮೊದಲು ತನ್ನ ಸಂಬಂಧಿಗಳೊಂದಿಗೆ ಕಲಹ ಮಾಡಿಕೊಂಡಂತೆ ತೋರುತ್ತದೆ. ಮುಮ್ಮಡಿಸಿಂಗ ಮೊದಲು ರಾಯದುರ್ಗಕ್ಕೆ ಉತ್ತರ ಭಾಗದಲ್ಲಿರುವ ಹತ್ತಿರದ ಮಲ್ಲಪಂಥಿದೇಶವನ್ನು ಒಂದು ಚಿಕ್ಕ ರಾಜ್ಯವನ್ನಾಗಿ ಮಾಡಿಕೊಂಡು ಅದಕ್ಕೆ ಒಡೆಯನಾಗಿದ್ದ. ನಂತರ ಈ ರಾಜ್ಯದಲ್ಲಿ ಹಂಚಿಕೆ ವಿಷಯ ಬಂದಾಗ ಇವನ ದಾಯಾದಿಗಳ ಜೊತೆ ಕಲಹವಾಗಿ ಆ ರಾಜ್ಯವನ್ನು ಅವರಿಗೆ ಬಿಟ್ಟುಕೊಟ್ಟು ಸೇವುಣ ರಾಜನನ್ನು ಆಶ್ರಯಿಸಿದ ಎಂದು ತಾಲ್ಲೂಕು ಕಂಪಲಿ ಕೈಫಿಯತ್ತು ತಿಳಿಸುತ್ತದೆ. ಹೀಗಾಗಿ ಸಿಂಗೆಯನಿಗೆ ಪೂರ್ವದಲ್ಲಿ ಸಂಬಂಧಿಗಳಿದ್ದರು ಎಂಬ ವಿಚಾರ ತಿಳಿದುಬರುತ್ತದೆ. ನಂತರ ದೇವಗಿರಿಯ ಸೇವುಣರ ಆಶ್ರಯ ಪಡೆದುಕೊಂಡು, ಅವರಿಗೆ ವಿಧೇಯನಾಗಿದ್ದನು. ಹೀಗೆ ಒಂದು ದಿನ ಮುಮ್ಮಡಿಸಿಂಗ ಅಳಲೆ(ಉಡ) ಯನ್ನು ನೋಡಿ ಹಿಡಿಯಲು ಹೋದಾಗ ಅದು ಬಿಲದೊಳಗೆ ಅವಿತುಕೊಂಡಿತು. ಆಗ ಅದನ್ನು ಅಗೆಯಲು ಹೋದಾಗ ಅಪಾರ ಸಂಪತ್ತು (ದ್ರವ್ಯ) ದೊರಕಿತು. ನಂತರ ಈ ವಿಚಾರವನ್ನು ರಾಜನಿಗೆ ತಿಳಿಸದೆ ತನ್ನಲ್ಲೇ ಅಡಗಿಸಿಟ್ಟುಕೊಂಡನು. ಇದಾದ ಕೆಲವು ದಿನಗಳ ಬಳಿಕ ಸೇವುಣ ರಾಮಚಂದ್ರದೇವರಾಯನ ಜೊತೆ ಬೇಟೆಗೆ ಹೋದಾಗ ಅಲ್ಲಿದ್ದ ಹೆಬ್ಬುಲಿಯು ಘರ್ಜಿಸಿ ದಾಳಿ ಮಾಡಲು ಬಂದಾಗ ಅದನ್ನು ಸೋಲಿಸಿ ರಾಜನನ್ನು ರಕ್ಷಣೆ ಮಾಡಿದ್ದರಿಂದ, ರಾಜನು ಮುಮ್ಮಡಿಸಿಂಗನಿಗೆ ಔದಾರ್ಯ ತೋರಿಸುವ ಮೂಲಕ ಉಪಚಾರ ಮಾಡಿ ಗೌರವಿಸಿದನೆಂದು ತಿಳಿದುಬರುತ್ತದೆ. ಇದೇ ಸಂದರ್ಭದಲ್ಲಿ ದೇವಗಿರಿಯ ಮೇಲೆ ದಾಳಿ

ಮಾಡುವ ಉದ್ದೇಶವನ್ನು ದೆಹಲಿ ಸುಲ್ತಾನರು ಹೊಂದಿದ್ದು ತಡಮಾಡದೆ ದೇವಗಿರಿಯ ಮೇಲೆ ದಾಳಿ ಮಾಡಿ ದೇವರಾಯನನ್ನು ಸೋಲಿಸಿ, ಆ ರಾಜ್ಯವನ್ನು ದೌಲತಾಬಾದಾಗಿ ಬದಲಾಯಿಸಿದರು. ಹೀಗಾಗಿ ಅಲ್ಲಿಂದ ಮುಮ್ಮಡಿಸಿಂಗ ಪುನಃ ಮಲೆಪಂಕ್ತಿ ದೇಶಕ್ಕೆ ಹತ್ತಿರವಿರುವ ಹನೆಯಗುಡ್ಡದ ಬಳಿ ಪಾಳೆಯವನ್ನು ಬಿಟ್ಟ ಎಂಬ ಸಂಗತಿಗಳು ಚನ್ನರಾಮ ಸಾಂಗತ್ಯದಲ್ಲಿ ಕಂಡುಬಂದಿವೆ. ಆದರೆ ತಾಲ್ಲೂಕು ಕಂಪಲಿ ಕೈಫಿಯತ್ತು ತಿಳಿಸಿರುವ ವಿಚಾರಗಳಿಗೂ, ಚೆನ್ನರಾಮ ಸಾಂಗತ್ಯ ತಿಳಿಸಿರುವ ವಿಚಾರಗಳಿಗೂ ಹೋಲಿಕೆಯಿದ್ದರೂ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ಕಂಪಲಿ ಕೈಫಿಯತ್ತು ಹೇಳುವಂತೆ ಮುಮ್ಮಡಿಯು ರಾಮದೇವರಾಯನ ಜೊತೆ ಬೇಟೆಗೆ ಹೋದಾಗ ಉಡವೊಂದು ಕಾಣಿಸಿಕೊಂಡಾಗ ಅದನ್ನು ಹಿಡಿಯಲು ಹೋದಾಗ ಸಿಂಗೇಯನಿಗೆ ಅಪಾರ ದ್ರವ್ಯಗಳು ದೊರಕಿದ್ದರಿಂದ ಹಾನಿರೆ ಗ್ರಾಮವನ್ನು ಕಟ್ಟಿಸಿದನು. ಆದರೆ ಹನೆಯದರೆ ಹೊಯ್ಸಳರ ಕಾಲದಿಂದಲೂ ಪ್ರಸಿದ್ಧಿ ಪಡೆದಿದೆ. ಹಾಗೂ ನಿಡುಗಲ್ಲಿನ ಚೋಳರ ರಾಜಧಾನಿಯಾಗಿತ್ತೆಂದು ಸಿ.ಎಸ್.ಪಾಟೀಲರು ಅಭಿಪ್ರಾಯ ಪಡುತ್ತಾರೆ.

ಮೊಳಕಾಲ್ಮೂರು ಶಾಸನದಲ್ಲಿ ಕುಮ್ಮಟದ ಬೀಚನೆಂದು ಕರೆಯಲಾಗಿದ್ದು, ಈತನೇ ನಿಡುಗಲ್ಲು ಮತ್ತು ಹನೆಯದುರ್ಗಗಳನ್ನು ಕಟ್ಟಿಸಿದನೆಂದು ಹೇಳಲಾಗಿದೆ. ಇವನು ಕುಮ್ಮಟದ ಒಡೆಯನಾಗಿದ್ದಿರಬಹುದೆಂದು ಕುಮ್ಮಟದುರ್ಗವು ಚೋಳರಸರ ಅಧೀನದಲ್ಲಿ ಸೀಗೆನಾಡಿನಲ್ಲಿದ್ದಿತು[೧೭] ಎಂದು ತಿಳಿಸುತ್ತಾ ಈ ಬೀಚನೆ ಕುಮ್ಮಟದರಸರ ಮಂತ್ರಿ ಬೈಚಪ್ಪನೆಂದು ಗ್ರಹಿಸುತ್ತಾರೆ.[೧೮] ಇಲ್ಲಿ ಕೈಫಿಯತ್ತು ತಿಳಿಸುವ ಪ್ರಕಾರ ಹನೆಯದೆರೆಯನ್ನು ಮುಮ್ಮಡಿ ಕಟ್ಟಿರಲು ಸಾಧ್ಯವಿಲ್ಲ. ಏಕೆಂದರೆ ಹೊಯ್ಸಳರ ಕಾಲದಲ್ಲಿಯೇ ಹನೆಯದೆರೆ ಪ್ರದೇಶವು ಪ್ರಸಿದ್ಧಿ ಪಡೆದಿತ್ತು ಹಾಗೂ ಚೋಳರ ರಾಜಧಾನಿಯಾಗಿದ್ದರಿಂದ ಹನೆಯದೆರೆ ಪ್ರದೇಶದಲ್ಲಿ ಸಿಂಗನು ವಾಸವಾಗಿದ್ದನು ಎನ್ನುವುದನ್ನು ಹೊರತುಪಡಿಸಿದರೆ ಇದು ಸಿಂಗನ ರಾಜ್ಯವಾಗಿರಲು ಸಾಧ್ಯವಿಲ್ಲ. ಬೇರೆ ಯಾವ ಶಾಸನಗಳಲ್ಲಿಯೂ ಹನೆಯು ಸಿಂಗೆಯನ ರಾಜಧಾನಿಯಾಗಿತ್ತು ಎಂಬ ವಿಚಾರ ಪ್ರಸ್ತಾಪವಾಗಿಲ್ಲ. ಕಾರಣ ಚರಿತ್ರೆಗೆ ದಾಖಲಾತಿಗಳು ಮುಖ್ಯವಾಗಿರುವುದರಿಂದ ಮೇಲಿನ ಹೇಳಿಕೆಗಳು ಸತ್ಯಕ್ಕೆ ಹತ್ತಿರವಾಗಿವೆ.

ಸಾಂಗತ್ಯಗಳು ಹೇಳಿರುವುದು ಸರಿಯೆನಿಸಿದರೂ ಕೆಲವೊಂದು ವಿಚಾರಗಳಲ್ಲಿ ಉತ್ಪ್ರೇಕ್ಷೆ ಕಂಡುಬಂದಿದೆ. ಮುಮ್ಮಡಿ ಎನ್ನುವುದು ಕುಮ್ಮಟದರಸರ ಮನೆತನದ ಹೆಸರಿರಬಹುದು ಎಂದು ತಿಳಿಸುತ್ತದೆ. ಆದರೆ ಇಲ್ಲಿ ಒಂದು ಸಂಗತಿಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಏಕೆಂದರೆ ಮುಮ್ಮಡಿ ಮನೆತನದ ಹೆಸರಾಗಿದ್ದರೆ ಇನ್ನುಳಿದ ಅರಸರಿಗೂ ಬಳಸಬೇಕಿತ್ತು. ಅಥವಾ ಶಾಸನದ ಮೂಲಕವಾದರೂ ತಿಳಿದುಬರಬೇಕಿತ್ತು. ಇದು ಮುಮ್ಮಡಿಸಿಂಗೆಯನ ಶೌರ್ಯ ಪರಾಕ್ರಮವನ್ನು ಮೆಚ್ಚಿ ನೀಡಿರುವಂತಹ ಬಿರುದು ಎಂಬ ಹೇಳಿಕೆ ಪುಷ್ಟಿನೀಡುತ್ತದೆ. ಮೇಲಿನ ಚರ್ಚೆಗಳಿಂದ ತಿಳಿದುಬರುವುದೇನೆಂದರೆ ಕಂಪಲಿ ಕೈಫಿಯತ್ತು ಮತ್ತು ಚೆನ್ನರಾಮನ ಸಾಂಗತ್ಯಗಳೆರಡನ್ನು ಒರೆಗೆ ಹಚ್ಚಿದಾಗ ಮುಮ್ಮಡಿಸಿಂಗನ ವಶದಲ್ಲಿ ಹನೆಯದೆರೆ ಇದ್ದಿರಬಹುದು. ಆದರೆ ಈ ಪ್ರದೇಶ ಅವನ ರಾಜಧಾನಿ ಆಗಿರಲಿಲ್ಲ ಎಂಬುದು ತಿಳಿಯುತ್ತದೆ. ಹನೆಯ ಪ್ರದೇಶವನ್ನು ಮುಮ್ಮಡಿಸಿಂಗನು

ನಿರ್ಮಿಸಿದ್ದ ಎನ್ನಲು ಪೂರಕವಾದ ಶಾಸನಗಳು ದೊರೆತಿಲ್ಲ ಹನೆಯ ಹೊಯ್ಸಳರ ಕಾಲದಲ್ಲಿಯೇ ಬೆಳಕಿಗೆ ಬಂದಿದ್ದರಿಂದ ಹನೆಯದೆರೆ ಮುಮ್ಮಡಿಸಿಂಗನ ರಾಜ್ಯದ ಅಧೀನದಲ್ಲಿ ಇತ್ತು ಎಂಬುದು ತಿಳಿದುಬರುತ್ತದೆ.

141312
ಅಕ್ಷರ ಗ್ರಂಥಾಲಯ

ಮುಮ್ಮಡಿಸಿಂಗನ ರಾಜಧಾನಿ ದೊರವದಿ ಇರಬಹುದೆಂಬ ಸಂದೇಶಗಳನ್ನು ಬಗೆಹರಿಸುವ ಪ್ರಯತ್ನಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಮಾಡಬೇಕಾಗಿದೆ. ಇದು ಬಳ್ಳಾರಿ ಜಿಲ್ಲೆಗೆ ಸೇರಿದ ಸಂಡೂರು ತಾಲ್ಲೂಕಿನ ದರೋಜಿ ಎಂದು ಗುರ್ತಿಸಲಾಗಿದೆ. ಕ್ರಿ.ಶ. ೧೨೮೦ರಲ್ಲಿ ಸೇವುಣ ರಾಮಚಂದ್ರನ ಮಂತ್ರಿ ಮತ್ತು ರಾಯದಂಡನಾಥ ಚಾವುಂಡರಸನು ದೊರವಾದಿಯಲ್ಲಿದ್ದ ಮುಮ್ಮಡಿಸಿಂಗೆಯನ ಮೇಲೆ ದಂಡೆತ್ತಿ ಬರುತ್ತಾನೆ.[೧೯] ಈ ಶಾಸನವನ್ನು ಗಮನಿಸಿದಾಗ ದೊರವದಿಯು ಸಿಂಗೆಯನ ಅಧೀನದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ. ಕ್ರಿ.ಶ. ೧೨೮೦ರ ವೇಳೆಗಾಗಲೇ ದೊರವದಿಯನ್ನು ಒಳಗೊಂಡಂತೆ ಹೊಯ್ಸಳ ರಾಜ್ಯದ ಉತ್ತರ ಮತ್ತು ಈಶಾನ್ಯ ಗಡಿಭಾಗಗಳು ಮುಮ್ಮಡಿಸಿಂಗೆಯನ ವಶದಲ್ಲಿದ್ದವೆಂಬುದು ಸ್ಪಷ್ಟವಿದೆ.[೨೦] ಈ ಹೇಳಿಕೆಗೆ ಪೂರಕವಾಗಿ ದೇವಗಿರಿ ಸೇವುಣರ ದಾಳಿಗಳು ಸಹ ದೊರವದಿ ಸಿಂಗೆಯನ ಆಡಳಿತ ಕೇಂದ್ರವಾಗಿತ್ತು ಎಂದು ತಿಳಿಸುತ್ತವೆ. ಹೀಗಾಗಿ ದೊರವದಿಯು ಹನೆಯದೆರೆಯನ್ನು ಒಳಗೊಂಡಂತೆ ಮುಮ್ಮಡಿಸಿಂಗನ ಆಡಳಿತ ಕೇಂದ್ರವಾಗಿತ್ತು ಎಂಬುದು ಖಚಿತವಾಗಿದೆ. ಆದರೆ ಇದು ರಾಜಧಾನಿ ಆಗಿತ್ತು ಎಂಬುದರಲ್ಲಿ ಗೊಂದಲವಿದ್ದಂತೆ ಕಂಡುಬರುತ್ತದೆ. ಏಕೆಂದರೆ ಪಂಚಮುಖಿಯವರ ಹೇಳಿಕೆಯನ್ನು ಗಮನಿಸಿದಾಗ ಮುಮ್ಮಡಿಸಿಂಗೆಯನು ಕುಮ್ಮಟದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ದೊರವದಿಯನ್ನು ಆಳುತ್ತಿದ್ದನು ಎಂದಿದೆ. ಆದರೆ ಕುಮ್ಮಟವನ್ನು ರಾಜಧಾನಿ ಮಾಡಿಕೊಳ್ಳುವ ಮೊದಲು ದೊರವದಿ ಏನಾಗಿತ್ತು? ಹಾಗೂ ಸಿಂಗೇಯನ ರಾಜಧಾನಿಯಾಗಿ ಬೇರೊಂದು ಪ್ರದೇಶವೇನಾದರೂ ಇದ್ದಿರಬಹುದಾ? ಅಥವಾ ದೊರವದಿಯೇ ಆಡಳಿತ ಕೇಂದ್ರ ಮತ್ತು ರಾಜಧಾನಿ ಎರಡೂ ಆಗಿದ್ದಿರಬಹುದಾ? ಎಂಬ ಹಲವು ಪ್ರಶ್ನೆಗಳು ಮೂಡುತ್ತವೆ. ಆದರೆ ಇಲ್ಲಿ ಒಂದು ವಿಚಾರವನ್ನು ಚರ್ಚಿಸಬೇಕಾದುದೇನೆಂದರೆ ಒಂದು ರಾಜ್ಯವು ಒಬ್ಬ ಅರಸನಿಗೆ ಎಷ್ಟು ಮುಖ್ಯವಾಗಿರುತ್ತದೆಯೋ, ಉದಯೋನ್ಮುಖ ಆಡಳಿತ ನಡೆಸಲು ಅಷ್ಟೇ ಮುಖ್ಯವಾಗಿರುತ್ತದೆ. ಈ ವೇಳೆಗಾಗಲೆ ಮುಮ್ಮಡಿಸಿಂಗೆಯನ ಅಧೀನದಲ್ಲಿ ಹೊಯ್ಸಳರ ಉತ್ತರದ ಮತ್ತು ಈಶಾನ್ಯ ಗಡಿಭಾಗಗಳು ಸೇರಿದ್ದವು ಹಾಗೂ ಸೇವುಣರಿಗೂ ಸಹ ಈತನ ರಾಜ್ಯದ ಮೇಲೆ ಕಣ್ಣುಬಿದ್ದಿತ್ತೆಂದರೆ ಬಹುಶಃ ದೊರವದಿಯು ರಾಜಧಾನಿಯಾಗಿರಲೇ ಬೇಕು. ಹೀಗಾಗಿ ದೊರವದಿಯನ್ನೇ ಆಡಳಿತ ಕೇಂದ್ರವನ್ನಾಗಿ ಹಾಗೂ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದಿರಬಹುದು ಎಂಬ ನಿಲುವು ಪ್ರಸ್ತುತ ಅಧ್ಯಯನದ್ದಾಗಿದೆ.

ಮುಮ್ಮಡಿಸಿಂಗನ ಮತ್ತೊಂದು ರಾಜಧಾನಿಗೆ ಸಂಬಂಧಿಸಿದಂತೆ ಕುಮ್ಮಟದುರ್ಗವು ಪ್ರಾಕೃತಿಕವಾಗಿ ಸುತ್ತಲೂ ರಕ್ಷಣೆಯನ್ನು ಪಡೆದುಕೊಂಡ ಗಿರಿದುರ್ಗವಾಗಿದೆ. ಇದು ಹೊಯ್ಸಳರ ಕಾಲದಲ್ಲಿ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಶಾಸನಗಳಲ್ಲಿ ಅಲ್ಲಲ್ಲಿ ಇದರ ಉಲ್ಲೇಖಗಳಿವೆ. ಹಾಗೆಯೇ ಸಾಂಗತ್ಯಗಳಲ್ಲಿ ಕುಮ್ಮಟದುರ್ಗವನ್ನು ವರ್ಣಿಸಲಾಗಿದೆ. ವಿಷ್ಣುವರ್ಧನನ ಅಧೀನ ಪ್ರದೇಶವು

ಇದಾಗಿತ್ತು ಎಂದು ತಿಳಿದುಬರುತ್ತದೆ. ಅಚ್ಯುತರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ ನ್ಯೂನಿಜ್ ಸಹ 'ಕ್ರಿನ್ಮಟ' ಎಂದು ಪ್ರಸ್ತಾಪಿಸಿರುವ ವಿಚಾರವನ್ನು ಎಂ. ರಾಮಶರ್ಮರವರು ಕ್ರಿನ್ಮಟವೇ 'ಕುಮ್ಮಟ' ಎಂದು ಅಭಿಪಾಯ ವ್ಯಕ್ತಪಡಿಸಿದ್ದಾರೆ. ಕ್ರಿಶ. ೧೨೮೭ರ ಲಕ್ಷ್ಮೇಶ್ವರ ಶಾಸನವೊಂದು ಇದು ಮುಮ್ಮಡಿಸಿಂಗನ ಆಳ್ವಿಕೆಗೆ ಒಳಪಟ್ಟಿದೆಯೆಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ.[೨೧] ಹೀಗಾಗಿ ಕುಮ್ಮಟದುರ್ಗವು ಮುಮ್ಮಡಿಸಿಂಗನ ರಾಜಧಾನಿ ಆಗಿತ್ತು ಎಂಬ ಪಂಚಮುಖಿಯವರ ಹೇಳಿಕೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಮುಮ್ಮಡಿಸಿಂಗನು ಹೆಚ್ಚಾಗಿ ದೇವಗಿರಿಯ ಸೇವುಣರ ವಿರುದ್ಧ ತಿರುಗಿಬಿದ್ದಿರುವುದು ಶಾಸನಗಳ ಮೂಲಕ ಸ್ಪಷ್ಟವಾಗುತ್ತದೆ. ಮುಮ್ಮಡಿಸಿಂಗನು ದೇವಗಿರಿಯಿಂದ ಬಂದು ಹನೆಯದೆರೆಯಲ್ಲಿ ನೆಲೆಸಿದನೆಂದು ಚನ್ನರಾಮನ ಸಾಂಗತ್ಯ ಹೇಳುತ್ತದೆ. ಇದಕ್ಕೆ ಕಾರಣಗಳು ಹಲವು ಇರಬಹುದು. ಹೊಯ್ಸಳರ ಮೇಲೆ ಸೇವುಣರು ದಾಳಿ ಮಾಡುವ ಉದ್ದೇಶ ಹೊಂದಿದ್ದರಿಂದ ಸೇವುಣರ ದಾಳಿಗೆ ಮುಮ್ಮಡಿಸಿಂಗನು ಅಡ್ಡಿಯಾಗಿದ್ದರಿಂದ ಮೊದಲು ಸಿಂಗನ ಮೇಲೆ ದಾಳಿ ಮಾಡಿರಬಹುದು. ಈ ಸಂದರ್ಭದಲ್ಲಿ ಸಿಂಗೇಯನು ದೇವಗಿರಿಯಿಂದ ಹನೆಯದೆರೆಗೆ ಬಂದು ನೆಲೆಸಿರಬಹುದು. ನಂತರ ದೊರವದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಮೇಲೆ ಕುಮ್ಮಟದುರ್ಗವು ಈತನ ಅಧೀನದಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ.

### ಮುಮ್ಮಡಿಸಿಂಗನ ಯುದ್ಧಗಳು

ಶಾಸನಗಳ ಆಧಾರದ ಮೇಲೆ ಮುಮ್ಮಡಿಸಿಂಗನು ಮೊದಲಬಾರಿಗೆ ದೇವಗಿರಿಯ ಸೇವುಣರ ಮೇಲೆ ದಾಳಿ ಮಾಡಿದಂತೆ ಕಂಡುಬರುತ್ತದೆ. ಏಕೆಂದರೆ ಶಿವಮೊಗ್ಗ (ಈಗ ದಾವಣಗೆರೆ ಜಿಲ್ಲೆ) ಜಿಲ್ಲೆ ಚನ್ನಗಿರಿ ತಾಲೂಕಿನ ಹಿರೇಕೋಗಿಲೂರು ಗ್ರಾಮದ ಕಲ್ಲೇಶ್ವರ ದೇವಾಲಯದ ಪಶ್ಚಿಮ ಭಾಗದಲ್ಲಿ ಕಂಡುಬರುವ ವೀರಗಲ್ಲು ಶಾಸನ ಮೊದಲಬಾರಿಗೆ ಮುಮ್ಮಡಿಸಿಂಗನ ಹೆಸರನ್ನು ಪರಿಚಯಿಸಿದ ಶಾಸನವಾಗಿದೆ. ಈ ಶಾಸನದ ಕಾಲ ಕ್ರಿಶ. ೧೨೮೦ ಸಿಂಗೆಯನ ದಾಳಿಗಳು ಕೇವಲ ಒಂದು ಪ್ರದೇಶದ ಮೇಲಾಗಿರಲಿಲ್ಲ, ಬದಲಾಗಿ ಹೊಯ್ಸಳರ ಮೇಲಿನ ದಾಳಿಯಾಗಿತ್ತು. ಅದಕ್ಕೂ ಪೂರ್ವದಲ್ಲಿ ಸೇವುಣರ ಮೇಲೆ ಹಾಗೂ ಜೈನರ ಮೇಲೂ ದಾಳಿ ಮಾಡಿದುದರ ಸಂಗತಿಗಳನ್ನು ಕುರಿತು ಶಾಸನಗಳು ತಿಳಿಸಿಕೊಟ್ಟಿವೆ. ಇದರಿಂದಾಗಿ ಮುಮ್ಮಡಿಸಿಂಗನ ಶೌರ್ಯ, ಪರಾಕ್ರಮಗಳ ಬಗ್ಗೆ ತಿಳಿಯಲು ಅನುಕೂಲವಾಗುತ್ತದೆ. ಮುಮ್ಮಡಿಸಿಂಗನ ಈ ದಾಳಿಗಳ ಬಗ್ಗೆ ತಿಳಿದಾಗ ಬಹುಶಃ ವೈರಿಗಳಿಗೆ ಸಿಂಹಸ್ವಪ್ನವಾಗಿದ್ದನೇನೋ ಎಂದು ಅನಿಸುತ್ತದೆ. ನೆರೆಹೊರೆಯ ರಾಜ್ಯಗಳ ರಾಜರುಗಳು ಹಾಗೂ ಸಾಮಂತರುಗಳ ದರ್ಪವನ್ನು ತನ್ನ ಪರಾಕ್ರಮದಿಂದ ಅಡಗಿಸಿದ್ದ ಧೀರನೆಂದೆ ಹೇಳಬಹುದು.

## ಸೇವುಣರ ಮೇಲಿನ ದಾಳಿಗಳು

### ಚಾವುಂಡರಸನ ಸೋಲು

ಹಿರೇಕೋಗಿಲೂರು ಶಾಸನವು ಮುಮ್ಮಡಿಸಿಂಗನ ಹೆಸರನ್ನು ಮೊದಲಬಾರಿಗೆ ಪರಿಚಯಿಸಿದ ವೀರಗಲ್ಲು ಶಾಸನವಾಗಿದೆ. ಈ ಗ್ರಾಮವು ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಂಡುಬರುತ್ತದೆ. ಈ ಗ್ರಾಮದ ಕಲ್ಲೇಶ್ವರ ದೇವಾಲಯದ ಪಶ್ಚಿಮ ಭಾಗದಲ್ಲಿ ಈ ಶಾಸನ ದೊರೆಯುತ್ತದೆ.

ಶ್ರೀ ಮನ್ಮಹಾಪ್ರಧಾನರಾಯದಂಡನಾಥ ಪೇಸಣಿ ಹನ್ಮಶ್ರೀ ವೀರಚವುಡರ್ಸರು.

ಕುರುಗೋಡನಾಡ ದೊರವಡಿಗೆ ಮುಮ್ಮಡಿಸಿಂಗೆಯ ನಾಯ್ಕನ ಮೇಲೆ ನಡೆದು

ಕಾದಿ ಹಲವಾಳು ಕುದುರೆಯಂ ಕೊಂದು ಶಿವಲೋಕ ಪ್ರಾಪ್ತನಾದನೆಂದು[೨] ತಿಳಿಸುತ್ತದೆ. ಅಂದರೆ ದೇವಗಿರಿಯ ಸೇವುಣ (ಯಾದವ) ಅರಸ ಶ್ರೀವೀರರಾಮಚಂದ್ರದೇವನ ೧೨ನೆಯ ಪಟ್ಟದ ವರ್ಷವಾದ ಪ್ರಮಾದಿ ಸಂವತ್ಸರ ಬಹಳ ೩೦ ಗುರುವಾರವು ಈ ಯುದ್ಧ ನಡೆದಿದೆ ಎಂದು ವಿವರಿಸುತ್ತದೆ. ಈ ಶಾಸನವನ್ನು ಗಮನಿಸಿದಾಗ ದೊರವದಿ ಎಂಬ ಪ್ರದೇಶ ಮುಮ್ಮಡಿಸಿಂಗನ ಅಧೀನದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇದನ್ನು ಚರ್ಚೆಗೆ ಒಳಪಡಿಸಿದರೆ ದೊರವದಿಯು ಸಿಂಗನ ರಾಜಧಾನಿ ಆಗಿರಬಹುದೇ? ಎಂಬ ಪ್ರಶ್ನೆ ಮೂಡುತ್ತದೆ. ಹೀಗಾಗಿ ರಾಜಧಾನಿಯಾಗಿರುವ ಕಾರಣ ದೊರವದಿಯ ಮೇಲೆ ದಾಳಿ ಮಾಡಿರಬಹುದೆಂಬ ಸಂದೇಹಗಳು ಮೂಡಿಬರುತ್ತವೆ.

ಈ ಶಾಸನದಲ್ಲಿ ಬಹುಮುಖ್ಯವಾಗಿ ಮುಮ್ಮಡಿಸಿಂಗನ ಮೇಲಾಗುವ ದಾಳಿಯ ಕುರಿತು ಹಾಗೂ ಅವನ ವಿಜಯ ಕುರಿತು ದಾಖಲಿಸಲಾಗಿದೆ. ದೇವಗಿರಿ ಸೇವುಣ ಅರಸ ರಾಮಚಂದ್ರದೇವನ ಮಂತ್ರಿ ಹಾಗೂ ರಾಯದಂಡನಾಥ ವೀರ ಚವುಂಡರಸರು ಕ್ರಿ.ಶ. ೧೨೮೦ ರಲ್ಲಿ ಮುಮ್ಮಡಿಸಿಂಗನ ಪ್ರದೇಶವಾಗಿದ್ದ ದೊರವದಿಯ ಮೇಲೆ ದಾಳಿ ಮಾಡಿದರು. ಚಾವುಂಡರಸನು ಯುದ್ಧ ಮಾಡಬೇಕಾದಾಗ ಹಲವು ಕುದುರೆಗಳನ್ನು ಕೊಲ್ಲುತ್ತಾನೆ. ಆದರೆ ಮುಮ್ಮಡಿಸಿಂಗನ ದಾಳಿಯನ್ನು ಎದುರಿಸಲಾರದೆ ರಣರಂಗದಲ್ಲೇ ಸಾವನ್ನಪ್ಪುತ್ತಾನೆ. ಹೀಗಾಗಿ ಮುಮ್ಮಡಿಸಿಂಗನ ಮೇಲೆ ಸೇವುಣರ ದಾಳಿ ಪ್ರಬಲವಾಗಿದ್ದರೂ ಸಿಂಗನು ಎದೆಗುಂದದೆ ತನ್ನ ರಾಜ್ಯವನ್ನು ತನ್ನ ಪ್ರದೇಶಗಳನ್ನು ಅಧೀನದಲ್ಲಿ ರಕ್ಷಿಸಿಟ್ಟನೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಹೀಗಾಗಿ ದೊರವದಿ ಮುಮ್ಮಡಿಸಿಂಗನ ಅಧೀನದಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ.

### ಕನ್ನರದೇವನ ಸೋಲು

ಮುಮ್ಮಡಿಸಿಂಗನು ಹೊಯ್ಸಳರ ವಿರುದ್ಧ ದಾಳಿಗಳನ್ನು ನಡೆಸಿದ್ದರೂ ಹೆಚ್ಚು ಬಾರಿ ಸೇವುಣರ ಜೊತೆ ಕಾದಾಟವಾಗಿರಬಹುದು ಎಂಬುದು ಶಾಸನಗಳಿಂದ ಖಚಿತವಾಗುತ್ತದೆ. ಸಿಂಗೆಯನು ಹೋರಾಟ ನಡೆಸುವುದಷ್ಟೇ ಅಲ್ಲದೆ ತನ್ನ ರಾಜ್ಯವನ್ನು ವಿಸ್ತಾರ ಮಾಡುತ್ತಾ ಹೋದನು. ಇದರಿಂದಾಗಿ

ಪದೇ ಪದೇ ಅನ್ಯರಾಜ್ಯಗಳು ದಾಳಿಗೆ ಯತ್ನಿಸಿರಬಹುದು ಎಂಬ ವಿಷಯ ಸ್ಪಷ್ಟವಾಗುತ್ತದೆ. ದೇವಗಿರಿ ಸೇವುಣರ ಸಕಲ ಸೈನ್ಯಾಧಿಪತಿ ಕನ್ನರದೇವನು ಮುಮ್ಮಡಿಸಿಂಗನ ಮೇಲೆ ದಾಳಿ ಮಾಡಲು ಬರುತ್ತಾನೆ. ಈ ದಾಳಿಯ ಸಂಗತಿಯನ್ನು ಶಾಸನದ ಮೂಲಕ ವಿಶ್ಲೇಷಿಸಲಾಗಿದೆ.

ಇದೇ ಚನ್ನಗಿರಿ ತಾಲ್ಲೂಕಿನ ಹಿರೇಕೋಗಿಲೂರು ಗ್ರಾಮದ ಈಶ್ವರ ದೇವಸ್ಥಾನದ ದಕ್ಷಿಣ ಭಾಗದಲ್ಲಿರುವ ಈ ವೀರಗಲ್ಲು[೨೩] ಶ್ರೀ ವೀರರಾಮದೇವ ವಿಜಯ ರಾಜ್ಯೋದಯೇ ೧೪ ನೆಯ ಚಿತ್ರಭಾನು ಸಂವತ್ಸರ ಸು॥ ೧೫ ಆ(ದಿ)ವಾರ ಶ್ರೀ ಮನ್ನಹಾಮಂಡಳೇಶ್ವರ ಸಕಲ ಸೈನ್ಯಾಧಿಪತಿ ಕನ್ನರದೇವನು ಮುಮ್ಮಡಿಸಿಂಗೆಯನಾಯಕನ ಮೇಲೆ ದೊರವದಿಗೆ ನಡೆದು ಕಾದಿದಲ್ಲಿ ಶ್ರೀ ಮನ್ಮಹಾಪ್ರಧಾನಂ ರಾಯದಂಡನಾಥ, ಪೇಸಣಹನ್ಮ ಶರಣಾಗತ ವಜ್ರಪಂಜರಂ, ಕೂಚರ್ಸರ ಮಗ ವಣದೇವರ್ಸರು ಕಾದಿ ಹಲವಾಳು ಕುದುರೆಯಂ ಕೊಂದು ಸುರಲೋಕ ಪ್ರಾಪ್ತನಾದ ಈ ಉಕ್ತಿಯು ಕ್ರಿ.ಶ. ೧೨೮೨ ನವೆಂಬರ್ ೨೫ ನೆಯ ತಾರೀಖು ಭಾನುವಾರ ಹುಣ್ಣಿಮೆಯ ದಿನದಂದು ಈ ಯುದ್ಧ ನಡೆದಿದೆ ಎಂದು ಕನ್ನರದೇವನು ಮುಮ್ಮಡಿಯ ಮೇಲೆ ದಂಡೆತ್ತಿ ಬಂದಾಗ ಮುಮ್ಮಡಿಯು ಪ್ರತಿರೋಧ ಒಡ್ಡಿ ಆ ಸೇನೆಯ ಯಾದವರ ಮತ್ತೊಬ್ಬ ಮಹಾಪ್ರಧಾನ ರಾಯದಂಡನಾಥ ಕೂಚರಸನ ಮಗನಾದ ವಣದೇವರಸನನ್ನು ಕೊಲ್ಲುತ್ತಾನೆ. ಮುಮ್ಮಡಿಯ ಈ ರೌದ್ರತೆಯನ್ನು ಕಂಡ ಕನ್ನರದೇವನು ಸೋಲನ್ನೊಪ್ಪಿಕೊಂಡು ಅಲ್ಲಿಂದ ಹಿಂತಿರುಗಿದನು. ದೇವಗಿರಿಯ ಸೇವುಣರು ಮಹಾನ್ ಪರಾಕ್ರಮಿಗಳೇ ಆಗಿದ್ದರೂ ಚಿಕ್ಕ ರಾಜ್ಯದ ಒಡೆಯನಾಗಿದ್ದ ಮುಮ್ಮಡಿಯ ಈ ಪೌರುಷಕ್ಕೆ ಅಂಜಲೇಬೇಕಾಗಿತ್ತು. ಸುಮಾರು ೪ ಬಾರಿ ಸೋಲನ್ನು ಅನುಭವಿಸಿರುವುದು ತಿಳಿದುಬರುತ್ತದೆ.

ಹಿರೇಕೋಗಿಲೂರಿನಲ್ಲಿ ಕ್ರಿ.ಶ. ೧೨೮೦ ರಲ್ಲಿ ದೊರೆತಿರುವ ಮೊದಲ ಶಾಸನ ಹಾಗೂ ಇದೇ ಸ್ಥಳದಲ್ಲಿ ಕ್ರಿ.ಶ. ೧೨೮೨ ರಲ್ಲಿ ದೊರೆತಿರುವ ಮತ್ತೊಂದು ಶಾಸನದಿಂದ ತಿಳಿದುಬರುವುದೇನೆಂದರೆ ಈ ಎರಡೂ ಶಾಸನಗಳಲ್ಲಿ ಹೆಸರಿಸಿರುವ ಚಾವುಂಡರಸ ಮತ್ತು ವಣದೇವರಸರಿಬ್ಬರು ಸಹೋದರರು ಹಾಗೂ ಒಂದೇ ವಂಶಕ್ಕೆ ಸೇರಿದವರೆಂದು ತಿಳಿದುಬರುತ್ತದೆ. ವಣದೇವರಸನ ತಂದೆ ಕೂಚರಸ ಮತ್ತು ಚವುಂಡರಸನ ತಂದೆ ಚಟ್ಟರಸರಿಬ್ಬರೂ ಅಣ್ಣತಮ್ಮಂದಿರಾಗಿರುವುದರಿಂದ ಇವರಿಬ್ಬರು ಸಿಂಹರಾಜನ ಮಕ್ಕಳೆಂಬುದು ಹಿಂದಿನ ಅಧ್ಯಯನಗಳ ಊಹೆಯು ಸರಿ ಎನಿಸುತ್ತದೆ. ಹೀಗಾಗಿ ಮುಮ್ಮಡಿಸಿಂಗನು ಇವರಿಬ್ಬರ ಮೇಲೂ ದಾಳಿ ಮಾಡಿ ಸೋಲಿಸಿ ಕೊಂದಿರುವುದು ಹಾಗೂ ಇವರ ವಂಶವನ್ನೇ ಅಂತ್ಯಗೊಳಿಸಿರುವುದೂ ಸ್ಪಷ್ಟವಾಗಿ ತಿಳಿದುಬರುತ್ತದೆ.

### ಕನ್ನರದೇವನ ಎರಡನೇ ದಾಳಿ

ಸೇವುಣರು ಮತ್ತು ಮುಮ್ಮಡಿಸಿಂಗನ ನಡುವಿನ ಯುದ್ಧವನ್ನು ತಿಳಿಸುವ ಹಾಗೂ ಅದೇ ಸ್ಥಳದಲ್ಲಿ ದೊರೆತಿರುವ ೩ನೇ ಶಾಸನವಾಗಿದೆ. ಇದು ಕಲ್ಮೇಶ್ವರ ದೇವಾಲಯದ ಪಶ್ಚಿಮ ಭಾಗದಲ್ಲಿ ಕಂಡುಬಂದಿದ್ದು ಚಿತ್ರಭಾನು ಸಂವತ್ಸರದ ಭಾದ್ರಪದ ಬಹುಳ ೧೦ ಆದಿತ್ಯವಾರ ಅಂದರೆ ಕ್ರಿ.ಶ. ೧೨೪೨ ನೆಯ ಸೆಪ್ಟಂಬರ್ ೨೭ ನೇ ದಿನಾಂಕ[೨೪]ದಂದು ಚವುಂಡರಸರ ಮಯಿದುನ ಗೋಪರಸನನ್ನು

ನಾಗುವಿಕಳೆಸಾಪುರದೆಡೆ ಕಾದಿ ಶಿವಲೋಕಕ್ಕೆ ಕಳುಹಿಸಿದ. ಅಂದರೆ ಇಲ್ಲಿ ಉಕ್ತವಾಗಿರುವ ಪ್ರಕಾರ ಕೂಚರಸನ ಮಗನಾದ ವಣದೇವರಸ ಸತ್ತ ನಂತರ ಸೇವುಣರ ಸೈನ್ಯಾಧಿಪತಿಯಿಂದ ಕನ್ನರದೇವನು ಪುನಃ ದೊರವದಿಯ ಮೇಲೆ ದಾಳಿ ಮಾಡಿ ಯಶಸ್ವಿಯಾಗದೆ ವಾಪಸಾಗುತ್ತಾನೆ. ಹಿಂದುರಿದ ಸೇನೆಯನ್ನು ಮುಮ್ಮಡಿಯು ಅಟ್ಟಿಸಿಕೊಂಡು ಹೋಗಿ ಚಾವುಂಡರಸನ ಮೈದುನನಾದ ಗೋಪರಸನನ್ನು ನಾಗಾವಿಕಳಸಾಪುರದಲ್ಲಿ ಹೋರಾಡಿ ಅವನನ್ನು ಕೊಲ್ಲುತ್ತಾನೆ.

ಹಿರೇಕೋಗಿಲೂರು ಶಾಸನಗಳಲ್ಲಿ ಕ್ರಿ.ಶ. ೧೨೬೨ ನವೆಂಬರ್ ತಿಂಗಳಿನ ಶಾಸನ ಹಾಗೂ ಕ್ರಿ.ಶ. ೧೨೬೨ ಸೆಪ್ಟೆಂಬರ್ ತಿಂಗಳಿನ ಶಾಸನಗಳೆರಡನ್ನು ಪರಿಶೀಲಿಸಿದಾಗ ಮುಖ್ಯವಾಗಿ ಈ ಎರಡೂ ಶಾಸನಗಳ ಲಿಪಿ, ಭಾಷೆ, ಕಾಲ ಒಂದೇ ಆಗಿದ್ದು, ತಿಂಗಳುಗಳಲ್ಲಿ ವ್ಯತ್ಯಾಸ ತೋರುತ್ತದೆ. ನವೆಂಬರ್ ತಿಂಗಳಿನ ಶಾಸನದಲ್ಲಿ ತಿಳಿಸಿರುವ ಘಟನೆಯ ಮುಂದುವರೆದ ವಿಚಾರಗಳನ್ನು ಸೆಪ್ಟೆಂಬರ್ ತಿಂಗಳಿನ ಶಾಸನ ಹೇಳಿದೆ. ಅಂದರೆ ನವೆಂಬರ್ ನಂತರದ ತಿಂಗಳುಗಳು ಹೇಳಬೇಕಿತ್ತು. ಆದರೆ ಇಲ್ಲಿ ನವೆಂಬರ್ ಪೂರ್ವದಲ್ಲೇ ತಿಳಿಸಿರುವುದರಿಂದ ಕೆಲವೊಮ್ಮೆ ಕೂಟಶಾಸನಗಳಿಗೂ ಇದು ಹೊಂದಿಕೊಳ್ಳಬಹುದೆಂಬ ಅನುಮಾನವಿದೆ ಹಾಗೂ ಇವರಿಗೆ ಬಹುಶಃ ಕಾಲದ ಅರಿವಿರಲಿಲ್ಲವೇನೋ ಎಂಬ ಸಂಶಯವೂ ಮೂಡಿಬರುತ್ತದೆ. ಹಿಂದಿನ ಅಧ್ಯಯನಕಾರರಿಗೆ ಈ ವಿಚಾರವು ಗಮನಕ್ಕೆ ಬಂದಿಲ್ಲದೆಯೂ ಇರಬಹುದು. ಒಂದು ವೇಳೆ ಬಂದಿದ್ದರೂ ಅದನ್ನು ಚರ್ಚಿಸುವ ಗೋಜಿಗೂ ಹೋಗಿಲ್ಲದಿರುವುದು ಪ್ರಶ್ನಾರ್ಥಕವೆನಿಸುತ್ತದೆ.

**ಮುಮ್ಮಡಿಸಿಂಗ ಮತ್ತು ದಾಮನಾಯಕರ ನಡುವಿನ ಯುದ್ಧ**

ಲಕ್ಷ್ಮೇಶ್ವರ ಶಾಸನವು ಮುಮ್ಮಡಿಸಿಂಗ ಮತ್ತು ದಾಮನಾಯಕರ ನಡುವಿನ ಯುದ್ಧವನ್ನು ತಿಳಿಸುವ ಶಾಸನವಾಗಿದೆ. ಇದು ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರದಲ್ಲಿ ತಾಲ್ಲೂಕು ಕಚೇರಿಯ ಪಕ್ಕದಲ್ಲಿ ಕಂಡುಬಂದಿದೆ. ಇದು ಸುಮಾರು ಮೂರು ಪಟ್ಟಿಕೆಗಳಲ್ಲಿ ರಚನೆಯಾಗಿದೆ. ವೀರ ರಾಮಚಂದ್ರದೇವನ ವಿಜಯರಾಜ್ಯೋದಯದ ೧೭ ನೆಯ ಸರ್ವಜಿತು ಸಂವತ್ಸರದಲ್ಲಿ ಕಾರ್ತಿಕ ಶುದ್ಧ ೧೦ ರಲ್ಲಿ (೧೨೮೭) ಮುಮ್ಮಡಿಸಿಂಗನೊಡನೆ ಕಾದುವಾಗ ಮಹಾದೇವರಾಯನ ಮಗ ದ್ಯಾಮೋನಾಯ್ಕನು ಮಡಿದು ವೀರಸ್ವರ್ಗಕ್ಕೇರಿದ[೨೫] ಎಂಬ ವಿಚಾರವನ್ನು ಒಳಗೊಂಡಿದೆ. ಮುಮ್ಮಡಿಸಿಂಗನ ದಾಳಿಯು ನಿರಂತರವಾಗಿ ಸೇವುಣರ ಮೇಲಿತ್ತು ಎಂಬ ಸಂಗತಿ ತಿಳಿಯುತ್ತದೆ ಹಾಗೂ ಧಾರವಾಡದ ಕೆಲವು ಪ್ರದೇಶಗಳು ಮುಮ್ಮಡಿಸಿಂಗೆಯನ ಅಧೀನಕ್ಕೆ ಒಳಪಟ್ಟಿದ್ದವು ಎಂಬುದು ಈ ಶಾಸನದಿಂದ ಖಚಿತವಾಗುತ್ತದೆ. ಈ ಮೇಲಿನ ಶಾಸನಗಳು ಸೇವುಣರ ಮೇಲೆ ಮುಮ್ಮಡಿಸಿಂಗನ ದಾಳಿಗಳು ನಿರಂತರವಾಗಿದ್ದವು ಎಂಬುದನ್ನು ಸಾಕ್ಷೀಕರಿಸುತ್ತದೆ.

**ಹೊಯ್ಸಳರ ಮೇಲಿನ ದಾಳಿಗಳು**

**ಮುಮ್ಮಡಿಸಿಂಗ ಮತ್ತು ಬೊಮ್ಮನಾಯಕನ ನಡುವಿನ ಯುದ್ಧ**

ಇದು ವೀರಗಲ್ಲು ಶಾಸನವಾಗಿದ್ದು ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಬನ್ನಿಕೋಡು

ಗ್ರಾಮದ ಊರಮುಂದಿನ ದೇವಾಲಯದಲ್ಲಿ ಕಂಡುಬಂದಿದೆ.[೨೬] ಮುಮ್ಮಡಿಸಿಂಗ ಕ್ರಿ.ಶ. ೧೨೮೧ ಸೆಪ್ಟೆಂಬರ್ ೧೭ ನೇ ದಿನಾಂಕದಂದು ಹರಿಹರ ಹೋಬಳಿಯ ಬನ್ನಿಕೋಡು ಗ್ರಾಮದ ಮೇಲೆ ದಾಳಿ ಮಾಡಿ, ಅಲ್ಲಿನ ಗೋವುಗಳನ್ನು ವಶಮಾಡಿಕೊಂಡ ಸಂಗತಿಯನ್ನು ಶಾಸನ ತಿಳಿಸುತ್ತದೆ. ಕಾರಣ ಬನ್ನಿಕೋಡು ಗ್ರಾಮದಲ್ಲಿ ಅಲ್ಲಿನ ಸ್ಥಳೀಯ ಬೇಡಜಾತಿಯ ಯುವಕನಾದ ಬೀರಬೋವನ ಮಗನಾದ ಬೊಮ್ಮನಾಯಕನು ಮುಮ್ಮಡಿಸಿಂಗನ ವಶದಲ್ಲಿದ್ದ ತಮ್ಮ ಊರಿನ ಗೋವುಗಳನ್ನು ವಶಮಾಡಿಕೊಳ್ಳಲು ಮುಮ್ಮಡಿಸಿಂಗೆಯನ ಮೇಲೆ ದಾಳಿ ಮಾಡಿದನೆಂಬುದು ಹಾಗೂ ಬೊಮ್ಮನಾಯಕನು ಸೋಲಿನ ಜೊತೆಗೆ ಮಡಿದನೆಂಬುದು ಸ್ಪಷ್ಟವಾಗುತ್ತದೆ. ಗೋಗ್ರಹಣವು ಮುಮ್ಮಡಿಸಿಂಗನ ವಿಚಾರದಲ್ಲಿ ನಡೆದಿದೆ ಎಂಬುದು ತಿಳಿದುಬರುತ್ತದೆ. ಈ ಯದ್ಧವು ಕುಮ್ಮಟದರಸರ ಕಾಲದಲ್ಲಿ ಗೋವುಗಳಿಗೆ ನೀಡಿದ್ದ ಪ್ರಾಮುಖ್ಯತೆ ಬಗ್ಗೆ ತಿಳಿಯುತ್ತದೆ. ಗೋವುಗಳನ್ನು ಹೊಂದಿದವನು ಶ್ರಿಮಂತನಾಗಿದ್ದನು ಎಂಬುದನ್ನು ಸೂಚಿಸುತ್ತದೆ.

### ಮುಮ್ಮಡಿಸಿಂಗ ಮತ್ತು ಸಂಗಯ್ಯನಾಯಕನ ನಡುವಿನ ಯುದ್ಧ

ಮುಮ್ಮಡಿಸಿಂಗ ಮತ್ತು ಲೋಕದೊಳಲು ಗ್ರಾಮದ ಬೇಡಯುವಕ ಸಂಗಯ್ಯನಾಯಕನೊಂದಿಗೆ ಹೋರಾಡಿದ ಸಂಗತಿಯನ್ನು ಹೊಳಲಕೆರೆ ಶಾಸನ ತಿಳಿಸುತ್ತದೆ. ಹೊಳಲಕೆರೆ ಹೋಬಳಿಯ ಲೋಕದೊಳಲು ಗ್ರಾಮದ ಸಿದ್ದೇಶ್ವರ ದೇವಸ್ಥಾನದ ಬಳಿ ಈ ಶಾಸನ ಕಂಡುಬಂದಿದೆ. ವಿಷ್ಣು ಸಂವತ್ಸರ ಕಾರ್ತಿಕ ಶುಕ್ಲ ೧೩ ಸೋಮವಾರ ಅಂದರೆ ಕ್ರಿ.ಶ. ೧೨೮೧ ನೆಯ ಅಕ್ಟೋಬರ್ ೨೪ ಶಾಸನದ ಕಾಲವಾಗಿದೆ.[೨೭] ಚಿತ್ರದುರ್ಗ ಜಿಲ್ಲೆಗೆ ಸೇರಿದ ಈಗಿನ ಹೊಳಲ್ಕೆರೆ ತಾಲ್ಲೂಕಿನ ಲೋಕದೊಳಲು ಗ್ರಾಮವನ್ನು ಮುಮ್ಮಡಿಸಿಂಗನು ಮುತ್ತಿಗೆ ಹಾಕುತ್ತಾನೆ. ಅಲ್ಲಿ ಬೇಡರ ಯುವಕನಾದ ಸಂಗಯ್ಯನಾಯಕನು ಮುಮ್ಮಡಿಯ ದಾಳಿಯನ್ನು ತಡೆದು ಪ್ರತಿದಾಳಿ ನಡೆಸಿದಾಗ ವೇತಂಡಕಲ್ಲು ಎಂಬಲ್ಲಿ ಮುಮ್ಮಡಿಯು ಸಂಗಯ್ಯನನ್ನು ಸೋಲಿಸಿ ಕೊಲ್ಲಲ್ಪಡುತ್ತಾನೆ. ಸಂಗಯ್ಯನಾಯಕನು ಯುದ್ಧದಲ್ಲಿ ಮಡಿದ ನೆನಪಿಗಾಗಿ ಅವನ ಸಹೋದರನಾದ ಚೆಲುವಯ್ಯನಾಯಕನು ಈ ವೀರಗಲ್ಲನ್ನು ಹಾಕಿಸಿದನೆಂದು ತಿಳಿಯುತ್ತದೆ. ಇದು ಮುಮ್ಮಡಿಸಿಂಗನ ಎರಡನೇ ಗೋ-ಗ್ರಹಣವೆಂದು ಶ್ರೀ ಎಂ.ವಿ.ಚಿತ್ರಲಿಂಗಯ್ಯನವರು ಊಹಿಸಿದ್ದಾರೆ.[೨೮] ಮುಮ್ಮಡಿಸಿಂಗೇಯನು ಸಂಗಯ್ಯನಾಯಕನ ಮೇಲೆ ದಾಳಿಯ ಕಾಲಾವಧಿಗೂ ಹಾಗೂ ಇದರ ಪೂರ್ವದಲ್ಲಿ ಬೊಮ್ಮನಾಯಕನ ಮೇಲೆ ದಾಳಿಯ ಕಾಲಾವಧಿಗೂ ಒಂದು ತಿಂಗಳು ಮಾತ್ರ ವ್ಯತ್ಯಾಸವಿದ್ದು, ಇದೂ ಸಹ ಗೋಗ್ರಹಣವಿರಬೇಕು ಎಂಬ ಅಂಶವನ್ನು ಚಿತ್ರಲಿಂಗಯ್ಯನವರು ಊಹಿಸಿದ್ದಾರೆ. ಆದರೆ ಈ ಶಾಸನದಲ್ಲಿ ಎಲ್ಲಿಯೂ ಗೋವಿನ ವಿಚಾರ ಕಂಡುಬಂದಿಲ್ಲ. ಈ ಗ್ರಾಮವೂ ಹೊಯ್ಸಳರ ಅಧೀನಕ್ಕೆ ಸೇರಿರಬಹುದು ನಿಜ. ಆದರೆ ಇದು ಎರಡನೇ ಗೋಗ್ರಹಣ ಎಂದು ಒಪ್ಪಿಕೊಳ್ಳುವುದು ಸಮಂಜಸವಲ್ಲ ಎಂಬುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ.

## ಮುಮ್ಮಡಿಸಿಂಗ ಮತ್ತು ತಿಪ್ಪೆಯನಾಯಕನ ನಡುವಿನ ಯುದ್ಧ

ಈ ಕದನವು ಹಿರಿಯೂರು ತಾಲ್ಲೂಕಿನ ಜವಗೊಂಡನಹಳ್ಳಿ ಬಳಿ ಚಳ್ಳಕೆರೆ ಗ್ರಾಮದ ಈಶ್ವರ ದೇವಸ್ಥಾನದ ಬಳಿಯಿರುವ ವೀರಗಲ್ಲು ಶಾಸನದಲ್ಲಿ ವ್ಯಕ್ತವಾಗಿದೆ. "ವಿಜಯಾಭ್ಯುದಯ ಶಕವರ್ಷ ೧೨೦೪ ವಿಶುಸಂವತ್ಸರದ ಮಾರ್ಗಶಿರ ಶು೧ ಅ೧೧ (ಬೆ)ಮ್ಮಲೂರ ಕಲ್ಲಿಂಗೆ ಮುಮ್ಮಡಿ ಸಿ(ಂ)ಗೆಯ ನಾಯಕನು ಎತ್ತಿ ಬಂದಲ್ಲಿ ಚಳಕೆರೆಯ ಆಳುಗಳು ಕೇತಮಲ್ಲ ಸೇಟಿಯ ಮನೆಯ ಕುರುಬರ ಜಕ್ಕಯ್ಯನಾಯಕನಂಮ ತಿಪ್ಪೆಯನಾಯಕನು ಕಬೂರ-ನಲು ತಿವಿದು ಸ್ವರ್ಗಸ್ತನಾದ-ಗಲ್ಲ"[೨೯] ಎಂದು – ಈ ವಕ್ಕಣಿಕೆಯಿದೆ. ಮುಮ್ಮಡಿಸಿಂಗನು (ಬೆ)ಮ್ಮಲೂರು ಕಲ್ಲು ಇದರರ್ಥ ಚಿತ್ರದುರ್ಗದ ಮೇಲೆ ದಂಡೆತ್ತಿ ಬರುವಾಗ ಮಾರ್ಗ ಮಧ್ಯದಲ್ಲಿ ತಿಪ್ಪೆಯನಾಯಕನೊಂದಿಗೆ ಘರ್ಷಣೆ ನಡೆಯುತ್ತದೆ. ಈ ವೇಳೆಯಲ್ಲಿ ಜಕ್ಕನಾಯಕನ ತಮ್ಮ ತಿಪ್ಪೆನಾಯಕನು ಮಡಿಯುತ್ತಾನೆ. ನಂತರ ಇಲ್ಲಿನ ಪ್ರದೇಶಗಳು ಮುಮ್ಮಡಿಸಿಂಗನ ವಶವಾಗಿರಬೇಕು.

ಮುಮ್ಮಡಿಸಿಂಗೆಯನ ಈ ದಾಳಿಯು ಯಾವ ಕಾರಣಕ್ಕಾಗಿ ನಡೆಯಿತು ಎನ್ನಲು ಬಲವಾದ ಕಾರಣಗಳಿಲ್ಲ ಆದರೆ ಹಿರಿಯೂರು ಹಾಗೂ ಇಲ್ಲಿನ ಸುತ್ತಮುತ್ತಲಿನ ಪ್ರದೇಶಗಳು ಮೂಲತಃ ಜೈನರು ವಾಸಮಾಡಿದ್ದರೆನ್ನಲು ಅಲ್ಲಿ ದೊರೆತಿರುವ ಜೈನ ಶಿಲ್ಪಗಳೇ ಸಾಕ್ಷಿಯಾಗಿವೆ. ಹೀಗಾಗಿ ಈ ಕಾರಣಕ್ಕಾಗಿಯೇ ಕುಮ್ಮಟದರಸರು ಈ ಭಾಗಗಳ ಮೇಲೆ ದಾಳಿ ಮಾಡಲು ಜೈನರ ನೆಲೆಗಳನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಳ್ಳುವ ಉದ್ದೇಶವೂ ಇದ್ದಿರಬಹುದು.

## ಮುಮ್ಮಡಿಸಿಂಗ ಮತ್ತು ಜೈನರ ನಡುವಿನ ಕಲಹ

ಮುಮ್ಮಡಿಸಿಂಗನ ಮೇಲೆ ಮತ್ತಷ್ಟು ಬೆಳಕು ಚೆಲ್ಲುವ ಒಂದು ಶಾಸನವು ಲಂಡನ್‌ನ ಮ್ಯೂಸಿಯಂನಲ್ಲಿ ಕಂಡು ಬಂದಿದ್ದು. ಡಾ.ಸಿ.ಎಸ್.ಪಾಟೀಲ್‌ರಿಗೆ ದೊರಕಿದ್ದು, ಅಲ್ಲಿ ಪಾರ್ಶ್ವನಾಥ ಪೀಠದಲ್ಲಿ ಶಾಸನವು ಉಲ್ಲೇಖವಾಗಿದೆ. ಎರಂಬರಗೆಯ ಧರ್ಮ ಮುಮ್ಮಡಿಸಿಂಗನ ಭಾದೆ ಇರಿದ ಕೆಟ್ಟಡೆ ಮತ್ತು ವರಮುನಿ ಬಾಳೇಂದು ಧರಿಸಿದನಾಚಾರ್ಯರಾಯನಗಳಿತ ಮಹಿಮಹಾ ಸ್ವಸ್ತಿಶ್ರೀ ಮಲಸಂಘ ದೇಸಿಯಗೂ ಪುಸ್ತಕಗಚ್ಛ ಕುಂದ ಕುಂದಾನ್ವಯ ರೋಣ ಸಂಬಂಧ ಎರಂಬರಗೆಯ ನಗರ ಜನಾಂಗಕ್ಕೆ ಜೀರ್ಣೋದ್ಧಾರವಾಗಿ ಮಿಂಡಗುದಲಿಯ ಕೇತಿಸೆಟ್ಟಿಯರ ಮಗ ಮಲ್ಲಸೆಟ್ಟಿಯರೂ ಶ್ರೀ ಪಾರ್ಶ್ವದೇವರ ಮಾಡಿಸಿ ಪುಣ್ಯಬ್ರಿದ್ಧಿ ಯಸೋವ್ರಿದ್ಧಿಯಂ ಮಾಡಿಕೊಂಡ[೩೦] ಎಂಬ ಈ ಶಾಸನವನ್ನು ಗಮನಿಸಿದಾಗ ಮುಮ್ಮಡಿಸಿಂಗನು ಜೈನಧರ್ಮೀಯರಿಗೆ ಕಿರಿಕುಳ ಕೊಟ್ಟಿದ್ದನೆಂದೂ ಇವನ ಈ ಭಾದೆಯನ್ನು ತಾಳಲಾರದೆ ಜೈನಧರ್ಮ ಕೆಟ್ಟಿತು. ಹೀಗಾಗಿ ಈ ಧರ್ಮದ ಜೀರ್ಣೋದ್ಧಾರಕ್ಕಾಗಿ ಬಾಳೆಂದು ಆಚಾರ್ಯನು ಅವಧರಿಸಿ ಎರಂಬರಗೆಯ ನಗರ ಜಿನಾಲಯಕ್ಕೆ ಮಿಂಡಗುದಲಿಯ ಕೇತಿಸೆಟ್ಟಿಯ ಮಗನಾದ ಮಲ್ಲಸೆಟ್ಟಿಯು ಪಾರ್ಶ್ವದೇವರನ್ನು ಮಾಡಿಸಿದನೆಂಬ ಅರ್ಥವನ್ನು ಸೂಚಿಸುತ್ತದೆ. ಜೈನಧರ್ಮವನ್ನು ಮುಮ್ಮಡಿಸಿಂಗ ದ್ವೇಷಿಸಿದ್ದಿರಬಹುದು. ಇದರಿಂದಾಗಿ ಜೈನರು ತೊಂದರೆಗೊಳಗಾಗಿರಬಹುದು ಎಂಬ ಅರ್ಥ ಕೊಡುತ್ತದೆ. ಆದರೆ ಯಾವ ಕಾರಣಕ್ಕಾಗಿ

ಮುಮ್ಮಡಿಸಿಂಗ ಜೈನರಿಗೆ ತೊಂದರೆಕೊಟ್ಟ ಎನ್ನುವುದು ತಿಳಿದುಬಂದಿಲ್ಲ. ಕಂಪಲಿ ಕೈಫಿಯತ್ತುಗಳು ಹಾಗೂ ಚೆನ್ನರಾಮನ ಸಾಂಗತ್ಯ ತಿಳಿಸುವಂತೆ ಕುಮಾರರಾಮ ಜೈನರಿಗೆ ತೊಂದರೆ ಕೊಟ್ಟು ಓಡಿಸಿದ ಎನ್ನವುದಕ್ಕೆ ಕಾರಣವಿದೆ. ಆದರೆ ಮುಮ್ಮಡಿಸಿಂಗನ ಕಿರುಕುಳಕ್ಕೆ ಕಾರಣವೇನು ಎಂಬುದು ತಿಳಿದುಬಂದಿಲ್ಲ. ಮೇಲಿನ ವಿಚಾರಗಳನ್ನು ಪರಿಶೀಲನೆ ಮಾಡಿದಾಗ ಜೈನ ಶಿಲ್ಪದಲ್ಲಿ ಮುಮ್ಮಡಿಸಿಂಗನ ಭಾದೆಯನ್ನು ಮಾತ್ರ ದಾಖಲಿಸಿದ್ದು ಯಾವ ಕಾರಣಕ್ಕಾಗಿ ಭಾದೆಯನ್ನು ನೀಡಿದನೆಂಬುದನ್ನು ಮಾತ್ರ ತಿಳಿಸಿಲ್ಲ.

ಪ್ರಸ್ತುತ ಅಧ್ಯಯನದಲ್ಲಿ ಕಾರಣವನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ ಮುಮ್ಮಡಿಸಿಂಗನು ಜೈನರಿಗೆ ತೊಂದರೆ ಕೊಟ್ಟ ಮಾಹಿತಿಯನ್ನು ಲಂಡನ್ ಮ್ಯೂಸಿಯಂನಲ್ಲಿ ದೊರೆತ ಶಾಸನವು ಹೇಳುತ್ತದೆ. ಯಾವ ಕಾರಣಕ್ಕಾಗಿ ನೀಡಿದ ಎಂಬುದನ್ನು ಖಚಿತಪಡಿಸಿಲ್ಲ. ಹಿರಿಯೂರು ಶಾಸನ ಹೇಳುವ ಹಾಗೆ '(ಬೆ)ಮ್ಮಲೂರು ಕಲ್ಲಿಂಗೆ ಮುಮ್ಮಡಿಸಿ(ಂ)ಗೆಯ ನಾಯಕರು ಎತ್ತಿ ಬಂದಲ್ಲಿ ಚಳಕೆರೆಯ ಆಳುಗಳು ಕೇತಮಲ್ಲಸೆಟಿಯ ಮನೆಯ ಕುರುಬರ ಜಕ್ಕನಾಯಕನಮ ತಿಪ್ಪೆನಾಯಕನು ಕಬೂರ ನಲು ತಿವಿದು ಸ್ವರ್ಗಸ್ತನಾದ' ಎಂಬ ವಕ್ಕಣಿಕೆಯಿದ್ದು ಈ ಶಾಸನಕ್ಕೂ ಲಂಡನ್‌ನ ಶಾಸನಕ್ಕೂ ಹೋಲಿಕೆಗಳಿವೆ. ಮುಮ್ಮಡಿಸಿಂಗೆಯನು ಚಳಕೆರೆಯ ಭಾಗದಲ್ಲಿ ಕೇತಮಲ್ಲ ಸೆಟಿಯ ಮನೆಯ ಕುರುಬರ ಜಕ್ಕಯ್ಯನಾಯಕನ ತಮ್ಮ ತಿಪ್ಪೆಯನಾಯಕನ ಜೊತೆ ಕಾದಾಡಿ ಜಯಗಳಿಸುತ್ತಾನೆ. ಈ ವಾಕ್ಯವನ್ನು ಪರಿಶೀಲಿಸಿದಾಗ ಕೇತಮಲ್ಲ ಸೆಟಿಯು ಬಹುಶಃ ಜೈನಧರ್ಮದ ಆರಾಧಕರಾಗಿರಬಹುದು ಹೀಗಾಗಿ ಇವರ ಮನೆಯ ತಿಪ್ಪೆಯನಾಯಕನನ್ನು ಮುಮ್ಮಡಿಸಿಂಗನು ಸೋಲಿಸಿದಾಗ, ತಿಪ್ಪೆಯನಾಯಕ ಮಡಿದಿರಬಹುದೆಂದು ಈ ಸಂದರ್ಭದಲ್ಲಿ ಕೇತಮಲ್ಲ ಸೆಟಿಯು ಮುಮ್ಮಡಿಸಿಂಗನ ವಶವಾದಾಗ ಅಲ್ಲಿಂದ ಜೈನಧರ್ಮದ ಆರಾಧಕರು ಪಲಾಯನ ಮಾಡಿದ್ದಿರಬಹುದೆಂದು ಊಹಿಸಬಹುದು. ಅಂದರೆ ಈ ಶಾಸನ ಹೇಳುವ ಹಾಗೆ ಮುಮ್ಮಡಿಸಿಂಗನು ಕೇತಮಲ್ಲ ಸೆಟಿಗೆ ಆಗಿರುವ ತೊಂದರೆಯನ್ನು ಈತನ ಮಗ ಮಲ್ಲಸಟ್ಟಿಯು ಪಾರ್ಶ್ವದೇವರನ್ನು ಮಾಡಿಸುವ ಮೂಲಕ ಮುಮ್ಮಡಿಸಿಂಗನು ಜೈನಧರ್ಮೀಯರಿಗೆ ತೊಂದರೆ ಕೊಟ್ಟಿದ್ದಾನೆ ಎಂದು ತಿರುಚಿ ಹೇಳುವ ಪ್ರಯತ್ನ ನಡೆದಿದೆ. ಆದರೆ ಮುಮ್ಮಡಿಸಿಂಗನ ದಾಳಿಯನ್ನು ಮಲ್ಲಸೆಟಿಯು ತಪ್ಪಾಗಿ ಅರ್ಥೈಸಿಕೊಂಡು ಈ ರೀತಿ ಶಾಸನವನ್ನು ಹಾಕಿಸಿರಬಹುದೆಂಬ ಊಹೆಗಳು ಸರಿ ಎನಿಸುತ್ತವೆ. ಹಿರಿಯೂರಿನ ಶಾಸನವು ಲಂಡನ್ ಶಾಸನದ ಹೇಳಿಕೆಯನ್ನು ಸಮರ್ಥಿಸುತ್ತದೆ. ಮುಮ್ಮಡಿಸಿಂಗೆಯನು ಉದ್ದೇಶ ಪೂರ್ವಕವಾಗಿ ಜೈನಧರ್ಮೀಯರ ಮೇಲೆ ದಾಳಿಮಾಡಿಲ್ಲ ಎಂಬುದು ಪ್ರಸ್ತುತ ಅಧ್ಯಾಯದ ಅಭಿಪ್ರಾಯವಾಗಿದೆ.

ಅಂತಿಮವಾಗಿ ದಾಖಲೆಗಳ ಪ್ರಕಾರ ಮುಮ್ಮಡಿಸಿಂಗನೇ ಕುಮ್ಮಟದುರ್ಗದ ಮೂಲ ಪುರುಷನೆಂದು ಕರೆದರೂ ಹಾವೇರಿ ತಾಲೂಕಿನ ಕಲಕೇರಿ ಶಾಸನದಲ್ಲಿ ಮುಮ್ಮಡಿಸಿಂಗೆಯನಾಯಕ ವೊಡೆಯರ ಆಯಿವರು ಕೊಮಾರರ ಗಂಡ ದೇವರ್ಸ ವೊಡೆಯರು ಎಂದು ಪ್ರಾರಂಭವಾಗುತ್ತದೆ. ಈ ಶಾಸನವನ್ನು

ಗಮನಿಸಿದಾಗ ಇಮ್ಮಡಿ ಸಿಂಗೆನಾಯಕ ಯಾರು ಎಂಬ ಪ್ರಶ್ನೆ ಬಂದಾಗ, ಮುಮ್ಮಡಿಯ ಪೂರ್ವಜನಿರಬೇಕು ಎಂಬುದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಕಾರಣ ಈ ಶಾಸನದ ವರದಿಕಾರರು ಈ ಕಾಲವನ್ನು ಕ್ರಿ.ಶ. ೧೩ನೇ ಶತಮಾನವೆಂದು ಗುರುತಿಸಿದ್ದಾರೆ[೩೧]. ಅಷ್ಟೇ ಅಲ್ಲದೆ ಕಲಕೇರಿಗೆ ಸಮೀಪವಿರುವ ಸಂಗೂರಿನಲ್ಲಿ ಕುಮಾರರಾಮನ ವಿಗ್ರಹ ಪ್ರತಿಷ್ಠಾಪನೆಯಾಗಿದ್ದು, ಇದನ್ನು ಸಂಗಮನ ಮಗ ಮಾದರಸ ಮಾಡಿಸಿರುವುದನ್ನು ಗಮನಿಸಿದಾಗ ಈ ಭಾಗಗಳಲ್ಲೆಲ್ಲಾ ಕುಮ್ಮಟದರಸರ ಪ್ರಭಾವವಿತ್ತೆಂದು ತಿಳಿದುಬರುತ್ತದೆ.

ಒಟ್ಟಾರೆ ಹೇಳುವುದಾದರೆ ಶಾಸನಗಳನ್ನು ಒರೆಗೆ ಹಚ್ಚಿದಾಗ ಮುಮ್ಮಡಿಸಿಂಗ ಕುಮ್ಮಟದರಸರಲ್ಲಿ ಹಿರಿಯನಾಗಿದ್ದ ಎಂಬುದು ಸ್ಪಷ್ಟವಾಗುತ್ತದೆ. ಈತನು ಸ್ವತಂತ್ರವಾಗಿ ರಾಜ್ಯ ಕಟ್ಟಲಿಕ್ಕಾಗಿ ಹಾಗೂ ತನ್ನ ಚಿಕ್ಕ ರಾಜ್ಯವನ್ನು ವಿಸ್ತರಿಸಲಿಕ್ಕಾಗಿ ಸುತ್ತಮುತ್ತಲಿನ ಸಣ್ಣಪುಟ್ಟ ರಾಜರೊಡನೆ ಹಾಗೂ ಹೊಯ್ಸಳರು, ಸೇವುಣರೊಂದಿಗೆ ಹಲವು ಬಾರಿ ಹೋರಾಡಿದ ಸಂಗತಿಗಳು ಉಲ್ಲೇಖವಾಗಿವೆ. ದೊರವದಿಯನ್ನು ಆಡಳಿತ ಕೇಂದ್ರದ ಜೊತೆಗೆ ರಾಜಧಾನಿಯಾಗಿ ಮಾಡಿಕೊಂಡು ಕರ್ನಾಟಕದ ಮಧ್ಯಭಾಗ ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ಹಾವೇರಿ, ಧಾರವಾಡ ಭಾಗಗಳಾದ್ಯಂತ ಈತನ ಅಧೀನ ಪ್ರದೇಶಗಳಿದ್ದವೆಂದು ತಿಳಿದುಬರುತ್ತದೆ. ಕರ್ನಾಟಕವನ್ನು ಹೊರತುಪಡಿಸಿದರೆ ಪೂರ್ವದಲ್ಲಿ ಉದಯಗಿರಿವರೆಗೂ ಹಾಗೂ ಉತ್ತರದಲ್ಲಿ ಕರ್ನೂಲುವರೆಗೂ ವ್ಯಾಪಿಸಿದ್ದವೆಂದು ತಿಳಿದುಬರುತ್ತದೆ.

### ೩.೨. ಕಂಪಲಿರಾಯ (ಖಂಡೆಯರಾಯ) [ಕ್ರಿ.ಶ. ೧೩೦೦-೧೩೨೭]

ಕಂಪಲಿರಾಯ ಕಂಪಿಲದೇವ ಎಂಬ ಹೆಸರು ಕಂಪಲಿ ಪ್ರದೇಶಕ್ಕೆ ಚಿರಪರಿಚಿತವಾದದ್ದು. ತನ್ನದೇ ಹಿನ್ನೆಲೆಯೊಂದಿಗೆ ಈ ಕಂಪಲಿ ಪ್ರದೇಶವು ಕರ್ನಾಟಕ ದಕ್ಷಿಣೋತ್ತರ ಭಾಗಗಳನ್ನು ಕೂಡಿಸುವ ಐತಿಹಾಸಿಕ ಮತ್ತು ಪೌರಾಣಿಕ ಹಿನ್ನೆಲೆಯೊಂದಿಗಿರುವ ಹಂಪಿಯ ಭಾಗದಲ್ಲಿ ಕಂಡುಬರುತ್ತದೆ. ಇದು ಹೊಸಪೇಟೆ ತಾಲ್ಲೂಕು ಕೇಂದ್ರದಿಂದ ಈಶಾನ್ಯ ಭಾಗಕ್ಕೆ ೩೨ ಕಿ.ಮೀ. ಅಂತರದಲ್ಲಿ ಕಂಡುಬಂದಿದೆ. ತುಂಗಭದ್ರಾ ನದಿಯ ಬಲಭಾಗದಲ್ಲಿದ್ದು, ಮುಸ್ಲಿಂರ ಆಳ್ವಿಕೆಗೂ ಒಳಪಟ್ಟು, ಕಾಲಾನಂತರ ಬ್ರಿಟಿಷರ ಅಧೀನಕ್ಕೆ ಕ್ರಿಶಕ ೧೮೫೧ ರವರೆಗೂ ತಾಲೂಕು ಕೇಂದ್ರವಾಗಿ ಒಳಪಟ್ಟಿತ್ತು. ಪ್ರಸ್ತುತ ಇದು ಹೊಸಪೇಟೆ ತಾಲೂಕಿಗೆ ಸೇರಿದ್ದು, ಹೋಬಳಿ ಕೇಂದ್ರವಾಗಿದೆ. ಸುಮಾರು ೨೫ ಗ್ರಾಮಗಳನ್ನು ಹೊಂದಿರಬಹುದು. ಇಂತಹ ಪ್ರದೇಶ ಕಂಪಿಲರಾಯನ ರಾಜಧಾನಿಯಾಗಿತ್ತು ಎಂದು ಹೇಳಬಹುದಾದರೂ ಯಾವುದೇ ಖಚಿತ ದಾಖಲೆಗಳಿಲ್ಲದ ಕಾರಣ ಇದೊಂದು ಪಟ್ಟಣವಾಗಿತ್ತು ಎಂದು ಊಹಿಸಬಹುದು.

ಕರ್ನಾಟಕದ ಚರಿತ್ರೆಯಲ್ಲಿ ಕಂಡಂತಹ ಈ ಚಿಕ್ಕರಾಜ್ಯವು ಅದ್ಭುತ ಸಾಧನೆಗೈದ ಪುಟ್ಟ ರಾಜ್ಯಗಳಲ್ಲಿ ಒಂದಾಗಿದೆ. ಕಂಪಲಿ ಪ್ರದೇಶಕ್ಕೆ ಕೇವಲ ಐತಿಹಾಸಿಕ ಹಿನ್ನೆಲೆ ಅಷ್ಟೇ ಅಲ್ಲ, ಪುರಾಣಗಳ ಮೂಲಕ ಕೆಲವು ಐತಿಹ್ಯಗಳನ್ನು ಕಾಣಬಹುದು. ಕಪಿಲ ಎಂಬ ಮಹರ್ಷಿ ಈ ಸ್ಥಳದಲ್ಲಿ ತಪಸ್ಸು ಮಾಡುತ್ತಿದ್ದದರಿಂದ ಕಂಪಲಿ/ ಕಂಪಿಲ ಎಂಬ ಹೆಸರು ಪ್ರಾಪ್ತವಾಗಿದ್ದು ಈ

ಪ್ರದೇಶವನ್ನು ಆಳುತ್ತಿದ್ದ ರಾಜನಿಗೂ ಇದೇ ಹೆಸರು ಬಂದಿರಬೇಕೆನ್ನುವುದು ಪುರಾಣಕಥೆಯಿಂದ ಊಹಿಸಿರಬಹುದು. ಇನ್ನು ಕೆಲವರು ಅಧ್ಯಯನಕಾರರ ಪ್ರಕಾರ ಇಲ್ಲಿನ ಒಬ್ಬ ರಾಜನು ಕೆಂಪು ಹುಲಿಯನ್ನು ಕೊಂದಿದ್ದರಿಂದ ಕೆಂಪುಲಿರಾಯ ಎಂಬ ಹೆಸರು ಬಂದಿರಬೇಕು. ನಂತರ ಕಾಲಕ್ರಮೇಣ ಕಂಪಲಿರಾಯ ಆಗಿದ್ದಿರಬಹುದು. ಇಲ್ಲಿ ಸ್ಥಳನಾಮದ ಮೂಲಕ ಅಧ್ಯಯನ ಮಾಡಿದರೆ ಸ್ಪಷ್ಟವಾದ ಖಚಿತವಾದ ಮಾಹಿತಿ ಸಿಗುವುದು ಕಷ್ಟವಾಗಬಹುದು. ಹೀಗಾಗಿ ವ್ಯಕ್ತಿ ನಾಮದ ಅಧ್ಯಯನದ ಮೇಲೆಯೇ ಈ ಪದದ ಮೂಲ ಇತಿಹಾಸವನ್ನು ತಿಳಿದುಕೊಳ್ಳಲಾಗುತ್ತದೆ.

**ಕಂಪಲಿಯ ಉಲ್ಲೇಖವಿರುವ ಶಾಸನಗಳು**

'ಕಂಪಲಿ' ಎಂಬ ಪದವನ್ನು ಉಲ್ಲೇಖಿಸಿರುವ ಹಲವು ಖಚಿತವಾದ ದಾಖಲೆಗಳು ಶಾಸನಗಳ ಮೂಲಕ ದೊರಕಿವೆ. ಸಾಂಗತ್ಯಗಳು ಹೇಳಿವೆಯಾದರೂ, ಶಾಸನಗಳ ಮಾಹಿತಿಗಳನ್ನು ಮಾತ್ರ ಇಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಇದರ ಆಧಾರದ ಮೇಲೆ ಪರಿಶೀಲನೆಗೆ ಒಳಪಡಿಸಬಹುದು.

**ಬಿಸ್ಸನಹಳ್ಳಿ ಶಾಸನ**

ಇದು ಕೋಲಾರ ಜಿಲ್ಲೆಯ ಮುಳಬಾಗಿಲು ತಾಲೂಕಿನ ದುಗ್ಗಸಂದ್ರ ಹೋಬಳಿಯ ಬಿಸ್ಸನಹಳ್ಳಿ ಎಂಬ ಗ್ರಾಮದಲ್ಲಿ ಕಂಡುಬಂದಿರುವ ವೀರಗಲ್ಲುವೊಂದರ ಶಾಸನವು ಮೊಟ್ಟಮೊದಲ ಬಾರಿಗೆ ಕಂಪಲಿಯ ಉಲ್ಲೇಖವನ್ನು ಮಾಡಲಾಗಿದೆ.[೨೧] ಗಂಗರ ಅರಸನಾದ ಶ್ರೀ ಪುರುಷನು ಕುವಲಲಿ ನಾಡಿಗೆ ತನ್ನ ಮಗನಾದ ದುಗ್ಗ ದೊರೆ ಎರೆಪ್ಪನನ್ನು ಅಧಿಕಾರಿಯಾಗಿ ನೇಮಿಸಿದಾಗ, ಗಂಗಾವಾಡಿಯ ಸೈನ್ಯ ಯುದ್ಧ ಮಾಡಲು ಕಂಪಲಿ ಪ್ರದೇಶದ ಕಡೆಗೆ ಬಂದಾಗ ಅಲ್ಲಿ ಪಾಂಡಪ್ಪ ಮರಣಹೊಂದಿದ ಎಂಬ ಈ ಸಂಗತಿಯಿಂದ ಕಂಪಲಿ ಎಂಬ ಪ್ರದೇಶವು ಬೆಳಕಿಗೆ ಬಂತು ಎಂಬುದು ತಿಳಿಯುತ್ತದೆ. ಈ ಶಾಸನದ ಹೇಳಿಕೆಯನ್ನು ಗಮನಿಸಿಯೇ ಸಾಲತೊರೆಯವರು ಕ್ರಿ.ಶ. ೮ನೇ ಶತಮಾನದಿಂದಲೇ ಚಾರಿತ್ರಿಕವಾಗಿ ಬೆಳಕಿಗೆ ಬಂದಿದೆ ಎಂದಿದ್ದಾರೆ. ಕಂಪಲಿಯ ಹೆಸರು ಶಾಸನದಲ್ಲಿ ಈ ಕಾಲಕ್ಕೆ ದಾಖಲಾಗಿದೆಯೆಂದರೆ ಕುಮ್ಮಟದರಸರಿಗೂ ದೀರ್ಘವಾದ ಪೂರ್ವಜರ ಇತಿಹಾಸ ಇದ್ದಿರಬಹುದೆಂಬ ನಿಲುವು ತಾಳಬಹುದು.

**ಗೋಣಹಾಳಿನ ಶಾಸನ**

ಈ ಶಾಸನವು ಕ್ರಿ.ಶ. ೧೦೧೪ರಲ್ಲಿ ದಾಖಲಾಗಿರುವುದರಿಂದ ಆ ಕಾಲವು ಬಹುಶಃ ಕಲ್ಯಾಣಿ ಚಾಲುಕ್ಯರ ಆಳ್ವಿಕೆಯ ಕಾಲವಾಗಿದ್ದು, ಈ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯನ್ನು ಅಧೀನ ಮಾಡಿಕೊಂಡಿದ್ದರೆಂದು ತಿಳಿದುಬರುತ್ತದೆ. ಈ ವೇಳೆಯಲ್ಲಿ ಕಲ್ಯಾಣಿ ಚಾಲುಕ್ಯರ ಸಾಮಂತ ದೊರೆಯಾದ ಇರಿವ ನೊಳಂಬರಾಜನು ಕಂಪಲಿ ನೆಲೆಯಿಂದ ಆಡಳಿತ ನಿರ್ವಹಿಸುತ್ತಿದ್ದನೆಂದು ಜಗದೇಕಮಲ್ಲ ಜಯಸಿಂಹನ ಸಾಮಂತನಾದ ನೊಳಂಬ ಪಲ್ಲವರಾಜನು ತುಂಗಭದ್ರಾ ತೀರದ ಕಂಪಲಿ ಬೀಡಿನಿಂದ ರಾಜ್ಯಭಾರ ಮಾಡುತ್ತಾನೆ.[೨೨] ಕ್ರಿ.ಶ. ೧೦೪೪ರ ಹೊತ್ತಿಗೆ ಕಂಪಲಿಯು ಸುಗಂಧಭರಿತ ಉದ್ಯಾನವನಗಳಿಂದ ಸುತ್ತುವರಿಯಲ್ಪಟ್ಟಿತ್ತೆಂದೂ ಈ ವೇಳೆಯಲ್ಲಿ ಚೋಳರ

ರಾಜಾಧಿರಾಜನು ನೊಳಂಬವಾಡಿಯ ಮೇಲೆ ದಾಳಿ ಮಾಡಿ ಕಂಪಲಿ ಅರಮನೆಯನ್ನು ಹಾಳು ಮಾಡಿದ್ದು ವಿಧಿತವಾಗುತ್ತದೆ.[೩೪] ಹೀಗಾಗಿ ಈ ಶಾಸನದ ಆಧಾರದ ಮೇಲೆ ಕಂಪಲಿ ಪ್ರದೇಶವು ಕ್ರಿ.ಶ. ೮ನೇ ಶತಮಾನದಿಂದಲೇ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು ಎಂಬುದು ವೇದ್ಯವಾಗುತ್ತದೆ. ಇದರಿಂದಾಗಿ ೮ನೇ ಶತಮಾನದಿಂದಲೇ ಕೆಲವು ರಾಜ್ಯಗಳಿಗೆ ರಾಜಧಾನಿಯಾಗಿದ್ದ ಈ ಪ್ರದೇಶವು ಕಂಪಿಲನ ರಾಜಧಾನಿಯಾಗಿತ್ತು ಎಂದು ಊಹಿಸಿದರೂ ಅದು ಸುಳ್ಳು ಅನಿಸುತ್ತದೆ. ಕಾರಣ ಕಂಪಲಿ ಕಂಪಿಲನ ರಾಜಧಾನಿಯಾಗಿತ್ತು ಎನ್ನಲು ಯಾವುದೇ ಲಿಖಿತವಾದ ಶಾಸನಗಳ ಆಧಾರವಿಲ್ಲ, ಆದ್ದರಿಂದ ಇದು ಒಂದು ಸ್ವತಂತ್ರ ರಾಜ್ಯವಾಗಿತ್ತು ಹಾಗೂ ಆತನ ಆಳ್ವಿಕೆಯೂ ಇದ್ದಿರಬಹುದು ಎಂಬ ಸಂಗತಿಯನ್ನು ಗಮನಿಸಬಹುದು.

**ಕಂಪಿಲನ ಹೆಸರುಗಳಿರುವ ದಾಖಲೆಗಳು**

ಮುಮ್ಮಡಿಸಿಂಗನ ಮಗನಾದ ಕಂಪಿಲರಾಯ ಕುಮ್ಮಟದುರ್ಗದ ಅಧಿಕಾರವನ್ನು ಕೈಗೆತ್ತಿಕೊಂಡಾಗ ೧೮ ವರ್ಷ ವಯಸ್ಸಾಗಿತ್ತು. ಈತ ತನ್ನ ತಂದೆ ಮುಮ್ಮಡಿಸಿಂಗನಂತೆಯೇ ದೇವಗಿರಿ ಯಾದವರ ಸಾಮಂತನಾಗಿಯೇ ಅಧಿಕಾರವನ್ನು ಮುಂದುವರಿಸುತ್ತಾನೆ. ಈತನನ್ನು ಕಂಪಿಲರಾಯ, ಕಂಪಿಲದೇವ, ಖಂಡೆಯರಾಯ ಹೀಗೆ ಹಲವು ಹೆಸರುಗಳ ಮೂಲಕ ಗುರ್ತಿಸಬಹುದು. ಆದರೆ ಈ ಎಲ್ಲ ಹೆಸರುಗಳನ್ನು ದಾಖಲೆಗಳ ಮೂಲಕವೇ ಖಚಿತಪಡಿಸಿಕೊಳ್ಳವುದು ಉತ್ತಮ. ಸಾಂಗತ್ಯಗಳು ಕಂಪಿಲನನ್ನು ಕಂಪಿಲರಾಯ ಎಂದು ಕರೆದಿದ್ದು, ಶಾಸನಗಳು 'ವೀರ ಕಂಪಿಲದೇವ' ಎಂದು ಉಲ್ಲೇಖಿಸಿವೆ. ಶಾಸನಗಳಲ್ಲಿ ಉಲ್ಲೇಖಿಸಿದ ಹಾಗೆ ಕಂಪಿಲದೇವ ಎಂಬ ಹೆಸರು ಬಹುಶಃ ಕಂಪಲಿ ಸೋಮಶ್ವರನ ವರ ಪ್ರಸಾದದಿಂದ ಜನಿಸಿದ್ದರಿಂದ ಆ ಹೆಸರು ಬಂದಿರಬಹುದೆಂದು ಅನಿಸುತ್ತದೆ. ಈತನ ಮತ್ತೊಂದು ಹೆಸರು ಖಂಡೆಯರಾಯ.[೩೫] 'ಖಂಡೆಯ' ಅಂದರೆ ಕತ್ತಿಯನ್ನು ಬಿಂಬಿಸುವ ಅರ್ಥವನ್ನು ನೀಡುವುದರಿಂದ ಕತ್ತಿಯನ್ನು ಹಿಡಿದು ನಿಂತಿರುವ ಕಂಪಿಲನೆ ಖಂಡೆರಾಯ ಎಂದು ಹೇಳಬಹುದು. ಮುಮ್ಮಡಿಸಿಂಗನ ಮಗ ಕಂಪಿಲರಾಯನೇ ಖಂಡೆಯರಾಯ ಎನ್ನುವುದು ಕ್ರಿ.ಶ. ೧೩೦೦ರ ಹರಿಹರ ಶಾಸನವು ಆಧಾರ ಒದಗಿಸುತ್ತದೆ. ಪ್ರಾರಂಭದಲ್ಲಿ ಖಂಡೆಯರಾಯ ಯಾರೆಂಬುದು ವಿದ್ವಾಂಸರನ್ನು ಗೊಂದಲಕ್ಕೀಡು ಮಾಡಿತ್ತು. ಎನ್. ವೆಂಕಟರಮಣಯ್ಯನವರು ಖಂಡೆಯರಾಯನು ಮುಮ್ಮಡಿಸಿಂಗನ ಮತ್ತೊಬ್ಬ ಮಗನಿರಬೇಕೆಂದು ಭಾವಿಸುತ್ತಾರೆ.[೩೬] ಹುಲ್ಲೂರು ಜೋಯಿಸರು ಮೊದಲು ಹಾಗೆಯೇ ಎಣಿಸಿದ್ದರು.[೩೭] ನಂತರ ಇದು ಒಬ್ಬನದೆ ಹೆಸರಿರಬೇಕೆಂದು ಅಭಿಪ್ರಾಯವನ್ನು ಬದಲಾಯಿಸಿಕೊಂಡಿರುತ್ತಾರೆ.[೩೮] ದೇಸಾಯಿಯವರು ಖಂಡೆಯರಾಯ ಎಂಬುದು ಕಂಪಿಲನಿಗೆ ಬಂದಿರಬೇಕೆಂದು ಊಹಿಸುವುದು ಸಹಜವಾಗಿ ತೋರುತ್ತದೆ.[೩೯] ಈ ಎಲ್ಲಾ ಹೇಳಿಕೆಗಳನ್ನು ಗಮನಿಸಿದಾಗ ಮುಮ್ಮಡಿಸಿಂಗನಿಗೆ ಕಂಪಿಲರಾಯ ಒಬ್ಬನೆ ಮಗ ಅವನೇ ಖಂಡೆಯರಾಯ ಎಂಬ ವಿಚಾರ ಪ್ರಾಕೃತ ಶಾಸನದಿಂದ ಸ್ಪಷ್ಟವಾಗುತ್ತದೆ. ಕಂಪಿಲನಿಗೆ ಮತ್ತೊಂದು ಹೆಸರಾದ 'ಕಂಬಿಲದೇವ'ನೆಂದು ಕರೆದಿರುವುದು ಶಾಸನದಲ್ಲಿ ಉಲ್ಲೇಖವಾಗಿದೆ. ತುಮಕೂರು ಜಿಲ್ಲೆಯ ಹುಳಿಯಾರು ತಾಲ್ಲೂಕಿಗೆ ಮಾರನಗೌಡನು ಅಧಿಪತಿಯಾಗಿದ್ದ. ಆ ಸಂದರ್ಭದಲ್ಲಿ ಕಂಪಿಲನು

ಹೊಯ್ಸಳರ ಅಧೀನದ ಈ ಪ್ರದೇಶದ ಮೇಲೆ ದಾಳಿ ಮಾಡಿದ ಎಂಬ ಶಾಸನ ಹಿರಿಯೂರು ತಾಲೂಕಿನ ಯರಬಳ್ಳಿ ಗ್ರಾಮದಲ್ಲಿ ದೊರೆತಿದ್ದು, ಇಜು ವೀರಗಲ್ಲು ಮಾದರಿಯಲ್ಲಿದೆ. ಶ್ರೀಮತ್ ಕ್ರೋಧನ ಸಂವತ್ಸರದ ಭಾದ್ರಪದ ಶು ೧೦ ಆದಿತ್ಯವಾರದಂದು ಕಂಬಿಲದೇವನು ಹುಳಿಯಾರನಿರಿದು ಹೋಹಲ್ಲಿ ಹೊಯಿಸಳ ಶ್ರೀ ವೀರಬಲ್ಲಾಳದೇವರಸರ ಮಹಾಪ್ರಧಾನ ಬೇಬದಣಾಯಕರು ಹುಯ್ಯಲು ಬಂದು ಮೊಳಲ ಮುಂದೆ ಕಾದಿದಲ್ಲಿ ನಾಗನಾಯ್ಕನ ತಮ್ಮ ಜಕ್ಕಯನಾಯಕನು ಆ ಕಾಳಗದಲ್ಲಿ ಕಾದಿ ಸಮಯಮಾಡಿ ಬಿದ್ದನಾಗಿ ನಾಗನಾಯಕನಿಗೆಕೊಟ್ಟ ನೆತ್ತರು ಕೊಡಗಿ[೪೦] ಈ ಶಾಸನದಲ್ಲಿ ಕಾಲದ ಕೊರತೆ ಕಂಡಿರಬಹುದು. ಆದರೆ ಇಲ್ಲಿ ದಾಖಲಿಸಿರುವ ಕಂಬಿಲದೇವ ಕಂಪಿಲದೇವನೇ ಇರಬೇಕು ಎನ್ನುವುದು ಖಚಿತವೆನಿಸುತ್ತದೆ. ಅಂದರೆ ಇಲ್ಲಿ ಬೇಬೆದಣಾಯಕ ವೀರಬಲ್ಲಾಳನ ಮಹಾಪ್ರಧಾನಿಯಾಗಿದ್ದು, ಹೊಯ್ಸಳ ವೀರಬಲ್ಲಾಳನ ಕಾಲವು ಕುಮ್ಮಟದ ಅರಸರ ಸಮಕಾಲೀನನಾಗಿರುವುದರಿಂದ ಕಂಬಿಲದೇವ ಕಂಪಿಲನೇ ಇರಬಹುದೆಂದು ಊಹಿಸಿರುವುದು ಸರಿಯೆನಿಸುತ್ತದೆ. ಇದಲ್ಲದೇ ಕಡಸೂರು ಶಾಸನವನ್ನು ಗಮನಿಸಿದಾಗ ಇಲ್ಲಿ ಕ್ರೋಧನ ಸಂವತ್ಸರ ಶ್ರಾವಣ ಶುಕ್ರವಾರ ಅಂದರೆ ಯರಬಳ್ಳಿ ಶಾಸನ ಮತ್ತು ಈ ಶಾಸನಗಳೆರಡನ್ನೂ ಒಂದು ತಿಂಗಳ ಅಂತರದಲ್ಲಿ ಹಾಕಿಸಿರಬಹುದು. ಅಂದರೆ ಈ ಎರಡೂ ಶಾಸನಗಳು ಒಂದು ಮಾಸದ ಅಂತರದಲ್ಲಿ ನಡೆದಿರುವುದರಿಂದ ಕಂಬಿಲದೇವ ಬೇರೆ ಯಾರೂ ಅಲ್ಲ ಕಂಪಿಲರಾಯನೇ ಎಂಬುದನ್ನು ಸ್ಪಷ್ಟವಾಗಿ ನಿರ್ಧರಿಸಬಹುದು.

ಕಂಪಿಲರಾಯನಿಗೆ ಮತ್ತೊಂದು ಹೆಸರು ವೀರರಾಜದೇವ ಎಂತಲೂ ಕರೆದಿರುವುದು ಕುತೂಹಲಕರವೆನಿಸುತ್ತದೆ. ಕರ್ನಾಟಕದ ಕುಮ್ಮಟದುರ್ಗದ ಮುಮ್ಮಡಿಸಿಂಗ ಮಂಚಾಲದೇವಿಯವರ ಸುಪುತ್ರ ಮಹಾರಾಜ ವೀರರಾಜದೇವ ಹಸ್ತಿನಾಪುರದ ಭಾಗದಲ್ಲಿ ಹುದುಗಿಹೊಗಿದ್ದ ಸಿಂಹಾಸನವನ್ನು ತಂದು ರಾಜ್ಯಭಾರ ಮಾಡಿದ[೪೧] ಎಂಬ ಹೇಳಿಕೆಯು ಸ್ವಾರಸ್ಯಕರವಾಗಿದೆ ಹಾಗೂ ಚರ್ಚೆಗೆ ಎಡೆ ಮಾಡಿಕೊಟ್ಟಿದೆ. 'ಮುಮ್ಮಡಿಸಿಂಗನ ಹೆಂಡತಿ ಮಂಚಕ್ಕ[೪೨] ಎಂಬ ವಾಕ್ಯವು ಮೇಲಿನ ಹೇಳಿಕೆಗೆ ಪೂರಕವಾಗುತ್ತದೆ. ಇವರ ಪುತ್ರ ಕಂಪಿಲದೇವನೆಂದೇ ಶಾಸನಗಳು ದೃಢಪಡಿಸಿವೆ. ಆದರೆ ಇವರ ಪುತ್ರ ವೀರರಾಜದೇವ ಎಂಬುದು ಚರ್ಚೆಗೆ ಗ್ರಾಸವಾಗಿದೆ. ಮುಮ್ಮಡಿಸಿಂಗೆಯನಾಯಕನ ರಾಣಿ ಮಾದನಾಯಕಿತಿ ಹಾಗೂ ಮಂಚಾಲದೇವಿ ಇಬ್ಬರು ಒಬ್ಬರೆ ಆಗಿರಬೇಕು. ಏಕೆಂದರೆ ಮಾದನಾಯಕಿಯ ಮಗ ಕಂಪಿಲರಾಯ, ಮಂಚಾಲದೇವಿಯ ಮಗ ವೀರರಾಜದೇವ ಎಂದು ಬೇರ್ಪಡಿಸಿದರಾದರೂ ಸಿಂಹಾಸನವನ್ನು ತಂದು ರಾಜ್ಯಭಾರ ಮಾಡಿದವನು ಮಾತ್ರ ಒಬ್ಬನೆ ಅದು ಕಂಪಿಲರಾಯ. ಹೀಗಾಗಿ ಇದು ಕಂಪಿಲರಾಯನ ಮತ್ತೊಂದು ಹೆಸರೇ 'ವೀರರಾಜದೇವ' ಆಗಿರಬೇಕು. ವೀರರಾಜದೇವ ಹಾಗೂ ವೀರಕಂಪಿಲದೇವ ಹೆಸರುಗಳಲ್ಲಿ ಮೊದಲ ಮತ್ತು ಕೊನೆಯ ಎರಡು ಪದಗಳು ಒಂದೇ ಆಗಿದ್ದು 'ರಾಜ' ಎಂಬ ಪದ ಮಾತ್ರ ಬದಲಾಗಿದೆ. ಬಹುಶಃ ಕಂಪಿಲ ಪ್ರದೇಶ ವಶವಾದ ಮೇಲೆ ವೀರಕಂಪಿಲದೇವ ಎಂಬ ಹೆಸರು ಸಂದಿರಬಹುದು ಎಂಬುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ.

**ಕಂಪಿಲರಾಯನ ರಾಜಧಾನಿಗಳು**

ಹೊಸಪೇಟೆ ತಾಲ್ಲೂಕಿನ ವ್ಯಾಪ್ತಿಗೆ ಸೇರಿರುವ ಈ ಕಂಪಲಿ ಪ್ರದೇಶದ ಸುತ್ತಮುತ್ತ ಹಲವು ರಾಜಮನೆತನಗಳು ಆಳ್ವಿಕೆ ನಡೆಸಿವೆ. ಹಲವು ರಾಜ್ಯಗಳ ಅಧೀನಕ್ಕೆ ಈ ಪ್ರದೇಶವು ಒಳಪಟ್ಟಿದ್ದರಿಂದ ಕ್ರಿ.ಶ. ೮ನೆಯ ಶತಮಾನದಿಂದಲೂ ಇದು ಕೆಲವು ರಾಜರುಗಳಿಗೆ ರಾಜಧಾನಿ ಆಗಿದ್ದು. ಶಾಸನಗಳಿಂದ ಕಂಡುಬಂದಿದೆ. ಕ್ರಿ.ಶ. ೧೦೧೪ರ ಗೋಣಹಾಳಿನ ಶಾಸನವನ್ನು ಗಮನಿಸಿದಾಗ ಕ್ರಿ.ಶ. ೯೭೩ರಲ್ಲಿ ಕಲ್ಯಾಣಿ ಚಾಲುಕ್ಯರ ಅಧೀನದಲ್ಲಿ ಬಳ್ಳಾರಿ ಜಿಲ್ಲೆಯಿದ್ದುದರಿಂದ ಇವರ ಸಾಮಂತನಾದ ಇರಿವ ನೊಳಂಬರಾಜನ ಕಂಪಲಿ ನೆಲೆಯಿಂದ ಆಡಳಿತ ನಿರ್ವಹಿಸುತ್ತಿದ್ದನೆಂದು ತಿಳಿದುಬರುತ್ತದೆ. ತದನಂತರ ಜಗದೇಕಮಲ್ಲ ಜಯಸಿಂಹನ ಸಾಮಂತನಾದ ನೊಳಂಬ ಪಲ್ಲವ ರಾಜನು ತುಂಗಭದ್ರಾ ತೀರದ ಕಂಪಲಿ ಬೀಡಿನಿಂದ ರಾಜ್ಯಭಾರ ಮಾಡುತ್ತಾನೆ.[೪೩] ಕ್ರಿ.ಶ. ೧೦೪೬ರ ಹೊತ್ತಿಗೆ ಕಂಪಲಿಯು ಸುಗಂಧಭರಿತ ಉದ್ಯಾನವನಗಳಿಂದ ಸುತ್ತುವರಿಯಲ್ಪಟ್ಟಿತ್ತೆಂದೂ ಈ ವೇಳೆಯಲ್ಲಿ ಚೋಳರ ರಾಜಾಧಿರಾಜನು ನೊಳಂಬವಾಡಿಯ ಮೇಲೆ ದಾಳಿ ಮಾಡಿ ಕಂಪಲಿ ಅರಮನೆಯನ್ನು ಹಾಳುಮಾಡಿದ್ದು ವಿಧಿತವಾಗುತ್ತದೆ.[೪೪] ಈ ಶಾಸನದಿಂದಾಗಿ ಕಲ್ಯಾಣಿ ಚಾಲುಕ್ಯರಿಗೆ ಕಂಪಲಿಯು ಪ್ರಾಂತೀಯ ರಾಜಧಾನಿ ಆಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೧೦೪೬ರ ನಂತರ ಕಾಲಕ್ರಮೇಣ ನೊಳಂಬ ಪಲ್ಲವರ ಅಧೀನದಿಂದ ಕಂಪಲಿಯು ಕೈತಪ್ಪಿದಂತೆ ಕಾಣುತ್ತದೆ. ಕ್ರಿ.ಶ. ೧೦೫೪ರಲ್ಲಿ ಚಾಲುಕ್ಯರ ಅರಸ ೧ನೇ ಸೋಮೇಶ್ವರನು ಕಂಪಲಿಯಿಂದ ಆಳುತ್ತಿದ್ದನೆಂಬುದು ಸ್ಪಷ್ಟವಿದೆ.[೪೫] ಈ ಶಾಸನವನ್ನು ಗಮನಿಸಿದಾಗ ತ್ರಿಲೋಕ ಮಲ್ಲನ ಮೊಮ್ಮಗನಾದ ವಿಜಯಾದಿತ್ಯನು ಕಂಪಲಿಯನ್ನು ರಾಜಧಾನಿಯಾಗಿ ಮಾಡಿಕೊಂಡಂತೆ ಕಾಣುತ್ತದೆ. ಇದರ ಜೊತೆಗೆ ನೊಳಂಬವಾಡಿಯನ್ನು ಆಳುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ. ಇದೇ ಕುಟುಂಬದ ಜಯಸಿಂಹದೇವನು ಸಹ ಕಂಪಲಿ ರಾಜಧಾನಿ ಕೇಂದ್ರದಿಂದ ನೊಳಂಬವಾಡಿಯನ್ನು ಕ್ರಿ.ಶ. ೧೦೬೮ರಲ್ಲಿ ಆಳುತ್ತಿದ್ದನೆಂದು ವಿಧಿತವಾಗುತ್ತದೆ. ಹೀಗಾಗಿ ಕಂಪಲಿ ಪ್ರದೇಶವು ದೀರ್ಘ ಇತಿಹಾಸವನ್ನು ಹೊಂದಿದ್ದು, ಹಲವು ರಾಜರುಗಳಿಗೆ ಕಂಪಿಲರಾಯನ ಆಳ್ವಿಕೆಗೂ ಪೂರ್ವದಲ್ಲೇ ರಾಜಧಾನಿಯಾಗಿ ಗುರುತಿಸಿಕೊಂಡಿತ್ತು ಎಂಬ ವಿಚಾರವು ಶಾಸನಗಳಿಂದ ತಿಳಿಯುತ್ತದೆ. ಹೀಗಾಗಿಯೇ ರಾಜಕೀಯ ಚತುರತೆಗೆ ಹೊಂದಿಕೊಂಡಿದ್ದ ಕಂಪಲಿಯು ಕಂಪಿಲನಿಗೆ ರಾಜಧಾನಿಯಾಗಿತ್ತೆಂಬ ವಿಚಾರವು ಯಾವ ಶಾಸನಗಳಿಂದಾಗಲೀ, ಸಾಂಗತ್ಯಗಳಿಂದಾಗಲೀ, ಬೇರೆ ಕಾವ್ಯಕೃತಿಗಳಿಂದಾಗಲೀ ದೊರಕುವುದಿಲ್ಲ. ಹೀಗಾಗಿ ಕಂಪಿಲರಾಯನ ಆಳ್ವಿಕೆಗೂ ಪೂರ್ವದಲ್ಲಿ ಇದು ಬೇರೆ ರಾಜಮನೆತನಗಳಿಗೆ ರಾಜಧಾನಿಯಾಗಿತ್ತೇ ವಿನಃ ಕಂಪಿಲನ ರಾಜಧಾನಿಯಾಗಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಕಂಪಲಿಯನ್ನು ಹೊರತುಪಡಿಸಿದರೆ ಕುಮ್ಮಟದುರ್ಗವು ಕಂಪಿಲದೇವನ ರಾಜಧಾನಿಯಾಗಿತ್ತು ಎಂಬುದು ಸಾಂಗತ್ಯಗಳಿಂದ ತಿಳಿದುಬರುತ್ತದೆ. ಕುಮ್ಮಟದುರ್ಗವು ಮುಮ್ಮಡಿಸಿಂಗೆಯನ ಕಾಲದಿಂದಲೂ ಅವರ ರಾಜಧಾನಿಯಾಗಿತ್ತೆಂದು ತಿಳಿದುಬರುವುದರ ಜೊತೆಗೆ ಕುಮ್ಮಟದುರ್ಗದಲ್ಲಿ ದೊರೆತ ಎರಡು ವೀರಗಲ್ಲು ಶಾಸನಗಳು ಕಂಪಿಲದೇವನು ಕುಮ್ಮಟದಿಂದ ರಾಜ್ಯವಾಳುತ್ತಿದ್ದನೆಂಬುದನ್ನು ಸ್ಪಷ್ಟಪಡಿಸಿವೆ.[೪೬]

ಕಂಪಿಲರಾಯನ ಕುಮ್ಮಟದುರ್ಗದ ಕೋಟೆಯನ್ನು ಭೇದಿಸಲಾಗದೆ ನಾಯಿಬನು ಹಿಂತಿರುಗಬೇಕಾಗುತ್ತದೆ. ಈ ವಿಚಾರವನ್ನು ಕುಮ್ಮಟದುರ್ಗದಲ್ಲಿ ದೊರೆತ ವೀರಗಲ್ಲು ಶಾಸನಗಳು ಪುಷ್ಟೀಕರಿಸುತ್ತವೆ.[೪೭] ಈ ವೀರಗಲ್ಲು ಶಾಸನದ ಆಧಾರದಲ್ಲಿ ಕುಮ್ಮಟದುರ್ಗವು ಕಂಪಿಲನ ಅಧೀನದಲ್ಲಿ ಸೇರಿತ್ತೆಂಬುದು ಸ್ಪಷ್ಟವಾಗುತ್ತದೆ. ಅದರಂತೆಯೇ ಕಂಪಿಲರಾಯನ ಅಧೀನದಲ್ಲಿದ್ದ ಕುಮ್ಮಟದುರ್ಗದ ಕೋಟೆಯನ್ನು ಅಲ್ಲಾವುದ್ದೀನ್ ಖಿಲ್ಜಿಯ ಸೇನಾನಿ ಮಲಿಕ್ ನಾಯಿಬನು ಭೇದಿಸಲಾಗದೆ ಹೊರಟು ಹೋಗಿರುವುದು ಕಂಪಿಲನ ವೀರತನವನ್ನು ಬಿಂಬಿಸುವುದಲ್ಲದೆ ಕುಮ್ಮಟವೂ ಈತನ ರಾಜಧಾನಿ ಎಂಬುದು ವಿಧಿತವಾಗುತ್ತದೆ.

ಹೊಸಮಲೆದುರ್ಗವು ಕಂಪಿಲನ ರಾಜಧಾನಿಯಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಸಾಂಗತ್ಯಗಳು ಈ ವಿಚಾರದಲ್ಲಿಯೂ ಸ್ಪಷ್ಟೀಕರಣ ನೀಡುತ್ತವೆ. ಈ ಪ್ರದೇಶವು ಕಂಪಿಲನಿಗೆ ಎರಡನೆ ರಾಜಧಾನಿಯಾಗಿತ್ತೆಂದು ಕಂಪಿಲರಾಯನೇ ಇದನ್ನು ನಿರ್ಮಿಸಿದನೆಂಬ ವಿಚಾರಗಳನ್ನು ಕಾವ್ಯಗಳು ದಾಖಲಿಸಿವೆ. ಹೊಸಮಲೆದುರ್ಗವು ರಾಜಧಾನಿಯಾಗುವುದಕ್ಕೂ ಪೂರ್ವದಲ್ಲಿ ಜಟ್ಟಂಗಿರಾಮೇಶ್ವರನ ಕೃಪಾಕಟಾಕ್ಷ ತುಂಬಾ ಮುಖ್ಯವಾಗಿ ಕಂಡುಬರುತ್ತದೆ. ಮುಮ್ಮಡಿಸಿಂಗೆಯನ ಮರಣದ ನಂತರ ಕಂಪಿಲನ ರಾಜ್ಯದಲ್ಲಿ ತೀವ್ರ ಬರಗಾಲ ಉಂಟಾಯಿತು. ಅಲ್ಲಿನ ಸಾಮಾನ್ಯ ಜನರಿಗೂ ಜೀವನ ನಡೆಸುವುದು ಅಸಾಧ್ಯವೆನಿಸಿದಾಗ ಮುಮ್ಮಡಿಸಿಂಗೆಯನ ಹೆಂಡತಿ ಮಾದನಾಯಕಿತಿ ಮಂತ್ರಿ ಬೈಚಪ್ಪನೊಡನೆ ಮಾತುಕತೆ ನಡೆಸಿ ತನ್ನ ಪರಿವಾರ ಸಮೇತವನ್ನು ಕರೆದುಕೊಂಡು ವಲಸೆಯ ರೀತಿಯಲ್ಲಿ ಹೊರಟಾಗ ಅವರ ಕಣ್ಮುಂದೆ ಹಚ್ಚಹಸುರಾಗಿ ಕಂಗೊಳಿಸಿದ್ದುದು ಅದೇ ಜಟ್ಟಂಗಿ ರಾಮೇಶ್ವರ. ಹೀಗಾಗಿ ಇಲ್ಲಿಯೇ ನೆಲೆಸಿದ್ದ ಜಟ್ಟಂಗಿ ರಾಮೇಶ್ವರನಿಗೆ ನಮಸ್ಕರಿಸಿ, ಅಲ್ಲಿಯೇ ನೆಲೆಸಿ ಮನೆದೇವರನ್ನಾಗಿ ಆರಾಧಿಸುತ್ತಾ ಜೀವನ ಸಾಗಿಸುತ್ತಿದ್ದರು. ಈ ಜಟ್ಟಂಗಿ ಗಿರಿಯು ರಾಮೇಶ್ವರನ ನೆಲೆ ಅಷ್ಟೇ ಅಲ್ಲದೆ, ಕಂಪಿಲರಾಯನು ನೆಲೆಸಿದ್ದನೆಂಬ ಐತಿಹಾಸಿಕ ಹಿನ್ನೆಲೆ ಹೊಂದಿರುವುದಕ್ಕೂ ಪೂರ್ವದಲ್ಲಿ ಇದು ಪೌರಾಣಿಕ ನೆಲೆಯಾಗಿತ್ತೆಂಬುದು ಗಮನಾರ್ಹವಾಗಿದೆ. ಅಂದರೆ ರಾವಣ ಸೀತೆಯನ್ನು ಅಪಹರಿಸಿ ಕೊಂಡೊಯ್ಯುವಾಗ ರಾಮನ ಸೇವಕನಾದ ಜಟಾಯು ರಾವಣನನ್ನು ತಡೆದು ಹೋರಾಡಿ ಮಡಿದ ಸ್ಥಳವಾಗಿದ್ದು, ಜಟಾಯುವಿನ ಪ್ರಾಣತ್ಯಾಗದ ನೆನಪಿಗಾಗಿ ರಾಮನು ಈ ಗುಡ್ಡದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಿದನೆಂಬ ಪೌರಾಣಿಕ ಕುರುಹುಗಳು ಕಂಡುಬಂದಿವೆ. ಸೀತಾದೇವಿಯ ಹೆಜ್ಜೆಯ ಗುರುತುಗಳು ಇರುವುದರಿಂದ ಇದೊಂದು ಪುರಾಣ ಪ್ರಸಿದ್ಧ ಸ್ಥಳವಾಗಿದೆ. ಹೀಗಾಗಿಯೇ ಇದು ಜಟಾಯು ರಾಮ, ಈಶ್ವರ ಎಂಬ ಹೆಸರಿನ ಮೂಲಕ ಜಟ್ಟಂಗಿ ರಾಮೇಶ್ವರವಾಗಿದೆ. ಇತರ ನೆಲೆಯಲ್ಲಿ ನೆಲೆಸಿದ್ದ ಮುಮ್ಮಡಿಸಿಂಗನ ಕುಟುಂಬ ಪರಿವಾರವು ಹೆಚ್ಚು ದಿನಗಳ ಕಾಲ ನೆಲೆಸದೆ ಬೇಟೆಯಾಡುತ್ತಾ ವಲಸೆಯನ್ನು ಪ್ರಾರಂಭಿಸಿದರು. ಈ ವೇಳೆಗಾಗಲೇ ಕಂಪಿಲನು ಜಟ್ಟಂಗಿ ಗಿರಿಯಿಂದ ಹೊರಟು ತಮ್ಮ ಒಳಿತಿಗಾಗಿ, ಏಳಿಗೆಗಾಗಿ ಒಂದು ನಿರ್ದಿಷ್ಟ ನೆಲೆಯನ್ನು ಹುಡುಕುವ ಪ್ರಯತ್ನದಲ್ಲಿದ್ದಾಗ ಮಾರ್ಗದ ಮಧ್ಯದಲ್ಲಿ ದಟ್ಟವಾಗಿದ್ದ ಅರಣ್ಯ ಎದುರಾದಾಗ ಅಲ್ಲಿನ ಸೌಂದರ್ಯ ಹಾಗೂ ಶತ್ರುಗಳಿಗೆ ಅಭೇದ್ಯವಾದ ಗಿರಿದುರ್ಗವಾಗಿದ್ದರಿಂದ ಇಲ್ಲಿಯೇ ತಮ್ಮ

ಪರಿವಾರವನ್ನು ಉಳಿಸಿಕೊಳ್ಳುವ ಮನಸ್ಸು ಮಾಡಿದನು. ಇದೇ ಹೊಸಮಲೆ ಎಂಬ ಅರಣ್ಯ ಪ್ರದೇಶವಾಗಿತ್ತು. ಹೀಗಾಗಿ ಹೊಸಮಲೆದುರ್ಗವನ್ನು ತನ್ನ ಆಡಳಿತದ ಅನುಕೂಲಕ್ಕಾಗಿ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದಿರಬಹುದೆಂಬ ಸಂಗತಿಯು ಸಾಂಗತ್ಯ, ಕಾವ್ಯಗಳ ಮೂಲಕ ತಿಳಿದುಬರುತ್ತದೆ.

ಮೇಲಿನ ಎಲ್ಲಾ ಹೇಳಿಕೆಗಳನ್ನು ಪರಿಶೀಲಿಸಿದಾಗ ಹಲವು ವಿದ್ವಾಂಸರುಗಳ ಪ್ರಕಾರ ಕುಮ್ಮಟದುರ್ಗವು ಮುಖ್ಯ ರಾಜಧಾನಿಯಾಗಿತ್ತಾದರೂ, ಹೊಸಮಲೆದುರ್ಗವು ಸಹ ಅಷ್ಟೇ ಪ್ರಾಮುಖ್ಯತೆಯನ್ನು ಪಡೆದಿತ್ತು ಹಾಗೂ ಮುಖ್ಯ ರಾಜಧಾನಿಯಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಅಂದರೆ ಹೊಸಮಲೆದುರ್ಗವನ್ನು ಕಂಪಿಲನೇ ಕಟ್ಟಿಸಿದನೆಂದೂ, ಆತನ ಪರಿವಾರದವರೂ ಅಲ್ಲಿಯೇ ಆಶ್ರಯ ಪಡೆದರೆಂದೂ ಹಾಗೂ ಅಲ್ಲಿದ್ದುಕೊಂಡೆ ತನ್ನ ಶಕ್ತಿ ಸಾಮರ್ಥ್ಯವನ್ನು ಕಂಪಿಲನು ಬಲಪಡಿಸಿಕೊಂಡಿರುವುದು ಕಾವ್ಯಗಳಿಂದ ವಿಧಿತವಾಗುತ್ತದೆ. ಹೀಗಾಗಿ ಈ ವಿಚಾರಗಳನ್ನು ಒರೆಗೆ ಹಚ್ಚಿದಾಗ ಕಂಪಿಲನ ರಾಜಧಾನಿಯಾಗಿ ಕುಮ್ಮಟದುರ್ಗದಷ್ಟೇ ಪ್ರಾಮುಖ್ಯತೆಯನ್ನು ಹೊಸಮಲೆದುರ್ಗವೂ ಪಡೆದುಕೊಂಡಿತ್ತೆಂಬುದು ಗಮನಾರ್ಹವಾಗಿದೆ. ಇಲ್ಲಿ ಕೊರತೆ ಕಂಡುಬಂದಿರುವುದೇನೆಂದರೆ ಹೊಸಮಲೆದುರ್ಗದಲ್ಲಿ ಹೆಚ್ಚು ಕಾಲ ಭದ್ರವಾಗಿ ಉಳಿಯದೆ ಕುಮ್ಮಟದುರ್ಗದಲ್ಲಿ ವಾಸ್ತವ್ಯ ಹೆಚ್ಚಾಗಿದ್ದರಿಂದ ಕುಮ್ಮಟದುರ್ಗವೇ ಮುಖ್ಯ ರಾಜಧಾನಿಯಾಗಿದೆ ಎಂಬುದು ವಿದ್ವಾಂಸರುಗಳ ಅಭಿಪ್ರಾಯವಾಗಿದೆ.

ಕವಿ ನಂಜುಂಡನು ಹೇಳಿರುವ ಪ್ರಕಾರ ಹೊಸಮಲೆ ಹಂಪಿಯ ದಕ್ಷಿಣ ಭಾಗಕ್ಕೆ ಕಂಡುಬರುತ್ತದೆಂದು ವರ್ಣಿಸಿದ್ದು ಇಲ್ಲಿಯವರೆಗೂ ಗೊಂದಲಕ್ಕೆ ಈಡಾಗಿತ್ತು. ಕೆಲವು ವಿದ್ವಾಂಸರುಗಳು ಹಾಗೂ ಎನ್.ವೆಂಕಟರಮಣಯ್ಯನವರು ಇದೇ ದೃಷ್ಟಿಯಿಂದಲೇ ಹೊಸದುರ್ಗ ಮತ್ತು ಹೊಸಮಲೆದುರ್ಗಗಳನ್ನು ಒಂದೆಯೆಂದು ಭಾವಿಸಿದ್ದಲ್ಲದೆ, ಅವು ಆನೆಗೊಂದಿಯೇ ಇರಬಹುದೆಂದು ಎಣಿಸಿದ್ದುಂಟು.[೪೮]

ಈ ಹೊಸಮಲೆದುರ್ಗಕ್ಕೆ ರಾಮನದುರ್ಗ ಎಂಬ ಹೆಸರಿತ್ತೆಂದು ಕೈಫಿಯತ್ತಿನ ಮೂಲಕ ತಿಳಿದುಬರುವುದು.[೪೯] ಹುಲ್ಲೂರು ಶ್ರೀನಿವಾಸಜೋಯಿಸರು ಇದು ಸಂಡೂರಿನ ಸುತ್ತಮುತ್ತಲಿನ ಪ್ರದೇಶವಿರಬಹುದೆಂದು ಶಂಕಿಸಿ ಅಲ್ಲಿನ ಅಧಿಕಾರಿಯ ಮೂಲಕ ವಿವರವನ್ನು ಪಡೆದು ಈ ಸಂದೇಹವನ್ನು ನಿವಾರಿಸಿದ್ದಾರೆ.[೫೦] ಈ ಎಲ್ಲಾ ಹೇಳಿಕೆಗಳನ್ನು ಗಮನಿಸಿದಾಗ ಹೊಸಮಲೆದುರ್ಗವೇ ಈಗಿನ ರಾಮಘಡ ಎಂದು ಗುರ್ತಿಸುವುದು ಸೂಕ್ತ. ಏಕೆಂದರೆ ನಂಜುಂಡ ಕವಿಯ ಪ್ರಕಾರ ಹಂಪೆಯ ದಕ್ಷಿಣ ಭಾಗದ ಪ್ರದೇಶವೇ ಈ ಹೊಸಮಲೆದುರ್ಗವಾಗಿದೆ.

**ಕಂಪಿಲರಾಯನ ಯುದ್ಧಗಳು**

**ಸೋಮೆಯ ದಂಡನಾಯಕನೊಂದಿಗಿನ ಕದನ**

ಕಂಪಿಲರಾಯನು ಸೋಮೆಯ ದಂಡನಾಯಕನ ಮೇಲೆ ದಂಡೆತ್ತಿ ಹೋಗಿರುವ ಸಂಗತಿಯನ್ನು

ಕ್ರಿ.ಶ. ೧೩೦೩ರ ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕಿನ ವ್ಯಾಪ್ತಿಗೆ ಬರುವ ಹೊಳೆನರಸೀಪುರ ಶಾಸನದಲ್ಲಿ[೫೧] ಕಾಣುತ್ತೇವೆ. ಈ ಶಾಸನವು ಇವರಿಬ್ಬರ ನಡುವಿನ ಯುದ್ಧದ ಗತಿಗಳನ್ನು ತಿಳಿಸಿಕೊಡುತ್ತದೆ. ಸೋಮೆಯ ದಂಡನಾಯಕನು ಬೆಮ್ಮತ್ತೂರುದುರ್ಗ(ಚಿತ್ರದುರ್ಗ)ದ ಪ್ರಾಂತ್ಯಾಧಿಕಾರಿಯಾಗಿದ್ದು, ಈತನು ಹೊಯ್ಸಳರ ಮೂರನೇ ಬಲ್ಲಾಳನ ಮೈದುನನಾಗಿದ್ದನು. ಇಲ್ಲಿ ಅರ್ಥವಾಗುವ ಒಂದು ಸಂಗತಿಯೆಂದರೆ ಕಂಪಿಲನು ಪರೋಕ್ಷವಾಗಿ ಹೊಯ್ಸಳರೊಂದಿಗಿನ ಕಂಪಿಲನ ಯುದ್ಧವನ್ನು ಕಾಣಬಹುದು. ಸೋಮೆಯ ದಣ್ಣಾಯಕನ ಮೇಲೆ ದಂಡೆತ್ತಿ ಬರುವ ಮುಖಾಂತರ ಕಂಪಿಲನು ಹೊಯ್ಸಳರ ಶತ್ರು ಎಂಬುದು ಹಾಗೂ ಸೇವುಣರ ನಾಯಕತ್ವ ವಹಿಸುವ ಮೂಲಕ ದಂಡೆತ್ತಿ ಹೋಗಿರುವುದು. ಕಂಪಿಲನು ಸೇವುಣರ ಜೊತೆಗಿನ ಸ್ನೇಹವನ್ನು ಎತ್ತಿತೋರಿಸುತ್ತದೆ. ಈ ಕದನದಲ್ಲಿ ಕಂಪಿಲರಾಯನು ಸೋಮೆಯ ದಣ್ಣಾಯಕನ ಮೇಲೆ ದಂಡೆತ್ತಿ ಬಂದು ಹೊಳಲಕೆರೆಯನ್ನು ಮುತ್ತಿಗೆ ಹಾಕುತ್ತಾನೆ. ಇವರಿಬ್ಬರ ನಡುವೆ ಯುದ್ಧ ನಡೆದರೂ ಕೊನೆಗೆ ಸೋಮೆಯ ದಣಾಯಕನು ಸೋತು ಮರಣ ಹೊಂದುತ್ತಾನೆ. ಇದರಿಂದಾಗಿ ತಿಳಿದುಬರುವುದೇನೆಂದರೆ; ಸೇವುಣರು ಮತ್ತು ಹೊಯ್ಸಳರು ಬದದ್ಧ ವೈರಿಗಳಾಗಿದ್ದರು ಹಾಗೂ ಸೇವುಣರ ಪರವಾಗಿ ಕಂಪಿಲನು ಶಾಸನಗಳ ಮೂಲಕ ಚಿರಪರಿಚಿತ ಎಂಬ ಸಂಗತಿಗಳು ಪ್ರಕಟವಾಗುತ್ತವೆ. ಹೀಗಾಗಿ ಕಂಪಿಲರಾಯ ಹೊಯ್ಸಳ ಮತ್ತು ಸೇವುಣರೊಂದಿಗಿನ ಸಂಬಂಧಗಳು ಹೇಗಿದ್ದವೆಂಬ ಸ್ಪಷ್ಟ ಚಿತ್ರಣವು ಈ ಶಾಸನದಿಂದ ಮೂಡಿಬರುತ್ತದೆ. ಇದೇ ರೀತಿಯಾಗಿ ಚಿಟ್ಟನಹಳ್ಳಿ ಶಾಸನವೂ ಸಹ ಉಲ್ಲೇಖಿಸುತ್ತದೆ.[೫೨] ಕ್ರಿ.ಶ. ೧೩೦೩ರಲ್ಲಿ ಶಾಸನವೂ ಕೂಡ ಇದೇ ಕದನವನ್ನು ಪ್ರಸ್ತಾಪಿಸುತ್ತದೆ. ಹೀಗಾಗಿ ಈ ಶಾಸನಗಳಿಂದ ತಿಳಿದುಬರುವ ಮುಖ್ಯ ಸಂಗತಿಯೆಂದರೆ ಹೊಯ್ಸಳರು ಕಂಪಿಲರಾಯನಿಂದ ಪರೋಕ್ಷವಾಗಿ ಸೋಲನ್ನು ಅನುಭವಿಸಿದ್ದರೂ ಕಪ್ಪಕಾಣಿಕೆಯನ್ನು ನೀಡುತ್ತಿದ್ದರೋ ಇಲ್ಲವೋ ಎಂಬ ವಿಚಾರದಲ್ಲಿ ಸ್ಪಷ್ಟ ನಿಲುವನ್ನು ತಾಳಲು ಸಾಧ್ಯವಿಲ್ಲ. ಹುಲ್ಲೂರು ಜೋಯಿಸರು ಹೇಳುವ ಪ್ರಕಾರ ಹೊಯ್ಸಳರು ಸೋತು ಕಪ್ಪಕಾಣಿಕೆಯನ್ನು ಕೊಡಲು ಒಪ್ಪಿದಂತೆ ಕಾಣುತ್ತದೆಂದು ಊಹಿಸಿದ್ದಾರೆ. ಆದರೆ ಈ ಕಾಲಾವಧಿಯಲ್ಲಿ ಕಪ್ಪಕಾಣಿಕೆಯನ್ನು ಕೊಡಲು ಒಪ್ಪಿರುವ ವಿಚಾರವು ಶಾಸನದಲ್ಲಿ ಕಂಡುಬಂದಿಲ್ಲ. ಅದು ಗೌಪ್ಯವಾಗಿಯೇ ಉಳಿದಿರುವುದು ಅರಿವಾಗುತ್ತದೆ. ಅಷ್ಟೇ ಅಲ್ಲದೆ ಶಾಸನದಿಂದ ಈ ವೇಳೆಗಾಗಲೇ (ಕ್ರಿಶಕ ೧೩೦೩) ಕಂಪಿಲರಾಯನು ಸೇವುಣರಿಗೆ ಹಾಗೂ ರಣರಂಗಕ್ಕೆ ನಾಯಕನಾಗಿದ್ದನೆಂಬ ವಿಚಾರ ಸ್ಪಷ್ಟವಾಗಿ ಮೂಡಿಬರುತ್ತದೆ. ಈ ವೇಳೆಗಾಗಲೇ ಸೇವುಣರ ಶಕ್ತಿ ಸಾಮರ್ಥ್ಯವು ಕುಗ್ಗಿಹೋಗಿತ್ತೆಂಬುದು ವಿಧಿತವಾಗುತ್ತದೆ. ತದನಂತರ ಕಂಪಿಲರಾಯನ ಸಾಮರ್ಥ್ಯ ಹೆಚ್ಚುತ್ತಾ ಹೋಗಿರಬಹುದು. ಹೀಗಾಗಿಯೇ ದೆಹಲಿ ಸುಲ್ತಾನರ ಕೆಂಗಣ್ಣಿಗೆ ಕುಮ್ಮಟದುರ್ಗ ಗುರಿಯಾಗಿರಬಹುದು ಎಂಬುದು ಸ್ಪಷ್ಟವಾಗಿ ಚಿತ್ರಿತವಾಗುತ್ತದೆ.

### ಮೂರನೇ ಬಲ್ಲಾಳನ ದಾಳಿ

ಮೂರನೇ ಬಲ್ಲಾಳನ ಮತ್ತು ಕಂಪಿಲರಾಯನ ನಡುವಿನ ಕದನವನ್ನು ಹೊಸಕೋಟೆ ಶಾಸನವು ತಿಳಿಸಿಕೊಡುತ್ತದೆ. ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಹೊಸಕೋಟೆ ಗ್ರಾಮದಲ್ಲಿರುವ

ಈ ಶಾಸನವು ಕಂಪಿಲ ಮತ್ತು ಹೊಯ್ಸಳರ ನಡುವೆ ವೈಷಮ್ಯ ಮುಂದುವರೆದುದನ್ನು ಚಿತ್ರಿಸುತ್ತದೆ.[೫೩] ಕ್ರಿ.ಶ. ೧೩೨೦ರಲ್ಲಿ ದೊರವದಿಯು ಕಂಪಿಲನ ಅಧೀನದಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಹಾಗೂ ಈ ವೇಳೆಗಾಗಲೇ ಕ್ರಿ.ಶ. ೧೩೦೩ರಲ್ಲಿ ಒಂದು ಬಾರಿ ೩ನೇ ಬಲ್ಲಾಳ ಕಂಪಿಲರಾಯನ ಮೇಲೆ ದಾಳಿ ಮಾಡಿದ್ದನೆಂಬ ಸಂಗತಿ ತಿಳಿದುಬರುತ್ತದೆ. ಹೀಗಾಗಿ ಮೊದಲ ಯುದ್ಧದಲ್ಲಿ ಸೋಲನ್ನು ಅನುಭವಿಸಿದ್ದರಿಂದ ಪುನಃ ೩ನೇ ಬಲ್ಲಾಳನು ಕಂಪಿಲನ ಅಧೀನದಲ್ಲಿದ್ದ ದೊರವದಿಯ ಮೇಲೆ ದಾಳಿ ಮಾಡುತ್ತಾನೆ. ಇವರಿಬ್ಬರ ನಡುವಿನ ಕದನದಲ್ಲಿ ೩ನೇ ಬಲ್ಲಾಳನ ಪರವಾಗಿದ್ದ ಆತನ ಸ್ಥಾನಪತಿಯಾಗಿದ್ದ ಕುರುಕನಾಯಕನು ರಣರಂಗದಲ್ಲೇ ಸಾವನ್ನಪ್ಪುತ್ತಾನೆ. ಹೀಗಾಗಿ ಇದು ಹೊಯ್ಸಳರಿಗಾದ ಎರಡನೆಯ ಸೋಲು ಆಗಿತ್ತು. ಬಹುಶಃ ಹೊಯ್ಸಳರ ೩ನೇ ಬಲ್ಲಾಳನ ಮೊದಲ ಸೋಲು ಕಂಪಿಲರಾಯನಿಂದಲೇ ಆಗಿದ್ದಿರಬಹುದು. ಕಾರಣ ಕ್ರಿ.ಶ. ೧೩೦೩ರಲ್ಲಿ ಮೊದಲ ಸೋಲು ಎಂದು ಈ ಶಾಸನ ಚಿತ್ರಿಸಿದ್ದು, ಕುಮ್ಮಟದ ಅರಸರೊಂದಿಗೆ ಹೊಯ್ಸಳರ ವೈಷಮ್ಯ ಕೆಲವು ಕಾಲ ಮುಂದುವರೆದಿರುವ ಚಿತ್ರಣವು ಕಂಡುಬರುತ್ತದೆ.

**ಬೇಬೆದಣ್ಣಾಯಕ ಮತ್ತು ಸಿಂಗೆದಣ್ಣಾಯಕರ ದಾಳಿ**

ಬಲ್ಲಾಳನ ಮಹಾಪ್ರಧಾನರಾದ ಬೇಬೆದಣ್ಣಾಯಕ ಮತ್ತು ಸಿಂಗೆಯದಣ್ಣಾಯಕರಿಂದ ಕಂಪಿಲನ ಮೇಲೆ ದಾಳಿ ನಡೆದಿರುವ ಸಂಗತಿ ಶಾಸನದಿಂದ ತಿಳಿದುಬಂದಿದೆ. ಈ ಶಾಸನವು ತಿಪಟೂರು ತಾಲ್ಲೂಕಿನಲ್ಲಿ ಕಂಡುಬರುವ ಕಡಸೂರು ಗ್ರಾಮದ ಬಳಿ ಇರುವ ಭೈರೇದೇವರ ಗುಡಿ ಹತ್ತಿರ ಕಂಡುಬಂದಿರುವ ನಾಲ್ಕನೇ ವೀರಗಲ್ಲು ಈ ಯುದ್ಧವನ್ನು ಕುರಿತು ಹೇಳುತ್ತದೆ. ಕ್ರಿ.ಶ. ೧೩೨೫ರಲ್ಲಿ ಕಂಪಿಲದೇವನಿಗೂ ಮತ್ತು ಬಲ್ಲಾಳನ ಮಹಾಪ್ರಧಾನರಾದ ಬೇಬೆದಣ್ಣಾಯಕ ಸಿಂಗೆ ದಣ್ಣಾಯಕರಿಗೂ ಕಾಳಗ ನಡೆದಿದ್ದನ್ನು ದಾಖಲಿಸುತ್ತದೆ.[೫೪] ಈ ಶಾಸನವು ಹೊಯ್ಸಳ ವೀರಬಲ್ಲಾಳದೇವರಸರ ಶ್ರೀ ಮನುಮಹಾಪ್ರಧಾನ ಬೇಬೆದಣಾಯ್ಕರು ಸಿಂಗೆಯದಣಾಯ್ಕರು ಪೃಥ್ವಿ ರಾಜ್ಯಂಗೆಯುತ್ತಿರಲು ಶಕವರುಷ ೧೨೪೭ನೇಯ ಕ್ರೋಧನ ಸಂವತ್ಸರದ ಶ್ರಾವಣ ಶು ೨ ಬೃಹಸ್ಪತಿ ವಾರದಲ್ಲಿ ಮಹಾಸಾಮಂತಾಧಿಪತಿ ಕಾಲನಾಡಾಳ್ದ ಬೇಬೆದಣಾಯ್ಕರು ಸಿಂಗೆದಣಾಯ್ಕರು ಮೂದಲಿಸಿ ಕಂಪಿಲ ಮೊದಲ ಸಿರಿದುಕೊಂಡು ಹೋಹಲ್ಲಿ ದಂಡೊಳಲ್ಲಿ ಬೇಬೆದಣಾಯ್ಕರು ತಾಗಿದಲ್ಲಿ ಎಂಬ ಉಲ್ಲೇಖವಿದೆ. ಮುಂದಿನ ಅಕ್ಷರಗಳು ಹಾಳಾಗಿರುವುದರಿಂದ ಈ ಯುದ್ಧದ ಕೊನೆಯಲ್ಲಿ ಸೋತವರು ಯಾರು ಗೆದ್ದವರು ಯಾರು ಎಂಬ ಪ್ರಶ್ನೆ ಮೂಡುತ್ತದೆ. ಆದರೆ ಬಿ.ಎ.ಸಾಲೆತೊರೆ ಅವರು ಈ ಕದನದಲ್ಲಿ ಕಂಪಿಲನು ಮಡಿದನೆಂದು ಅಭಿಪ್ರಾಯಪಡುತ್ತಾರೆ.[೫೫] ಹಾಗೂ ಬಿ.ಎಲ್.ರೈಸ್ ಅವರೂ ಹೀಗೆಯೇ ಅನುವಾದ ಮಾಡಿದ್ದಾರೆ.[೫೬] ಆದರೆ ಇಲ್ಲಿ ಕಂಪಿಲನು ಮಡಿದನೆಂಬ ಸಂಗತಿಯನ್ನು ಒರೆಗೆ ಹಚ್ಚಿದಾಗ, ಯರಬಳ್ಳಿ ಶಾಸನವು ಈ ಶಾಸನಕ್ಕೆ ಹತ್ತಿರವಿರುವುದು ಕಂಡುಬರುತ್ತದೆ. ಯರಬಳ್ಳಿ ಶಾಸನದ ಕಾಲವು ಕ್ರೋದನ ಸಂವತ್ಸರದ ಭಾದ್ರಪದ ಶು.೧೦ ಆದಿತ್ಯವಾರವಾಗಿದ್ದು, ಕಡಸೂರು ಶಾಸನದ ಕಾಲವೂ ಸಹ ಕ್ರೋಧನ ಸಂವತ್ಸರಕ್ಕೆ ಸೇರಿದ್ದು, ಇಲ್ಲಿ ಶ್ರಾವಣ ಮಾಸದಲ್ಲಿ ಯುದ್ಧ ನಡೆದಿರುವುದರಿಂದ

ಕಂಪಿಲರಾಯನನ್ನು ಮೊದಲು ಬೇಬೆದಣಾಯ್ಕರ ಮೇಲೆ ದಾಳಿಮಾಡಿ ನಂತರದಲ್ಲಿ ಯರಬಳ್ಳಿ ಮೇಲೆ ಅದೇ ವರ್ಷದ ಭಾದ್ರಪದ ಮಾಸದಲ್ಲಿ ದಾಳಿ ಮಾಡಿದಂತೆ ತೋರುತ್ತದೆ. ಹೀಗಾಗಿ ಮೊದಲು ಹೊಯ್ಸಳರ ಬಲ್ಲಾಳನ ಮಹಾಪ್ರಧಾನರಾದ ಬೇಬೆದಣ್ಣಾಯ್ಕರ ಮೇಲೆ ದಾಳಿ ಮಾಡಿರುವುದು ತಿಳಿಯುತ್ತದೆ. ಬಿ.ಎಲ್.ರೈಸ್ ಅವರು ಹಾಗೂ ಸಾಲೆತೊರೆ ಅವರು ಈ ಕದನದಲ್ಲಿ ಕಂಪಿಲನು ಮಡಿದಿರಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಶಾಸನಗಳ ಕಾಲ ಒಂದೇ ಆಗಿರುವ ಕ್ರೋಧನ ಸಂವತ್ಸರದಲ್ಲಿ ಶ್ರಾವಣದಲ್ಲಿ ಯುದ್ಧಮಾಡಿ ನಂತರ ಒಂದು ತಿಂಗಳ ಅಂತರದಲ್ಲಿ ಭಾದ್ರಪದದಲ್ಲಿ ಯುದ್ಧಮಾಡಿರುವುದರಿಂದ ಈ ಕಡಸೂರು ಶಾಸನ ತಿಳಿಸಿರುವ ಕದನದಲ್ಲಿ ಕಂಪಿಲನು ಸತ್ತಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಮುಸಲ್ಮಾನ ಚರಿತ್ರಕಾರರಾದ ಫೆರಿಸ್ತಾ, ಇಸಾಮಿ, ಇಬನ್‌ಬತೂತ ಹಾಗೂ ನ್ಯೂನಿಜ್ ಹೇಳಿರುವ ಪ್ರಕಾರ ಕಂಪಿಲನು ಮುಸಲ್ಮಾನರೊಂದಿಗೆ ಹೋರಾಡಿ ಮಡಿದನೆಂದು ತಿಳಿದುಬರುತ್ತದೆ. ಈ ಹೇಳಿಕೆಗೆ ಪೂರಕವಾಗಿ ಕುಮಾರರಾಮನ ಕಾವ್ಯಗಳು ಸಹ ಪುಷ್ಟಿ ನೀಡುತ್ತವೆ.

**ವೀರಬಲ್ಲಾಳನ ದಾಳಿ**

ಕಂಪಿಲರಾಯ ಮತ್ತು ವೀರಬಲ್ಲಾಳನ ನಡುವೆ ಸಿರಗುಪ್ಪ ಎಂಬ ಪ್ರದೇಶದಲ್ಲಿ ನಡೆದಿರುವ ಕದನದ ಉಲ್ಲೇಖವನ್ನು ಕೂಡಲಿಯ ಕಲ್ಲುಮಠದ ಶಾಸನವು ತಿಳಿಸುತ್ತದೆ. ಇದು ಬಳ್ಳಾರಿ ಜಿಲ್ಲೆಯ ಕೂಡಲಿಯ ಕಲ್ಲುಮಠದ ಮುಂಭಾಗದಲ್ಲಿ ವೀರಗಲ್ಲಿನಲ್ಲಿ ಉಲ್ಲೇಖವಾಗಿದೆ. ಈ ವೀರಗಲ್ಲು ಶಾಸನವು ಕುಮ್ಮಟದ ನಾಯಕರಿಗೂ ಹೊಯ್ಸಳರಿಗೂ ಜರುಗಿದ ಆರನೇ ಸಮರವನ್ನು ಸಾರುತ್ತದೆ[೫೭]. ಈ ಶಾಸನವು ಶಕವರ್ಷದ ಮಾಹಿತಿಯನ್ನು ತಿಳಿಸುವಲ್ಲಿ ಸೋತಿದೆ. ಆದರೆ ಇದು ಕಂಪಿಲರಾಯನ ಬಿರುದಾವಳಿಗಳನ್ನು ನೀಡುವಲ್ಲಿ ಮೊದಲಿದೆ. ಹಾಗೂ ಈತನಿಗೆ 'ಖಂಡೆಯರಾಯ' ಎಂಬ ಮತ್ತೊಂದು ಹೆಸರಿತ್ತು ಎಂಬುದನ್ನು ತಿಳಿಸಿದೆ. ಕಂಪಿಲನಿಗೆ ನೀಡಿರುವ ಬಿರುದುಗಳಾದ 'ಮಹಾಮಾಂಡಲಿಕ' ಮತ್ತು 'ನಾಯಕಾಚಾರ್ಯ' ಎಂಬ ವಿವರವು ಬೇಡ ಕುಲಕ್ಕೆ ಸೇರಿದವನೆಂಬುವ ಪೂರಕ ಮಾಹಿತಿಯನ್ನು ನೀಡಿದೆ. ಕುಮ್ಮಟದ ಅರಸ ಕಂಪಿಲನಿಗೆ ಹೊಯ್ಸಳರು ಶತ್ರುಗಳಾಗಿದ್ದರು ಎಂಬುದನ್ನು ಸ್ಪಷ್ಟಪಡಿಸಿದೆ. ಏಕೆಂದರೆ ಬೇರೆ ಶಾಸನಗಳು ತಿಳಿಸಿರುವ ಹಾಗೆ ಕೂಡಲಿಯ ಶಾಸನವು ಸಹ ಕಂಪಿಲ ಮತ್ತು ಹೊಯ್ಸಳರ ಬಲ್ಲಾಳನ ನಡುವೆ ಯುದ್ಧ ನಡೆದಿರುವುದನ್ನು ಹೋಲಿಸಿ ತೋರಿಸಿದೆ. ಆದರೆ ಈ ಶಾಸನದಲ್ಲಿ ಶಕವರ್ಷದ ಕೊರತೆಯಿರುವುದರಿಂದ ಕಾಲವನ್ನು ನಿರ್ಧರಿಸುವುದು ಕಷ್ಟವಾಗಿದೆ. ಹಾಗೂ ಈ ಯುದ್ಧದ ಸೋಲು ಗೆಲುವಿನ ಸಂಗತಿಗಳು ಯುದ್ಧದ ಪರಿಣಾಮಗಳ ವಿವರಗಳನ್ನು ನೀಡುವಲ್ಲಿ ಈ ಶಾಸನ ಯಶಸ್ವಿಯಾಗಿದೆ.

**ಹುಳಿಯಾರಿನ ಮಾರನಗೌಡನ ಮೇಲಿನ ದಾಳಿ**

ಹುಳಿಯಾರು ಹೊಯ್ಸಳ ಅಧಿಪತ್ಯಕ್ಕೆ ಸೇರಿದ್ದ ಪ್ರದೇಶವಾಗಿತ್ತು. ಈ ಕದನವು ಹೊಯ್ಸಳರು ಕಂಪಿಲರಾಯನಿಗೆ ಶತ್ರುಗಳು ಎಂಬ ವಿಚಾರವನ್ನು ಹೊರಹಾಕುತ್ತದೆ. ಹಿರಿಯೂರು ತಾಲೂಕಿನ

ಯರಬಳ್ಳಿ ಗ್ರಾಮದಲ್ಲಿರುವ ಈ ವೀರಗಲ್ಲು ಶಾಸನವು ಕಂಪಿಲನು ಹೊಯ್ಸಳದ ಅಧಿಪತ್ಯದ ಹುಳಿಯಾರಿನ ಮೇಲೆ ಮುತ್ತಿಗೆ ಹಾಕಿದ್ದನ್ನು ಉಲ್ಲೇಖಿಸುತ್ತದೆ.[೫೮] ಈ ಪ್ರದೇಶವನ್ನು ಮೂರನೇ ಬಲ್ಲಾಳನ ಕಾಲದಲ್ಲಿ ಹುಳಿಯಾರು ಎಂದು ಕರೆಯುತ್ತಿದ್ದು ಅಲ್ಲಿ ಮಾರನಗೌಡನು ಅಧಿಪತಿಯಾಗಿದ್ದನು. ಈ ಶಾಸನವು ಶ್ರೀಮತ್ ಕ್ರೋಧನ ಸಂವತ್ಸರದ ಭಾದ್ರಪದ ಶು.೧೦ ಆದಿತ್ಯವಾರದಂದು ಕಂಪಿಲದೇವನು ಹುಳಿಯಾರ ನಿರಿದು ಹೋಹಲ್ಲಿ ಹೊಯ್‌ಸಳ ಶ್ರೀ ವೀರಬಲ್ಲಾಳದೇವರಸರ ಮಹಾಪ್ರಧಾನ ಬೇಬೆದಣಾಯಕಾರು ಹುಯ್ಯಲು ಬಂದು ಮಾಳಲ ಮುಂದೆ ಕಾದಿದಲ್ಲಿ ನಾಗನಾಯ್ಕನ ತಮ್ಮ ಜಕ್ಕನಾಯಕನು ಆ ಕಾಳಗದಲ್ಲಿ ಕಾದಿ ಸಮಯ ಮಾಡಿ ಬಿದ್ದನಾಗಿ ನಾಗನಾಯಕನಿಗೆ ಕೊಟ್ಟ ನೆತ್ತರು ಕೊಡಗಿ ಎಂದು ಮುಂದುವರೆದಿರುವುದು ಈ ಶಾಸನದಲ್ಲಿ ಕೂಡಲಿಯ ಕಲ್ಲುಮಠದ ಶಾಸನದಂತೆಯೇ ಶಕವರ್ಷವನ್ನು ನಮೂದಿಸಿಲ್ಲ. ಆದರೆ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಕ್ರಿ.ಶ. ೧೩೨೫ ಎಂದು ಸೂಚಿಸಿದ್ದು[೫೯] ಬಿ.ಎಲ್.ರೈಸ್‌ರವರು ಕ್ರಿ.ಶ. ೧೨೦೫ ಎಂದೂ ಸೂಚಿಸಿದ್ದಾರೆ. ಇವರಿಬ್ಬರು ಹೇಳಿರುವ ವರ್ಷಗಳೆರಡೂ ಒಂದೇ (ಕ್ರೋಧನ) ಸಂವತ್ಸರಕ್ಕೆ ಸೇರಿದ್ದು, ಕಡಸೂರು ಶಾಸನಕ್ಕೆ ಹತ್ತಿರವಾಗಿದೆ ಎನಿಸುತ್ತದೆ. ಏಕೆಂದರೆ ಈ ಎರಡೂ ಶಾಸನಗಳೂ ಹೊಯ್ಸಳರ ೩ನೇ ವೀರಬಲ್ಲಾಳ ಮಹಾಪ್ರಧಾನ ಬೇಬೆದಣ್ಣಾಯಕ ಎನ್ನುವುದನ್ನು ಖಚಿತಪಡಿಸುತ್ತವೆ.

ಕ್ರಿ.ಶ. ೧೨೪೭ ನೇ ಕ್ರೋದನ ಸಂವತ್ಸರದಲ್ಲಿಯೇ ದಾಳಿ ನಡೆದಿದೆ ಎಂಬುದನ್ನು ಕೆಲವು ವಿಷಯಗಳ ಆಧಾರದ ಮೇಲೆ ದೃಢಪಡಿಸಬಹುದು. ಹರತಿ ಗ್ರಾಮದ ಕೊಡಗಿ ದಾನಶಾಸನವು ವಿಭವ ಸಂವತ್ಸರ ಜೇಷ್ಠ ಶು। ಮಂಗಳವಾರ[೬೦] ಎಂದು ಸೂಚಿಸುತ್ತಾ ಇಲ್ಲಿ ಬೇಬೆದಣ್ಣಾಯಕನು ಒಂದು ಆಜ್ಞೆಯನ್ನು ಕೈಗೊಂಡಿರುವ ವಿಚಾರ ತಿಳಿದುಬರುತ್ತದೆ. ಈ ಶಾಸನದಲ್ಲೂ ಶಕವರ್ಷದ ಕೊರತೆಯಿದ್ದು, ಮತ್ತೊಂದು ಶಾಸನವು ವಿಭವ ಸಂವತ್ಸರವದಲ್ಲಿ ಕಂಡುಬಂದಿದ್ದು, ಶಕವರ್ಷ ೧೨೫೦ ಶ್ರಾವಣ ಬಹುಳ ೧೦ ಸೋಮವಾರದಂದು ಬೆಮ್ಮತ್ತೂರು ಕಲ್ಲಲ್ಲಿ(ಚಿತ್ರದುರ್ಗ) ಬಲ್ಲಪ್ಪ ದಣಾಯಕರೂ, ಸಿಂಗೇಯದಣಾಯಕರೂ ತಮ್ಮ ತಂದೆ ಬೇಬೆದಣಾಯ್ಕರ ಹೆಸರಲ್ಲಿ ಲಿಂಗಪ್ರತಿಷ್ಠೆ ಮಾಡಿರುವುದು ತಿಳಿಯುತ್ತದೆ.[೬೧] ಬೇಬೆದಣಾಯ್ಕರ ಹೆಸರಲ್ಲಿ ಲಿಂಗ ಪ್ರತಿಷ್ಠೆ ಮಾಡಿದ್ದಾರೆ. ಇದರರ್ಥ ಈ ವೇಳೆಗಾಗಲೇ ಬೇಬೆದಣಾಯ್ಕರು ಮಡಿದಿರುವುದು ಖಚಿತವಾಗುತ್ತದೆ. ಹೀಗಾಗಿ ಇವರು ಸತ್ತಿರುವ ಕಾಲ ಶಕ ೧೨೫೦ ಎಂದಾದರೆ ಅದು (ಕ್ರಿ.ಶ. ೧೩೨೮) ಎಂದು ಗುರ್ತಿಸಬಹುದು. ಹೀಗಾಗಿ ಇದರ ಆಧಾರದ ಮೇಲೆ ಯರಬಳ್ಳಿ ಶಾಸನದ ಕಾಲ ಕ್ರೋಧನ ಸಂವತ್ಸರ ಕ್ರಿಶಕ ೧೨೪೭ ಎಂದಾದರೆ ಅದು (ಕ್ರಿ.ಶ. ೧೩೨೫) ಎಂದು ಗುರ್ತಿಸುವ ಮೂಲಕ ಈ ಶಾಸನದ ಕಾಲಕ್ಕೆ ಒಂದು ನ್ಯಾಯವನ್ನು ಒದಗಿಸಬಹುದು. ಇದರಿಂದಾಗಿ ತಿಳಿದುಬರುವ ಸಂಗತಿಯೆಂದರೆ ಹುಳಿಯಾರಿನ ಗೌಡ ಮಾರನಗೌಡನಾಗಿದ್ದು, ಈತನ ಮೇಲೆ ಕಂಪಿಲನು ದಾಳಿ ನಡೆಸಿದಾಗ ಮಾರನಗೌಡನ ನೆರವಿಗೆ ಹೊಯ್ಸಳರು ಬಂದು ೩ನೇ ಬಲ್ಲಾಳನ ಆಜ್ಞೆಯಂತೆ ಮಹಾಪ್ರಧಾನ ಬೇಬೆದಣಾಯ್ಕರು ಮತ್ತು ಅವನ ಮಗ ಸಿಂಗೆದಣಾಯ್ಕರು ಕಂಪಿಲನ ವಿರುದ್ಧ ಕದನ ಮಾಡಿದರು. ಈ ಸಮಯದಲ್ಲಿ ಹೊಯ್ಸಳರ ಪರವಾಗಿದ್ದ ನಾಗೆಯನಾಯಕನ ಕಿರಿಯ ಸೋದರ ಜಕ್ಕಯನಾಯಕನು

ಹಾಗೂ ಅವನ ಜೊತೆಗಿನ ಕೆಲವು ವೀರರು ಮಡಿದಿರುವುದು ತಿಳಿದುಬರುತ್ತದೆ. ಈ ಶಾಸನದಿಂದಾಗಿ ಕಂಪಿಲದೇವನನ್ನು 'ಕಂಬಿಲದೇವ'ನೆಂದು ಕರೆದಿರುವುದು ವಿಶೇಷವೆನಿಸಿದೆ. ಶಾಸನದ ಕಾಲದ ಸಮಸ್ಯೆ ಸ್ವಲ್ಪಮಟ್ಟಿಗೆ ಬಗೆಹರಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಇದರಿಂದಾಗಿ ಕಡಸೂರು ಮತ್ತು ಯರಬಳ್ಳಿ ಶಾಸನಗಳೆರಡೂ ಒಂದೇ (ಕ್ರೋಧನ) ಸಂವತ್ಸರಕ್ಕೆ ಸೇರಿರುವುದಕ್ಕೆ ಪುಷ್ಟಿ ನೀಡುತ್ತದೆ. ಹಾಗೂ ಒಂದು ತಿಂಗಳ ಅಂತರದಲ್ಲಿ ಇವೆರಡೂ ಕದನದ ಘಟನೆಗಳು ನಡೆದಿರುವುದು ಗಮನಕ್ಕೆ ಬರುತ್ತದೆ.

### ದೆಹಲಿ ಸುಲ್ತಾನರ ದಾಳಿಗಳು

#### ದೆಹಲಿ ಸುಲ್ತಾನನ ದಾಳಿ

ದೆಹಲಿ ಸುಲ್ತಾನರ ದಾಳಿ ಕಂಪಿಲನ ಮೇಲಿನ ಮುತ್ತಿಗೆಯನ್ನು ವಿವರಿಸುವ ಈ ಶಾಸನವು ಅತ್ಯಂತ ಚಿಕ್ಕದಾಗಿದ್ದು, ಶಕವರ್ಷವನ್ನು ನಮೂದಿಸಿಲ್ಲ. ಈ ಶಾಸನದ ವಕ್ಕಣಿಕೆಯು

"ಶ್ರೀ ಮತು ನಾಯಕಚಾರ್ಯ್ಯ (ಲ)ದೇವನು ಸುರತಾಣನ

ದಳವ - ಲ ತುಳು ಕಾತ್ರುನಾಯ್ಕನ - ದೆಸಿಂಗನು ಹೊಯ್ದು

ರಣದಲಿ ಬಿದ್ದನು" ಎಂದು ಉಲ್ಲೇಖಿಸಿದೆ. ಇದು ಕುಮ್ಮಟದುರ್ಗದಲ್ಲಿ ದೊರೆತ ಈ ಎರಡನೇ ವೀರಗಲ್ಲು ಮೂರು ಪಟ್ಟಿಕೆಗಳಲ್ಲಿದ್ದು ಸುಲ್ತಾನನು ಕಂಪಿಲನ ಮೇಲೆ ನಡೆಸಿದ ದಾಳಿಯನ್ನೇ ಬಿತ್ತರಿಸುತ್ತದೆ.[೨] ಇಲ್ಲಿ ಕಂಪಿಲನನ್ನು 'ನಾಯಕಾಚಾರ್ಯ್ಯ'ನೆಂದು ಕರೆದಿರುವುದು ಗಮನಕ್ಕೆ ಬರುತ್ತದೆ. ಇಲ್ಲಿ ಬೇರೆ ಯಾವ ವಿಚಾರಗಳು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಆದರೆ ಸಿಂಗೆಯನೆಂಬ ವ್ಯಕ್ತಿಯು ಈ ಯುದ್ಧದಲ್ಲಿ ಸಾಯುತ್ತಾನೆ ಎಂಬ ವಿಚಾರ ಸ್ಪಷ್ಟವಾಗಿ ಕಂಡುಬಂದಿದೆ. ಈ ಶಾಸನವು ಕಂಪಿಲನನ್ನು 'ನಾಯಕ' ಎಂದು ನಮೂದಿಸಿರುವುದು ಮುಂದಿನ ಅಧ್ಯಯನಗಳಿಗೆ ಎಡೆಮಾಡಿಕೊಟ್ಟಿದೆ. ದೆಹಲಿ ಸುಲ್ತಾನರು ನಡೆಸಿರುವ ದಾಳಿಯಿಂದ ಕಂಪಿಲನ ಪಡೆಯು ತತ್ತರಿಸಿದ್ದು, ಆದರೆ ಪ್ರಾಣ ಕಳೆದುಕೊಂಡಿರುವ ವಿಚಾರವು ನಂಬಲು ಅನರ್ಹವಾಗಿದೆ.

#### ದೆಹಲಿ ಸುಲ್ತಾನರ ಮತ್ತೊಂದು ದಾಳಿ

ದೆಹಲಿ ಸುಲ್ತಾನ ಮತ್ತು ಕಂಪಿಲನ ಸೇನೆಯೊಂದಿಗೆ ಯುದ್ಧ ನಡೆದಿರಬಹುದು. ಈ ಯುದ್ಧವನ್ನು ತಿಳಿಸಿರುವ ಶಾಸನವು ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರ ತಾಲ್ಲೂಕು ಕಛೇರಿಯ ಹಿಂಭಾಗದಲ್ಲಿರುವ ಈ ವೀರಗಲ್ಲು, ಕಂಪಿಲರಾಯ ಮತ್ತು ಸಿಡಿಲಬೊಮ್ಮರ ಮರಣಕ್ಕಾಗಿ ಪುರುಜನರು ಮರುಗಿದರೆಂದು ಹೇಳುತ್ತದೆ.[೩] ಈ ಶಾಸನದಲ್ಲಿ ವಿವರಗಳು ಅಷ್ಟೊಂದು ಸ್ಪಷ್ಟವಾಗಿಲ್ಲ. ಅಪೂರ್ಣವಾದ ಶಾಸನವಾಗಿದ್ದು, ಇದರ ಪ್ರಕಾರ ಕ್ರಿ.ಶ. ೧೨ ನೇ ಶತಮಾನಕ್ಕೆ ಸೇರಿದ್ದಿರಬಹುದು ಎಂದು ಅಂದಾಜು ಮಾಡಬಹುದು. ಆದರೆ ಲಿಪಿಯ ಲಕ್ಷಣಕ್ಕನುಗುಣವಾಗಿ ಇದು ಸುಮಾರು ೧೪ನೆಯ ಶತಮಾನಕ್ಕೆ ಸೇರಿದುದಾಗಿ ತಿಳಿದುಬರುವುದರಿಂದ ಕ್ರಿ.ಶ. ೧೩೨೭ರಲ್ಲಿ ನಡೆದ ಕಂಪಿಲನ ಕಡೆಯ

ಕದನವನ್ನು ಕುರಿತದ್ದಾಗಿರಬೇಕೆಂದು ಶ್ರೀ ಆರ್.ಎಸ್. ಪಂಚಮುಖಿಯವರು ಅಭಿಪ್ರಾಯ ಪಡುತ್ತಾರೆ.[೬೪] ಮೇಲಿನ ಎಲ್ಲಾ ವಿಷಯಗಳ ಆಧಾರದ ಮೇಲೆ ಕಂಪಿಲ ಮತ್ತು ದೆಹಲಿ ಸುಲ್ತಾನರ ನಡುವೆ ಕದನ ನಡೆದಿರುವುದು ಸ್ಪಷ್ಟವೆನಿಸುತ್ತದೆ. ಕಾರಣ ದಿಲ್ಲಿಯ ಹೆಸರನ್ನು ಸಹ ನಮೂದಿಸಲಾಗಿದೆ. ಹೀಗಾಗಿ ದೆಹಲಿ ಸುಲ್ತಾನರ ದಾಳಿಯೂ ತುಂಬಾ ಬೃಹತ್ತಾಗಿಯೇ ನಡೆದಿದ್ದಿರಬಹುದು. ಇದರಿಂದಾಗಿ ಕಂಪಿಲರಾಯ ಮತ್ತು ಸಿಡಿಲಬೊಮ್ಮರು ಬಲವಾಗಿ ಹೋರಾಡಿ ಪ್ರಾಣ ಕಳೆದುಕೊಂಡಿರುವುದರಿಂದಲೇ ಅಲ್ಲಿನ ಪುರ ಜನರು ಮರುಕಗೊಂಡಿರಬಹುದು ಎಂಬ ಸಂಗತಿಯು ಬೆಳಕಿಗೆ ಬರುತ್ತದೆ.

**ಸೇವುಣರ ಸಾಮಂತನಾಗಿ ಕಂಪಿಲರಾಯ:**

ಕಂಪಿಲರಾಯನು ಸೇವುಣರ ಸಾಮಂತ ಅರಸನಾಗಿದ್ದ ಎನ್ನುವುದಕ್ಕೆ ಖಚಿತವಾದ ಮಾಹಿತಿ ಸಿಗುವ ಶಾಸನವೊಂದಿದೆ. ಇದು ದಾವಣಗೆರೆಯ ಹರಿಹರ ತಾಲ್ಲೂಕಿನಲ್ಲಿ ಕಂಡುಬಂದಿದೆ. ಕ್ರಿ.ಶ. ೧೩೦೦ ರ ಹರಿಹರ ಶಾಸನವು ಕಂಪಿಲರಾಯನನ್ನು ಮೊಟ್ಟ ಮೊದಲಬಾರಿಗೆ ಖಂಡೆಯರಾಯನೆಂದು ಉಲ್ಲೇಖಿಸುತ್ತದೆ.[೬೫] ಶ್ರೀ ವೀರರಾಮಚಂದ್ರ ವಿಜಯ ರಾಜ್ಯೋದಯದ ೩೨ ಸಾರ್ವರಿ ಸಂವತ್ಸರದ ಶ್ರಾವಣ ಸು ೯ ಸೋಮವಾರದಂದುಲು ಪೂರ್ವ್ವದಲೆ ಬ್ರಹ್ಮದತ್ತಿಯ ಹರಿಹರಕನುಯನಂತ್ತರ ಕ್ರಿಷ್ಣಕಂದಾರನು ಜೀರ್ನೋರ್ಧರವ ಮಾಡಿದವಂಯಾ ಹರಿಹರವನು ಮುಮ್ಮಡಿ ಸಿಂಗೆಯನಾಯ್ಕನ ಮಗ ಖಂಡೆಯರಾಯರು ಪುನರ್ಧ್ಧಾರೆಯನು ಎಂದು ಉಲ್ಲೇಖವಾಗಿದೆ. ಕಂಪಿಲನು ದತ್ತಿಯನ್ನು ನವೀಕರಿಸುವ ವಿಚಾರವು ಸ್ಪಷ್ಟವಾಗಿ ಕಾಣುತ್ತದೆ, ಸೇವುಣ ದೊರೆಯಾದ ರಾಮಚಂದ್ರನು ತನ್ನ ೩೨ನೇ ವರ್ಷದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಕಂಪಿಲರಾಯನು ಸಾಮಂತ ಅರಸನಾಗಿದ್ದ, ಇದಕ್ಕೂ ಪೂರ್ವದಲ್ಲಿ ದೊರೆಯಾದ ಕೃಷ್ಣ ಕಂದರನು ಹರಿಹರ ದತ್ತಿಯನ್ನು ದಾನವಾಗಿ ನೀಡಿದ್ದನಂತೆ. ನಂತರ ಇದನ್ನು ನವೀಕರಿಸಿದ. ಈ ಸಂಗತಿಯು ಕಂಪಿಲನು ಸೇವುಣರ ಸಾಮಂತ ದೊರೆಯಾಗಿದ್ದ ಎನ್ನುವುದನ್ನು ಖಚಿತಪಡಿಸುತ್ತದೆ. ಚಿತ್ರದುರ್ಗ, ದಾವಣಗೆರೆ, ಜಿಲ್ಲೆಯ ಕೆಲವು ಭಾಗಗಳು ಕ್ರಿ.ಶ. ೧೩೦೦ರ ವೇಳೆಗಾಗಲೇ ಕಂಪಿಲನ ವಶದಲ್ಲಿದ್ದವೆಂಬುದು ಆಧಾರ ಸಮೇತ ಸ್ಪಷ್ಟವಾಗುತ್ತದೆ. ಈ ಶಾಸನದ ಆಧಾರದ ಮೇಲೆಯೇ ಕಂಪಿಲನಿಗೆ ಮತ್ತೊಂದು ಹೆಸರಾದ ಖಂಡೆಯರಾಯ ಎಂಬ ಹೆಸರನ್ನು ಸೂಚಿಸುತ್ತದೆ. ಇದರ ಬಗೆಗೆ ವಿದ್ವಾಂಸರಲ್ಲಿ ಹಲವು ಭಿನ್ನಾಭಿಪ್ರಾಯಗಳಿದ್ದವು. ಆದರೆ ಪ್ರಾಕೃತ ಶಾಸನಗಳಿಂದ ಈ ಸಮಸ್ಯೆ ಸದ್ಯದ ಮಟ್ಟಿಗೆ ಬಗೆಹರಿದಿದೆ.

**ದೆಹಲಿ ಸೇನೆಯ ನೇಮಿ ನೇತೃತ್ವದಲ್ಲಿ ದಾಳಿ**

ಈ ದಾಳಿಯ ಪ್ರಸ್ತಾಪವು ಕುಮ್ಮಟದುರ್ಗದ ವೀರಗಲ್ಲು ಶಾಸನದಲ್ಲಿದೆ ಈ ಶಾಸನವನ್ನು ಬೆಳಕಿಗೆ ತಂದು ಗುರುತಿಸಿದವರು ಡಾ.ಜಿ.ವರದರಾಜರಾವ್, ಸೀತಾರಾಮ ಜಾಗೀರ್‌ದಾರ್ ಹಾಗೂ ಬಿ.ಆರ್.ತುಬಾಕಿಯವರು.[೬೬] ಈ ಶಾಸನವು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕು ಕುಮ್ಮಟದುರ್ಗದಲ್ಲಿ ರಾಮಸ್ವಾಮಿ ಬೆಟ್ಟದ ದಕ್ಷಿಣ ಕಣಿವೆಯಲ್ಲಿರುವ ವೀರಗಲ್ಲು ಶಾಸನ ದೆಹಲಿ ಸುಲ್ತಾನರ ಸೇನೆಯ

ನೇಮಿ ಎಂಬ ಸೇನಾದಂಡನಾಯಕನ ನೇತೃತ್ವದಲ್ಲಿ ದಾಳಿ ಮಾಡಿದಾಗ ರಾಮನಾಯ್ಕ ಎಂಬುವನು ಮಡಿದನು ಎಂಬ ಸಂಗತಿಯನ್ನು ಹೊರಹಾಕುತ್ತದೆ. ಈ ಶಾಸನ ಪಠ್ಯವು

೧ ಸ್ವಸ್ತಿ ಶ್ರೀ ಯಾದವನಾರಾಯಣ ಭುಜಬಳ ಮ

೨ ..ಳ ಪ್ರತಾಪ ಚಕ್ರವರ್ತಿ ಶ್ರೀಮನು ಮಹಾಣಾಯಕಾಚಾ

೩ ರ್ಯ್ಯ ಶ್ರೀ ವೀರ ಕಂಪಿಲದೇವನು ಕುಮ್ಮಟದಲಿ ರಾಜ್ಯಂಗೆಯು

೪...೧೨೨೮ ನೇ ರಾಕ್ಷಾಸ ಸಧ್ವವಂಚರದ ಜೇಷ್ಟ ಶು...

೫... ಸುರತಾಣ.. ನೇಮಿ ಸಹಿತ ಬಂದಲ್ಲಿ ತುಳುವಯೆ

೬.. ಗದೆ ಗಂಗನಾಯ್ಕರ ತಂಮ ರಾಮನಾಯ್ಕನು

೭ ಯ್ಡಾಡಿ ಬಿದ್ದನು ಹತನ ಅಕ್ಕ ಅಳಿಯಂದಿರು ಯಿಕ್ಕಿಸಿದ ವೀರಗ______

೮ ಲ್ಲು ಬರದಾತ ಮೈದುನ ಮಾಥೆಯ ಹೆಗ್ಗಡೆ ಮಂಗಳ ಮಹಾ ಶ್ರೀ ಶ್ರೀ-[೬]

ಪ್ರಸ್ತುತ ಶಾಸನವನ್ನು ಜಾಗೀರದಾರರು ಮತ್ತು ಜಿ.ವರದರಾಜರಾವ್ ಅವರು ಮಹಾಮಂ(ಡಲಿಕ) ಹೊಯ್ಸಳ(ಣ) ಎಂದು ಓದಿರುವುದನ್ನು ಸಿ.ಎಸ್.ಪಾಟೀಲರು ಒಪ್ಪುವುದಿಲ್ಲ. ಅವರು 'ನಾಯಕಾಚಾರ್ಯ್ಯ' ಎಂದು ಓದುವುದನ್ನು ಸಮರ್ಥಿಸುತ್ತಾರೆ. ಜಾಗೀರ್‌ದಾರರು ಮತ್ತು ವರದರಾಜರಾವ್ ಅವರು ಕಂಪಿಲದೇವನು ಹೊಯ್ಸಳ ವಂಶದ ಶಾಖೆಗೆ ಸೇರಿದವನೆಂದು ಗುರುತಿಸಿದರೆ, ಪಾಟೀಲರು ಮಾತ್ರ ಅದನ್ನು ಒಪ್ಪುವುದಿಲ್ಲ. ಕಾರಣ ಕುಮ್ಮಟದುರ್ಗದಲ್ಲಿ ದೊರೆತ ಮತ್ತೊಂದು ಶಾಸನವು ಪಾಟೀಲರ ಓದನ್ನು ಸಮರ್ಥಿಸುತ್ತದೆ. ಈ ಶಾಸನವನ್ನು ಬರೆದಿರುವಾತ ಎತ್ತಿನಹಟ್ಟಿ ಗ್ರಾಮದ ಹೆಗ್ಗಡೆ ಎಂಬ ವ್ಯಕ್ತಿ ಎಂಬುದು ಸ್ಪಷ್ಟವಿದೆ.

ಈ ಶಾಸನವು ಮಹತ್ವದ ವಿಚಾರಗಳನ್ನು ಹೊರಹಾಕಿದ್ದು, ದೆಹಲಿ ಸುಲ್ತಾನರು ಮತ್ತು ಕಂಪಿಲನ ಸಂಬಂಧಗಳು ಹೇಗಿದ್ದವೆಂಬುದನ್ನು ತಿಳಿಸುತ್ತದೆ. ದೆಹಲಿ ಸುಲ್ತಾನರ ದಂಡಿನಿಂದ ಕುತಬಿಸುರತಣ ಖಾನರು ಮತ್ತು ನೇಮಿಯು ಕಂಪಿಲನ ಮೇಲೆ ದಂಡೆತ್ತಿ ಬರುತ್ತಾರೆ ಎಂದು ಹೇಳಿದೆ. ಆದರೆ ಈ ಪದಗಳ ಅರ್ಥಗಳನ್ನು ಹುಡುಕಿದಾಗ ಅವು ಮುಸ್ಲಿಂರ ಪದಸೂಚಕಗಳೇ ಆಗಿರುವುದರಿಂದ ಖಾನ್ ಎಂದರೆ ದಂಡನಾಯಕ ಕುತಬಿಸುರತಣ ಎಂದರೆ ಬಹುಶಃ ಆ ಕಾಲದಲ್ಲಿ ಆಳ್ವಿಕೆ ನಡೆಸುತ್ತಿದ್ದ ದೆಹಲಿ ಸುಲ್ತಾನನಾದ ಖಿಲ್ಜಿಯ ಮಗನಾದ ಕುತುಬುದ್ದೀನ್ ಮುಬಾರಕ್ ಷಾ ಎಂಬುದು ಅಂದಾಜು ಮಾಡಬಹುದು. ನೇಮಿ ಬಗ್ಗೆ ಖಚಿತ ಮಾಹಿತಿಯನ್ನು ತಿಳಿಸುವುದು ಕಷ್ಟಕರ ಸಂಗತಿ. ಆದರೂ ಸುಲ್ತಾನನ ಸೇನಾಪತಿಯನ್ನು ನೇಮಿ ಎಂದು ಕರೆಯಲಾಗಿದೆ ಎಂಬುದು ಹಿಂದಿನ ಅಧ್ಯಯನಗಳ ಅಭಿಪ್ರಾಯವಾಗಿದೆ. ಹೀಗಾಗಿ ಈ ನೆಲೆಯಲ್ಲಿ ಇದೊಂದು ಮಹತ್ವದ ಶಾಸನವಾಗಿದ್ದು, ಹಲವು ಮುಖಗಳನ್ನು ಪರಿಚಯಿಸಿದೆ.

**ಕಂಪಿಲರಾಯನ ಸ್ಮರಣಾರ್ಥ ಶಾಸನ:**

ಈ ಶಾಸನವು ಕಂಪಿಲ ದೇಶದ ಒಡೆಯನಾದ ಕುಮಾರ ಕಂಪಲಿ ಭೂಪಾಲನೆಂದು ಹೇಳಲಾಗಿದೆ.[೬೮] ಅಂದರೆ ಕಂಪಲಿರಾಯ ಎಂಬ ರಾಜನಿದ್ದ. ಕಂಪಿಲ ಪ್ರದೇಶಕ್ಕೆ ಒಡೆಯನಾಗಿದ್ದ ಎಂಬುದನ್ನು ಖಚಿತಪಡಿಸುವ ಈ ಶಾಸನವು ಕ್ರಿ.ಶ. ೧೩೮೨ ರಲ್ಲಿ ಆನೆಗೊಂದಿಗೆ ದಕ್ಷಿಣ ಭಾಗದಲ್ಲಿ ಕಾಣುವ ತುಂಗಭದ್ರಾ ನದಿ ದಂಡೆಯ ಮೇಲೆ ಕಂಡುಬಂದಿದ್ದು ಕಂಪಿಲರಾಯನನ್ನು ಸ್ಮರಿಸುವ ಶಾಸನವಾಗಿದೆ.

ಮೇಲಿನ ಎಲ್ಲಾ ಶಾಸನಗಳ ವಿಶ್ಲೇಷಣೆಗಳ ಆಧಾರದ ಮೇಲೆ ಕಂಪಿಲರಾಯನು ಹೊಯ್ಸಳರ ಬಂಧುವೆಂದು ತಿಳಿದರೂ ಕಂಪಿಲನಿಗೆ ಹೆಚ್ಚು ಕದನಗಳ ಶತ್ರುಗಳು ಹೊಯ್ಸಳರೇ ಆಗಿದ್ದರೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ದೆಹಲಿ ಸುಲ್ತಾನರು ಕಂಪಿಲರಾಯನ ಕಾಲಾವಧಿಯಲ್ಲಿ ಸುಮಾರು ೩ ಬಾರಿ ದಾಳಿ ಮಾಡಿರಬಹುದೆಂದು ಅಂದಾಜಿಸಬಹುದು. ಕಂಪಿಲರಾಯನು ಕೊನೆಗೆ ಲಕ್ಷ್ಮೇಶ್ವರ ಶಾಸನದ ಮೂಲಕ ಕ್ರಿ.ಶ. ೧೩೨೭ರ ಯುದ್ಧವು ನಿರ್ಣಾಯಕ ಯುದ್ಧವಾಗಿದ್ದು, ಇದರಲ್ಲಿ ಮಡಿಯುತ್ತಾನೆ.

**೩.೩. ಕುಮಾರರಾಮ (ಕ್ರಿ.ಶ. ೧೩೦೦-೧೩೨೭)**

ಕರ್ನಾಟಕದಲ್ಲಿ ಅತಿ ಹೆಚ್ಚು ಲಾವಣಿಗಳು ಪರಿಚಯ ಮಾಡಿಕೊಡುವ ಜನಪದೀಯರ ವೀರ ಗಂಡುಗಲಿ ಕುಮಾರರಾಮ. ತನ್ನ ವೀರತನ ಶೌರ್ಯ ಗುಣಗಳಿಂದ ಆದರ್ಶ ವ್ಯಕ್ತಿತ್ವವನ್ನು ಗುರುತಿಸಿಕೊಂಡಿರುವವನು. ಕುಮಾರರಾಮನಾಥ ಕಂಪಿಲರಾಯ ಮತ್ತು ಹರಿಯಾಲದೇವಿಯ ಮಗನಾಗಿ ಜಟ್ಟಂಗಿ ರಾಮೇಶ್ವರನ ವರಪ್ರಸಾದದಿಂದ ಜನಿಸಿದನು. ಕರ್ನಾಟಕದ ಬೇರೆ ಯಾವ ರಾಜನಿಗೂ ಈ ಸ್ಥಾನಮಾನವನ್ನು ಪಡೆಯಲಾಗಿಲ್ಲ ಎಂಬುದು ವಿಶೇಷವೆನಿಸಿದೆ. ಕುಮಾರರಾಮನಾಥನು ಶುಚಿತ್ವಕ್ಕೆ, ಪರನಾರಿ ಸೋದರತೆಗೆ ಪ್ರತಿಬಿಂಬವಾಗಿರುವುದಕ್ಕೆ ಕರ್ನಾಟಕವಲ್ಲದೆ ಆಂಧ್ರ, ತುಳು, ಗೋವಾ, ಮಹಾರಾಷ್ಟ್ರಗಳಲ್ಲೂ ಈತನ ಬಗ್ಗೆ ಉಲ್ಲೇಖಗಳಿವೆ. ಇವನನ್ನು ಮೊದಲ ಬಾರಿಗೆ ರಾಮನಾಥ ಚರಿತೆಯನ್ನು ರಚಿಸುವ ಮೂಲಕ ನಂಜುಂಡ ಕವಿಯು ಪರಿಚಯಿಸಿದನು. ಇದು ಈತನ ಬಗ್ಗೆ ತಿಳಿಸುವ ಮೊದಲ ಸಾಂಗತ್ಯ ಕೃತಿಯಾಗಿದೆ. ಆದರೆ ಎಂ.ಎಂ.ಕಲಬುರ್ಗಿ ಅವರು ಪಾಂಚಾಳಗಂಗನ ಹಳೆ ಕುಮಾರರಾಮನ ಸಾಂಗತ್ಯವೇ ಮೊದಲಿನದು ಎಂದು ಅಭಿಪ್ರಾಯ ಪಡುತ್ತಾರೆ.[೬೯] ಹಾಗೆಯೇ ಈತನನ್ನು ಕುರಿತಂತೆ ಹಲವು ಸಾಂಗತ್ಯ ಕೃತಿಗಳು ರಚನೆಯಾಗಿವೆ. ಬಾಲರಾಮನ ಸಾಂಗತ್ಯ,[೭೦] ಕೊಮಾರರಾಮಯ್ಯನ ಚರಿತ್ರೆ, ಹೊಸ ಕುಮಾರರಾಮನ ಸಾಂಗತ್ಯ, ಹಳೆಯ ಕುಮಾರರಾಮನ ಸಾಂಗತ್ಯ ಪ್ರಮುಖವಾಗಿವೆ. ಎಂ.ಎಂ.ಕಲಬುರ್ಗಿಯವರು ಇವುಗಳ ಸಂಪಾದಕರಾಗಿದ್ದಾರೆ.

ಕುಮಾರರಾಮನ ಅಂತ್ಯಕಾಲಕ್ಕೆ ಸಂಬಂಧಿಸಿದಂತೆ ಬಸವಣ್ಣಯ್ಯ ನವರತ್ನ ಮಾಲಿಕೆ ಓಲೆ ಕೃತಿಯ ಹದಿಮೂರನೆಯ ಸಂಧಿಯ ೨೦ ರಿಂದ ೬೧ ರವರೆಗಿನ ಪದ್ಯಗಳು ಬೆಳಕು ಚೆಲ್ಲುತ್ತವೆ.[೭೧]

ಕುಮಾರರಾಮನು ತನ್ನ ತಂದೆಯಾದ ಕಂಪಿಲರಾಯನೊಡನೆ ಯುದ್ಧದಲ್ಲಿ ಭಾಗವಹಿಸುತ್ತಿದ್ದರೂ ಈತನ ಕುರಿತು ಶಾಸನಗಳು ಮರಣೋತ್ತರದಲ್ಲಿ ದೊರೆಯುತ್ತವೆ. ಹೀಗಾಗಿ ಕರ್ನಾಟಕದ ಜನತೆ ಈತನ ಆದರ್ಶ, ಶೌರ್ಯ, ಪರಾಕ್ರಮಗಳಿಗೆ ಬೆರಗಾಗಿ ಕರ್ನಾಟಕದ ಹಲವು ಭಾಗಗಳಲ್ಲಿ ಈತನನ್ನು ದೈವವನ್ನಾಗಿ ಆರಾಧಿಸುತ್ತ ದೇವಾಲಯಗಳನ್ನು ನಿರ್ಮಿಸಿ ಪೂಜೆ ಕೈಂಕರ್ಯಗಳನ್ನು ಕೈಗೊಳ್ಳುತ್ತಿದ್ದಾರೆ. ಈಗಲೂ ಕುಮ್ಮಟದುರ್ಗ ಸುತ್ತಮುತ್ತಲಿನ ಹಲವು ಪ್ರದೇಶಗಳಲ್ಲಿ ಈತನ ಕುರಿತು ಜಾತ್ರಾ ಮಹೋತ್ಸವಗಳು ನಡೆಯುತ್ತಿರುವುದು ವಿಶೇಷವೆನಿಸಿವೆ.

**ಕುಮಾರರಾಮನ ಹೆಸರಿನ ಮೂಲ**

ಕುಮಾರರಾಮನಿಗೆ ರಾಮನಾಥ, ಚೆನ್ನಿಗರಾಮ, ರಾಮುಗ ಎಂಬ ಹಲವು ನಾಮಧೇಯಗಳಿದ್ದು, ಈತನ ನಿಜವಾದ ನಾಮಧೇಯವೇನು ಎಂಬ ಗೊಂದಲವಿದೆ. ರಾಮ ಇವನ ಮೂಲ ಹೆಸರು ಎಂಬುದು ಎಂ.ಎಂ.ಕಲಬುರ್ಗಿಯವರ ಅಭಿಪ್ರಾಯವಾಗಿದೆ. ಹಲವು ಶಾಸನಗಳಲ್ಲಿ ರಾಮನಾಥ ಎಂದೇ ಕರೆದಿರುವುದು ಪೂರಕವೆನಿಸುತ್ತದೆ. ರಾಮಘಡ, ಸಂಗೂರು ಶಾಸನ, ತೀರ್ಥಹಳ್ಳಿ ಶಾಸನಗಳು ಸಹ ಇದೇ ಹೆಸರನ್ನು ಸೂಚಿಸುತ್ತವೆ. ಈತನ ಮೂಲ ಹೆಸರು ರಾಮನಾಥ ಎಂದೇ ಇರಬೇಕು. ರಾಮನಾಥನೆಂದು ಹೆಸರು ಬರಲು ಕಾರಣಗಳು ಎರಡು, ಒಂದು ಈತ ಜಟ್ಟಂಗಿ ರಾಮೇಶ್ವರನ ವರಪ್ರಸಾದದಿಂದ ಜನಿಸಿದ್ದು, ಎರಡು ಬಂಧುಗಳಾದ ಹೊಯ್ಸಳ ಸೋಮೇಶ್ವರನ ಎರಡನೆಯ ಮಗನಾದ ರಾಮನಾಥನ ಹೆಸರನ್ನೇ ಈತನಿಗೆ ಇಟ್ಟಿರಬಹುದೆಂಬುದು ಸುರೇಶ್ ಹರ್ಲಾಪುರ್ ಅವರ ಹೇಳಿಕೆಯಾಗಿದೆ. ಆದರೆ ಇಲ್ಲಿ ಮೊದಲ ಕಾರಣ ಗಟ್ಟಿಗೊಳ್ಳುತ್ತದೆ. ಎರಡನೆ ಕಾರಣವು ಹೊಯ್ಸಳರಿಗೆ ಬಂಧುವಾಗಿರಬಹುದು ಎಂಬ ಅಭಿಪ್ರಾಯವನ್ನು ಒಪ್ಪಿಕೊಳ್ಳುವುದು ಕಷ್ಟವೆನಿಸುತ್ತದೆ. ಬಂಧುವು ಎಂದ ತಕ್ಷಣವೇ ಅವರ ಹೆಸರಿಡಲು ಸಾಧ್ಯವಿಲ್ಲ. ಏಕೆಂದರೆ ಸಾಮಾನ್ಯವಾಗಿ ಕುಲದೈವ/ಮನೆದೈವವನ್ನು ಹೆಸರಿಡುವುದು ರೂಢಿಯಲ್ಲಿರುತ್ತದೆ. ಕಂಪಿಲರಾಯನ ಮಗ ಕುಮಾರರಾಮನಾಥ ಎಂಬುದು ಎಷ್ಟು ಸತ್ಯವೊ ಕುಮಾರರಾಮ 'ಬೇಡ' ಎನ್ನುವುದು ನಂಬಲು ಅರ್ಹವಾಗಿದೆ

ಕುಮಾರರಾಮನಾಥನು ವೀರತನ, ಶೌರ್ಯತನ ಒಂದಕ್ಕೇ ಹೆಸರಾಗಿರಲಿಲ್ಲ ಅಥವಾ ಅದೊಂದೇ ಅವನ ಮೌಲ್ಯವಾಗಿರಲಿಲ್ಲ. ಶೌಚಗುಣವನ್ನು ಆತ ಹುಟ್ಟಿನಿಂದಲೇ ಪಡೆದಿದ್ದನು. ಶಿವನ ಮಗನಾದ ಷಣ್ಮುಗನೂ ಬ್ರಹ್ಮಚಾರಿಯೇ ಆಗಿದ್ದ. ಅವನ ಹೆಸರೂ ಕುಮಾರ. ಈತನೂ ಸಹ ಶೌರ್ಯ ಶುಚಿತ್ವಗಳಿಗೆ ಹೆಸರಾಗಿದ್ದಾನೆ. ಹೀಗಾಗಿ ಪರನಾರಿ ಸೋದರನಾದ ರಾಮನಾಥನಿಗೆ ಈ ಹಿನ್ನೆಲೆಯಿಂದಲೂ ಕುಮಾರರಾಮನಾಥ ಎಂದು ಹೆಸರಿಟ್ಟಿರಬಹುದು. ಇಂತಹ ವ್ಯಕ್ತಿತ್ವವನ್ನು ಹೊಂದಿದ್ದ ಕುಮಾರರಾಮನ ಒಂದು ಪರಂಪರೆಯೇ ಬೆಳೆದಿದೆಯೆಂದರೆ ಅದು ಅಸಾಧ್ಯವೆನಿಸಿದರೂ ನಂಬಬೇಕಾಗಿದೆ. ಕುಮಾರರಾಮನ ಸಾಂಗತ್ಯಗಳನ್ನು ಓದಿ ಕೇಳಿದ ಇಮ್ಮಡಿ ಚಿಕ್ಕ ಭೂಪಾಲನ ಮಗ ತೋಟೇಂದ್ರನು ತಾನೂ ಶುಚಿ ವೀರನಾಗಿ ಬಾಳುತ್ತೇನೆಂದು ಶಪಥ ಮಾಡಿ ಕುಮಾರ ತೋಟೇಂದ್ರನೆಂದು ಕರೆಸಿಕೊಳ್ಳುತ್ತಾನೆ. ಹಾಗೆಯೇ ಮತ್ತೊಬ್ಬ ವ್ಯಕ್ತಿಯಾದ ಸಿರುಮನ ಮಗ

ಮಲ್ಲಯ್ಯನು ಸಹ ಇದೇ ಶಪಥ ಮಾಡಿ ಕುಮಾರಮಲ್ಲನೆನಿಸಿಕೊಂಡ ಆದರ್ಶಗಳು ನಮ್ಮ ಕಣ್ಮುಂದೆ ಇವೆ. ಹೀಗಾಗಿ ಕರ್ನಾಟಕದ ಇತಿಹಾಸದಲ್ಲಿಯೇ 'ಕರ್ನಾಟಕದ ಪ್ರಥಮ ಸ್ವಾತಂತ್ರ್ಯ ವೀರ'[೭೨] ಎಂದು ಪಿ.ಬಿ.ದೇಸಾಯಿ ಅವರು ಕರೆದಿದ್ದಾರೆ. ಹಂಪಿಯಲ್ಲಿ ಕುಮಾರರಾಮನ ಹೆಸರಿನ ರಂಗಮಂದಿರವೂ ಇದೆ.

**ರಾಜಕೀಯ ಇತಿಹಾಸ**

ಕುಮಾರರಾಮನ ರಾಜಕೀಯ ಇತಿಹಾಸವನ್ನು ಕುರಿತಂತೆ ಹೇಳುವಷ್ಟು ಮಹತ್ವದ ದಾಖಲೆಗಳಾಗಲೀ ಮಾಹಿತಿಗಳಾಗಲಿ ಇಲ್ಲ. ಇದ್ದರೂ ಅವು ಕೆಲವೇ ಕೆಲವು ನಿರ್ಣಾಯಕ ಯುದ್ಧಗಳನ್ನು ಕುರಿತಂತೆ ಹೇಳಬಹುದು. ಕೆಲವು ಸಾಹಿತ್ಯಗಳು, ಶಾಸನಗಳು, ಕಾವ್ಯ, ಕಥೆ, ಕಾದಂಬರಿಗಳು, ಯಕ್ಷಗಾನ, ನಾಟಕಗಳು, ಲಾವಣಿಗಳು, ಜನಪದ ಗೀತೆಗಳು, ಕೈಫಿಯತ್ತುಗಳು, ತೆಲುಗು ಸಾಹಿತ್ಯ ಪ್ರದರ್ಶನಗಳು, ಹೀಗೆ ಸಾಕಷ್ಟು ಸಾಹಿತ್ಯ ಪ್ರಕಾರಗಳು ಕುಮಾರರಾಮನ ಜೀವನ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿವೆ. ನ್ಯೂನಿಜನು ಯುದ್ಧದಲ್ಲಿ ಸತ್ತ ರಾಜನನ್ನು (ಕಂಪಿಲ) ಜನಗಳು ಇಂದಿಗೂ ದೇವರೆಂದು ಪೂಜಿಸುತ್ತಾರೆಂದು ಹೇಳುತ್ತಾನೆ.[೭೩] ನ್ಯೂನಿಜನ ಈ ಮಾತು ಕುಮಾರರಾಮನಿಗೆ ಹೇಳಿ ಬರೆಸಿದಂತಿದೆ. ಕುಮಾರರಾಮನ ದರ್ಪವನ್ನು ಅಡಗಿಸಬೇಕೆಂದೆ ಜಗತಾಪಿರಾಯ ಪ್ರತಾಪರುದ್ರ ಇನೇ ಬಲ್ಲಾಳದೇವ ಇವರೆಲ್ಲರೂ ದಾಳಿ ಮಾಡಿ ಸೋತುಳಿದರು. ಕುಮಾರರಾಮನ ವಿಜಯನಗರದ ದೇವರಾಯನ ಕಾಲದವನು[೭೪] ಎಂಬ ಮಾಹಿತಿಯೂ ಇದೆ. ಕುಮಾರರಾಮನ ಶೌರ್ಯ ಪರಾಕ್ರಮವನ್ನು ಮೆಟ್ಟಿ ನಿಂತ ಯಾವ ಅರಸನು ಈ ಕಾಲಾವಧಿಯಲ್ಲಿ ಕಂಡಿರುವುದು ಕಡಿಮೆಯೇ ಎಂದು ಹೇಳಬಹುದು.

**ಯುದ್ಧಕ್ಕೆ ಕಾರಣಗಳು**

ಕುಮ್ಮಟದುರ್ಗವು ಚಿಕ್ಕರಾಜ್ಯವಾಗಿದ್ದರೂ ಅಲ್ಲಿನ ಅರಸರುಗಳ ಪಾತ್ರವು ತುಂಬಾ ಮಹತ್ವದ್ದಾಗಿದೆ. ಕಂಪಿಲನ ಮತ್ತು ಕುಮಾರರಾಮನ ದಾಳಿಗಳು ಕೆಲವೇ ಕೆಲವು ಅನಿಸಿದರೂ ಅವರು ವೀರಾವೇಶದಿಂದ ಹೋರಾಡಿದ ಸನ್ನಿವೇಶಗಳು ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಕುಮಾರರಾಮನ ಶೌರ್ಯ ಪರಾಕ್ರಮಗಳಿಂದ ಕಂಪಿಲರಾಯನ ಏಳಿಗೆಯನ್ನು ಸಹಿಸದಾದ ದೆಹಲಿ ಸುಲ್ತಾನನು ದಾಳಿ ಮಾಡುವ ಉದ್ದೇಶ ಹೊಂದಿದನು. ಇದೇ ವೇಳೆಯಲ್ಲಿ ಕುಮಾರರಾಮನ ರೂಪಕ್ಕೆ ಮನಸೋತ ಬಾಬಮ್ಮಳ ಪ್ರೇಮ ದೆಹಲಿ ಸುಲ್ತಾನನ ದಾಳಿಗೆ ಅಡ್ಡಿಯಾಯಿತು. ಆದರೂ ಮಗಳ ಪ್ರೇಮ ನಿವೇದನೆಗೆ ಬೆಲೆಕೊಟ್ಟು ದೆಹಲಿ ಸುಲ್ತಾನನು ತನ್ನ ಧರ್ಮವನ್ನು ಪಕ್ಕಕ್ಕೆ ಇಟ್ಟು ಕಂಪಿಲನೊಂದಿಗೆ ಬಾಂಧವ್ಯ ಬೆಳೆಸಲು ಮುಂದಾದನು. ಆದರೆ ಇದಕ್ಕೆ ಕುಮಾರರಾಮ, ಕಂಪಿಲರಾಯ ಇಬ್ಬರೂ ಒಪ್ಪಲಿಲ್ಲ. ಈ ನಿರಾಕರಣೆಯಿಂದ ಸುಲ್ತಾನನಿಗೆ ಆದ ಅಸಮಾಧಾನ ಅಷ್ಟಿಷ್ಟಲ್ಲ. ಇದು ದೆಹಲಿ ಸುಲ್ತಾನ ಕುಮ್ಮಟದುರ್ಗದ ಮೇಲೆ ದಾಳಿ ಮಾಡಲು ಮೊದಲ ಕಾರಣವಾಗಿದೆ.

ಇದೇ ಸಂದರ್ಭದಲ್ಲಿ ದೆಹಲಿ ಸುಲ್ತಾನನ ಆಶ್ರಯದಲ್ಲಿದ್ದಂತಹ ಬಾದೂರಖಾನನು ಸರದಾರನಾಗಿದ್ದ. ಅಷ್ಟರಲ್ಲಿಯೇ ಸುಲ್ತಾನನೊಂದಿಗೆ ಹಗೆ ಕಟ್ಟಿಕೊಂಡು ಭಯಗೊಂಡು ಕುಮ್ಮಟ ರಾಜ್ಯಕ್ಕೆ ಬಂದು ರಕ್ಷಣೆ ಬೇಡಿದಾಗ ಕುಮಾರರಾಮನು ಆಶ್ರಯ ನೀಡಿದ್ದು ಮತ್ತೊಂದು ಕಾರಣವಾಯಿತು. ಈ ಕಾರಣಗಳೇ ದೆಹಲಿ ಸುಲ್ತಾನನಿಗೆ ಕಂಪಿಲ ಕುಮಾರರಾಮನ ಮೇಲೆ ದಂಡೆತ್ತಿ ಬರಲು ಸಾಕಷ್ಟು ಪ್ರೇರಣೆ ನೀಡಿದವು.

ದೆಹಲಿಸುಲ್ತಾನರು ಕುಮ್ಮಟದರಸರ ಮೇಲೆ ದಾಳಿ ಮಾಡಲು ಮೇಲಿನ ಎರಡೂ ಕಾರಣಗಳು ಪ್ರಮುಖವಾಗಿದ್ದವು. ಆದರೆ ದಕ್ಷಿಣ ಭಾರತದ ಅರಸರುಗಳ ದೌರ್ಬಲ್ಯ, ಸಾಮರಸ್ಯದ ಕೊರತೆ, ಒಗ್ಗಟ್ಟಿನ ಕೊರತೆಗಳೂ ಕಾರಣವಾಗಿದ್ದವು. ಕಂಪಿಲದೇವ ಮತ್ತು ಕುಮಾರರಾಮನ ಕಾಲಾವಧಿಯು ಅತ್ಯಂತ ಸ್ಥಿತ್ಯಂತರದಿಂದಲೇ ಕೂಡಿತ್ತು. ಇವರಿಗೆ ಶತ್ರು ರಾಜ್ಯಗಳ ಮೇಲೆ ಹೋರಾಡುವ ಅನಿವಾರ್ಯತೆ ಇಲ್ಲದಿದ್ದರೂ ರಾಜಕೀಯ ಸ್ಥಿರತೆಯನ್ನು ಕಾಪಾಡಿಕೊಳ್ಳುವುದು ಹಾಗೂ ತಮ್ಮದೇ ಆದ ವ್ಯಕ್ತಿತ್ವ ಸ್ಥಾನಮಾನಗಳನ್ನು ಉಳಿಸಿಕೊಳ್ಳುವುದು ಅವಶ್ಯಕವಾಗಿ ಬೇಕಿತ್ತು. ಕುಮ್ಮಟದುರ್ಗ ಅತ್ಯಂತ ಚಿಕ್ಕ ರಾಜ್ಯವಾಗಿದ್ದರೂ, ತನ್ನದೇ ಆದ ನೈತಿಕತೆಗಳನ್ನು ಉಳಿಸಿಕೊಂಡಿತ್ತು. ನೆರೆಹೊರೆ ರಾಜ್ಯಗಳಾಗಿರಬಹುದು ಅಥವಾ ಮುಸ್ಲಿಂರ ರಾಜ್ಯಗಳಾಗಿರಬಹುದು ಯಾರಿಗೂ ಅಂಜದೇ ತಮ್ಮದೇ ಆದರ್ಶಗಳನ್ನು ಎತ್ತಿ ಹಿಡಿಯುವುದು ಇವರ ಉದ್ದೇಶವಾಗಿತ್ತು. 'ಪರನಾರಿ ಸೋದರ', ನಂಬಿ ಬಂದವರನ್ನು ಕಾಪಾಡುವ ಹೊಣೆಗಾರಿಕೆ ಇವೆಲ್ಲವೂ ಕುಮ್ಮಟದರಸರನ್ನು ಸುತ್ತುವರೆದಿದ್ದವು. ಇಂತಹ ಆದರ್ಶಗಳಿಗಾಗಿಯೇ ನೆರೆಹೊರೆ ರಾಜ್ಯಗಳ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಕಂಪಿಲರಾಯ ಮತ್ತು ಕುಮಾರರಾಮನ ಮೇಲೆ ಸುಮಾರು ಮೂರು ಬಾರಿ ದೆಹಲಿ ಸುಲ್ತಾನರ ದಾಳಿಗಳು ನಡೆಯುತ್ತವೆ.

### ದೆಹಲಿ ಸುಲ್ತಾನರ ಪ್ರಮುಖ ದಾಳಿಗಳು

#### ಮಲ್ಲಿಕ್-ರುಕ್ನು-ದ್ದೀನ್‌ನ ದಾಳಿ

ದೆಹಲಿ ಸುಲ್ತಾನನ ಆಜ್ಞೆಯ ಮೇರೆಗೆ ಮಲ್ಲಿಕ್-ರುಕ್ನು-ದ್ದೀನ್ ಎಂಬ ನೇಮಿಯು ಕುಮ್ಮಟದ ಮೇಲೆ ದಂಡೆತ್ತಿ ಬಂದಾಗ ಸಹೋದರನಾದ ಕಾಟಣ್ಣನ ಜೊತೆಗೆ ಕುಮಾರರಾಮನು ಸೇರಿ ವೀರಾವೇಶದಿಂದ ಹೋರಾಡಿ ನೇಮಿಯ ಸೇನೆಯನ್ನು ಸೋಲಿಸಿ ಹಿಮ್ಮೆಟ್ಟಿಸಿದರು. ಈ ಸೋಲಿನಿಂದಾಗಿ ದೆಹಲಿ ಸುಲ್ತಾನನು ಅವಮಾನಕ್ಕೊಳಗಾಗಿ ಮುಂದೆ ಬರುವ ಅವಕಾಶಕ್ಕಾಗಿಯೇ ಎದುರು ನೋಡುತ್ತಿದ್ದ. ಈ ಯುದ್ಧದಲ್ಲಿ ತೋರಿದ ಕುಮಾರರಾಮನ ಪರಾಕ್ರಮ ದೆಹಲಿ ಸುಲ್ತಾನರನ್ನೇ ಬೆಚ್ಚಿ ಬೀಳಿಸುವಂತಿತ್ತು. ಶೌರ್ಯಕ್ಕೆ ಪ್ರತಿರೂಪವಾಗಿದ್ದು, ಕುಮಾರರಾಮನು ಪರನಾರಿ ಸೋದರತ್ವಕ್ಕೂ ಅಷ್ಟೇ ಕಾರಣವಾಗಿದ್ದನು. ಈತನ ಸೌಂದರ್ಯಕ್ಕೆ ಚೆನ್ನಿಗರಾಮ ಎಂಬ ಹೆಸರಿದಿದ್ದಿದ್ದು ಸತ್ಯವೆನಿಸುತ್ತದೆ. ಇವನ ಈ ಸೌಂದರ್ಯವನ್ನು ಕಂಡು ಇವನ ಚಿಕ್ಕಮ್ಮ ರತ್ನಾಜಿ ಮನಸೋತು ಇವನ ಮೋಹಕ್ಕೊಳಗಾಗುತ್ತಾಳೆ. ಚಿಕ್ಕಮ್ಮಳ ಈ ರೀತಿಯ ಮೋಹಕ್ಕೆ ಕಿವಿಗೊಡದ ಕುಮಾರರಾಮನ

ಮೇಲೆ ಅಪವಾದದ ಹೊರೆಯನ್ನು ಹೊರಿಸಿ ಅವನ ಶಿರಚ್ಛೇದನ ಮಾಡುವಂತೆ ತನ್ನ ಪತಿ ಕಂಪಿಲರಾಯನಿಗೆ ಅಜ್ಞಾಪಿಸುತ್ತಾಳೆ. ಇದನ್ನು ಕೇಳಿದ ಕಂಪಿಲರಾಯ ಏನನ್ನು ಆಲೋಚಿಸದೆ 'ರಾಮನ ತಲೆ ಕತ್ತರಿಸಿ' ಎಂದು ಆಜ್ಞೆಯಿತ್ತಾಗ ಮಂತ್ರಿ ಬೈಚಪ್ಪ ಕುಮಾರರಾಮನ ಮನಸ್ಸಿನ ನಿರ್ಮಲತೆಯನ್ನು ಅರಿತು ಅವನನ್ನು ಅವಿತಿಟ್ಟು ಅವನಂತೆ ಇರುವ ಮತ್ತೊಂದು ಮುಖವನ್ನು ತಂದಿಡುತ್ತಾನೆ. ಇದರಿಂದ ಸಂತೋಷಗೊಂಡ ರತ್ನಾಜಿ ಆನಂದಕ್ಕೆ ಪಾರವೇ ಇಲ್ಲದಂತಾಗುತ್ತದೆ. ಈ ರೀತಿಯ ಕುಮ್ಮಟದ ಕುಟುಂಬದ ಕಲಹವನ್ನು ಕೇಳಿದ ದೆಹಲಿ ಸುಲ್ತಾನ ಇದೇ ಸಮಯಾವಕಾಶವನ್ನು ಬಳಸಿಕೊಂಡು ಮತ್ತೊಮ್ಮೆ ದಾಳಿ ಮಾಡುವ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾನೆ.

**ಕುತುಬುಲ್ಲಾ - ಮುಲ್ಕನ ನೇತೃತ್ವದಲ್ಲಿ ದಾಳಿ**

ಕುಮ್ಮಟದುರ್ಗದಲ್ಲಾದ ಕಲಹಗಳನ್ನು ಅರಿತ ದೆಹಲಿ ಸುಲ್ತಾನನು ತನ್ನ ನೇಮಿಯಾದ ಕುತುಬುಲ್ಲಾ - ಮುಲ್ಕನ ನೇತೃತ್ವದಲ್ಲಿ ದಾಳಿ ಮಾಡಲು ಸೇನೆಯನ್ನು ಕಳುಹಿಸುತ್ತಾನೆ. ಸಮುದ್ರದ ರೀತಿಯಲ್ಲಿ ದೆಹಲಿ ಕಡೆಯಿಂದ ಸೈನ್ಯವು ನುಗ್ಗುತ್ತದೆ. ಈ ವೇಳೆಗೆ ವೃದ್ಧನಾಗಿದ್ದ ಇದನ್ನು ಕಂಡ ಕಂಪಿಲರಾಯ ಕಂಗಾಲಾಗಿ, ಅಸಹಾಯಕನಾಗಿ ಕೂತಿದ್ದ ಸಂದರ್ಭದಲ್ಲಿ ಬೈಚಪ್ಪನನ್ನು ಕರೆಯಿಸಿ ಬೇರೊಬ್ಬ ಕಲಿಯನ್ನು ಕರೆಸಿ ಸೇನೆಯನ್ನು ಹಿಮ್ಮೆಟ್ಟಿಸುವುದಾಗಿ ಆಜ್ಞೆಯಿತ್ತನು. ಆಜ್ಞೆಯಂತೆ ಬೈಚಪ್ಪ ಅವಿತಿಟ್ಟುಕೊಂಡಿದ್ದ ಕುಮಾರರಾಮನನ್ನು ಕರೆತಂದು ಒದಗಿಸಿರುವ ಆಪತ್ತನ್ನು ತಿಳಿಸಿದಾಗ ತನ್ನ ನೆಚ್ಚಿನ ಬೊಲ್ಲನನ್ನೇರಿ ರಣರಂಗದಲ್ಲಿ ವೀರಾವೇಶದಿಂದ ಹೋರಾಡಿ ಮುಸ್ಲಿಮರ ಸೇನೆಯನ್ನು ಹಿಮ್ಮೆಟ್ಟಿಸಿದನು. ಕುಮ್ಮಟದುರ್ಗಕ್ಕೆ ಒದಗಿದ್ದ ಆಪತ್ತನ್ನು ಬಗೆಹರಿಸಿದ ಆ ಕಲಿಯನ್ನು ನೋಡುವುದಾಗಿ ಕಂಪಿಲರಾಯ ಬಯಸಿದಾಗ ಬೈಚಪ್ಪನು ಕರೆತಂದು ಮುಂದೆ ನಿಲ್ಲಿಸಿದಾಗ ತನ್ನ ಮಗ ಕುಮಾರನೇ ಎಂದು ಹರ್ಷಗೊಂಡ ಕಂಪಿಲನ ಸಂತೋಷಕ್ಕೆ ಪಾರವೇ ಇಲ್ಲದಂತಾಗುತ್ತದೆ. ಈ ವಿಚಾರವನ್ನು ಕಂಡುಕೇಳಿದ ರತ್ನಾಜಿಯು ನೇಣುಹಾಕಿಕೊಂಡು ತನ್ನ ಪ್ರಾಣ ಬಿಡುತ್ತಾಳೆ. ಹೀಗೆ ದೆಹಲಿ ಸುಲ್ತಾನರ ವಿರುದ್ಧ ಎರಡು ಬಾರಿ ಮಹಾನ್ ಆಕ್ರಮಣಗಳನ್ನೇ ಎದುರಿಸಿದ ಕುಮಾರರಾಮ ದಕ್ಷಿಣ ಭಾರತದ ಅರಸರಲ್ಲೇ ಜನಮೆಚ್ಚಿದ ನಾಯಕನಾಗಿ ಹೆಗ್ಗಳಿಕೆ ಹೊಂದಿದ.

**ಮಲ್ಲಿಕ್ ಜಾದಾ-ಖ್ವಾಜಾ-ಇಜಹಾನ್‌ನ ದಾಳಿ**

ಕುಮಾರರಾಮನ ಎರಡು ಬಾರಿ ಜಯದ ಸಂಭ್ರಮವನ್ನು ಸಹಿಸಲಾರದ ದೆಹಲಿ ಸುಲ್ತಾನನಾದ ಮೊಹಮದ್-ಬಿನ್-ತುಘಲಕನು, ಕಂಪಿಲ-ಕುಮಾರರಾಮರ ರಾಜ್ಯ ಕುಮ್ಮಟದುರ್ಗದ ಮೇಲೆ ದಂಡೆತ್ತಿ ಬರಲು ತನ್ನ ನೇಮಿಯಾದ ಮಲ್ಲಿಕ್-ಜಾದಾ-ಖ್ವಾಜಾ-ಇಜಹಾನ್‌ನ ನೇತೃತ್ವದಲ್ಲಿ ಸೇನೆ ಕಳುಹಿಸುತ್ತಾನೆ. ಹೀಗಾಗಿ ನೇಮಿಯ ಬೃಹತ್ ದಾಳಿಯು ಕುಮ್ಮಟದ ಸೇನೆಯನ್ನು ಚದುರಿಸಿತು. ಎಷ್ಟೇ ವೀರಾವೇಶದಿಂದ ಕುಮ್ಮಟದರಸರು ಹೋರಾಡಿದರೂ ರಣರಂಗದಲ್ಲೇ ದೆಹಲಿ ಸೇನೆಗೆ ಸೋತು ವೀರಮರಣವನ್ನಪ್ಪಿದಾಗ ಸುಲ್ತಾನನ ಸೇನೆಯು ರಾಜ್ಯದೊಳಗೆ ಪ್ರವೇಶಿಸಿ ಕೋಟೆಯ ಕಡೆಗೆ ನುಗ್ಗುತ್ತದೆ. ಇದನ್ನು ಕಂಡ ಕುಮ್ಮಟದರಸರ ಸೇನಾ ಪಡೆಯು ದಿಕ್ಕೆಟ್ಟು ಓಡುತ್ತದೆ. ದೆಹಲಿ

ಸುಲ್ತಾನನ ಸೇನೆಯನ್ನು ತಡೆಯುವ ಪ್ರಯತ್ನ ಮಾಡಿದರೂ ಸಫಲವಾಗಲಿಲ್ಲ. ಕೊನೆಗೆ ಕುಮ್ಮಟ ಕೋಟೆ ಶತೃಗಳ ವಶವಾಗುತ್ತದೆ. ಕಂಪಿಲ ಕುಮಾರರ ವೀರಪತ್ನಿಯರು ಧರ್ಮಕ್ಕೆ ಕಟ್ಟುಬಿದ್ದು ಚಿತಾಪ್ರವೇಶ ಮಾಡುತ್ತಾರೆ. ಚಿಕ್ಕ ರಾಜ್ಯವಾಗಿದ್ದರೂ ಕುಮ್ಮಟದುರ್ಗವು ತಡೆರಾಜ್ಯವಾಗಿ ತನ್ನದೇ ಆದಂತಹ ಇತಿಹಾಸವನ್ನು ದಕ್ಷಿಣ ಭಾರತದಲ್ಲಿಯೇ ಸೃಷ್ಟಿಸಿತು ಎಂಬ ಸಂಗತಿ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಕುಮ್ಮಟದುರ್ಗದ ನಾಯಕರು ಕರ್ನಾಟಕದ ಚರಿತ್ರೆಯಲ್ಲಿ ಅದರಲ್ಲೂ ವಿಜಯನಗರ ಪೂರ್ವದಲ್ಲಿ ತಮ್ಮದೇ ಛಾಪನ್ನು ಮೂಡಿಸಿದರು. ಮೇಲಿನ ಎಲ್ಲಾ ಚರ್ಚೆಗಳು ಪ್ರಸ್ತುತ ಅಧ್ಯಾಯಕ್ಕೆ ಬಲ ನೀಡುತ್ತವೆ. ಮೂಲತಃ ಕುಮ್ಮಟದರಸರು 'ಬೇಡ'ರೆಂದು ಸ್ಪಷ್ಟವಾಗಿದ್ದು, ಮುಮ್ಮಡಿಸಿಂಗೆನಾಯಕನೇ ಮೂಲಪುರುಷನಾಗಿರುವುದು ಖಚಿತವಾಗಿದೆ. 'ಬೇಡ'ರೆಂದೇ ಸ್ಪಷ್ಟಪಡಿಸುವ ಹಲವು ದಾಖಲೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಒಪ್ಪಿಕೊಳ್ಳಬೇಕಾಗುತ್ತದೆ. ಶಾಸನಗಳು, ಕೈಫಿಯತ್ತುಗಳು, ವಂಶಾವಳಿಯನ್ನು ಕುರಿತು ಹಲವು ಮಾಹಿತಿಗಳು ಲಭ್ಯವಾಗಿದ್ದು, ಸ್ಥಳೀಯರ ಅಭಿಪ್ರಾಯಗಳು, ಮೌಖಿಕ ಅಭಿವ್ಯಕ್ತಿ, ಆಚರಣೆಗಳ ಆಧಾರದ ಮೇಲೆ ಕುಮ್ಮಟದರಸರನ್ನು 'ಬೇಡ' ಎಂದು ಪ್ರಸ್ತುತ ಅಧ್ಯಾಯದಲ್ಲಿ ಒಪ್ಪಿಕೊಳ್ಳಬಹುದಾಗಿದೆ. ಇದಕ್ಕೆ ಪೂರಕವಾಗಿ ಕೈಫಿಯತ್ತುಗಳು ಬೇಡರ ಉಪಕುಲವಾದ 'ಮರುಳೆನವರು' ಎಂದು ತಿಳಿಸಿದ್ದು, ಈ ಹೇಳಿಕೆಯು ಇವರು 'ಬೇಡರು' ಎಂಬುದಕ್ಕೆ ಆಧಾರಗಳನ್ನು ನೀಡುತ್ತದೆ ಹಾಗೆಯೇ ಸಂಡೂರಿನ ಮ್ಯಾಸ ನಾಯಕರ ಕೆಂಚಯ್ಯ ಎಂಬ ವೃದ್ಧನು ಪಾಂಚಾಳಗಂಗನ ಕೃತಿಯನ್ನು ಮೂರು ದಿನಗಳವರೆಗೆ ಹಾಡುತ್ತಾನೆ.[೨೫] ಅಂದರೆ, ಈತನಿಗೆ ಕುಮ್ಮಟದರಸರು ಪೂರ್ವಜರರಿಬೇಕೆಂದೂ ಹಾಗೂ ಬೇಡರು ಎಂದು ಒಪ್ಪಿಕೊಳ್ಳಲು ಸಹಕಾರಿಯಾಗುತ್ತದೆ.

ಕರ್ನಾಟಕದಾದ್ಯಂತ ಹಲವಾರು ಭಾಗಗಳಲ್ಲಿ ಕುಮಾರರಾಮನ ಜಾತ್ರೆಗಳು, ನಂಬಿಕೆ, ಸಂಪ್ರದಾಯ, ಆಚರಣೆಗಳು ನಡೆಯುತ್ತಿವೆ. ಇಲ್ಲಿ ಎಲ್ಲಾ ಸಮುದಾಯದವರೂ ಕುಮಾರರಾಮನನ್ನು ಆರಾಧಿಸುತ್ತಾರೆ. ಆದರೆ ಅತಿ ಹೆಚ್ಚು ಭಾಗಗಳಲ್ಲಿ ಈತನನ್ನು 'ಬೇಡರು' ಪೂಜಿಸುತ್ತಿರುವುದು ಗಮನಕ್ಕೆ ಬರುತ್ತದೆ. ಹಾಗೂ ಮೌಖಿಕ ಅಭಿವ್ಯಕ್ತಿಗಳಲ್ಲಿ ಜನಪದರು ಬೇಡರ ಕುಲತಿಲಕ ಎಂದು ಕರೆದಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಹಾಗೆಯೇ ಕಂಪಿಲದೇವನನ್ನು ಶಾಸನಗಳಲ್ಲಿ 'ನಾಯಕಾಚಾರ್ಯ್ಯ' ಎಂದು ಕರೆದಿರುವುದನ್ನು ಒಪ್ಪಬೇಕಾಗುತ್ತದೆ. ಕೈಫಿಯತ್ತುಗಳಲ್ಲಿ ಕುಮಾರರಾಮನ ವಂಶಾವಳಿಯನ್ನು ಗಮನಿಸಿದಾಗ 'ನಾಯಕ' ಎಂದು ಹೆಸರಿನ ಕೊನೆಗೆ ಸೇರಿರುವುದು ಆಶ್ಚರ್ಯವಲ್ಲ. ಕುಮ್ಮಟದುರ್ಗ ಚಿಕ್ಕ ರಾಜ್ಯವಾಗಿದ್ದರೂ ಹಲವು ಪ್ರದೇಶಗಳನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡಿತ್ತು. ಕುಮ್ಮಟದರಸರ ಆಳ್ವಿಕೆಗೂ, ರಾಜಧಾನಿಗಳಿಗೂ ಸಂಬಂಧವಿದೆ. ರಾಜಕೀಯ ಇತಿಹಾಸವು ಕುಮ್ಮಟದರಸರನ್ನು ವಿವಿಧ ಮಜಲುಗಳಲ್ಲಿ ಗುರ್ತಿಸಲು ಸಹಾಯಕವಾಗುತ್ತದೆ. ಕಾರಣ ಕುಮ್ಮಟದರಸರು ಕೇವಲ ಅಧಿಕಾರಕ್ಕಾಗಿ ಕಾದಾಡಲಿಲ್ಲ. ಸ್ವಾರ್ಥಕ್ಕಾಗಿ ಯುದ್ಧಕ್ಕಿಳಿಯಲಿಲ್ಲ. ಬದಲಿಗೆ ಆದರ್ಶಗಳಿಗಾಗಿ ಹೋರಾಡಿರುವುದು

ಹೆಮ್ಮೆಯೆನಿಸುತ್ತದೆ. ಒಟ್ಟಾರೆ ಹೇಳುವುದಾದರೆ ಸೇವುಣರು, ಹೊಯ್ಸಳರ ರಾಜ್ಯಗಳ ನಡುವೆ ತಡೆ ರಾಜ್ಯವಾಗಿ ಕುಮ್ಮಟದರಸರಿದ್ದರೂ ಶತ್ರುಗಳ ಹಾವಳಿಗಳು ತಪ್ಪಿರಲಿಲ್ಲ. ತಮ್ಮ ಆದರ್ಶಗಳನ್ನೇ ಅಸ್ತ್ರಗಳನ್ನಾಗಿ ಮಾಡಿಕೊಂಡು ತಮ್ಮದೇ ರಾಜಕೀಯ ಸ್ಥಿರತೆಯನ್ನು ಕಾಪಾಡಿಕೊಳ್ಳುವಲ್ಲಿ ಭಾರತದ ಇತಿಹಾಸದಲ್ಲಿ ಗುರುತಿಸಿಕೊಂಡವರು ಕುಮ್ಮಟದುರ್ಗದ ನಾಯಕರು.

**ಕೊನೆ ಟಿಪ್ಪಣಿಗಳು**

೧. ಕಲಬುರ್ಗಿ ಎಂ.ಎಂ., (ಸಂ) ಕರ್ನಾಟಕದ ಕೈಫಿಯತ್ತುಗಳು, ಪು. ೫೧೦

೨. ಅಭಿಶಂಕರ ಕೆ., ಕಂಪಲಿ/ಕುಮ್ಮಟದುರ್ಗ (ಇತಿಹಾಸ ದರ್ಶನ), ಸಂ.೫, ಪು. ೧೩೮

೩. ಅದೇ, ಪು. ೧೩೯

೪. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ಹುಲ್ಲೂರು ಶ್ರೀನಿವಾಸ ಜೋಯಿಸರ ಗ್ರಂಥ ಪ್ರಕಟಣ ಸಮಿತಿ ಚಿತ್ರದುರ್ಗ, ಪು. ೫೭೫

೫. ವಾಲ್ಮೀಕಿ ಬಂಧು, ೧೯೯೮, ಪು. ೬

೬. Patil.C.S. 1991 : Mumbai singal, kampila and kumararama, kummata in vijayanagara progress of research, ed by d.v.devaraj and c.s.patil directorate of archaeology and museum mysore, ಪು. ೧೯೧

೭. ಮಹದೇವ ಸಿ., ೨೦೦೯, ಕುಮ್ಮಟದುರ್ಗದ ಅರಸರು, ಪು. ೬

೮. ಸೀತಾರಾಮ ಜಾಗೀರ್‌ದಾರ್ ಮತ್ತು ಇತರರು: ಮಾನವಿಕ ಕರ್ನಾಟಕ, ಸಂ. ೧೧೬ ಸಂ. ೨,೩,೪, ಪು. ೧೨೫

೯. ಸೀತಾರಾಮ ಜಾಗೀರ್‌ದಾರ್ ಮತ್ತು ಡಾ.ಸಿ.ಎಸ್.ಪಾಟೀಲ : (ಸಂ) ಕುಮ್ಮಟ ವಿಜಯನಗರ ಪ್ರೋಗ್ರೆಸಿವ್ ಆಫ್ ರಿಸರ್ಚ್-೧೯೮೭-೮೮, ಪು. ೨೧೨

೧೦. ದೇವರಾಜ ಮತ್ತು ಸಿ.ಎಸ್.ಪಾಟೀಲ (ಸಂ) ವಿಜಯನಗರ ಹೊಗ್ರೆಸಿವ್ ರಿಸರ್ಚ್, ೧೯೮೭-೮೮, ಪು. ೨೧೨

೧೧. ಎ.ಆರ್.ನಂ. ೭೫ of ೧೯೪೩-೪೪

೧೨. ಮಹದೇವ ಸಿ, ಕರ್ನಾಟಕದಲ್ಲಿ ಕುಮಾರರಾಮನ ಪಂಥ, ಪು. ೧೨

೧೩. Mysore Archeological Reports, 1923, no. 121

೧೪. Annual Report on South Indian Epigraphy 1943-45 no 76

೧೫. ಕಲಬುರ್ಗಿ ಎಂ.ಎಂ.(ಸಂ): ಕರ್ನಾಟಕ ಕೈಫಿಯತ್ತುಗಳು, ಪು. ೪೯೧

೧೬. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೭, ಭಾಗ-೧, ಚೆನ್ನಗಿರಿ ೨೪

೧೭. ಶ್ರೀ ಕಪಟರಾಳ ಕೃಷ್ಣರಾವ್, ಕರ್ನಾಟಕಸಂಸ್ಕೃತಿ ಸಂಶೋಧನೆ, ಪು. ೨೩೨

೧೮. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ಮೊಳಕಾಲ್ಮೂರು ೨೦, ಪು. ೧೪೦

೧೯. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ಹಿರಿಯೂರು ೮೬

೨೦. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ.೮ ಚೆನ್ನಗಿರಿ ೨೪

೨೧. B.K.No. 23 of 1935-36, 511 vol. xx Nm. 202 page. 271

೨೨. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ.೮. ಭಾಗ-೧, ಚೆನ್ನಗಿರಿ ೨೪

೨೩. M.A.R. 1935 Inscription Nm. 39

೨೪. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೭, ಚೆನ್ನಗಿರಿ ೨೩

೨೫. SII vol. xx Nm. 222

೨೬. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ದಾವಣಗೆರೆ, ಪು. ೭೬

೨೭. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ಹೊಳಲ್ಕೆರೆ ೩೭

೨೮. ವಾಲ್ಮೀಕಿ ಸಂದೇಶ: ಜುಲೈ-ಆಗಸ್ಟ್ -೧೯೮೬, ಪು. ೧೯

೨೯. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ೮೬

೩೦. ಜರ್ನಲ್ ಆಫ್ ರಾಯಲ್ ಏಷಿಯಾಟಿಕ್ ಸೊಸೈಟಿ ಏಪ್ರಿಲ್,೧೯೧೫, ಪು. ೩೩೭ -೩೩೯

೩೧. SII, Vol xx, no 355

೩೨. Mysore and coorg, B.L.Rice, page. 40

೩೩. Mysore anf coarg, B.L.Rice page. 58

೩೪. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೯, ಪು. ೮೪

೩೫. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ದಾವಣಗೆರೆ, ಪು. ೨೬

೩೬. FSVH. Vol, page. 11

೩೭. ಗಂಡುಗಲಿ ಕುಮಾರರಾಮ ೧೯೪೧ ಪು. ೩೯

೩೮. ಶರಣ ಸಾಹಿತ್ಯ ಸಂ, ೧೯೪೧-೪೪, ಪು. ೩೩೬

೩೯. ಕರ್ಮವೀರ ೧೦-೧-೧೯೬೦

೪೦. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ಹಿರಿಯೂರು, ೧೬

೪೧. ವಾಲ್ಮೀಕಿ ಬಂಧು, ಮಾರ್ಚ್ ೧೯೯೮, ಪು. ೭

೪೨. ಕಲಬುರ್ಗಿ ಎಂ.ಎಂ., ಕೊಮಾರರಾಮಯ್ಯನ ಚರಿತ್ರೆ ೨೦೦೧, ಪು. ೧೦

೪೩. Mysore and coarg –B.L.Rice page. 58

೪೪. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೯, ಪು. ೮೪

೪೫. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೨, ಪು. ೯೫

೪೬. ಪಾಟೀಲ ಸಿ.ಎಸ್., ಕುಮ್ಮಟದುರ್ಗ ದಿಕ್ಸೂಚಿ ಮಾರ್ಗಪತ್ರಿಕೆ ೧೯೯೩, ಪು. ೩೧

೪೭. C.S Patil,1991, p 191

೪೮. FSVH. Vol 1,page. 18

೪೯. ರಾಮಶರ್ಮ ಎಂ.ಎಚ್., ರಣಧೀರ ರಮನಾಥ, ಪು. ೯

೫೦. ಶರಣ ಸಾಹಿತ್ಯ ಸಂ vi,1943-44,p 328

೫೧. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ.೮. ಹೊಳೆನರಸೀಪುರ ೧೦೩

೫೨. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೬, ಕೃಷ್ಣರಾಜಪೇಟೆ, ಪು. ೧೦೦

೫೩. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೮, ಭಾಗ–೧, ಪು. ೧೯

೫೪. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೨ ತಿಪಟೂರು ೨೪

೫೫. VSCH, P.151

೫೬. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೨, ತಿಪಟೂರು, ೨೪

೫೭. Mysore Archeolgical Reports, 1923, NO 121

೫೮. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ಹಿರಿಯೂರು, ೧೬

೫೯. ವಿಚಾರವಾಹಿನಿ, ಸಂ (೧೧), ಪು. ೩೩೨

೬೦. Mysore gazettiar new edition Vol ii, Part 2, P. 1403

೬೧. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ.೧೧, ಚಿತ್ರದುರ್ಗ ೪

೬೨. Patil C S,1987, P.213

೬೩. SII, Vol xi, 1965,PP 331-32

೬೪. EI, xxiii, P 184-185

೬೫. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ದಾವಣಗೆರೆ ೨೬

೬೬. ಮಾನವಿಕ ಕರ್ನಾಟಕ ಸಂ(೧೬), ಪು. ೧೨೫

೬೭. ಮಹದೇವ ಸಿ., ಕರ್ನಾಟಕದಲ್ಲಿ ಕುಮಾರರಾಮನ ಪಂಥ, ೨೦೧೫, ಪುಟ ೪೩

೬೮. Inscriptions of the Madras President Vol ,P 301

೬೯. RESEA, 1943-44,75

೭೦. ಅಭಿಶಂಕರ ಕೆ, ಕಂಪಲಿ / ಕುಮ್ಮಟದುರ್ಗ, ೧೯೯೦,ಸಂ.೫

೭೧. ಮಹದೇವ ಸಿ., ಕರ್ನಾಟಕದಲ್ಲಿ ಕುಮಾರರಾಮನ ಪಂಥ, ೨೦೧೫, ೨೦೧೫, ಪು. ೧೦

೭೨. ದೇಸಾಯಿ ಪಿ.ಬಿ., ಕರ್ಮವೀರ, ದಿನಾಂಕ ೧೦.೦೧.೧೯೬೦

೭೩. ವರದರಾಜರಾವ್ ಜಿ., ಕುಮಾರರಾಮನ ಸಾಂಗತ್ಯಗಳು, ಪು. ೨೮೪

೭೪. ಕೃಷ್ಣ ಕೋಲ್ಹಾರ್ ಕುಲಕರ್ಣಿ (ಸಂ) ನಾ.ಶ್ರೀ.ರಾಜಪುರೋಹಿತರ ಸಂಶೋಧನಾ ಲೇಖನಗಳು (೧೮೮೭-೧೯೫೩), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೮, ಪು.೯೫, ೧೦೩ರಲ್ಲಿ ಗಂಡುಗಲಿರಾಮ ಮತ್ತು ಕುಮಾರರಾಮನ ಬಗ್ಗೆ ಸಂಶೋಧನಾ ಲೇಖನಗಳಿವೆ. ಇಲ್ಲಿ ಕುಮಾರರಾಮನು ವಿಜಯನಗರದ ದೇವರಾಯನ ಕಾಲದವನೇ ಹೌದು ಎಂಬುದು ವಿಶೇಷವಾಗಿದೆ.

೭೫. ಕಲಬುರ್ಗಿ.ಎಂ.ಎಂ. (ಸಂ) ಪಾಂಚಾಳಗಂಗ ವಿರಚಿತ ಹಳೆಯ ಕುಮಾರರಾಮನ ಸಾಂಗತ್ಯ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೮, ಪು. v ಸಂಡೂರಿನ ಮ್ಯಾಸನಾಯಕರ ಕೆಂಚಯ್ಯನೆಂಬ ವೃದ್ಧನು ಪಾಂಚಾಳಗಂಗನ ಕೃತಿಯನ್ನು ಮೂರು ದಿನಗಳವರೆಗೆ ಹಾಡುತ್ತಾನೆ. (ಕುಮಾರರಾಮನ ಸಾಂಗತ್ಯಗಳು, ಜಿ.ವರದರಾಜರಾವ್, ಪು.೧೧೫) ಇದನ್ನು ಗಮನಿಸಿದರೆ ಮ್ಯಾಸನಾಯಕರ ಕೆಂಚಯ್ಯ ಹಾಕಿರುವುದು ತನ್ನ ಪೂರ್ವಜರ ಚರಿತ್ರೆಯನ್ನು ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.



# ಅಧ್ಯಾಯ : ನಾಲ್ಕು

## ಕುಮ್ಮಟದುರ್ಗದ ನಾಯಕರ ರಾಜಧಾನಿಗಳ ಅಧ್ಯಯನ

೪.೧ ಹನೆಯ

೪.೨ ದೊರವದಿ (ದರೋಜಿ)

೪.೩ ಜಟ್ಟಿಂಗರಾಮೇಶ್ವರ

೪.೪ ಹೊಸಮಲೆದುರ್ಗ

೪.೫ ಕುಮ್ಮಟದುರ್ಗ

## ಅಧ್ಯಾಯ: ನಾಲ್ಕು

# ಕುಮ್ಮಟದುರ್ಗದ ನಾಯಕರ ರಾಜಧಾನಿಗಳ ಅಧ್ಯಯನ

ಕ್ರಿ.ಶ. ೧೨ನೆಯ ಶತಮಾನದ ತರುವಾಯ ಕಲ್ಯಾಣ ಚಾಲುಕ್ಯರ ನಂತರ ದಕ್ಷಿಣ ಭಾರತದಲ್ಲಿ ಕೆಲವು ಪ್ರಮುಖ ಹಿಂದೂ ಅರಸುಮನೆತನಗಳು ತಲೆಯೆತ್ತಿದವು. ಪ್ರಮುಖವಾಗಿ ದ್ವಾರಸಮುದ್ರದ ಹೊಯ್ಸಳರು, ವಾರಂಗಲ್ಲಿನ ಕಾಕತೀಯರು ಮತ್ತು ದೇವಗಿರಿಯ ಸೇವುಣರು ಕುಮ್ಮಟದರಸರ ಸಮಕಾಲೀನರಾಗಿ ಪ್ರವರ್ಧಮಾನಕ್ಕೆ ಬಂದರು. ಕುಮ್ಮಟದುರ್ಗವನ್ನು ಆಡಳಿತದ ಕೇಂದ್ರವನ್ನಾಗಿ ನಿರ್ಮಿಸಿಕೊಂಡು ಆಡಳಿತವನ್ನು ಸುಭದ್ರಗೊಳಿಸಿಕೊಂಡಿದ್ದರು. ಹಂಪಿಯ ಪರಿಸರದ ಆಗಿನ ಕುಮ್ಮಟದುರ್ಗವು ಈಗಿನ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಪಶ್ಚಿಮಭಾಗಕ್ಕೆ ತುಂಗಭದ್ರಾ ನದಿಯ ಉತ್ತರಕ್ಕೆ ಹಂಪಿ ಪ್ರದೇಶದಿಂದ ವಾಯುವ್ಯ ಭಾಗದಲ್ಲಿ ಸುಮಾರು ೯ ಕಿ.ಮೀ. ಅಂತರದಲ್ಲಿರುವ ಮುಕ್ಕುಂಪಿಗೆ ಹತ್ತಿರವಿರುವ ಪ್ರದೇಶವೇ ದುರ್ಗಮವಾದ ಕುಮ್ಮಟದುರ್ಗ. ಉತ್ತರಭಾರತದ ಅರಸರು ದಕ್ಷಿಣ ರಾಜ್ಯಗಳ ಮೇಲೆ ಆಕ್ರಮಣ ಮಾಡಲು ಹಾಗೂ ದಕ್ಷಿಣಕ್ಕೆ ಪ್ರವೇಶಿಸಬೇಕಾದರೆ ಕುಮ್ಮಟ ಚಿಕ್ಕ ರಾಜ್ಯವಾಗಿ ಪ್ರಬಲ ಎದುರಾಳಿಯಾಗಿ ತಡೆಯೊಡ್ಡುತಿತ್ತು ಹಾಗಾಗಿ ಇದನ್ನು 'ತಡೆರಾಜ್ಯ' ಎಂದು ಕರೆದಿದ್ದಾರೆ. ಇಂತಹ ಕುಮ್ಮಟದುರ್ಗವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡ ಮುಮ್ಮಡಿಸಿಂಗೆಯನಾಯಕನು ಹೊಯ್ಸಳರ ಮತ್ತು ಸೇವುಣರ ದಾಳಿಗಳನ್ನು ಎದುರಿಸುತ್ತಾ ಕುಮ್ಮಟದುರ್ಗವನ್ನು ಕಾಯುವ ಹೊಣೆ ಹೊಂದಿದ್ದನು. ಆರಂಭದಲ್ಲಿ ಸಿಂಗೇಯನು ಸೇವುಣರ ದಾಳಿಗಳನ್ನು ಎದುರಿಸಬೇಕಾಗಿತ್ತು. ಈತನು ತನ್ನ ಆಡಳಿತಾವಧಿಯಲ್ಲಿ ಹೆಚ್ಚಾಗಿ ಸೇವುಣರ ದಾಳಿಗಳನ್ನು ಎದುರಿಸಿದನು. ಇದರಿಂದಾಗಿ ಸೇವುಣರು ಈತನ ಬದ್ಧವೈರಿಗಳಾಗಿದ್ದರೆಂದು ತಿಳಿದುಬರುತ್ತದೆ.

### ೪.೧. ಹನೆಯ

ಹೊಯ್ಸಳ ರಾಜ್ಯದ ಮೇಲೆ ದಾಳಿ ಮಾಡಿ ರಾಜ್ಯವನ್ನು ವಿಸ್ತರಣೆ ಮಾಡುವುದು ಸೇವುಣರ ಮುಖ್ಯ ಉದ್ದೇಶವಾಗಿತ್ತು. ಸೇವುಣರು ಹೊಯ್ಸಳರ ಮೇಲೆ ದಾಳಿ ಮಾಡಬೇಕಾದರೆ ಸಿಂಗೇಯನನ್ನು ಬಗ್ಗು ಬಡಿಯುವುದು ಅನಿವಾರ್ಯವಾಗಿತ್ತು. ಹೀಗಾಗಿ ಮುಮ್ಮಡಿಸಿಂಗೇಯನು ತನ್ನ ಅಸ್ತಿತ್ವವನ್ನು ತನ್ನ ರಾಜ್ಯದ ಜೊತೆ ಉಳಿಸಿಕೊಳ್ಳುವುದು ಸಹ ಅಷ್ಟೇ ಅನಿವಾರ್ಯವಾಗಿತ್ತು. ಆದರೆ ದುರ್ಗಮವಾದ

ಕುಮ್ಮಟದುರ್ಗವು ಮುಮ್ಮಡಿಸಿಂಗೇಯನ ಮೊದಲ ರಾಜಧಾನಿಯಾಗಿರಲಿಲ್ಲ. ಇದಕ್ಕೂ ಪೂರ್ವದಲ್ಲಿ ಅಂದರೆ ಪ್ರಾರಂಭದಲ್ಲಿ 'ಹನೆಯದೆರೆ' ಎಂಬ ಗ್ರಾಮದಲ್ಲಿ ನೆಲೆಯೂರಿದ್ದನು. ನಂತರ ಅಲ್ಲಿ ಆಳ್ವಿಕೆ ಮಾಡಿದನು ಎಂಬ ವಿಚಾರಗಳು ಪಾಂಚಾಳಗಂಗನ ಹಳೆಯಕುಮಾರರಾಮನ ಸಾಂಗತ್ಯ [ಚೆನ್ನರಾಮನ ಸಾಂಗತ್ಯ]ದಲ್ಲಿ ಬಿಂಬಿತವಾಗುತ್ತವೆ. ಮೊಳಕಾಲ್ಮೂರು ತಾಲ್ಲೂಕಿನ ಬ್ರಹ್ಮಗಿರಿ ಸಮೀಪದಲ್ಲಿ ಒಂದು ಗ್ರಾಮವಿದ್ದು, ಅದೇ ಈ ಹನೆಯವಾಗಿದ್ದು, ಇದನ್ನೇ 'ಹನೆಯದೆರೆ' ಎಂದು ವಿದ್ವಾಂಸರು ಗುರುತಿಸಿದ್ದಾರೆ. ಆದರೆ ಇದು ಮುಮ್ಮಡಿಸಿಂಗೆಯನ ರಾಜಧಾನಿ ಆಗಿತ್ತೆಂಬುದಕ್ಕೆ ಬಲವಾದ ಯಾವ ಸಾಕ್ಷಿಗಳು ಕಂಡುಬಂದಿಲ್ಲವೆಂದು ಅಭಿಪ್ರಾಯಿಸಬಹುದು. ಆದರೂ ಕೆಲವೊಂದು ಅಸ್ಪಷ್ಟ ಕುರುಹುಗಳಿಂದ ಪರಿಭಾವಿಸಬಹುದಾದ ಸಂಗತಿ ಏನೆಂದರೆ ಈ ಗ್ರಾಮವು ಮುಮ್ಮಡಿಸಿಂಗೆಯನ ವಶದಲ್ಲಿತ್ತೆಂದು ಸ್ವಲ್ಪಮಟ್ಟಿಗೆ ಒಪ್ಪಬಹುದು. ಈ ಮೊದಲು ದೇವಗಿರಿ ಸೇವುಣರಿಗೆ ಆಶ್ರಿತನಾಗಿದ್ದನೆಂದು, ಇದೇ ಸಂದರ್ಭದಲ್ಲಿ ಮುಮ್ಮಡಿಸಿಂಗೆಯನು ಬೇಟೆಯಾಡಲು ಕಾಡಿಗೆ ಹೋದಾಗ ಅಳಲೆ ಎಂಬ ಪ್ರಾಣಿಯೊಂದನ್ನು ಹಿಡಿಯುವ ಸಲುವಾಗಿ ಅದರ ಬೆನ್ನು ಹತ್ತಿದನು. ಆದರೆ ಅದು ಬಿಲದೊಳಗೆ ಓಡಿ ಹೋಯಿತು. ಆ ಪ್ರಾಣಿಯನ್ನು ಹಿಡಿಯುವ ಸಲುವಾಗಿ ಬಿಲವನ್ನು ಅಗೆಯುತ್ತಾ ಹೋದಾಗ ಅಪಾರವಾದ ದ್ರವ್ಯರಾಶಿಗಳು ಕಾಣಿಸತೊಡಗಿದವು. ಈ ಸಂಪತ್ತಿನಿಂದಾಗಿ ಗುಪ್ತವಾಗಿ ಕೆಲವು ಹೊಸ ಮಂದಿರಗಳನ್ನು ಕಟ್ಟಿಸುತ್ತಾ ಸೇವುಣರಿಗೆ ವಿಧೇಯದಿಂದಿದ್ದನು.

ಈ ಘಟನೆಯ ನಂತರ ಕೆಲವು ಕಾಲ ಕಳೆದ ಮೇಲೆ ನಿಪುಣ ಅರಸರಾದ ರಾಮಚಂದ್ರದೇವರಾಯನು ಮುಮ್ಮಡಿಸಿಂಗೇಯನ ಜೊತೆಯಲ್ಲಿ ಬೇಟೆಯಾಡಲು ಕಾಡಿನೊಳಗೆ ಹೋದಾಗ ಹೆಬ್ಬುಲಿಯೊಂದು ಘರ್ಜಿಸಿ ರಾಜನ ಮೇಲೆ ಬೀಳಲು ಬಂದಾಗ ಆ ಹುಲಿಯಿಂದ ರಾಜನನ್ನು ರಕ್ಷಿಸಿದನು. ಇದರಿಂದಾಗಿ ಮುಮ್ಮಡಿಸಿಂಗನಿಗೆ ರಾಜನು ಕೃತಜ್ಞತೆ ತಿಳಿಸಿದನು. ಹೀಗಾಗಿ ರಾಜನಿಗೆ ಮುಮ್ಮಡಿಸಿಂಗನ ಮೇಲಿದ್ದ ಗೌರವ ಇನ್ನೂ ಹೆಚ್ಚಾಗತೊಡಗಿತು. ಒಂದು ಮಟ್ಟಕ್ಕೆ ಮುಮ್ಮಡಿಸಿಂಗನ ದರ್ಪವೂ ಬೆಳೆಯತೊಡಗಿತು. ಇದೇ ಸಂದರ್ಭದಲ್ಲಿಯೇ ದೆಹಲಿಸುಲ್ತಾನರು ದೇವಗಿರಿ ಹಾಗೂ ಅದರ ಸಂಪತ್ತಿನ ಮೇಲೆ ಕಣ್ಣಿಟ್ಟರು. ಇದರಿಂದ ಸುಲ್ತಾನರ ದಾಳಿಗಳನ್ನು ತಪ್ಪಿಸಿಕೊಳ್ಳಲಾಗದೇ ಹೆದರಿಸುವ ಅನಿವಾರ್ಯತೆ ಒದಗಿತು. ದೆಹಲಿ ಸುಲ್ತಾನರು ಮತ್ತು ಸೇವುಣರ ನಡುವೆ ಯುದ್ಧಗಳಾದಾಗ ಅದರಲ್ಲಿ ಸೇವುಣರು ಸುಲ್ತಾನರಿಗೆ ಸೋತು ಹೋದ್ದರಿಂದ ಇವರ ರಾಜಧಾನಿಯಾದ ದೇವಗಿರಿಯನ್ನು ವಶಮಾಡಿಕೊಂಡು ದೌಲತಾಬಾದ್ ಆಗಿ ಹೆಸರಿಸಿಕೊಂಡರು. ಸೇವುಣರು ಸೋತುಹೋಗಿದ್ದರಿಂದ ಅಲ್ಲಿದ್ದ ಮುಮ್ಮಡಿಸಿಂಗನು ದಕ್ಷಿಣದ ಕಡೆಗೆ ತನ್ನ ಸರಂಜಾಮುಗಳ ಸಮೇತವಾಗಿ ಮಲೆಪಂಕ್ತಿ ದೇಶದ ಮೂಲಕ ಹನೆಯಗುಡ್ಡದ ಬಳಿ ಪಾಳೆಯವನ್ನು ಬಿಟ್ಟು ಅಲ್ಲಿಯೇ ಪರಿವಾರ ಸಮೇತ ನೆಲೆಸಿದರೆಂದು ಪಾಂಚಾಳಗಂಗನ ಚೆನ್ನರಾಮ ಸಾಂಗತ್ಯದಲ್ಲಿ ವಿವರಿಸಿದೆ. ಹನೆಯದೆರೆ ಹೊಯ್ಸಳರ ಕಾಲದಿಂದಲೂ ಪ್ರಸಿದ್ಧವಾಗಿದ್ದು, ನಿಡುಗಲ್ಲು ಚೋಳರ ರಾಜಧಾನಿಯಾಗಿತ್ತೆಂದು ಡಾ.ಸಿ.ಎಸ್.ಪಾಟೀಲರ ಅಭಿಪ್ರಾಯವಾಗಿದೆ.[೧] ಅಂದರೆ ಬಮ್ಮರಸ ಚೋಳನ ಅನುಮತಿಯಂತೆ ಕ್ರಿ.ಶ. ೧೨೭೮ರಲ್ಲಿ ಈತನ ಮಂತ್ರಿಯಾದ ಬೀಚನು ಚತುರ್ಥ ಕುಲಕ್ಕೆ ಸೇರಿದ್ದು,

ನಿಡಗಲ್ಲು ಮತ್ತು ಹನೆಯ ದುರ್ಗಗಗಳನ್ನು ಕಟ್ಟಿಸಿದನೆಂದು ಪ್ರತೀತಿ ಇದೆ. ಮೊಳಕಾಲ್ಮೂರು ಶಾಸನದಲ್ಲಿ ಮಂತ್ರಿ ಬೇಚನನ್ನು 'ಕುಮ್ಮಟದ ಬೀಚ'[೨] ಎಂದು, ಇವನು ಕುಮ್ಮಟದೊಡೆಯ ನಾಗಿದ್ದರಬಹುದೆಂದು ಈ ಪ್ರದೇಶವು ಚೋಳರಸರ ಅಧೀನದಲ್ಲಿ ಸೀಗೇನಾಡಿನಲ್ಲಿದ್ದಿತು[೩] ಎಂದು ದಾಖಲಾಗಿದೆ. ಆದರೆ ಬೀಚನ ಪಿತಾಮಹನನ್ನು 'ಚತುರ್ಥವಂಶ ಮಣಿದೀಪಂ'[೪] ಎಂದು ಕರೆಯಲಾಗಿದೆ. ಹಾಗೂ ಈತನಿಗೆ 'ಜಿನಪೂಜಾರತ್ನಂ' ಎಂದು ಬಿರುದು ನೀಡಿರುವುದರಿಂದ ಇವರು ಚತುರ್ಥ ಕುಲದವರಾಗಿದ್ದು, ಜೈನಮತಕ್ಕೆ ಸೇರಿದವರಾಗಿರಬಹುದು ಎಂಬ ಅಭಿಪ್ರಾಯಗಳುಂಟು. ಆದರೆ ಚರ್ಚಿಸಬಹುದಾದ ಸಂಗತಿಗಳೇನೆಂದರೆ ಚತುರ್ಥ ವಂಶದ ಬೀಚನೇ ಬೇರೆ ಕುಮ್ಮಟದರಸರ ಮಂತ್ರಿ ಬೈಚಪ್ಪನೇ ಬೇರೆ ಎಂಬುದು ವಿದ್ವಾಂಸರ ಅಂತಿಮ ನಿರ್ಣಯಗಳಾಗಿವೆ..

ಪಾಂಚಾಳಗಂಗನ ಚೆನ್ನರಾಮಸಾಂಗತ್ಯದಲ್ಲಿ ದೇವಗಿರಿಯಿಂದ ಬಂದ ಮುಮ್ಮಡಿಸಿಂಗನು ಹನೆಯದಲ್ಲಿ ನೆಲೆಸಿದನೆಂದಿದೆ[೫]. ಹನೆಯವು ಹೊಯ್ಸಳ ರಾಜ್ಯದಲ್ಲೆ ಇದ್ದುದರಿಂದ ಇವರು ಹೊಯ್ಸಳರ ಬಂಧುಗಳಾಗಿರುವ ಸಾಧ್ಯತೆಯೇ ಹೆಚ್ಚು ಎಂಬುದು ಕೆಲವು ವಿದ್ವಾಂಸರುಗಳ ಅಭಿಪ್ರಾಯವಾಗಿದ್ದರೂ, ಮುಮ್ಮಡಿಸಿಂಗೆಯನು ಹೊಯ್ಸಳ ರಾಜ್ಯದ ಹನೆಯ ಪ್ರದೇಶದಲ್ಲಿ ನೆಲೆಸಿದ್ದುದರಿಂದ, ಈತ ಹೊಯ್ಸಳರ ಬಂಧು ಎನ್ನುವುದರಲ್ಲಿ ಅರ್ಥವಿಲ್ಲ. ಅಲ್ಲಿ ನೆಲೆಸಿದ ಮಾತ್ರಕ್ಕೆ ಹೊಯ್ಸಳರ ಬಂಧು ಎಂದು ನಿರ್ಧರಿಸಲು ಕಷ್ಟವಾಗಬಹುದು. ಕುಮ್ಮಟದ ಒಂದು ಶಾಸನದಲ್ಲಿ ಪಾಟೀಲರು ಹೇಳುವ ಹಾಗೆ ಕೂಡ್ಲಿಯ ಶಾಸನದಲ್ಲಿ ಕಂಪಿಲನನ್ನು 'ನಾಯಕಾಚಾರ್ಯ' ಎಂದಿರುವುದು ಸೂಕ್ತವೆನಿಸುತ್ತದೆ. ಕಾರಣ ಶಾಸನಗಳು 'ನಾಯಕ' ಎಂದು ಸ್ಪಷ್ಟವಾಗಿ ಸೂಚಿಸಿವೆ ಆದರೆ, ಜಾಗೀರುದಾರರು 'ಮಾಂಡಲಿಕ ಹೊಯ್ಸಳಸೇನ' ಎಂದು ಓದಿರುವುದು ಸತ್ಯಕ್ಕೆ ದೂರವೆನಿಸುತ್ತದೆ. ಹೀಗಾಗಿ ಇದೊಂದು ವಿಚಾರದಿಂದ ಕುಮ್ಮಟದರಸರನ್ನು ಹೊಯ್ಸಳರ ಬಂಧು ಎಂದು ಕರೆಯಲು ಸಾಧ್ಯವಾಗದು.

ಹನೆಯದೆರೆಯು ಮುಮ್ಮಡಿಸಿಂಗೆಯನ ರಾಜ್ಯದಲ್ಲಿತ್ತು ಎಂಬುದು ಸ್ಪಷ್ಟವಾಗಿದೆ. ಆದರೆ ಸಿಂಗೇಯನ ರಾಜಧಾನಿಯಾಗಿತ್ತು ಎಂಬುದು ಮಾತ್ರ ಅಸ್ಪಷ್ಟವಾಗಿದ್ದು, ಯಾವುದೇ ಶಾಸನಾಧಾರಗಳೂ ಇಲ್ಲ ಎನ್ನುವುದು ಖಚಿತವಾಗಿದೆ. ಅಂತಿಮವಾಗಿ ಹನೆಯದೆರೆ ಪ್ರದೇಶವು ಹೊಯ್ಸಳರ ಅಧೀನದಲ್ಲಿ ಇದ್ದಿರಬಹುದು ಆದರೆ ಮುಮ್ಮಡಿಸಿಂಗನು ಹನೆಯದಲ್ಲಿ ನೆಲಸಿದ್ದ ಮಾತ್ರಕ್ಕೆ ಹೊಯ್ಸಳರ ಬಂಧುವಾಗಿರಲು ಸಾಧ್ಯವಿಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸೇವುಣ ರಾಜ್ಯದಿಂದ ಬಂದು ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲಿಕ್ಕಾಗಿ ಹೊಯ್ಸಳರ ಅಧೀನ ಪ್ರದೇಶವಾದ ಹನೆಯದಲ್ಲಿ ಆಶ್ರಯ ಪಡೆದು ಅಲ್ಲಿಯೇ ತನ್ನ ಪರಿವಾರದ ಜೊತೆ ತನ್ನನ್ನು ಗುರ್ತಿಸಿಕೊಳ್ಳುವ ಪ್ರಯತ್ನಮಾಡಿದನು. ಹೀಗಾಗಿ ಹನೆಯವು ಮುಮ್ಮಡಿಸಿಂಗನ ರಾಜಧಾನಿ ಅಲ್ಲ ಅದು ಕೇವಲ ಆಶ್ರಯ ಪಡೆದುಕೊಂಡಿದ್ದ ಪ್ರದೇಶವಾಗಿತ್ತೆಂದು ಅಭಿಪ್ರಾಯಿಸಬಹುದು.

### ೪.೨. ಜಟ್ಟಿಂಗರಾಮೇಶ್ವರ

ಕುಮ್ಮಟದುರ್ಗದ ಅರಸರು ನೆಲೆಗೊಂಡಿದ್ದ ಪ್ರದೇಶಗಳಲ್ಲಿ ಜಟ್ಟಿಂಗರಾಮೇಶ್ವರವೂ ಸೇರಿದೆ. ಕುಮ್ಮಟದರಸರ ಕುಲದೈವವೂ ಈ ಜಟ್ಟಂಗಿ ಗಿರಿಯಾಗಿದೆ. ಅದರಲ್ಲಿಯೂ ಮುಖ್ಯವಾಗಿ ಕಂಪಿಲರಾಯನಿಗೆ ಮನೆದೇವರಾಗಿದ್ದು, ತನ್ನ ಮಗನಾದ ಕುಮಾರರಾಮನಾಥನಿಗೂ ಜಟ್ಟಂಗಿಯಲ್ಲಿ ನೆಲೆಸಿರುವ ರಾಮೇಶ್ವರನ ಹೆಸರನ್ನೇ ಇಟ್ಟಿರುವುದು ಎಂಬ ವಿಚಾರವನ್ನು ಸಾಂಗತ್ಯ ಕೃತಿಗಳು ಹೊರಹಾಕುತ್ತವೆ.

ಜಟ್ಟಂಗಿದುರ್ಗವು ಮುಮ್ಮಡಿಸಿಂಗನು ನೆಲೆಸಿದ್ದ ಹನೆಯ ಕೋಟೆಗೆ ಮೂರು ಮೈಲು ಅಂತರದಲ್ಲಿ ಕಂಡುಬಂದಿದೆ. ಜಟ್ಟಂಗಿಗಿರಿಯು ಕೇವಲ ಐತಿಹಾಸಿಕ ಪ್ರಸಿದ್ಧ ಸ್ಥಳವಾಗಿರದೇ, ಪುರಾಣ ಪ್ರಸಿದ್ಧಿಯೂ ಪಡೆದಿದೆ. ಸೀತಾಮಾತೆಯನ್ನು ರಾವಣನು ಅಪಹರಿಸಿ ಕೊಂಡೊಯ್ಯುವಾಗ ಸೀತೆಯನ್ನು ಕಾಪಾಡಲು ಶ್ರೀರಾಮಚಂದ್ರನ ಗೆಳೆಯನಾದ ಜಟಾಯು ರಾವಣನ ಜೊತೆ ಯುದ್ಧ ಮಾಡಿದಾಗ, ಜಟಾಯು ತನ್ನ ಪ್ರಾಣವನ್ನೇ ಮುಡುಪಿಟ್ಟಾಗ, ಇದರ ಸ್ಮರಣೆಗಾಗಿ ಶ್ರೀರಾಮನು ಇದೇ ಸ್ಥಳದಲ್ಲಿ ಈಶ್ವರ ಲಿಂಗವನ್ನು ಪ್ರತಿಷ್ಠಾಪನೆ ಮಾಡಿದನು. ಹೀಗಾಗಿ ಈ ಕ್ಷೇತ್ರಕ್ಕೆ ಮೂವರ ಹೆಸರನ್ನು ಇಡಲಾಗಿದೆ. ಜಟಾಯು, ರಾಮ, ಈಶ್ವರ ಎಂಬ ಹೆಸರಿನ ಮೂಲಕ ಜಟ್ಟಂಗಿ ರಾಮೇಶ್ವರ ಎಂಬ ಪುಣ್ಯನಾಮವು ಪ್ರಾಪ್ತವಾಗಿದೆ ಎಂಬ ಮಾಹಿತಿಗಳು ಹಿಂದಿನ ಅಧ್ಯಯನಗಳಿಂದ ದೊರೆತಿವೆ. ಹೀಗಾಗಿ ಈ ಬೆಟ್ಟದಲ್ಲಿ ಸೀತಾ ಸರೋವರವಿದೆ. ಹಾಗೂ ಸೀತಾದೇವಿಯ ಹೆಜ್ಜೆಯ ಗುರುತುಗಳೂ ಸಹ ಕಂಡುಬಂದಿವೆ. ಇಂತಹ ಪುರಾಣ ಭೂಮಿಯಲ್ಲಿ ಕಂಪಿಲರಾಯನ ಪರಿವಾರವು ನೆಲೆಗೊಂಡಿತ್ತು ಎಂಬುದು ತಿಳಿಯುತ್ತದೆ.

ಜಟ್ಟಂಗಿರಾಮೇಶ್ವರವು ಕುಮ್ಮಟದರಸರ/ಕಂಪಿಲರಾಯನ ರಾಜಧಾನಿಯಾಗಿತ್ತೇ ಅಥವಾ ಇಲ್ಲವೇ ಎಂಬ ವಿಚಾರ ಪ್ರಶ್ನೆಯಾಗಿಯೇ ಉಳಿದಿದೆ. ಏಕೆಂದರೆ ಕಂಪಿಲರಾಯ, ಆತನ ಕುಟುಂಬ ಮತ್ತು ಪರಿವಾರವೆಲ್ಲವೂ ಮುಮ್ಮಡಿಸಿಂಗನ ಮರಣದ ನಂತರ ವಲಸೆ ಹೊರಟರು. ಮುಮ್ಮಡಿಸಿಂಗನ ಮರಣದ ನಂತರ ರಾಜ್ಯದಲ್ಲಿ ತುಂಬಾ ಬರಗಾಲವು ಕಾಣಿಸಿಕೊಂಡಿತು. ಈ ಸಂದರ್ಭದಲ್ಲಿ ಜೀವನವೇ ಕಷ್ಟವೆನಿಸತೊಡಗಿತು. ಈ ಸಂದರ್ಭದಲ್ಲಿ ಧೈರ್ಯಗೆಡದ ಕಂಪಿಲನ ತಾಯಿ ಮಾದನಾಯಕಿ ಮಂತ್ರಿ ಬೈಚಪ್ಪನ ಸಹಾಯದಿಂದ ಕಿರಾತರ (ನಾಯಕರ) ಸಮೇತವಾಗಿ ವಲಸೆ ಹೊರಟಾಗ ಮಧ್ಯದಲ್ಲಿ ಹಚ್ಚ ಹಸಿರಿನಿಂದ ಕಂಗೊಳಿಸುತ್ತಿದ್ದ ಜಟ್ಟಂಗಿ ಗಿರಿಯಲ್ಲಿ ಬೀಡುಬಿಟ್ಟು ಇಲ್ಲಿಯೇ ವಾಸಿಸಲು ಪ್ರಾರಂಭಿಸಿದರು. ಹೀಗಾಗಿ ಇಲ್ಲಿಯೇ ಇದ್ದ ರಾಮೇಶ್ವರ ಕಂಪಿಲರಾಯನ ಮನೆದೇವರಾದನು. ಹೀಗಾಗಿಯೇ ತನ್ನ ಮಗನಿಗೆ ಅಂದರೆ ಮಕ್ಕಳಾಗದೆ ಕೊರಗುತ್ತಿದ್ದ ಹರಿಯಾಲದೇವಿಗೆ ರಾಮೇಶ್ವರನ ಅನುಗ್ರಹದಿಂದ ಜನಿಸಿದ ಕುಮಾರರಾಮನಿಗೆ ರಾಮನಾಥ ಎಂದು ಹೆಸರಿಟ್ಟರೆಂದು ಸಾಂಗತ್ಯ ಕೃತಿಗಳು ತಿಳಿಸುತ್ತವೆ. ಈ ಜಟ್ಟಂಗಿದುರ್ಗದಲ್ಲಿ ಕೆಲವು ಕಾಲ ಇಲ್ಲಿಯೇ ನೆಲೆಸಿ ಕಂಪಿಲರಾಯನು ಸ್ವಲ್ಪ ಏಳಿಗೆಯನ್ನು ಕಂಡುಕೊಂಡು, ನಂತರ ಹೊಸಮಲೆ ಅರಣ್ಯದಲ್ಲಿ ನೆಲೆಸಿದರೆಂಬ ಮಾಹಿತಿಗಳು ತಿಳಿದುಬರುತ್ತವೆ.

ರಾಮೇಶ್ವರ ದೇವಾಲಯದ ಪ್ರಾಚೀನತೆಯನ್ನು ತಿಳಿದುಕೊಳ್ಳುವಾಗ ಪ್ರಾಚೀನ ಕಾಲದಲ್ಲಿ ಜಟ್ಟಂಗಿ ಬೆಟ್ಟದ ಮೇಲಿದ್ದ ಇಟ್ಟಿಗೆಯ ಕಟ್ಟಡಗಳಿರುವುದು ಕಂಡುಬರುತ್ತದೆ. ರಾಮೇಶ್ವರ ದೇವಾಲಯದ ಇಟ್ಟಿಗೆ ಮೊದಲಾದ ಅವಶೇಷಗಳು ದೇವಾಲಯದ ಬಲಬದಿಯಲ್ಲಿ ಇಂದಿಗೂ ಕಂಡುಬರುತ್ತವೆ. ಈ ಪ್ರದೇಶದಲ್ಲಿ ಕಂಡುಬರುವ ಅಶೋಕನ ಬಂಡೆಗಲ್ಲು ಶಾಸನ ಮತ್ತು ಚೈತ್ಯಗಳಿಂದ ಅಂದು ಬೌದ್ಧ ಧರ್ಮ ಅಸ್ತಿತ್ವದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಜಟ್ಟಂಗ ರಾಮೇಶ್ವರ ಬೆಟ್ಟದ ಮೇಲೂ ಅಶೋಕನ ಬಂಡೆಗಲ್ಲು ಶಾಸನವಿದೆ.

"ಏಕಾಂತ ಎಂಬುದು ಬುದ್ಧನಿಗೆ ಇದ್ದ ಇನ್ನೊಂದು ಹೆಸರಾಗಿದ್ದು, ಬೌದ್ಧ ಧರ್ಮವನ್ನು ಏಕಾಂತ ಮತವೆಂದೂ ಕರೆಯಲಾಗುತ್ತಿತ್ತೆಂಬುದು ವಿದ್ವಾಂಸರ ಅಭಿಮತ" ಎಂಬುದು ಎಸ್.ವೈ. ಸೋಮಶೇಖರ್ ಅವರ ಜಟ್ಟಂಗ ರಾಮೇಶ್ವರ ಕೃತಿಯಲ್ಲಿ ತಿಳಿದುಬಂದಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಬೌದ್ಧ ಧರ್ಮದ ಅಸ್ತಿತ್ವ ಈ ಬೆಟ್ಟದಲ್ಲಿರುವುದು ಖಚಿತವಾಗುತ್ತದೆ. ಅಶೋಕನ ಆಳ್ವಿಕೆಯ ನಂತರ ಬೌದ್ಧ ಧರ್ಮವು ಅವನತಿ ಹೊಂದಿ ನಂತರದಲ್ಲಿ ಜಟ್ಟಂಗ ಬೆಟ್ಟವು ಶೈವ ಕ್ಷೇತ್ರವಾಗಿ ಮಾರ್ಪಾಡು ಹೊಂದಿರಬೇಕು ಎಂಬುದನ್ನು ಗಮನಿಸಿದರೆ ಕುಮ್ಮಟದ ಅರಸರು ಶೈವ ಧರ್ಮವನ್ನು ಅನುಸರಿಸುತ್ತಿದ್ದರಬಹುದು ಎಂಬುದನ್ನು ತಿಳಿಯಬಹುದು.

ಜಟ್ಟಂಗಿರಾಮೇಶ್ವರವು ಯಾವುದೇ ಕಾಲಕ್ಕೂ ಕುಮ್ಮಟದರಸರ ರಾಜಧಾನಿಯಾಗಿರಲಿಲ್ಲ. ಕಾರಣ ಇದಕ್ಕೆ ಯಾವ ಶಾಸನ ದಾಖಲೆಯ ಮಾಹಿತಿಗಳು ಕಂಡುಬಂದಿಲ್ಲ. ಆದಾಗ್ಯೂ ಇನ್ನೂ ಆಳವಾಗಿ ಚರ್ಚಿಸಿದರೆ, ಕಂಪಿಲರಾಯನು ಬರಗಾಲದಿಂದಾಗಿ ಈ ಪ್ರದೇಶದಲ್ಲಿ ನೆಲೆಸಿದ್ದ. ನಂತರ ಇಲ್ಲಿ ತನ್ನ ಅಸ್ತಿತ್ವವನ್ನು, ಏಳಿಗೆಯನ್ನು ಕಂಡುಕೊಂಡಿರುವ ವಿಚಾರ ಬಿಟ್ಟರೆ ಜಟ್ಟಂಗರಾಮೇಶ್ವರ ಪದ ಎಲ್ಲಿಯೂ ಕೇಳಿ ಬರುವುದಿಲ್ಲ. ಇಲ್ಲಿಯವರೆಗೂ ದೊರೆತಿರುವ ಕುಮ್ಮಟದರಸರಿಗೆ ಸಂಬಂಧಿಸಿದ ೨೩ ಶಾಸನಗಳಲ್ಲಿ ಎಲ್ಲಿಯೂ ಇದರ ಬಗ್ಗೆ ಉಲ್ಲೇಖವಾಗಿಲ್ಲ. ಕೆಲವು ಸಾಂಗತ್ಯ ಕೃತಿಗಳಲ್ಲಿ, ಲಾವಣಿಗಳಲ್ಲಿ ಮಾತ್ರ ಕಾಣಬಹುದು. ಹೀಗಾಗಿ ಜಟ್ಟಂಗರಾಮೇಶ್ವರವು ಕೇವಲ ಕಂಪಿಲರಾಯ ಮತ್ತು ಅವನ ಪರಿವಾರ ನೆಲೆಸಿದ್ದಂತಹ ಪ್ರದೇಶ ಅನ್ನುವುದು ಬಿಟ್ಟರೆ ಬೇರೆ ಯಾವ ಚುಟುವಟಿಕೆಗಳಾಗಲೀ, ಯುದ್ಧಗಳಾಗಲೀ ನಡೆದಿಲ್ಲವೆಂಬುದು ಖಚಿತವಾಗುತ್ತದೆ. ಇದರಿಂದಾಗಿ ಜಟ್ಟಂಗರಾಮೇಶ್ವರ ಕಂಪಿಲರಾಯ ವಾಸಿಸಿದ್ದ ಎನ್ನುವುದನ್ನು ಹೊರತುಪಡಿಸಿದರೆ ಇದು ಕುಮ್ಮಟದರಸರ ರಾಜಧಾನಿಯಾಗಿ ಯಾವ ಕಾಲಕ್ಕೂ ಆಗಿರಲಿಲ್ಲ ಎನ್ನುವುದು ಅಕ್ಷರಶಃ ಸತ್ಯವೆನಿಸುತ್ತದೆ.

**೪.೩. ಹೊಸಮಲೆದುರ್ಗ (ರಾಮಘಡ)**

ಹೊಸಮಲೆದುರ್ಗವು ದಟ್ಟವಾದ ಅರಣ್ಯ ಪ್ರದೇಶದಿಂದ ಕೂಡಿದ್ದು ಶತ್ರುಗಳನ್ನು ತಡೆಯುವ ಉದ್ದೇಶದಿಂದ ಹಾಗೂ ರಕ್ಷಣೆಯ ದೃಷ್ಟಿಯಿಂದ ಇದನ್ನು ನಿರ್ಮಿಸಿರಬಹುದು. ಹೊಸಮಲೆದುರ್ಗವು ಕಂಪಿಲನ ಎರಡನೇ ರಾಜಧಾನಿಯಾಗಿತ್ತೆಂದೂ, ಇದನ್ನು ಕಂಪಿಲನೇ ಕಟ್ಟಿಸಿದನೆಂದೂ, ಕುಟುಂಬ ಸಮೇತವಾಗಿ ಕಿರಾತರ ಜೊತೆ ಇಲ್ಲಿಯೇ ನೆಲೆಸಿದ್ದನೆಂಬ ವಿಚಾರಗಳು ಸಾಂಗತ್ಯಗಳಿಂದ ವ್ಯಕ್ತವಾಗುತ್ತವೆ.

ನಂಜುಂಡ ಕವಿಯು ಉಲ್ಲೇಖ ಮಾಡಿರುವ ಹಾಗೆ ಇದು ಹಂಪಿಯ ದಕ್ಷಿಣ ಭಾಗದಲ್ಲಿ ಕಂಡುಬರುತ್ತದೆ ಎಂದು ವರ್ಣಿಸಿದ್ದಾನೆ. ವಿದ್ವಾಂಸರುಗಳು ಹೊಸದುರ್ಗ, ಹೊಸಮಲೆದುರ್ಗಗಳೆರಡೂ ಒಂದೇ ಎಂದು ಭಾವಿಸಿದ್ದರು. ಎನ್.ವೆಂಕಟರಮಣಯ್ಯನವರು ಇದೇ ದೃಷ್ಟಿಯಿಂದ ಈ ಎರಡು ದುರ್ಗಗಳನ್ನು ಒಂದೆಯೆಂದು ಭಾವಿಸಿದ್ದಲ್ಲದೆ ಅವು ಆನೆಗೊಂದಿಯೇ ಇರಬಹುದೆಂದು ಎಣಿಸಿದ್ದುಂಟು.[೬] ಈ ತರಹದ ತೀರ್ಮಾನಗಳಿಗೆ ಬರುವುದು ಕಷ್ಟವೆನಿಸುತ್ತದೆ. ಏಕೆಂದರೆ ಹೊಸಮಲೆದುರ್ಗಕ್ಕೆ ರಾಮನದುರ್ಗ ಎಂಬ ಹೆಸರಿತ್ತೆಂದು ಕೈಫಿಯತ್ತಿನ ಮೂಲಕ ತಿಳಿದುಬರುವುದು. ಆದರೆ ಜೋಯಿಸರು ಈ ಸಂದೇಹವನ್ನು ನಿವಾರಿಸುವ ಪ್ರಯತ್ನ ಮಾಡಿದ್ದಾರೆ. ಜೋಯಿಸರು ಇದು ಸಂಡೂರಿನ ಸುತ್ತಮುತ್ತಲಿನ ಪ್ರದೇಶವಿರಬಹುದೆಂದು ಶಂಕಿಸಿ ಅಲ್ಲಿನ ಅಧಿಕಾರಿಯ ಮೂಲಕ ವಿವರವನ್ನು ಪಡೆದು ಈ ಸಂದೇಹವನ್ನು ನಿವಾರಿಸಿದ್ದಾರೆ.[೭] ಅಂದರೆ ಈ ಪ್ರದೇಶವು ಈಗಿನ ರಾಮಘಡ ಆಗಿದ್ದು ಸಂಡೂರು ತಾಲೂಕಿನ ಪ್ರದೇಶವಾಗಿದೆ.

ಈ ಹೊಸಮಲೆಯು ತುಂಗಾಭದ್ರಾ ನದಿಯ ದಕ್ಷಿಣಕ್ಕೆ ಕಂಡುಬಂದಿದ್ದು, ಇದನ್ನು ಕಂಪಿಲರಾಯನೇ ಕಟ್ಟಿಸಿದನೆಂಬ ಮಾಹಿತಿಗಳನ್ನು ಸಾಂಗತ್ಯಗಳು ತಿಳಿಸಿಕೊಡುತ್ತವೆ. ಕುಮ್ಮಟದುರ್ಗದಷ್ಟೇ ಇದು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದರಿಂದಲೇ ಇದು ಕಂಪಿಲರಾಯನ ರಾಜಧಾನಿಯಾಗಿತ್ತೆಂಬ ಸಂಗತಿಗಳನ್ನು ಕಾವ್ಯಗಳಿಂದ ತಿಳಿಯಬಹುದು. ಈ ಪ್ರದೇಶವನ್ನು ಕಂಪಿಲನು ಜಟ್ಟಂಗಿಯಲ್ಲಿ ಮೊದಲು ನೆಲೆಸಿ ಏಳಿಗೆ ಕಂಡುಕೊಂಡು ನಂತರ ಅಲ್ಲಿಂದ ವಲಸೆ ಹೋದಾಗ ಮಾರ್ಗ ಮಧ್ಯದಲ್ಲಿ ಕಾಣಿಸಿದ ಲೋಹಗಿರಿಯ ಕುಮಾರಸ್ವಾಮಿಗೆ ಪೂಜೆಮಾಡಿ ಬೇಟೆಯಾಡುತ್ತಾ ಚಲಿಸಿದಾಗ ಮುಂದೆ ಕಂಡಿದ್ದೇ ಈ ಆಯಕಟ್ಟಿನ ದಟ್ಟ ಅರಣ್ಯದ ಮಧ್ಯೆ ಇದ್ದ ಹೊಸಮಲೆ ಪ್ರದೇಶ. ಇದು ವೈರಿಗಳಿಗೆ ಭೇದಿಸಲಾಗದಂತಹ ಸ್ಥಳವಾಗಿದ್ದರಿಂದ ಸೌಲಭ್ಯದ ದೃಷ್ಟಿಯಿಟ್ಟುಕೊಂಡು ಮತ್ತೊಮ್ಮೆ ಹೊಸದಾದ ಗಿರಿದುರ್ಗವನ್ನು ನಿರ್ಮಿಸಿದನು. ಇಲ್ಲಿಂದ ಕಂಪಿಲನ ಆಳ್ವಿಕೆಯು ಮುಂದುವರಿದು ಹೊಸಮಲೆದುರ್ಗವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಿರ್ವಹಿಸಲಾರಂಭಿಸಿದನು. ಈ ಪ್ರದೇಶವನ್ನು 'ರಾಮನ ಮಲೆ' ಎಂತಲೂ ಕರೆಯಲಾಗಿದೆ. ಕ್ರಿ.ಶ. ೧೫೨೮ರ ಶಾಸನವು ವಿಜಯನಗರದ ಅರಸ ಕೃಷ್ಣದೇವರಾಯನ ಕಾಲದ್ದು. ಹೊಸಮಲೆ ರಾಮನಾಥವೊಡೆಯನ ನೆನಪಿಗೆ ಮತ್ತು ಆನೆಗೊಂದಿಗೆ ಮಡಿದ ವೀರರಿಗೆ ವೀರಸ್ವರ್ಗವಾಗಲಿ ಎಂದು ಗೋಪಾಯಿ, ಆಕೆಯ ತಮ್ಮ ರಾಮಣ ಮತ್ತು ಇತರರು ಕೂಡಿ ಹೊಸಮಲೆದುರ್ಗದಲ್ಲಿ ರಾಮನಾಥ ದೇವರ ಗುಡಿಯನ್ನು ನಿರ್ಮಿಸಿದರು.[೮] ಇಷ್ಟೇ ಅಲ್ಲದೆ ಈ ಶಾಸನವು ಕುಮ್ಮಟದುರ್ಗದ ವಂಶಾವಳಿಯನ್ನು ನಿರೂಪಿಸುವ ಮುಖ್ಯವಾದ ಪುರಾವೆಯನ್ನು ಒದಗಿಸುತ್ತವೆ. ಹೊಸಮಲೆದುರ್ಗವು ಕುಮ್ಮಟದರಸರ ರಾಜಧಾನಿಯಾಗಿತ್ತೆನ್ನಲು ಸಂಡೂರಿನ ಶಾಸನವು ತುಂಬಾ ಮಹತ್ವದ ದಾಖಲೆಯಾಗಿದೆ. ಈ ಶಾಸನವನ್ನು ಅನುಸರಿಸಿ ಅಭಿಪ್ರಾಯಿಸುವುದಾದರೆ ಹೊಸಮಲೆದುರ್ಗಕ್ಕೆ ಆಗಾಗ ಜನರು ಹೋಗಿಬರುತ್ತಿದ್ದುದು ಹಾಗೂ ಬ್ರಿಟಿಷರ ಕಾಲದಲ್ಲಿ ಇದು ವಿಶ್ರಾಂತಿಯ ತಂಗುದಾಣವಾಗಿತ್ತು ಎಂಬ ಹಲವು ವಿಚಾರಗಳು ತಿಳಿದುಬರುತ್ತವೆ.

ಕಂಪಿಲರಾಯನು ಹೊಸಮಲೆ ಎಂಬ ಅರಣ್ಯಕ್ಕೆ ಬಂದು ನೆಲೆಸಿ ಪುನಃ ಈ ಪ್ರದೇಶವನ್ನು ನಿರ್ಮಿಸುತ್ತಾನೆ. ಹೊಸದಾದ ಕೋಟೆಯನ್ನು ನಿರ್ಮಿಸಿದ್ದರಿಂದಲೇ ಪ್ರಾಯಶಃ ಈ ಸ್ಥಳಕ್ಕೆ ಹೊಸಮಲೆದುರ್ಗ ಎಂದು ಕರೆದಿರಬಹುದು. ಇದು ಸಂಡೂರಿನ ವಾಯುವ್ಯ ಭಾಗಕ್ಕೆ ೧೦ ಕಿ.ಮೀ ಅಂತರದಲ್ಲಿದ್ದು, ಕುಮಾರರಾಮನ ಪ್ರಸಿದ್ಧಿಯಿಂದಾಗಿ ಆನಂತರ ಈ ಸ್ಥಾನಕ್ಕೆ ರಾಮನಮಲೆ ಎಂಬ ಹೆಸರು ರೂಢಿಗತವಾಗಿರಬಹುದು. ನಂಜುಂಡ ಕವಿಯು ತನ್ನ ರಾಮನಾಥ ಚರಿತೆಯಲ್ಲಿ ಹಂಪಿಯ ದಕ್ಷಿಣಕ್ಕಿರುವ ಅರಣ್ಯವನ್ನು ಹೊಸಮಲೆ ಎನ್ನುತ್ತಾನೆ.[೯] ಆದರೆ ಪಾಂಚಾಳಗಂಗನ ಚೆನ್ನರಾಮ ಸಾಂಗತ್ಯದಲ್ಲಿ ಕಂಪಿಲರಾಯನು ಕೋಟೆಯೊಂದನ್ನು ನಿರ್ಮಿಸಿ, ಅದನ್ನು ಹೊಸಮಲೆದುರ್ಗವೆಂದು ಕರೆದು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನೆಂದು ಹೇಳಲಾಗಿದೆ.[೧೦] ಅಂದರೆ ಸಾಂಗತ್ಯದ ಪ್ರಕಾರ ಪರಿಶೀಲನೆ ಮಾಡಿದರೆ ಹೊಸಮಲೆದುರ್ಗವು ಕುಮ್ಮಟದುರ್ಗಕ್ಕೂ ಮೊದಲೇ ಕಂಪಿಲನ ರಾಜಧಾನಿ ಆಗಿತ್ತೇನೋ ಎಂಬ ಸಂಶಯ ಬರುತ್ತದೆ. ಆದರೆ ಇಲ್ಲಿ ಸಾಂಗತ್ಯಗಳ ಹೇಳಿಕೆಯನ್ನಷ್ಟೇ ಪರಿಗಣಿಸಲು ಸಾಧ್ಯವಿಲ್ಲ. ಏಕೆಂದರೆ ಮುಖ್ಯವಾಗಿ ಚಾರಿತ್ರಿಕ ಹಾಗೂ ಪುರಾತತ್ವ ವಿವರಗಳನ್ನು ಸ್ಪಷ್ಟಪಡಿಸುವ ದಾಖಲೆಗಳು ಅವಶ್ಯವಾಗಿರುವುದರಿಂದ ಇನ್ನೊಂದು ಮುಖ್ಯ ರಾಜಧಾನಿಯಾಗಿತ್ತು ಎಂದು ಅಭಿಪ್ರಾಯಿಸುವ ಬದಲಾಗಿ ಹೊಸಮಲೆಯು ಆ ಸಂದರ್ಭದಲ್ಲಿ ಕೇವಲ ರಾಜಧಾನಿಯಾಗಿತ್ತು ಎಂದು ತಿಳಿಯಬಹುದು. ಎಸ್.ವೆಂಕಟರಮಣಯ್ಯ ಅವರು ಆನೆಗೊಂದಿಯನ್ನು ಹೊಸಮಲೆದುರ್ಗವೆಂದು ಗುರುತಿಸುತ್ತಾರೆ.[೧೧] ವೆಂಕಟರಮಣಯ್ಯ ಅವರ ಈ ಹೇಳಿಕೆಯನ್ನು ಸಮರ್ಥಿಸಲು ಸಾಧ್ಯವಿಲ್ಲ. ಕಾರಣ ರಾಮಘಡದಲ್ಲಿ ಕಂಪಿಲರಾಯನಿಗೆ ಸಂಬಂಧಿಸಿದಂತೆ ಶಾಸನಗಳು ದೊರೆತಿದ್ದು ಕ್ರಿ.ಶ. ೧೩-೧೪ನೆಯ ಶತಮಾನದ ಕಟ್ಟಡಾವಶೇಷಗಳು, ಕೋಟೆ, ಶಿಲ್ಪಗಳು ಮತ್ತು ಶಾಸನಗಳನ್ನು ಒಳಗೊಂಡಿದೆ. ಅಲ್ಲದೆ ರಾಮಘಡ ಶಾಸನವು ಕ್ರಿ.ಶ. ೧೩೨೩ರಲ್ಲಿ ಹೊಯ್ಸಳರ ಬಲ್ಲಾಳನು ಕಂಪಿಲದೇವನ ವಿರುದ್ಧ ದಂಡೆತ್ತಿ ಬಂದನೆಂದು ತಿಳಿಸುತ್ತದೆ.[೧೨] ಹೀಗಾಗಿ ಜೋಯಿಸರು ಹೇಳುವ ಪ್ರಕಾರ ಹೊಸಮಲೆದುರ್ಗವು ಸಂಡೂರು ಪ್ರದೇಶದ ಅರಣ್ಯದ ನಡುವೆ ಇದ್ದು, ಕೋಟೆಯ ಅವಶೇಷಗಳನ್ನು ಗುರುತಿಸಿರುವುದಾಗಿ ತಿಳಿಸುತ್ತಾರೆ.[೧೩] ಇವರ ಹೇಳಿಕೆಯನ್ನು ಸಮರ್ಥಿಸಬಹುದು. ಆನೆಗುಂದಿಯು ಅರಣ್ಯಪ್ರದೇಶವಲ್ಲ, ಅಲ್ಲಿ ಯಾವುದೇ ಕೋಟೆಗಳ ಕುರುಹುಗಳು ದೊರೆತಿಲ್ಲ. ಆದರೆ ಹೊಸಮಲೆದುರ್ಗವು ಅಂದರೆ ರಾಮಘಡವು ಇಂತಹ ಸನ್ನಿವೇಶಕ್ಕೆ ಹೊಂದಿಕೊಂಡಿರುವ ಪ್ರದೇಶವಾಗಿದ್ದು ಹೊಸಮಲೆಯನ್ನು ರಾಮಘಡ ಎಂದು ಕರೆದಿರುವುದೇ ಸೂಕ್ತವೆನಿಸುತ್ತದೆ.

ಮೇಲಿನ ಹೇಳಿಕೆಗಳನ್ನು ಗಮನಿಸಿದಾಗ ಹೊಸಮಲೆದುರ್ಗವು ಕಂಪಿಲನ ರಾಜಧಾನಿಯಾಗಿತ್ತು ಎನ್ನುವುದು ಸರಿ ಎನಿಸುತ್ತದೆ. ಏಕೆಂದರೆ ಶಾಸನಗಳೇ ಪ್ರಮುಖ ಆಧಾರವಾಗಿರುವುದರಿಂದ ಕುಮ್ಮಟದುರ್ಗದಷ್ಟೇ ಇದೂ ಸಹ ಪ್ರಾಮುಖ್ಯತೆಯನ್ನು ಪಡೆದಿತ್ತು ಎಂದು ಹೇಳಬಹುದು.

### ೪.೪. ದೊರವದಿ (ದರೋಜಿ)

ಮುಮ್ಮಡಿಸಿಂಗೆಯನ ವಶದಲ್ಲಿದ್ದ ಮತ್ತೊಂದು ಪ್ರದೇಶವೆಂದರೆ ದೊರವದಿ. ಹನೆಯದೆರೆಯು ಮುಮ್ಮಡಿಸಿಂಗೆಯನ ವಶದಲ್ಲಿದ್ದದ್ದು ನಿಜ. ಇದು ದೊರವದಿಗೆ ನೆರೆಹೊರೆಯ ಪ್ರದೇಶವಾಗಿತ್ತು. ಸೇವುಣರ ಆಕ್ರಮಣಗಳಿಂದ ದೊರವದಿಯು ಈತನ ವಶದಲ್ಲಿದ್ದವೆಂದು ತಿಳಿಯುತ್ತದೆ. ಆರಂಭದಲ್ಲಿ ಮುಮ್ಮಡಿಸಿಂಗೇಯನು ಸೇವುಣರ ದಾಳಿಗಳನ್ನು ಹೆಚ್ಚು ಎದುರಿಸಿದ್ದು ಸೇವುಣರ ರಾಜ ರಾಮಚಂದ್ರನ ಸೇನಾದಂಡನಾಯಕ ರಾಯದಂಡನಾಥ ಚಾವುಂಡರಸನು ಮುಮ್ಮಡಿಸಿಂಗೆಯನ (ಪ್ರದೇಶ ದೊರವದಿ) ಮೇಲೆ ದಂಡೆತ್ತಿ ಬಂದನೆಂದು ಶಾಸನದಿಂದ ತಿಳಿದುಬರುತ್ತದೆ.[೧೪] ಈ ಶಾಸನದಿಂದ ಮುಮ್ಮಡಿಸಿಂಗೇಯನದೇ ಅಂತಿಮ ಗೆಲುವಾಗಿತ್ತು ಎಂಬುದನ್ನು ಊಹಿಸಬಹುದು. ಇದರಿಂದಾಗಿ ಸಿಂಗೇಯನ ರಾಜ್ಯವಿಸ್ತರಣೆ ಎಷ್ಟಿದ್ದಿತೆಂಬುದು ನಮಗೆ ಅರಿವಾಗುತ್ತದೆ. ಕೊಂಕಣದ ಮಹಾಮಂಡಲೇಶ್ವರ ಕನ್ನರದೇವನು ಸೇವುಣರ ಪರವಾಗಿ ದೊರವದಿಯ ಮೇಲೆ ದಾಳಿ ಮಾಡುತ್ತಾನೆ.[೧೫] ಈ ಹೇಳಿಕೆಯೂ ಸಹ ದೊರವದಿಯು ಮುಮ್ಮಡಿಸಿಂಗೆಯನ ಅಧೀನದಲ್ಲಿದ್ದ ದೊರವದಿಯ ಮೇಲೆ ದಾಳಿ ಮಾಡುತ್ತಾನೆ ಎಂಬ ಖಚಿತ ಮಾಹಿತಿಯನ್ನು ನೀಡುತ್ತದೆ. ಇದರಿಂದ ತಿಳಿದುಬರುವ ಮತ್ತೊಂದು ವಿಚಾರವೆಂದರೆ ಮುಮ್ಮಡಿಸಿಂಗ ಸೇವುಣರ ವಿರೋಧಿಯಾಗಿದ್ದನೆಂಬುದು ಅರಿವಾಗುತ್ತದೆ. ದೊರವದಿಯು ಮುಮ್ಮಡಿಸಿಂಗೆಯನ ಕಾಲದಲ್ಲಷ್ಟೇ ಅಲ್ಲ, ಕಂಪಿಲನ ಕಾಲದಲ್ಲೂ ದೊರವದಿಯು ಅಧೀನ ಪ್ರದೇಶವಾಗಿತ್ತು ಎಂಬ ಸಂಗತಿಯು ಹೊಯ್ಸಳರ ಮೂರನೆಯ ಬಲ್ಲಾಳನು ಕ್ರಿ.ಶ. ೧೩೨೦ರಲ್ಲಿ ದೊರವಾಡಿಯ ಮೇಲೆ ದಾಳಿ ಮಾಡಿ ಕಂಪಿಲದೇವನೊಂದಿಗೆ ಯುದ್ಧ ಮಾಡುತ್ತಾನೆ ಹಾಗೂ ಈ ಯುದ್ಧದಲ್ಲಿ ಬಲ್ಲಾಳನ ಸೇನಾಪತಿ ಕುರುಕನಾಯಕ ಮಡಿದನು[೧೬] ಎಂಬ ಈ ಹೇಳಿಕೆಯನ್ನು ಸಮರ್ಥಿಸುತ್ತದೆ.

ದೊರವದಿಯು ಮುಮ್ಮಡಿಸಿಂಗೆಯನ ರಾಜಧಾನಿಯಾಗಿತ್ತೆನ್ನಲು ನಿಖರವಾದ ಶಾಸನಗಳು ಕಂಡುಬಂದಿಲ್ಲ. ಆದರೆ ದೊರವದಿಯು ಮುಮ್ಮಡಿಸಿಂಗ ಮತ್ತು ಕಂಪಿಲನ ಆಡಳಿತ ಕೇಂದ್ರವಾಗಿತ್ತು. ಏಕೆಂದರೆ ಮುಮ್ಮಡಿಸಿಂಗನನ್ನು ಪರಿಚಯಿಸುವ ಮೊದಲ ಶಾಸನವೇ ಹಿರೇಕೋಗಿಲೂರು ಶಾಸನ. ಸೇವುಣರು ಮುಮ್ಮಡಿಸಿಂಗನ ಪ್ರದೇಶವಾದ ದೊರವದಿಯ ಮೇಲೆ ದಾಳಿಮಾಡಿದ್ದನ್ನು ವಿವರಿಸುತ್ತದೆ. ಇದೆ ಹಿರೇಕೋಗಿಲೂರಿನ ಮತ್ತೊಂದು ಶಾಸನವು ಕ್ರಿ.ಶ. ೧೨೮೨–೮೩ರಲ್ಲಿ ಸೇವುಣ ಸೈನ್ಯವೂ ಮುಮ್ಮಡಿಸಿಂಗೆಯನ ವಶದಲ್ಲಿದ್ದ ದೊರವದಿಯ ಮೇಲೆ ಪುನಃ ದಾಳಿಮಾಡಿತ್ತೆಂದು ತಿಳಿಸುತ್ತದೆ.[೧೭] ಹೀಗಾಗಿ ಮುಮ್ಮಡಿಸಿಂಗನಿಗೆ ಮೊದಲ ರಾಜಧಾನಿ ದೊರವದಿಯು ಆಗಿತ್ತೆಂಬ ಊಹೆಯು ಸರಿಯೆನಿಸುತ್ತದೆ ಕುಮ್ಮಟದುರ್ಗವು ಸಿಂಗೆಯನಾಯಕನ ರಾಜಧಾನಿಯಾಗಿತ್ತೆಂಬುದನ್ನು ಒಪ್ಪಿಕೊಂಡರೂ ಅದಕ್ಕೂ ಪೂರ್ವದಲ್ಲಿ ದೊರವದಿಯನ್ನು ಮತ್ತೊಂದು ರಾಜಧಾನಿಯನ್ನಾಗಿ ಮಾಡಿಕೊಂಡಿರಬಹುದೆಂಬ ಊಹೆ ಸರಿ ಎನಿಸುತ್ತದೆ. ಮುಮ್ಮಡಿಸಿಂಗ ಮತ್ತು ಕಂಪಿಲರಾಯನ ಶಾಸನಗಳನ್ನು ಗಮನಿಸಿದಾಗ ಸೇವುಣರು ಈ ಪ್ರದೇಶದ ಮೇಲೆ ಹೆಚ್ಚು ಬಾರಿ ದಾಳಿ ಮಾಡಿರುವ ಸಂಗತಿಗಳು ಹೊರಬರುತ್ತವೆ. ದೊರವದಿಯು ಮುಮ್ಮಡಿಸಿಂಗೆಯನಿಗೆ ಮುಖ್ಯ ಆಡಳಿತ ಕೇಂದ್ರವಾಗಿತ್ತು, ರಾಜಧಾನಿಯೂ

ಆಗಿತ್ತು. ರಾಜಧಾನಿಯಾಗಿದ್ದರಿಂದಲೇ ಸೇವುಣರಿಂದ ಮತ್ತು ಹೊಯ್ಸಳರಿಂದ ಪದೇ ಪದೇ ಕುಮ್ಮಟದರಸರ ಮೇಲೆ ದಾಳಿಗಳಾಗಿರಬಹುದು ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ದೊರವದಿಯು ಮುಮ್ಮಡಿಸಿಂಗೆಯನ ವಶದಲ್ಲಿದ್ದ ಹನೆಯದೆರೆಗೆ ಸಮೀಪದಲ್ಲಿತ್ತು. ದೊರವದಿಯು ಕುರುಗೋಡು ಬೀಡಿನಲ್ಲಿತ್ತು. ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಇಂದಿನ ಸಂಡೂರು ತಾಲ್ಲೂಕಿನ ದರೋಜಿ ಗ್ರಾಮವೇ ದೊರವಾದಿ ಎಂದು ಗುರುತಿಸುತ್ತಾರೆ.[೧೮] ಕ್ರಿ.ಶ. ೧೨೮೦ರ ವೇಳೆಗಾಗಲೇ ದೊರವಾದಿಯನ್ನು ಒಳಗೊಂಡಂತೆ ಹೊಯ್ಸಳ ರಾಜ್ಯದ ಉತ್ತರ ಮತ್ತು ಈಶಾನ್ಯ ಗಡಿಭಾಗಗಳು ಮುಮ್ಮಡಿಸಿಂಗೆಯನ ವಶದಲ್ಲಿದ್ದವೆಂಬುದು ಸ್ಪಷ್ಟವಿದೆ.[೧೯] ಕ್ರಿ.ಶ. ೧೨೮೦ ಮತ್ತು ೧೨೮೩ರ ಸೇವುಣರ ಆಕ್ರಮಣಗಳು ದೊರವಾದಿಯು ಮೊದಲಿಗೆ ಸಿಂಗಯನ ಮುಖ್ಯ ಆಡಳಿತ ಕೇಂದ್ರವಾಗಿತ್ತು ಎಂಬುದನ್ನು ತೋರಿಸಿಕೊಟ್ಟಿದೆಯಾದರೂ ಕುಮ್ಮಟದುರ್ಗಕ್ಕೂ ಪೂರ್ವದಲ್ಲಿ ದೊರವಾದಿಯು ಸಿಂಗನ ರಾಜಧಾನಿ ಆಗದ್ದಿರಬಹುದೆಂಬ ಅನುಮಾನಗಳು ಕಾಡುತ್ತವೆ. ಆದರೆ ದೊರವಾದಿಯು ಮುಮ್ಮಡಿಸಿಂಗನ ರಾಜಧಾನಿಯಾಗಿತ್ತು ಎಂಬ ಬಗ್ಗೆ ಸ್ಪಷ್ಟ ಮಾಹಿತಿ ಇಲ್ಲ ಎಂದು ಸಿ.ಎಸ್.ಪಾಟೀಲರು ಅಭಿಪ್ರಾಯಪಡುತ್ತಾರೆ. ಆದರೆ ಆರ್.ಎಸ್. ಪಂಚಮುಖಿಯವರು ಮುಮ್ಮಡಿಸಿಂಗೆಯನಾಯಕನು ಕುಮ್ಮಟದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ದೊರವಾದಿಯನ್ನು ಆಳುತ್ತಿದ್ದನೆಂದು ತಿಳಿಸುತ್ತಾರೆ.[೨೦] ವಿದ್ವಾಂಸರುಗಳ ಮೇಲಿನ ಎಲ್ಲಾ ಹೇಳಿಕೆಗಳನ್ನು ಪರಿಶೀಲಿಸಿದಾಗ ದೊರವಾದಿಯ ಮೇಲೆ ಹೊಯ್ಸಳರು ಸೇರಿದಂತೆ ಸೇವುಣರ ದಾಳಿಗಳು ನಿರಂತರವಾಗಿದ್ದು, ಮುಮ್ಮಡಿಸಿಂಗನು ಬಹುಶಃ ಇಲ್ಲಿಯೇ ವಾಸ್ತವ್ಯ ಹೂಡಿದ್ದಿರಬಹುದು. ಹೀಗಾಗಿ ಇದನ್ನೇ ರಾಜಧಾನಿಯಾಗಿ ಮಾಡಿಕೊಂಡಿದ್ದಿರಬಹುದೆಂದು ಅನಿಸುತ್ತದೆ. ಅಳಿಲೊಂದನ್ನು ಹಿಡಿಯಲು ಹೋದಾಗ ಅಲ್ಲಿ ಬಿಲದಲ್ಲಿ ದೊರೆತ ಸಂಪತ್ತನ್ನು ಸಂಗ್ರಹಿಸಿ ನಂತರ ದೆಹಲಿ ಸುಲ್ತಾನರ ಆಕ್ರಮಣಗಳು ಸೇವುಣರ ಮೇಲಾದಾಗ ಸಂಪತ್ತಿನ ಜೊತೆಗೆ ಹನೆಯದರೆ ಪ್ರದೇಶದಿಂದ ದೊರವಾದಿಗೆ ಬಂದು ನೆಲೆಸಿದ್ದಿರಬಹುದು. ಹೀಗಾಗಿಯೇ ಪದೇ ಪದೇ ಶತ್ರುಗಳ ದಾಳಿಗಳು ದೊರವಾದಿಯ ಮೇಲೆ ಆಗಿರಬಹುದು. ಮುಮ್ಮಡಿಸಿಂಗನ ಮೇಲಿನ ದ್ವೇಷದಿಂದಲೇ ಅಥವಾ ದೊರವಾದಿಯಲ್ಲಿ ಸಂಗ್ರಹಿಸಿಟ್ಟಿದ್ದ ಸಂಪತ್ತಿನ ದೋಚುವಿಕೆಗಾಗಿಯೇ ದಾಳಿಗಳಂತೂ ನಿರಂತರವಾಗಿ ನಡೆದಿವೆ. ಯಾವ ಕಾರಣಕ್ಕಾಗಿ ನಡೆದಿರುವುದು ಅಸ್ಪಷ್ಟವಾಗಿರುವುದರಿಂದಲೇ ರಾಜಧಾನಿಯ ಕುರಿತು ಖಚಿತವಾಗಿ ಹೇಳಲು ಸಾಧ್ಯವಾಗುತ್ತಿಲ್ಲ. ಆದರೂ ಪ್ರಸ್ತುತ ಅಧ್ಯಯನದಲ್ಲಿ ರಾಜಧಾನಿಯೆಂದು ಸ್ಪಷ್ಟೀಕರಿಸುವ ಪ್ರಯತ್ನ ಮಾಡಲಾಗಿದೆ.

**೪.೫. ಕುಮ್ಮಟದುರ್ಗ**

ಕುಮ್ಮಟದುರ್ಗವು ಇತಿಹಾಸ ಪ್ರಸಿದ್ಧ ಸ್ಥಳವಾಗಿದ್ದು, ಕುಮಾರರಾಮನ ಕಾಲಕ್ಕೆ ರಾಜಧಾನಿಯಾಗಿತ್ತು ಎಂಬುದು ತಿಳಿದುಬರುತ್ತದೆ. ಈ ದುರ್ಗವು ಕೊಪ್ಪಳದಿಂದ ಗಂಗಾವತಿಗೆ ಹೋಗುವ ಮಾರ್ಗದ ಮಧ್ಯದಲ್ಲಿ ಮುಕ್ಕುಂಪಿ ಎಂಬ ಗ್ರಾಮ ದೊರೆಯುತ್ತದೆ. ಅಲ್ಲಿಂದ ದಕ್ಷಿಣಕ್ಕೆ ಹೋದರೆ ಸುಮರು ೨ ಕಿ.ಮೀ. ಅಂತರದಲ್ಲಿ ಒಂದು ದುರ್ಗಮವಾದ ಗ್ರಾನೈಟ್ ಕಲ್ಲುಗಳ

ಕೋಟೆ ಪ್ರದೇಶ ದೊರಕುತ್ತದೆ. ಅದೇ ಕುಮ್ಮಟದುರ್ಗವಾಗಿದ್ದು, ಇದು ಪೂರ್ವಕ್ಕೆ ಕಂಡುಬರುವ ಜಬ್ಬಲಗುಡ್ಡ ಹಾಗೂ ಹಳೇ ಕುಮಟಾ ಗ್ರಾಮಗಳ ಮಧ್ಯದಲ್ಲಿ ಈ ದುರ್ಗವು ನಿರ್ಮಾಣಗೊಂಡಿದೆ.

**ವಿದೇಶಿ ಪ್ರವಾಸಿಗರ ಹೇಳಿಕೆಗಳು**

ಕುಮ್ಮಟದುರ್ಗದ ಬಗ್ಗೆ ಪ್ರಾರಂಭದಲ್ಲಿ ಮಾಹಿತಿಗಳನ್ನು ಕಲೆಹಾಕಲು ವಿದ್ವಾಂಸರುಗಳು ಹರಸಾಹಸ ಮಾಡಿದ್ದಾರೆ. ಕೊನೆಗೂ ವಿದ್ವಾಂಸರ ಸಂಶೋಧನೆಗೆ ವಿದೇಶಿ ಪ್ರವಾಸಿಗರ ಬರವಣಿಗೆಗಳು ಸಹಕಾರ ನೀಡಿವೆ. ಕುಮ್ಮಟದುರ್ಗದ ಬಗೆಗೆ ಮೊಟ್ಟಮೊದಲ ಬಾರಿಗೆ ವಿದೇಶಿ ಪ್ರವಾಸಿಯಾದ ನ್ಯೂನಿಜನು ಕೆಲವು ಮಾಹಿತಿಗಳನ್ನು ಹೊರಹಾಕಿದ್ದಾನೆ. ದೆಹಲಿ ಸುಲ್ತಾನರು ಆನೆಗೊಂದಿಗೆ ಮುತ್ತಿಗೆ ಹಾಕಿದಾಗ ಅಲ್ಲಿಯ ಒಡೆಯನಾದ ಕಂಪಿಲನು ವೀರಾವೇಶದಿಂದ ಪ್ರತಿಭಟಿಸಿದನು. ಕೊನೆಗೆ ಮಹಮ್ಮದೀಯರ ಕೈ ಮೇಲಾಗಲು ಸಮೀಪದಲ್ಲಿದ್ದ ಕ್ರಿನಮಟ ಎಂಬ ಕೋಟೆಯಲ್ಲಿ ರಕ್ಷಣೆ ಪಡೆದನು. ರಾಜನಿಗೆ ಆ ಕೋಟೆಯನ್ನು ಹೆಚ್ಚು ದಿನ ಸಂರಕ್ಷಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಆಗ ಆತನು ಕೆಲವರನ್ನು ಬೇರೊಂದು ಕಡೆಗೆ ಕಳುಹಿಸಿಕೊಟ್ಟು ತನ್ನ ಆಪ್ತರಾದವರನ್ನು ಕೂಡಿಕೊಂಡು ಶತೃಗಳನ್ನು ವೀರಾವೇಶದಿಂದ ಎದುರಿಸಿ ಪ್ರಾಣತ್ಯಾಗ ಮಾಡಿದನು. ಈ ಘೋರ ಕದನದಲ್ಲಿ ಆತನ ಸತಿಯರು ಶತೃಗಳ ಕೈಗೆ ಸಿಕ್ಕಿಬೀಳದಂತೆ ಸಾವನ್ನಪ್ಪಿದರು[೨೦] ಎಂದು ತಿಳಿಸಿದ್ದಾನೆ. ಕ್ರಿನಮಟ ಎಂದರೆ ಯಾವುದು? ಆ ಕೋಟೆಯಾದರೂ ಯಾವುದು ಎಂಬುದು ಯಕ್ಷ ಪ್ರಶ್ನೆಯಾಗಿತ್ತು. ಅದರ ಜೊತೆಗೆ ಮತ್ತೊಬ್ಬ ಪ್ರವಾಸಿ ಇಬನ್-ಬತೂತಾ ಪ್ರತ್ಯೇಕವಾಗಿ ಕಂಪಿಲರಾಯನ ಕೋಟೆ ಎಂದೇ ಬರೆದಿರುವುದು ವಿಶೇಷವಾಗಿದೆ.

ಇಬನ್ ಬತೂತನ ಪ್ರಕಾರ ದೆಹಲಿ ಸುಲ್ತಾನನ ಸಂಬಂಧಿಯಾದ ಬಹಾವುದ್ದೀನ್ ಗುರ್ಶಾಸ್ಪನೆಂಬುವನು ತನ್ನ ಅರಸರೊಂದಿಗೆ ವಿರಸ ಕಟ್ಟಿಕೊಂಡು ಅಲ್ಲಿ ನಿಲ್ಲಲಾರದೆ ಕಂಪಿಲರಾಯನೆಂಬ ಹಿಂದೂ ದೊರೆಯಲ್ಲಿ ಮೊರೆ ಹೋದನು.

ಈ ದೊರೆಯ ನೆಲೆ ಅಭೇದ್ಯವಾದ ಬೆಟ್ಟಗುಡ್ಡಗಳ ಮಧ್ಯದಲ್ಲಿತ್ತು. ಸುಲ್ತಾನನ ಕಡೆಯವರು ಬಹಾವುದ್ದೀನನನ್ನು ಬೆನ್ನಟ್ಟಿಕೊಂಡು ಬಂದು ಅವನಿಗೆ ಆಶ್ರಯವಿತ್ತ ರಾಯನ ಕೋಟೆಗೆ ಬಲವಾಗಿ ಮುತ್ತಿಗೆ ಹಾಕಿದರು. ಕೆಲವು ದಿನಗಳು ಕಳೆದವು, ರಾಯನಿಗಾದರೋ ತನ್ನ ಮೊರೆ ಬಂದವರನ್ನು ಶತೃಗಳ ಕೈಗೆ ಒಪ್ಪಿಸಿ ಬಿಡಲು ಮನಸ್ಸು ಬರಲಿಲ್ಲ. ಹೀಗಾಗಿ ಬಹಾವುದ್ದೀನ್‌ನನ್ನು ಬೇರೊಬ್ಬ ಹಿಂದೂ ದೊರೆಯ ಬಳಿಗೆ ಕಳಿಸಿಕೊಟ್ಟನು. ತರುವಾಯ ತನ್ನ ಕೋಟೆಯಲ್ಲಿ ವಿಸ್ತಾರವಾಗಿದ್ದ ಒಂದು ಪ್ರದೇಶದಲ್ಲಿ ಅಗ್ನಿಯ ಕುಂಡವನ್ನು ಸಿದ್ಧಪಡಿಸಿದನು. ರಾಜನ ಆಜ್ಞೆಯ ಮೇರೆಗೆ ಆತನ ಹೆಂಡತಿಯರು ಮತ್ತು ಹೆಣ್ಣುಮಕ್ಕಳು ಮಾನರಕ್ಷಣೆಗಾಗಿ ಆ ಅಗ್ನಿಜ್ವಾಲೆಯಲ್ಲಿ ಬಿದ್ದು ಪ್ರಾಣ ತೆತ್ತರು. ಅನಂತರ ರಾಯನು ತನ್ನ ಆಪ್ತರಾದವರೊಡಗೂಡಿ ಕೋಟೆಯನ್ನು ಸುತ್ತುವರಿದಿದ್ದ ಮುಸಲ್ಮಾನ ಸೇನೆಯೊಂದಿಗೆ ವೀರಾವೇಶದಿಂದ ಹೋರಾಡಿದನು. ಹೀಗೆ ಮುಸಲ್ಮಾನ ಸೈನ್ಯದ ಸಮೂಹದೊಂದಿಗೆ ಕಟ್ಟ ಕಡೆಯವರೆಗೂ ಕಾದಾಡಿ ರಣರಂಗದಲ್ಲಿಯೇ ಮಡಿದನು. ಆತನ ಆಪ್ತರೂ ಸಹ ತಮ್ಮ ಒಡೆಯನನ್ನು ಹಿಂಬಾಲಿಸಿದರು. ರಾಯನ ಪಟ್ಟಣ ಶತೃಗಳ ವಶವಾಯಿತು.[೨೨]

ನ್ಯೂನಿಜ್ ಹೇಳಿರುವ 'ಕ್ರಿನಮಟ' ಎಂಬ ಪದವು ಹಾಗೂ ಇಬನ್‌ಬತೂತ ಹೇಳಿರುವ ಕಂಪಿಲರಾಯನ ಕೋಟೆ ಎಂಬ ಎರಡು ಪದಗಳ ಸುಳಿವು ಹುಡುಕಿದಾಗ ವಿದ್ವಾಂಸರುಗಳು ಕಂಪಿಲರಾಯನನ್ನು ಸುಲಭವಾಗಿ ಗುರುತಿಸಿದರು. ಆದರೆ 'ಕ್ರಿನಮಟ' ಎಂಬ ಪದವು ಸ್ವಲ್ಪ ಸಮಸ್ಯೆಗೆ ಈಡು ಮಾಡಿತು. ಸಾಕಷ್ಟು ವಿದ್ವಾಂಸರುಗಳು ಇದರ ಬಗ್ಗೆ ತಲೆಕೆಡಿಸಿಕೊಂಡು ವರ್ಷಾನುಗಟ್ಟಲೇ ಸಂಶೋಧಿಸಿದರು. ಬಿ. ಸೂರ್ಯನಾರಾಯಣರಾಯರು ಬರೆದಿರುವ ವಿಜಯನಗರದ ಇತಿಹಾಸದಲ್ಲಿ ಇದು ಆನೆಗೊಂದಿ ಕೋಟೆಯ ಶ್ರೇಣಿಗೋ, ಇಲ್ಲವೆ ಅಲ್ಲೇ ಇರುವ ವಾಲಿಯ ಭಂಡಾರದ ಭಾಗಕ್ಕೋ ಅನ್ವಯಿಸುತ್ತದೆ ಎಂದು ಭಾವಿಸುವರು.[೨೩] ವಿಜಯನಗರ ಇತಿಹಾಸದ ಮಹಾನ್ ಚರಿತ್ರಾಕಾರ ರಾಬರ್ಟ್‌ಸಿವೆಲ್ ಈ ಹೆಸರಿನ ಎಡೆಯನ್ನು (ಪ್ರದೇಶವನ್ನು) ಗುರುತಿಸುವುದು ಕಷ್ಟ. ಅದು ಆನೆಗೊಂದಿಯ ಬೆಟ್ಟ ಪ್ರದೇಶದ ಯಾವುದೋ ಕೋಟೆ ಇರಬೇಕೆಂದು ತಿಳಿಸಿದ್ದಾರೆ. ಅಂತಿಮವಾಗಿ ಈ ಪ್ರದೇಶ ಯಾವುದು ಎಂಬ ಪ್ರಶ್ನೆಗೆ ಎಂ.ಎಚ್.ರಾಮಶರ್ಮರು ಉತ್ತರಿಸಿದ್ದಾರೆ. ಇವರು ಕನ್ನಡ ಕಾವ್ಯಗಳಲ್ಲಿ ಕುಮಾರರಾಮನ ಕಥೆಯನ್ನು ಓದಿದಾಗ ಅಲ್ಲಿರುವ ಕುಮ್ಮಟ ನ್ಯೂನಿಜ್ ತಿಳಿಸಿರುವ ಕ್ರಿನಮಟ ಎರಡೂ ಒಂದೇ ಎಂದು ಉತ್ತರಿಸಿದ್ದು, ಇಲ್ಲಿಯವರೆಗೂ ಇದ್ದ ಗೊಂದಲವನ್ನು ನಿವಾರಿಸಿದ್ದಾರೆ. ಇದರಿಂದಾಗಿ ಕುಮ್ಮಟದುರ್ಗಕ್ಕೆ ಇವರು ಕ್ಷೇತ್ರಕಾರ್ಯವನ್ನು ಕೈಗೊಂಡು ಕ್ರಿ.ಶ. ೧೯೩೦[೨೪] ಕ್ಕೂ ಪೂರ್ವದಲ್ಲೇ ಇದಕ್ಕೆ ಸಂಬಂಧಿಸಿದ ಕೆಲವು (೨) ಲೇಖನಗಳನ್ನು ಪ್ರಕಟಿಸಿದ್ದಾರೆ.

**ಕೈಫಿಯತ್ತುಗಳ ವಿವರಗಳು**

ಕೈಫಿಯತ್ತುಗಳಲ್ಲಿ ಕುಮ್ಮಟದುರ್ಗದ ಬಗೆಗೆ ಕೆಲವು ಸ್ಪಷ್ಟವಾದ ವಿವರಗಳು ದೊರಕುತ್ತವೆ. ಇದರಲ್ಲಿಯೂ ಪ್ರಮುಖವಾಗಿ ತಾಲ್ಲೂಕು ಕಂಪಲಿ ಕೈಫಿಯತ್ತು, ಅಂತಾಪುರ ಕೈಫಿಯತ್ತು ಹಾಗೂ ಭಟ್ಟರಹಳ್ಳಿ ಕೈಫಿಯತ್ತುಗಳನ್ನು ನೀಡಿರುವ ವಿವರಗಳು ರಾಮಶರ್ಮ ಅವರ ಮುಂದಿನ ಅಧ್ಯಯನಗಳಿಗೆ ದಾರಿ ಮಾಡಿಕೊಟ್ಟಿವೆ. ರಾಮಶರ್ಮರ ನಂತರ ಈ ಕ್ಷೇತ್ರದ ಬಗ್ಗೆ ಹೆಚ್ಚು ಆಸಕ್ತಿ ವಹಿಸಿದವರೆಂದರೆ ಜಿ.ವರದರಾಜರಾವ್ ಅವರು ಕ್ರಿ.ಶ. ೧೯೮೫ರಲ್ಲಿ 'ಕುಮ್ಮಟದುರ್ಗ' ಎಂಬ ಕೃತಿಯನ್ನು ರಚನೆ ಮಾಡಿದ್ದರಿಂದ ಇನ್ನಿತರ ವಿದ್ವಾಂಸರುಗಳ ಅಧ್ಯಯನಗಳಿಗೆ ಸಹಾಯವಾಯಿತು. ಇವರ ನಂತರ ಸಿ.ಎಸ್.ಪಾಟೀಲರು ಕುಮ್ಮಟದುರ್ಗ ಕುರಿತು ಸಮಗ್ರವಾದ ಕ್ಷೇತ್ರಕಾರ್ಯವನ್ನು ಕೈಗೊಂಡು ಕೆಲವು ಲೇಖನಗಳನ್ನು ಪ್ರಕಟಿಸಿದ್ದಾರೆ.

**ಶಾಸನಗಳ ದಾಖಲೆಗಳು**

ಕುಮ್ಮಟದುರ್ಗ ಮತ್ತು ಕುಮ್ಮಟದುರ್ಗದ ನಾಯಕರ ಕುರಿತಂತೆ ಮಾಹಿತಿಗಳನ್ನು ಶಾಸನಗಳು ಅಪೂರ್ವವಾದ ದಾಖಲೆಗಳನ್ನು ಒದಗಿಸಿವೆ. ಕುಮ್ಮಟದುರ್ಗವು ಕುಮಾರರಾಮನ ರಾಜಧಾನಿಯಾಗಿತ್ತು ಎಂಬ ಮಾಹಿತಿಯನ್ನು ಶಾಸನವೇ ನೀಡಿದ್ದು, ಅದಕ್ಕೂ ಪೂರ್ವಕಾಲ ಅಂದರೆ ಸುಮಾರು ಕ್ರಿ.ಶ. ೧೧ನೇ ಶತಮಾನದಿಂದಲೇ ಕುಮ್ಮಟದುರ್ಗ ಪ್ರದೇಶವು ಇತ್ತು ಎಂಬ ಮಾಹಿತಿಯನ್ನು ಸಹ

ಶಾಸನಗಳೇ ಹೊರಹಾಕಿವೆ. ಪ್ರಮುಖವಾಗಿ ರಾಯಚೂರು ಜಿಲ್ಲೆಯ ಲಿಂಗಸೂರು ತಾಲ್ಲೂಕಿಗೆ ಸೇರುವ ಬನ್ನಿಗೋಳದಲ್ಲಿ ದೊರೆತಿರುವ ಶಾಸನವು ಕುಮ್ಮಟದುರ್ಗವನ್ನು ಚಾಲುಕ್ಯರ ಅರಸನಾದ ಒಂದನೇ ಸೋಮೇಶ್ವರನು ಶತ್ರುಗಳಿಂದ ವಶಪಡಿಸಿಕೊಂಡನೆಂದು ತಿಳಿಸುತ್ತದೆ. ಅಂದರೆ ೧೧ನೇ ಶತಮಾನದ ವೇಳೆಗಾಗಲೇ ಕುಮ್ಮಟದುರ್ಗವು ನೈಸರ್ಗಿಕವಾಗಿ ಗುರುತಿಸಿಕೊಂಡಿದ್ದು, ಕುಮ್ಮಟದರಸರು ಆಳುವ ಪೂರ್ವದಲ್ಲಿ ಚಾಲುಕ್ಯರ ವಶದಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ವೇಳೆಯಲ್ಲಿ ಚಾಲುಕ್ಯರ ಅರಸನಾದ ೧ನೇ ಸೋಮೇಶ್ವರನು ಆಳ್ವಿಕೆ ನಡೆಸುತ್ತಿದ್ದನೆಂದು ತಿಳಿಯುವುದರ ಜೊತೆಗೆ ಆ ಶತ್ರುಗಳಾರು ಎನ್ನುವ ಚರ್ಚೆ ಬಂದಾಗ ಚೋಳ ಅರಸನಾದ ರಾಜೇಂದ್ರನು ಅದನ್ನು ವಶಪಡಿಸಿಕೊಂಡಿರಬೇಕೆಂದು ಊಹಿಸಲಾಗಿದೆ.[೨೫] ಮತ್ತೊಂದು ಶಾಸನ ಹೇಳುವ ಹಾಗೆ ೧೨ನೇ ಶತಮಾನದ ಹೊತ್ತಿಗೆ ಹೊಯ್ಸಳ ವಿಷ್ಣುವರ್ಧನನು ಕುಮ್ಮಟವನ್ನು ಗೆದ್ದಿದ್ದನೆಂಬುದಕ್ಕೆ ಶಾಸನಾಧಾರವಿದೆ.[೨೬] ಮತ್ತೊಂದು ಶಾಸನ ಕ್ರಿ.ಶ. ೧೨೮೭ರ ಲಕ್ಷ್ಮೇಶ್ವರ ಶಾಸನದ ಪ್ರಕಾರ ಕುಮ್ಮಟದುರ್ಗವು ಮುಮ್ಮಡಿಸಿಂಗನ ಆಳ್ವಿಕೆಗೆ ಒಳಪಟ್ಟಿತ್ತೆಂದು ವ್ಯಕ್ತವಾಗುತ್ತದೆ.[೨೭] ಈ ಎಲ್ಲಾ ಶಾಸನಗಳ ಹೇಳಿಕೆಗಳನ್ನು ನೋಡಿದಾಗ ಕುಮ್ಮಟವು ಚಾಲುಕ್ಯರ ಕಾಲದಲ್ಲಿ ಅಂದರೆ ೧೧ನೇ ಶತಮಾನದಲ್ಲಿಯೇ ಪರಿಚಯವಿದ್ದ ಪ್ರದೇಶವಾಗಿತ್ತು. ಕಾಲಾನಂತರ ರಾಜ್ಯದಿಂದ ಮತ್ತೊಂದು ರಾಜ್ಯದ ರಾಜರುಗಳ ಅಧೀನಕ್ಕೆ ಸೇರ್ಪಡೆಯಾಗುತ್ತಾ ಕೊನೆಗೆ ಕುಮ್ಮಟದರಸರ ಅಧೀನದಲ್ಲಿ ಭದ್ರವಾಗಿ, ವಿಭಿನ್ನವಾಗಿ, ಅಭೇದ್ಯವಾಗಿ ಕಾಣಿಸಿಕೊಂಡಿತು. ಕುಮಾರರಾಮನಿಗೂ ಮುನ್ನ ಕುಮ್ಮಟದಲ್ಲಿ ಕೋಟೆ ಇದ್ದಿತು, ನಂತರವೂ ಕುಮಾರರಾಮ ಪ್ರತ್ಯೇಕವಾಗಿ ಹೊಸದಾಗಿ ಕೋಟೆಯನ್ನು ನವೀಕರಿಸಿರಬಹುದೇನೋ ಎಂಬ ಸಂಶಯಗಳು ಬರುವುದು ಸಹಜ. ಕುಮ್ಮಟದುರ್ಗ ಮತ್ತು ಹೊಸಮಲೆದುರ್ಗಗಳೆರಡು ಕುಮ್ಮಟದರಸರ ರಾಜಧಾನಿಗಳಾಗಿದ್ದವೆಂಬುದು ಸ್ಪಷ್ಟವಾಗುತ್ತದೆ. ಆದರೆ ಕುಮ್ಮಟದುರ್ಗವನ್ನೇ ಯಾಕೆ ರಾಜಧಾನಿಯನ್ನಾಗಿ ಮಾಡಿಕೊಂಡರೆಂಬ ಪ್ರಶ್ನೆಗೆ ಉತ್ತರ ಸಿಗುವುದು ಮೊದಲನೆಯದಾಗಿ ಇದು ಗ್ರಾನೈಟ್ ಕಲ್ಲುಗಳಿಂದಾದ ಗುಡ್ಡ, ಬೃಹತ್ ಗಿರಿದುರ್ಗ ಪ್ರದೇಶವಾದ್ದರಿಂದ ಶತೃಗಳು ನುಗ್ಗಲು ಇದು ಕಷ್ಟಕರವಾದ ಜಾಗವಾಗಿತ್ತು. ಆದರೆ ಎರಡನೆಯದಾಗಿ ಇದು ತಡೆರಾಜ್ಯವಾಗಿತ್ತು. ಮೊದಲು ಹೊಸಮಲೆದುರ್ಗವನ್ನು ರಾಜಧಾನಿಯಾಗಿ ಮಾಡಿಕೊಂಡಂತೆ ಕಾಣುತ್ತದೆ. ನಂತರ ಇದು ತಡೆರಾಜ್ಯವಾಗಿದ್ದರಿಂದ ಶತ್ರುಗಳು ಇದರ ಮೇಲೆ ದಾಳಿ ಮಾಡಲು ಪ್ರಾರಂಭಿಸಿದ್ದರಿಂದಾಗಿ ಆ ಸಂದರ್ಭದಲ್ಲಿ ಹೊಸಮಲೆಯನ್ನು ಬಿಟ್ಟು ಈ ಕುಮ್ಮಟವನ್ನು ರಾಜಧಾನಿಯಾಗಿ ಮಾಡಿಕೊಂಡಿರುವುದು ಸತ್ಯವೆನಿಸುತ್ತದೆ. ಇದಕ್ಕೆ ಪೂರಕವಾಗಿಯೇ ಮತ್ತೊಂದು ಹೇಳಿಕೆಯು ಕಂಡುಬರುತ್ತದೆ. ಮುಮ್ಮಡಿಸಿಂಗೇಯನು ಕುಮ್ಮಟದುರ್ಗವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿರಬೇಕು. ಏಕೆಂದರೆ ಮೂರನೇ ಬಾರಿ ಸೇವುಣ ಸೈನ್ಯ ಕುಮ್ಮಟದುರ್ಗದ[೨೮] ಮೇಲೆ ದಾಳಿ ಮಾಡಿ ಸಿಂಗೇಯನನ್ನು ಮಣಿಸುತ್ತದೆ. ಈ ಹೇಳಿಕೆಯು ಸತ್ಯಕ್ಕೆ ಹತ್ತಿರವಾಗಿದೆ. ಹಿರೇಕೋಗಿಲೂರಿನ ಶಾಸನ, ಲೋಕದೊಳಲಿನ ಶಾಸನ ಮತ್ತು ಲಕ್ಷ್ಮೇಶ್ವರ ಶಾಸನಗಳನ್ನು ಕುರಿತು ಸಿ.ಎಸ್.ಪಾಟೀಲರು ಈ ಅಭಿಪ್ರಾಯಕ್ಕೆ ಬಂದಿದ್ದಾರೆ. ಮುಮ್ಮಡಿಸಿಂಗೇಯನಾಯಕನು ದೇವಗಿರಿಯ

ಸೇವುಣರೊಂದಿಗೆ ಕೂಲಿಗಾಗಿ ಯುದ್ಧಗಳನ್ನು ಮಾಡುತ್ತಿದ್ದ ಎಂದು ಅಭಿಪ್ರಾಯ ಪಡುತ್ತಾರೆ.[೨೯] ವೇತಂಡಕಲ್ಲು ಮತ್ತು ಚಿಮ್ಮತ್ತೂರು ಕಲ್ಲುಗಳು ಹೊಯ್ಸಳ ರಾಜ್ಯದಲ್ಲಿದ್ದು, ಕ್ರಮವಾಗಿ ಅಲ್ಲಿ ನಡೆದ ಯುದ್ಧ ಮತ್ತು ದಾಳಿಗಳು ಮುಮ್ಮಡಿಸಿಂಗೆಯನು ಹೊಯ್ಸಳರೊಂದಿಗೆ ಹೋರಾಡಿದನು ಎಂಬುದನ್ನು ಸೂಚಿಸುತ್ತವೆ ಎಂದು ತಿಳಿಸುತ್ತಾರೆ.[೩೦]

ಕುಮ್ಮಟದುರ್ಗವು ಕುಮ್ಮಟದರಸರಿಗೆ ರಾಜಧಾನಿಯಾಗಿದ್ದುದೇನೋ ಸತ್ಯವೆನಿಸುತ್ತದೆ. ಆದರೆ ಕುಮ್ಮಟದುರ್ಗವು ಕುಮಾರರಾಮನಿಂದ ನಿರ್ಮಿತವಾಗಿಲ್ಲವೆಂಬುದು ಕೆಲವು ಶಾಸನಗಳಿಂದ ದೃಢೀಕೃತವಾಗಿದೆ. ೧೧ನೇ ಶತಮಾನದಲ್ಲಿ ಕುಮ್ಮಟದುರ್ಗವು ಪರಿಚಯವಾಗಿತ್ತು. ಇದು ಕಲ್ಯಾಣ ಚಾಲುಕ್ಯರ ಅಧೀನದಲ್ಲಿತ್ತು. ಈ ಸಂದರ್ಭದಲ್ಲಿ ಕಲ್ಯಾಣದ ಚಾಲುಕ್ಯರ ದೊರೆಯಾಗಿದ್ದ ಸೋಮೇಶ್ವರನ ಮೇಲೆ ಚೋಳರ ರಾಜ ದಾಳಿಮಾಡಿ ಕುಮ್ಮಟದುರ್ಗವನ್ನು ವಶಮಾಡಿಕೊಳ್ಳಲು ಮುಂದಾದರೂ ಆ ಪ್ರಯತ್ನವು ವಿಫಲವಾಯಿತು. ಹೀಗಾಗಿ ಕುಮ್ಮಟದುರ್ಗವು ಕುಮಾರರಾಮನಿಂದ ನಿರ್ಮಿತವಾಗಿಲ್ಲ ಬದಲಿಗೆ ಕುಮ್ಮಟದರಸರ ಪೂರ್ವದಲ್ಲೆ ಕಂಡುಬಂದಿರುವುದು ಶಾಸನಗಳಿಂದ ದೃಢಪಟ್ಟಿದೆ. ಸಾಂಗತ್ಯಗಳು ಕುಮರರಾಮನು ಕುಮ್ಮಟದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ನಂತರ ಹೊಸದಾಗಿ ತನ್ನ ಇಚ್ಛೆಗೆ ಬಂದಂತೆ ಮರು ನಿರ್ಮಾಣ ಕೈಗೊಂಡಿರುವುದನ್ನು ಕೆಲವು ಕಾವ್ಯಗಳಲ್ಲಿ ತಿಳಿದುಬರುವ ಸಂಗತಿಯಾಗಿದೆ. ಇಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಶಾಸನಗಳು ಮತ್ತು ಸಾಂಗತ್ಯಗಳನ್ನು ಓರೆಗೆ ಹಚ್ಚಿದಾಗ ಲಿಖಿತ ದಾಖಲೆಗಳಾದ ಶಾಸನಗಳಿಗೆ ಮಹತ್ವ ಕೊಡುವುದು ಸೂಕ್ತವೆನಿಸುತ್ತದೆ.[೩೧]

ಒಟ್ಟಾರೆ ಹೇಳುವುದಾದರೆ ಕುಮ್ಮಟದುರ್ಗದ ನಾಯಕರ ರಾಜಧಾನಿಗಳನ್ನು ಗುರುತಿಸುವ ಕೆಲಸಕ್ಕೆ ಕೈ ಹಾಕುವುದಾದರೆ ಹನೆಯವು ರಾಜಧಾನಿಯಾಗಲು ಸಾಧ್ಯವಿಲ್ಲ. ಇದು ಹೊಯ್ಸಳರ ಅಧೀನದಲ್ಲಿತ್ತು. ನಂತರ ಈ ಪ್ರದೇಶಕ್ಕೆ ತನ್ನ ಪರಿವಾರದವರೊಡನೆ ಮುಮ್ಮಡಿಸಿಂಗನು ಬಂದು ನೆಲೆಸಿದನು. ಹೊಯ್ಸಳರು ತಮ್ಮ ಬಂಧುಗಳೆಂದು ನೆಲೆಸಿರಲಿಕ್ಕಿಲ್ಲ. ಈ ಸಂದರ್ಭದಲ್ಲಿ ಮುಮ್ಮಡಿಸಿಂಗನಿಗೆ ಸ್ಥಿರವಾಗಿ ನೆಲೆಸಲು ಸಾಧ್ಯವಾಗಿರಲಿಲ್ಲ. ಮೊದಲು ದೇವರಾಯನ ಅಧೀನದಲ್ಲಿದ್ದು ನಂತರ ಹೊಯ್ಸಳರ ಅಧೀನ ಪ್ರದೇಶಕ್ಕೆ ಬಂದು ನೆಲೆಸುತ್ತಾನೆ. ಹೀಗಾಗಿ ಮುಮ್ಮಡಿಸಿಂಗನು ಮೊದಲು ಒಂದು ಸೀಮಿತ ಪ್ರದೇಶದಲ್ಲಿ ನೆಲೆಯಾಗಿರಬೇಕಿತ್ತು. ಆ ನಂತರ ತನ್ನದೊಂದು ರಾಜ್ಯವನ್ನು ಕಟ್ಟಿಕೊಳ್ಳಬೇಕಿತ್ತು. ಆದರೆ ಇವುಗಳಲ್ಲಿ ಯಾವ ಬೆಳವಣಿಗೆಗಳೂ ಆಗಿರಲಿಲ್ಲ. ಹೀಗಾಗಿ ವಲಸೆ ಬಂದು ಹನೆಯ ಪ್ರದೇಶದಲ್ಲಿ ನೆಲೆಸುತ್ತಾನೆ. ಇಂತಹ ಸಂದರ್ಭದಲ್ಲಿ ರಾಜ್ಯವೇ ಇಲ್ಲದವನಿಗೆ ರಾಜಧಾನಿ ಬರಲು ಸಾಧ್ಯವಿಲ್ಲ. ಇದು ಕೇವಲ ಮುಮ್ಮಡಿಸಿಂಗನು ಪ್ರಾರಂಭದಲ್ಲಿ ನೆಲೆಸಿದ್ದ ಪ್ರದೇಶವಾಗಿತ್ತು.[೩೨]

ದೊರವದಿಯು ಹನೆಯದರೆ ಪ್ರದೇಶಕ್ಕೆ ಸಮೀಪದಲ್ಲಿಯೇ ಇತ್ತು. ದೊರವದಿಯು ಮುಮ್ಮಡಿಸಿಂಗನ ಮೊದಲ ರಾಜಧಾನಿ ಆಗಿತ್ತೆಂದು ಕೆಲವು ಆಧಾರಗಳ ಮೇಲೆ ಅಭಿಪ್ರಾಯಪಡಬಹುದು.

ಕ್ರಿ.ಶ. ೧೨೮೦ ಮತ್ತು ಕ್ರಿ.ಶ. ೧೨೮೩ ಸೇವುಣರ ಆಕ್ರಮಣಗಳು ದೊರವದಿಯು ಮೊದಲಿಗೆ ಸಿಂಗೆಯನ ಮುಖ್ಯ ಆಡಳಿತ ಕೇಂದ್ರವಾಗಿತ್ತು ಎನ್ನುವುದು ಒಂದು ನಿಲುವಾದರೆ, ಆರ್.ಎಸ್. ಪಂಚಮುಖಿ ಅವರು ಮುಮ್ಮಡಿಸಿಂಗೇಯನಾಯಕನು ಕುಮ್ಮಟದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ದೊರವದಿಯನ್ನು ಆಳುತ್ತಿದ್ದನೆಂದು ಮತ್ತೊಂದು ನಿಲುವಾಗಿದೆ. ಇವುಗಳನ್ನು ಗಮನಿಸಿದಾಗ ದೊರವದಿಯು ಮುಖ್ಯ ಆಡಳಿತ ಕೇಂದ್ರವಾಗಿತ್ತು ಎಂದರೆ ರಾಜಧಾನಿಗೆ ಹತ್ತಿರವಾಗಿತ್ತು. ಕುಮ್ಮಟದರಸರಿಗೆ ಮತ್ತೊಂದು ರಾಜಧಾನಿ ಆಗಿತ್ತೆಂದು ಹೇಳುವುದು ಸಮಂಜಸವೆನಿಸುತ್ತದೆ. ಮುಮ್ಮಡಿಸಿಂಗ ಮತ್ತು ಕಂಪಿಲರಾಯನ ಶಾಸನಗಳ ಆಧಾರದ ಮೇಲೆ ಅತಿ ಹೆಚ್ಚು ದಾಳಿಗಳು ಸಂಭವಿಸಿರುವುದು ದೊರವದಿಯ ಮೇಲೆ ಹೀಗಾಗಿ ಇದು ಬಹುಮುಖ್ಯ ಪ್ರದೇಶ ಮತ್ತು ಎರಡನೆಯ ರಾಜಧಾನಿಯಾಗಿದ್ದಿರಬಹುದು ಎಂಬುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ.[೩೩]

ಜಟ್ಟಿಂಗರಾಮೇಶ್ವರ ಪ್ರದೇಶವು ಕುಮ್ಮಟದರಸರು ವಾಸಿಸಿದ್ದಂತಹ ಸ್ಥಳವಾಗಿತ್ತು. ಇವರ ಕುಲದೈವವು ರಾಮೇಶ್ವರನಾಗಿದ್ದು; ಕಂಪಿಲರಾಯ ಮತ್ತು ಪರಿವಾರದವರೂ ಅಲ್ಲಿ ನೆಲೆಸಿದ್ದು ನಂತರ ಹೊಸಮಲೆದುರ್ಗಕ್ಕೆ ಪ್ರಯಾಣ ಬಂದರು. ಹೀಗಾಗಿ ಇದು ಕೇವಲ ಇವರು ವಾಸಿಸಿದ್ದ ಪ್ರದೇಶವಾಗಿರುವುದು ಬಿಟ್ಟರೆ ರಾಜಧಾನಿಯಾಗಿರುವುದನ್ನು ಯಾವ ದಾಖಲೆಗಳು ಸಮರ್ಥಿಸಿಕೊಳ್ಳುವುದಿಲ್ಲ.

ಹೊಸಮಲೆದುರ್ಗವು ಕುಮ್ಮಟದರಸರ ರಾಜಧಾನಿಯಾಗಿತ್ತು. ಈ ಮಾಹಿತಿಯನ್ನು ಶಾಸನಗಳು ಖಚಿತಪಡಿಸುತ್ತವೆ. ಇದು ಮೊದಲು 'ರಾಮನಮಲೆ' ಎಂದೇ ಹೆಸರು ಪಡೆದಿದ್ದು, ನಂತರ ಕಂಪಿಲರಾಯನ ಪರಿವಾರ ಇಲ್ಲಿ ನೆಲೆಗೊಂಡ ಮೇಲೆ ರಾಮನಮಲೆ ಕುಮ್ಮಟದರಸರಿಗೆ ಹೊಸದಾದ ಪ್ರದೇಶವೆನಿಸಿದ್ದರಿಂದ 'ಹೊಸಮಲೆದುರ್ಗ' ಎಂದು ಕರೆದಿರುವುದು ಗಮನಾರ್ಹವಾಗಿದೆ. ಪ್ರಮುಖವಾಗಿ ಹೇಳುವುದಾದರೆ ಹೊಸಮಲೆದುರ್ಗವನ್ನು ಕುಮ್ಮಟದುರ್ಗಕ್ಕೆ ಮೊದಲೇ ರಾಜಧಾನಿಯಾಗಿ ಮಾಡಿಕೊಂಡಿದ್ದರೆಂದು ಅನಿಸುತ್ತದೆ. ಏಕೆಂದರೆ ಜಟ್ಟಿಂಗರಾಮೇಶ್ವರದಲ್ಲಿ ಕೆಲವು ಕಾಲ ನೆಲಸಿ ನಂತರ ಹೊಸಮಲೆದುರ್ಗಕ್ಕೆ ಬಂದು ನೆಲೆಸಿದರು ಎಂಬ ವಿವರಗಳಿಗೆ ರಾಮಘಡದ ಶಾಸನವೂ ಪೂರಕವಾಗಿ ನಿಲ್ಲಬಲ್ಲದು.

**ಕೊನೆ ಟಿಪ್ಪಣಿಗಳು**

೧. ಮಹದೇವ ಸಿ.: ಕರ್ನಾಟಕದಲ್ಲಿ ಕುಮಾರರಾಮನ ಪಂಥ (ಅಪ್ರಕಟಿತ), ಪು.೧೨

೨. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೧೧, ಮೊಳಕಾಲ್ಮೂರು-೨೦, ಪು. ೧೪೦

೩. ಶ್ರೀ ಕಪಟರಾಳ ಕೃಷ್ಣರಾವ್: ಕರ್ನಾಟಕ ಸಂಸ್ಕೃತಿ ಸಂಶೋಧನೆ, ಪು. ೨೩೨

೪. ಅದೇ, ಪು. ೨೦

೫. ಪಾಟೀಲ ಸಿ.ಎಸ್. ೧೯೯೧, ಪೂರ್ವೋಕ್ತ ಪು. ೧೯೨

೬. FSVH, VOL,1 P18 MAR 1930, page 23

೭. ಶರಣಸಾಹಿತ್ಯ, ೧೯೪೩-೪೪ ಸಂಪುಟ-೬, ಪು. ೩೨೮

೮. ಆರ್ ಇ ಎ ೧೯೪೩-೪೪ ನಂ. ೭೬

೯. ರಾಮಶರ್ಮ ಎಂ.ಎಚ್: ಸ್ಟಡೀಸ್ ಇನ್ ವಿಜಯನಗರ ಹಿಸ್ಟರಿ॥, ದಿಎಕ್ಸ್‌ಪ್ಲೊಯಿಟ್ಸ್ ಆಫ್ ಕಂಪಿಲ ಅಂಡ್ ಕುಮಾರ ರಾಮನಾಥ, ಕ್ವಾರ್ಟರ್ಲಿ ಜನರಲ್ ಆಫ್ ಮಿಥಿಕ್ ಸೊಸೈಟಿ, ಸಂ. xx, ಪು. ೯೦

೧೦. ವೆಂಕಟರಮಣಯ್ಯ ಎನ್ ೧೯೨೯: ಕಂಪಿಲ ಅಂಡ್ ವಿಜಯನಗರ, ಪು. ೫-೭

೧೧. ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ಸ್, ೧೯೩೫ ನಂ. ೩೯, ಪು. ೧೧೪-೧೬

೧೨. ಆನ್ಯುಯಲ್ ರಿಪೋರ್ಟ್ಸ್, ನಂ. ೭೫, ೧೯೪೩-೪೪

೧೩. ಶರಣಸಾಹಿತ್ಯ, ೧೯೪೩-೪೪, ಸಂಪುಟ-೬, ಪು. ೩೨೮

೧೪. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೭, ಚನ್ನಗಿರಿ ೨೪

೧೫. ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ಸ್, ೧೯೩೫, ಪು. ೧೧೪-೧೧೭

೧೬. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೭, ನಗರ ೧೯

೧೭. ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ಸ್, ೧೯೩೫ ನಂ. ೩೯, ಪು. ೧೧೪-೧೬

೧೮. ಹುಲ್ಲೂರು ಶ್ರೀನಿವಾಸ ಜೋಯೀಸ ೧೯೪೮: ದೊರವಾಡಿ, ಪ್ರಬುದ್ಧ ಕರ್ನಾಟಕ ಸಂಪುಟ ೨೫, ಸಂಚಿಕೆ ೧, ಪು. ೩೭-೪೦

೧೯. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೮, ಚನ್ನಗಿರಿ ೨೪

೨೦. Annual Reports. xxiii, ಪು. 184

೨೧. ವರದರಾಜರಾವ್ ಜಿ., ಕುಮ್ಮಟದುರ್ಗ ಪು. ೧

೨೨. ಅದೇ ಪು. ೫

೨೩. The never to be forgotten empire P.S

೨೪. QJMS Vol xx, No.1 PP 5-14; Nm.4 PP 261-270

೨೫. Vijyanagar progress Report, 1987-88

೨೬. E.C.IV MYS, Nag 70, 1178 AD

೨೭. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂಪುಟ ೨೦, ನಂ. ೨೨, ಪು. ೨೭೧

೨೮. Annual Reports. 1935-36, No.23

೨೯. ಪಾಟೀಲ್ ಸಿ.ಎಸ್.೧೯೯೧ ಪೂರ್ವೋಕ್ತ, ಪು. ೧೮೯

೩೦. ಅದೇ, ಪು. ೧೮೯

೩೧. ಹೆಚ್ಚಿನ ವಿವರಕ್ಕೆ ನೋಡಿ: Zakia Khanum Ansari : some feudatory families of medieval Karnataka – A study, Shreehari Prakashana, Dharwad, 1998 ರಲ್ಲಿ ಪ್ರಕಟವಾಗಿದೆ. ಮಧ್ಯಕಾಲೀನ ಕಿರು ರಾಜಮನೆತನಗಳ ಬಗ್ಗೆ ವಿವರಗಳಿವೆ. ಮನೇಲರು, ಸೇಂದ್ರಕರು, ಬಸಾವೂರ ಕಚಾರರು, ಬಿಜಾಪುರದ ಶಿಲಾಹಾರರು, ಗುಪ್ತರು ಮತ್ತು ಹುಚ್ಚಂಗಿಯ ಪಾಂಡ್ಯರ ಬಗ್ಗೆ ಇದ್ದು, ಆ ಕಾಲದ ಕೆಲವು ರಾಜಮನೆತನಗಳ ಸಾಮಾನ್ಯ ಅವಲೋಕನ ಮಾಡಲಾಗಿದೆ.

೩೨. ನೋಡಿ: ನಂಜುಂಡಸ್ವಾಮಿ ಎ.ಎಸ್., ಹೊಯ್ಸಳರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೮, ಪು. ೧ ರಿಂದ ೧೦೨ ಇದರಲ್ಲಿ ಬೇಡರು ಹೊಯ್ಸಳರ ಆಳ್ವಿಕೆಯಲ್ಲಿದ್ದ ಬಗ್ಗೆ ಚರ್ಚಿಸಿದ್ದಾರೆ.

೩೩. ವರದರಾಜರಾವ್.ಜಿ, ಕುಮ್ಮಟ ಕೇಸರಿ, ಉಷಾ ಸಾಹಿತ್ಯಮಾಲೆ, ಮೈಸೂರು, ೧೯೬೩, ಪು. ೧ ರಿಂದ ೧೪೪.



## ಅಧ್ಯಾಯ : ಐದು

# ಕುಮ್ಮಟದುರ್ಗದ ನಾಯಕರ ಸಾಂಸ್ಕೃತಿಕ ಕೊಡುಗೆಗಳು

೫.೧ ಆಡಳಿತ ಸ್ಥಿತಿಗತಿಗಳು

೫.೨ ಆರ್ಥಿಕ ಸ್ಥಿತಿಗತಿಗಳು

೫.೨.೧ ಕೃಷಿ

೫.೨.೨ ಕೈಗಾರಿಕೆ

೫.೨.೩ ವ್ಯಾಪಾರ

೫.೨.೪ ಕಂದಾಯ ವ್ಯವಸ್ಥೆ

೫.೩ ಸಾಮಾಜಿಕ ಸ್ಥಿತಿಗತಿಗಳು

೫.೩.೧ ಜಾತಿ ಪದ್ಧತಿ

೫.೩.೨ ನ್ಯಾಯ ಪಂಚಾಯಿತಿ

೫.೩.೩ ಧರ್ಮ

೫.೩.೪ ಬೇಟೆ

# ಅಧ್ಯಾಯ: ಐದು

# ಕುಮ್ಮಟದುರ್ಗದ ನಾಯಕರ ಸಾಂಸ್ಕೃತಿಕ ಕೊಡುಗೆಗಳು

## ೫.೧. ಆಡಳಿತ ವ್ಯವಸ್ಥೆ

ಆಡಳಿತ ವ್ಯವಸ್ಥೆಯು ರಾಜ್ಯದ ಮುಖ್ಯ ಅಂಶವಾಗಿದೆ. ಯಾವುದೇ ರಾಜ್ಯವು ವ್ಯವಸ್ಥಿತವಾದ ಆಡಳಿತವನ್ನು ನಿರ್ವಹಿಸಲು ಅಲ್ಲಿನ ಪ್ರಜೆಗಳ ಸಹಕಾರವೂ ಮುಖ್ಯವಾಗಿರುತ್ತದೆ. ಇಂತಹ ರಾಜ್ಯವು ಪ್ರಗತಿಯನ್ನು ಕಾಣಬೇಕಾದರೆ ಅಲ್ಲಿನ ಆಡಳಿತ ಕ್ರಮಗಳು ಶಿಸ್ತುಬದ್ಧತೆಯಿಂದ ಕೂಡಿರಬೇಕು. ಪ್ರಜೆಗಳ ಏಳಿಗೆಯು ಆ ರಾಜ್ಯದ ಆಡಳಿತ ವ್ಯವಸ್ಥೆಯನ್ನು ಅನುಸರಿಸುತ್ತವೆ ಎಂದರೆ ತಪ್ಪಾಗಲಾರದು. ಕುಮ್ಮಟದುರ್ಗವು ಇಂತಹ ವ್ಯವಸ್ಥೆಯಿಂದ ಹೊರತಾಗಿರಲಿಲ್ಲ.

ಒಂದು ರಾಜ್ಯಾಡಳಿತ ವ್ಯವಸ್ಥೆಯು ತಮ್ಮ ಸಮಕಾಲೀನ ರಾಜ್ಯಗಳ ಗಡಿಗಳ ನಡುವೆ ಸ್ಥಿತರತೆಯನ್ನು ಕಾಪಾಡಿಕೊಳ್ಳಲು ಮುಂದಾಗುತ್ತದೆ. ಆಯಾ ರಾಜ್ಯದ ನಿಸ್ವಾರ್ಥ ಆಳ್ವಿಕೆಗೆ ಧರ್ಮ, ನ್ಯಾಯ ದಂಡಗಳ ಸಮನಾದ ಅಂಶಗಳು ತುಂಬಾ ಅಗತ್ಯವಾಗುತ್ತವೆ. ಅಲ್ಲಿನ ರಾಜಕೀಯ ಮತ್ತು ಸಾಮಾಜಿಕ ನಿಯಂತ್ರಣವು ಅನಿವಾರ್ಯವಾಗಿರುತ್ತದೆ. ಒಂದು ಬಲಿಷ್ಠವಾದ ಸಾಮ್ರಾಜ್ಯವು ನಿರ್ಮಾಣಗೊಳ್ಳಬೇಕಾದರೆ ಆ ರಾಜನು ಬುದ್ದಿವಂತನೂ, ಯೋಗ್ಯನಾಗಿಯೂ ಹಾಗೂ ಕಷ್ಟ ಸಹಿಷ್ಣವೂ ಆಗಿರಬೇಕಾಗುತ್ತದೆ. ತಮ್ಮ ರಾಜಕೀಯ ಎಲ್ಲೆಯನ್ನು ವಿಸ್ತರಿಸಿಕೊಳ್ಳಲು ಅನುಕೂಲವಾದ ವಾತಾವರಣ ಹಾಗೂ ಶತ್ರುಗಳನ್ನು ಸದೆಬಡಿದು ಅಧೀನಪಡಿಸಿಕೊಳ್ಳುವ ಚಾಕಚಕ್ಯತೆ ಇರಬೇಕಾಗುತ್ತದೆ. ಇಂತಹ ಆಡಳಿತ ವ್ಯವಸ್ಥೆಯು ಮಧ್ಯಕಾಲೀನ ಸಂದರ್ಭದಲ್ಲಿ ಹಲವೆಡೆ ನೆಲೆಸಿತ್ತು. ಹೊಯ್ಸಳರು, ಕಾಕತೀಯರು, ಸೇವುಣರು ಇತರೆ ಸಣ್ಣ ಪುಟ್ಟ ರಾಜಮನೆತನಗಳು ರಾಜ್ಯ ವಿಸ್ತಾರಕ್ಕೆ ಹವಣಿಸುತ್ತಿದ್ದುದನ್ನು ಮಧ್ಯಕಾಲೀನ ಚರಿತ್ರೆ ಬಿಂಬಿಸುತ್ತಾ ಹೋಗುತ್ತದೆ.

ಕುಮ್ಮಟದುರ್ಗದ ಆಡಳಿತ ವ್ಯವಸ್ಥೆಯು ರಾಜನೀತಿಯಿಂದ ಕೂಡಿತ್ತು. ಇವರ ರಾಜ್ಯ ಲಾಂಛನ ಗಿಳಿಯಾಗಿತ್ತು. ಇಂತಹ ರಾಜನೀತಿಯು ಬಹುಶಃ ಬೇರೆ ಯಾವ ರಾಜ್ಯಗಳಲ್ಲೂ ಕಂಡು ಕೇಳಿರಲು ಸಾಧ್ಯವಿಲ್ಲದಿರಬಹುದು. ಕಾರಣ ರಾಜನು ತನ್ನ ಹುಟ್ಟಿನಿಂದ ಹಿಡಿದು, ತನ್ನ ಅಂತ್ಯಕಾಲದವರೆಗೂ ಪ್ರತಿಯೊಂದು ಹಂತದಲ್ಲೂ ವಿಶೇಷವಾಗಿರುವಂತಹ ಗುಣಗಳನ್ನು

ಅಳವಡಿಸಿಕೊಳ್ಳುತ್ತಿದ್ದನು. ಇದರರ್ಥ ಕುಮ್ಮಟದರಸರು ಹುಟ್ಟಿನಿಂದ ಸಾಯುವವರೆಗೂ 'ರಾಜನೀತಿ'ಯನ್ನು ಹೆಜ್ಜೆ ಹೆಜ್ಜೆಗೂ ಪಾಲಿಸುತ್ತಿದ್ದರು. ಹಾಗೆಯೇ ರಾಜನಿಗೆ ಇಂತಹ ನೀತಿಯು ತುಂಬಾ ಅವಶ್ಯವಾಗಿತ್ತು. ರಾಜನು ತನ್ನ ಮಾತಾಪಿತೃಗಳಿಗೆ ಗೌರವ ಸೂಚಿಸುವುದು, ಸೈನಿಕರನ್ನು, ಭಟರನ್ನು ಸಲಹುವ ರೀತಿ, ನೆಂಟರೊಡನೆ ನಡೆದುಕೊಳ್ಳುವ ವಿನಯತೆ, ತಮ್ಮ ಶತ್ರುಗಳಿಂದ ದಾಯಾದಿಗಳೊಡನೆ ವರ್ತಿಸುವ ರೀತಿ, ತನ್ನ ರಾಜ್ಯವನ್ನು ಹೇಗೆ ಭದ್ರಪಡಿಸಿಕೊಳ್ಳಬೇಕೆಂಬ ಚಾಕಚಕ್ಯತೆ, ಬೇಹುಗಾರರ ಮಾತುಗಳನ್ನು ನಿರ್ಲಕ್ಷಿಸದೆ ಎಚ್ಚರ ವಹಿಸುವುದು, ಯುದ್ಧದ ಸಂದರ್ಭದಲ್ಲಿ ಸೈನಿಕರಿಗೆ ಶುಶ್ರೂಷೆ ನೀಡುವುದು, ಸ್ವತಂತ್ರವಾಗಿ ನಿರ್ಣಯಗಳನ್ನು ಕೈಗೊಳ್ಳಲು ಅವಕಾಶವಿದ್ದರೂ ದೈಹಿಕ ಸಾಮರ್ಥ್ಯದ ಜೊತೆಗೆ ಬೌದ್ಧಿಕ ಸಾಮರ್ಥ್ಯವೂ ಬೇಕಿತ್ತು. ಇಲ್ಲಿನ ರಾಜರಿಗೆ ಬಾಲ್ಯದಿಂದಲೇ ರಾಜ್ಯದ ಒಳಗಿನ ಆಡಳಿತ ಸಂಬಂಧ ಹಾಗೂ ರಾಜ್ಯದ ಹೊರಗಿನ ಆಡಳಿತ ಸಂಬಂಧಗಳನ್ನು ಬೋಧಿಸಲಾಗುತ್ತಿತ್ತು. ಇಂತಹ ರಾಜನೀತಿಯನ್ನು ಪ್ರತ್ಯೇಕವಾಗಿಯೇ ಹೇಳಿಕೊಡಲಾಗುತ್ತಿತ್ತು. ಕೆಲವೊಂದು ಸಮಯದಲ್ಲಿ ಹಿರಿಯರಿಂದಲೂ ನೀತಿ ಬೋಧನೆಯಾಗುತ್ತಿತ್ತು. ಹಾಗೂ ತಂದೆ-ತಾಯಿಯರಿಂದಲೂ ಬೋಧನೆ ಆಗುತ್ತಿತ್ತು ಎಂಬ ಸಂಗತಿಗಳು ಗಮನಾರ್ಹವಾಗಿವೆ.

ಕುಮಾರರಾಮನು ಚೆಂಡಿನಾಟ ಆಡಲು ತನ್ನ ತಾಯಿಯ ಬಳಿ ಚೆಂಡನ್ನು ಕೇಳಿದಾಗ ತಾಯಿಯಾದ ಹರಿಯಾಲದೇವಿಯಿಂದ ರಾಜನೀತಿ ಬೋಧನೆಯಾಗುವ ಪ್ರಸಂಗವನ್ನು ನಂಜುಂಡ ಕವಿಯು ರಾಮನಾಥ ಚರಿತೆಯಲ್ಲಿ ಪ್ರಸ್ತಾಪಿಸಿರುವುದು ಕಂಡುಬರುತ್ತದೆ. "ಜಾತಿ ಧರ್ಮವನೆಳ್ಳನಿತು ಮೀರದಿರನ್ಯ ಕಾತಾರಾಕ್ಷಿಯರ ನೋಡದಿರು ಭೀತನಾಗದಿರು ಸಂಗ್ರಾಮದೊಳಿದು ರಾಜನೀತಿಯ ತಿರುಳು ನಿನ್ನಾಣೆ"[೧] ಎಂದು ಕುಮಾರರಾಮನಿಗೆ ಹರಿಯಾಲದೇವಿಯು ನೀತಿಬೋಧನೆಯನ್ನು ಮಾಡುತ್ತಾಳೆ. ಸಮಕಾಲೀನ ಅರಸರ ರಾಜನೀತಿಗಳಿಗೆ ಪೆಟ್ಟು ಕೊಡುವಂತೆ ಕುಮ್ಮಟದರಸರ ರಾಜನೀತಿ ಬಲಿಷ್ಠವಾಗಿತ್ತು. ಇವರ ರಾಜನೀತಿಗಳು ಮುಂದಾಲೋಚನೆಯುಳ್ಳವಾಗಿದ್ದವು. ಭವಿಷ್ಯದ ಒಳಿತು, ಕೆಡುಕನ್ನು ಸಾರುವಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಸಮಕಾಲೀನ ರಾಜಮನೆತನಗಳ ರಾಜನೀತಿಗಳು ಬಹುಶಃ ಇಂತಹ ಸೂಕ್ಷ್ಮತೆಗಳನ್ನು ಅಳವಡಿಸಿಕೊಂಡಿರುವುದಕ್ಕೆ ಸಾಧ್ಯವಿಲ್ಲ ಎಂದೆನಿಸುತ್ತದೆ. ಕುಮ್ಮಟದರಸರ ಇಂತಹ ರಾಜನೀತಿಗಳೇ ಕುಮಾರರಾಮನನ್ನು ಇಂದಿಗೂ ಅಜರಾಮರವಾಗಿಸಿವೆ.

ಬಹುಮುಖ್ಯವಾಗಿ ಅಂದಿನ ಕಾವ್ಯಗಳು ಕುಮಾರರಾಮನ ಆಡಳಿತದ ವ್ಯವಸ್ಥೆಯನ್ನೇ ಹೆಚ್ಚಾಗಿ ತಿಳಿಸುವ ಪ್ರಯತ್ನ ಮಾಡಿದ್ದಾರೆ. ಕುಮಾರರಾಮ ಬಾಲ್ಯದಲ್ಲಿ ಶಿಕ್ಷಣ, ವಿದ್ಯಾಭ್ಯಾಸ, ರಾಜನೀತಿಯ ಅಳವಡಿಕೆ, ತನ್ನದೇ ಆದ ದಿನಚರಿಯನ್ನು ಹೊಂದಿರುತ್ತಿದ್ದ, ಯುವರಾಜ ಪಟ್ಟ ಕಟ್ಟುವ ಸಂಗತಿಗಳು ಕುಮಾರರಾಮನಿಗೆ ಸಂಬಂಧಿಸಿದ್ದಾಗಿವೆ.

ಇಲ್ಲಿ ರಾಜನೇ ಕೇಂದ್ರಬಿಂದುವಾಗಿದ್ದು, ಇವನ ಅಧೀನದಲ್ಲಿ ಹಂತಹಂತವಾಗಿ ಅಧಿಕಾರಿಗಳನ್ನು ನೇಮಿಸಿಕೊಂಡಿದ್ದು, ಇವರೆಲ್ಲರೂ ತಮ್ಮ ತಮ್ಮ ರಾಜ್ಯ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು.

ಮಾಂಡಳಿಕ–ಮಂತ್ರಿ–ಸಾಮಂತ–ದಂಡನಾಯಕ–ಮನ್ನೆಯ–ಗರುಡಾಚಾರ್ಯರು[೨] ಇವರ ಆಡಳಿತ ಹಂತಗಳು ಸಮಕಾಲೀನ ಅರಸರಾದ ಹೊಯ್ಸಳರಿಗೆ ಹೋಲುತ್ತಿದ್ದವು ಎಂದು ಹೇಳಬಹುದು. ಅರಸನು ಮುಖ್ಯಸ್ಥನಾಗಿದ್ದು, ಅವರಿಗೆ ಪ್ರತ್ಯೇಕವಾದಂತಹ ದಿನಚರಿ ಇರುತ್ತಿತ್ತು. ಬಹುಶಃ ಸಾಮಾನ್ಯ ಜನರಿಗೆ ರಾಜರ ದಿನಚರಿ ಬಗ್ಗೆ ತಿಳಿದಿರಲಿಲ್ಲವೆಂದು ಅನಿಸುತ್ತದೆ. ಏಕೆಂದರೆ ಇವರ ದಿನಚರಿಗಳ ಕುರಿತು ಮೌಖಿಕವಾಗಿ ಹೆಚ್ಚಾಗಿ ಕೇಳಿಬಂದಿಲ್ಲ. ಕುಮ್ಮಟದುರ್ಗದ ಆಡಳಿತ ವ್ಯವಸ್ಥೆಗೆ ಬಂದಾಗ ಹೆಚ್ಚಿನ ಸಂಗತಿಗಳು ತಿಳಿದುಬಂದಿಲ್ಲ. ಕೆಲವೊಂದು ರಾಜನಿಗೆ ಸೀಮಿತವಾದಂತಹ ಸಂಗತಿಗಳನ್ನು ಮಾತ್ರ ಕಾವ್ಯಗಳಿಂದ ಮಾತ್ರ ತಿಳಿದುಕೊಳ್ಳಬಹುದು. ರಾಜರು ಸಾಮಾನ್ಯವಾಗಿ ಗರಡಿ ಅಭ್ಯಾಸಗಳನ್ನು ಇಟ್ಟುಕೊಂಡಿದ್ದಂತೆ ಕಾಣುತ್ತದೆ. ಬೆಳಗಿನ ಸಮಯ ಓಲಗ ನಡೆಯುತ್ತಿದ್ದವು. ಪೂಜಾ ಕೈಂಕರ್ಯಗಳು, ಕಲಾಪಗಳು ನಡೆಯುತ್ತಿದ್ದವು. ಆ ದಿನದ ಹೊತ್ತಿನಲ್ಲಿ ಸಂಗೀತ, ಕಲೆ, ವಿನೋದ ಕ್ರೀಡೆಗಳು, ಪಗಡೆ ಇತ್ಯಾದಿಗಳಲ್ಲಿ ಭಾಗವಹಿಸುತ್ತಿದ್ದ ಪ್ರಮುಖ ಸಂಗತಿಗಳು ಇವರ ದಿನಚರಿಗೆ ಹೊಂದಿಸಬಹುದು. ಇವರು ಯಾವುದೇ ಕಾರ್ಯಗಳನ್ನು ಮಾಡಿದರೂ 'ರಾಜನೀತಿ'ಯನ್ನು ಮಾತ್ರ ಮೀರದೇ ಇರುವುದು ಕುಮ್ಮಟದರಸರ ವಿಶೇಷತೆಯಾಗಿತ್ತು.

ರಾಜನು ತನ್ನ ಆಡಳಿತದ ಹೊಣೆಗಾರಿಕೆಯನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿಕೊಳ್ಳುವುದಕ್ಕಾದರೂ ತನ್ನ ಮಕ್ಕಳಲ್ಲಿ ಒಬ್ಬರಿಗೆ ಯುವರಾಜ ಪಟ್ಟವನ್ನು ಕಟ್ಟುತ್ತಿದ್ದು, ರಾಜ್ಯದ ಯಾವುದಾದರೊಂದು ಭಾಗದ ಆಡಳಿತ ನೋಡಿಕೊಳ್ಳಲು ನೇಮಿಸುತ್ತಿದ್ದು, ಯುವರಾಜನ ಆಡಳಿತ ವೈಖರಿಯನ್ನು ವೀಕ್ಷಿಸಲು ಹಾಗೂ ಆಡಳಿತದಲ್ಲಿ ಪರಿಣಿತಿಯನ್ನು ಹೊಂದಲು ಅವಕಾಶ ಮಾಡಿಕೊಡುವಂತಿತ್ತು. ಹೀಗಾಗಿ ಕಂಪಿಲರಾಯನು ಕುಮಾರರಾಮನಿಗೆ ಯುವರಾಜ ಪಟ್ಟ ಕಟ್ಟಿರುವ ಸಂಗತಿಯು ರಾಮನಾಥ ಚರಿತೆಯಿಂದ ತಿಳಿದುಬರುತ್ತದೆ. ಪಂಪನ 'ವಿಕ್ರಮಾರ್ಜುನ ವಿಜಯ' ಪಾಂಡವರ ಶಿಕ್ಷಣಭ್ಯಾಸವನ್ನು ಕುರಿತು[೩] ಹೇಳುವಂತೆ ಹಾಗೆಯೇ ಇತರೆ ಪ್ರಾಚೀನ ಕಾವ್ಯಗಳು ಹೇಳುವಂತೆ ಅರಸ ಎಲ್ಲಾ ಅರವತ್ನಾಲ್ಕು ವಿದ್ಯೆಗಳನ್ನು ಅರಿತಿರಬೇಕೆಂದು; ಅವನ ಪರಿವಾರ ಮತ್ತು ಪ್ರಜಾ ಸಮುದಾಯ ಬಯಸುತ್ತಿತ್ತು. ಇದು ಒಂದು ಆದರ್ಶವಾಗಿರಬೇಕು. ಆದರೆ ಅವರವರ ಸಾಮರ್ಥ್ಯಕ್ಕನುಗುಣವಾಗಿ ಹೆಚ್ಚು ಹೆಚ್ಚು ವಿದ್ಯೆಯನ್ನು ಕಲಿಸಲಾಗುತ್ತಿತ್ತು[೪] ಎಂದು ತಿಳಿಸಲಾಗಿದೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ವಿಶ್ಲೇಷಿಸುವುದಾದರೆ ಕುಮ್ಮಟದರಸರು ಶಸ್ತ್ರಾಭ್ಯಾಸಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿದ್ದರೆಂದೂ, ಕುಮಾರರಾಮನು ಶಸ್ತ್ರಾಭ್ಯಾಸವನ್ನು ಕಲಿತಂತಹ ವಿವರಗಳು ಕಾವ್ಯಗಳಿಂದ ನಮಗೆ ತಿಳಿದುಬರುತ್ತವೆ.

ಹೊಯ್ಸಳರ ಕುರಿತು ದೊರೆತಿರುವ ಶಾಸನಗಳು ಸಹ ದಂಡನಾಯಕರು[೫] ಮನ್ನೆಯರು[೬] ಮತ್ತು ಗರುಡರನ್ನು[೭] ಉಲ್ಲೇಖಿಸುತ್ತವೆ. ಕುಮ್ಮಟದರಸರ ಆಡಳಿತ ಹಂತಗಳಿಗೆ ಇವು ಸಮವಾಗಿವೆ ಎಂಬುದು ತಿಳಿಯುತ್ತದೆ. ಹೊಯ್ಸಳರ ಆಡಳಿತ ಕ್ರಮಗಳಿಗೂ, ಕುಮ್ಮಟದರಸರ ಆಡಳಿತ ಕ್ರಮಗಳಿಗೂ ಕೆಲವು ಹೋಲಿಕೆಗಳೂ ಇವೆ ಹಾಗೂ ಕೆಲವು ವ್ಯಸತಾಸಗಳೂ ಇವೆ. ಕುಮ್ಮಟದರಸರ ಆಡಳಿತ ವ್ಯವಸ್ಥೆಯಲ್ಲಿ ಹೊಯ್ಸಳರ ಆಡಳಿತ ಕ್ರಮದ ಕೆಲವು ಲಕ್ಷಣಗಳನ್ನು ಕಾಣಬಹುದು. ದಂಡನಾಯಕರು,

ಮನ್ನೆಯರು ಮತ್ತು ಗರುಡರು ಇದ್ದುದು ಹೋಲಿಕೆಯಾದರೆ ಸಾಮಂತರು ಅಥವಾ ಇತರೆ ಸಣ್ಣಪುಟ್ಟ ರಾಜರುಗಳ ಬಗ್ಗೆ ಅನುಸರಿಸುತ್ತಿದ್ದ ನೀತಿಗಳಲ್ಲಿ ವ್ಯಸತಾಸಗಳನ್ನು ಕಾಣಬಹುದು. ಹೊಯ್ಸಳರ ಆಡಳಿತ ನೀತಿಗಿಂತ ಕುಮ್ಮಟದರಸರ ಆಡಳಿತ ನೀತಿ ಶ್ರೇಷ್ಠ ಮಟ್ಟದಾಗಿತ್ತು. ಕಾರಣ ಹೊಯ್ಸಳರು ಸಾಮಂತರಲ್ಲಿ ರಾಜ್ಯಾಳ್ವಿಕೆಯ ಕಲಹಗಳು ಬಂದಾಗ ತಾವೇ ಬಗೆಹರಿಸಿ ನಂತರ ಅದೇ ಪ್ರದೇಶಗಳನ್ನು ತಮ್ಮ ಅಧೀನಕ್ಕೆ ಪಡೆದುಕೊಳ್ಳುತ್ತಿದ್ದರು. ಆದರೆ ಕುಮ್ಮಟದರಸರು ಆಶ್ರಯಿಸಿ ಬಂದವರಿಗೆ ರಕ್ಷಣೆ ನೀಡಿ ಪುನಃ ಅವರ ಸ್ಥಾನಕ್ಕೆ ಅವರನ್ನು ಸೇರಿಸುವ ಪ್ರಯತ್ನ ಮಾಡುತ್ತಿದ್ದರೇ ವಿನಃ ತಾವು ಕಿತ್ತುಕೊಳ್ಳುವ ಪ್ರಯತ್ನ ಮಾಡಲಿಲ್ಲ.

ಕುಮ್ಮಟದರಸರು ತಮ್ಮ ಕೊನೆಯ ಅವಧಿಯಲ್ಲಿ ಸ್ವತಂತ್ರರಾಗುತ್ತಾರೆ ಎಂಬುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ. ಶಿವಮೊಗ್ಗ ಜಿಲ್ಲೆಯ ಸಾಂತರರು ಪೂರ್ವದಲ್ಲಿ ಹೊಯ್ಸಳರ ಮಾಂಡಲಿಕರಾಗಿದ್ದಾಗಲೆ ಹೊಯ್ಸಳರು ಇವರನ್ನು ಅಂತ್ಯಗೊಳಿಸಲಿಲ್ಲ ಬದಲಾಗಿ ಕುಮ್ಮಟದರಸರು ಹೊಯ್ಸಳರನ್ನು ಅನೇಕ ಯುದ್ಧಗಳಲ್ಲಿ ಸೋಲಿಸಿ ತಮ್ಮ ಶೌರ್ಯವನ್ನು ಮೆರೆದು ಸ್ವತಂತ್ರರಾದಾಗ ಸಾಂತರರು ಕುಮ್ಮಟದರಸರ ಮಾಂಡಲಿಕರಾಗಿ ಮುಂದುವರಿಯುತ್ತಾರೆ. ಕುಮ್ಮಟದರಸರ ಆಡಳಿತ ವ್ಯವಸ್ಥೆಯಲ್ಲಿ ಮಾಂಡಳಿಕ ಹಂತವನ್ನು ಕಾಣಬಹುದಾಗಿತ್ತು.

ಇವರ ಆಡಳಿತ ಹಂತಗಳು ವಿಸ್ತರಣಾ ನೀತಿಯ ತೋಳುಗಳಾಗಿದ್ದವು. 'ಮನ್ನೆಯ' ಎಂಬ ಸ್ಥಾನವು ದಂಡನಾಯಕನಿಗಿಂತ ಕೆಳಗಿನ ವರ್ಗವಾಗಿತ್ತು ಅಂದರೆ ಭೂಮಿ ಅಥವಾ ಗ್ರಾಮಗಳ ಮೇಲಿನ ಹಕ್ಕು ಇವರಿಗಿರುತ್ತಿತ್ತು. ದಂಡನಾಯಕನ ಸ್ಥಾನವನ್ನು ಆತನ ಹೊಣೆಗಾರಿಕೆ, ಜವಾಬ್ದಾರಿ ಒಡೆತನಗಳ ಆಧಾರದ ಮೇಲೆ ಗುರ್ತಿಸುತ್ತಿದ್ದರು. ಆದರೆ, ಗರುಡ ಸ್ಥಾನವು ಶ್ರೇಷ್ಠವಾಗಿತ್ತು. ಕಾರಣ ರಾಜನನ್ನು ನಿಷ್ಠೆಯಿಂದ ಅನುಸರಿಸುತ್ತಿದ್ದ ಒಂದು ಪ್ರಮುಖ ಯೋಧ ವರ್ಗವಾಗಿತ್ತು. ಈ ವರ್ಗವು ರಾಜನಿಗಾಗಿ ತಮ್ಮನ್ನು ಮುಡುಪಾಗಿಟ್ಟಿದ್ದರು. ಬಹುಶಃ ಈ ಕಾರಣಕ್ಕಾಗಿಯೇ ಕುಮಾರರಾಮ ಯುದ್ಧ ಕಾಲಾವಧಿಯಲ್ಲಿ ಸೈನಿಕರಿಗೆ / ಯೋಧರಿಗೆ ತಾನೇ ಶುಶ್ರೂಷೆ ಮಾಡುತ್ತಿದ್ದನೆಂಬುದು ಇವರ ಆಡಳಿತ ವ್ಯವಸ್ಥೆಯ ಮಾನವೀಯತೆಯನ್ನು ಎತ್ತಿ ಹಿಡಿಯುತ್ತದೆ.

ಕುಮ್ಮಟದರಸರು ಯುದ್ಧವನ್ನು ಮಾಡುವುದು ಒಂದು ಹವ್ಯಾಸದಂತಿತ್ತು, ಯುದ್ಧದಲ್ಲಿ ಸೋತ ಶತ್ರುಗಳ ರಾಜ್ಯವನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳುವುದು ಯುದ್ಧನೀತಿಯ ಕ್ರಮವಾಗಿತ್ತು. ಈ ರೀತಿಯಾಗಿ ಕುಮ್ಮಟದರಸರು ಕಪ್ಪಕಾಣಿಕೆಗಳನ್ನು ಪಡೆದುಕೊಳ್ಳುತ್ತಿದ್ದರು. ಹಾಗೆಯೇ ಬಿರುದುಗಳು, ಪ್ರಶಸ್ತಿ, ಪರಾಕುಗಳನ್ನು ಹೊಂದಿರುವ ಸಂಗತಿಗಳು ವಿಶೇಷವಾಗಿದ್ದವು.

ಅಂತಿಮವಾಗಿ ಹೇಳುವುದಾದರೆ ಕುಮ್ಮಟದುರ್ಗದ ಆಡಳಿತ ವ್ಯವಸ್ಥೆಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳು ದೊರೆತಿಲ್ಲವಾದರೂ ಅವಶ್ಯವಿರುವಷ್ಟು ಸಂಗತಿಗಳನ್ನು ಸಂಗ್ರಹಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

## ೫.೨. ಆರ್ಥಿಕ ಸ್ಥಿತಿಗತಿಗಳು

ಒಂದು ರಾಜ್ಯದ ಆರ್ಥಿಕ ವ್ಯವಸ್ಥೆಯು ಆ ಪ್ರದೇಶದ ನೈಸರ್ಗಿಕ ಸಂಪನ್ಮೂಲಗಳನ್ನು ಹೇಗೆ ಉಪಯೋಗಿಸಿಕೊಳ್ಳಲಾಗುತ್ತದೆ ಎಂಬ ಆಧಾರದ ಮೇಲೆ ನಿಂತಿರುತ್ತದೆ. ಅಲ್ಲಿನ ಜನರು ನಿಸರ್ಗದ ಭೂಮಿಯನ್ನು ಆಧರಿಸಿಕೊಂಡು ತಮ್ಮ ತಮ್ಮ ಜೀವನವನ್ನು ನಿರ್ವಹಿಸುವುದು ಒಂದು ವೃತ್ತಿಯಾಗಿದೆ. ಪ್ರಾಚೀನ ಕಾಲದಿಂದಲೂ ಭೂಮಿಯನ್ನು ಆಧರಿಸಿಕೊಂಡು ಬದುಕು ಸಾಗಿಸುವ ವೃತ್ತಿಯೇ ವ್ಯವಸಾಯವಾಗಿದೆ. ಕೃಷಿಯೇ ಜನರ ಜೀವನಕ್ಕೆ ಮುಖ್ಯ ಆಧಾರವಾಗಿರುವುದು ಪ್ರಸ್ತುತಕ್ಕೂ ಅನ್ವಯಿಸುತ್ತದೆ. ಮಳೆ ನೀರು, ನದಿ, ಬಾವಿ, ಕೆರೆಗಳು, ಹಾಗೂ ನೀರಾವರಿಯನ್ನು ಆಧರಿಸಿಕೊಂಡು ತಮ್ಮ ಭೂಮಿಗಳನ್ನು ಕೃಷಿ ಭೂಮಿಯನ್ನಾಗಿ ಮಾರ್ಪಡಿಸಿಕೊಂಡಿರುವುದು ಎಲ್ಲೆಡೆ ಕಂಡುಬರುತ್ತದೆ. ಮಳೆ ಕಡಿಮೆಯಾದಂತಹ ಸಂದರ್ಭದಲ್ಲಿ ನದಿ, ಹಳ್ಳ ಕೊಳ್ಳಗಳನ್ನು, ಕೆರೆಗಳನ್ನು ಕಟ್ಟಿಕೊಂಡು ಅದರಲ್ಲಿ ನೀರನ್ನು ಶೇಖರಿಸಿಕೊಂಡು ಕೃಷಿಗೆ ಬಳಕೆ ಮಾಡಿಕೊಳ್ಳುವುದು, ಕೃಷಿಯಲ್ಲಿ ರೂಢಿಸಿಕೊಂಡಿದ್ದ ಇವರ ತಾಂತ್ರಿಕ ಕೌಶಲವನ್ನು ಕಾಣಬಹುದು. ಒಕ್ಕಲುತನ ಮಾಡವವನೇ ಕೃಷಿಕ ಎಂದು ಹೇಳಬಹುದು.

### ೫.೨.೧. ಬೇಟೆ

**ಬೇಟೆ ಪದದ ಅರ್ಥ**

ಬೇಟೆ ಎಂಬುದು ಒಂದು ಕಲೆಗಾರಿಕೆ ಎಂದು ಹೇಳಬಹುದು. ಹಸಿವನ್ನು ನೀಗಿಸಲಿಕ್ಕಾಗಿ ಯಾವುದಾದರೊಂದು ಪ್ರಾಣಿಯು ಇನ್ನೊಂದು ಪ್ರಾಣಿಯನ್ನು ಬೇಟೆಯಾಡುವುದು, ತನ್ನ ಹಸಿವನ್ನು ಹಿಂಗಿಸಿಕೊಳ್ಳುತ್ತಿದ್ದುದನ್ನು ಕೇಳಿರುತ್ತೇವೆ. ಪ್ರಾಚೀನ ಕಾಲದಿಂದಲೂ ಮೊದಲು ಆಹಾರವನ್ನು ಪಡೆಯಬೇಕಾದರೆ ಒಂದು ಪ್ರಾಣಿಯಾಗಲಿ ಅಥವಾ ಒಬ್ಬ ಮನುಷ್ಯನಾಗಲೀ ಬೇಟೆಯಾಡಲೇಬೇಕಿತ್ತು. ಆಗ ಬೇಟೆಯು ಒಂದು ಪ್ರಮುಖ ವೃತ್ತಿಯಾಗಿತ್ತು. ಇಲ್ಲಿ ಬೇಟೆ ಎಂಬ ಕನ್ನಡ ಪದಕ್ಕೆ ಇಂಗ್ಲೀಷ್‌ನ "Hunting" ಎಂಬ ಪದವನ್ನು ಬಳಸಲಾಗುತ್ತದೆ. ಬೇಟೆ ಶಬ್ದದ ವಿಕಾಸವನ್ನು ವೇಂಟ್ಟೈ– ವೇಟ್ಟೈ– ವೇಟೆ ಮತ್ತು ವೇಂಟೆ ನಂತರ ಬೇಟೆಯಾಗಿದೆ ಎನ್ನಬಹುದು.[೧೦] ಬೇರೆ ಬೇರೆ ಭಾಷೆಗಳಲ್ಲಿ ಬೇಟೆ ಪದಕ್ಕೆ ಬೇರೆ ಬೇರೆ ಅರ್ಥಗಳಿವೆ. ಅಂದರೆ ಸಮಾನವಾದ ಪದಗಳೇ ಬಳಕೆಯಾಗಿವೆ. ತೆಲುಗಿನಲ್ಲಿ ವೇಟ ಎಂದೂ ತಮಿಳುನಲ್ಲಿ 'ವೇಟ್ಟೈ' ಎಂದೂ ಮಲಯಾಳಂನಲ್ಲೂ ವೇಟ್ಟೈ ಎಂದೂ ಹೀಗೆ ಇತ್ಯಾದಿ ಭಾಷೆಗಳಲ್ಲಿ ಕಾಣಬಹುದು. ಅಂದರೆ ಈ ಪದಕ್ಕೆ ಒಂದೇ ರೀತಿಯ ಅರ್ಥಗಳು ಬರುತ್ತವೆ. ಕೊಲ್ಲುವುದು, ಬಲಿ ತೆಗೆದುಕೊಳ್ಳುವುದು. ಅಂದರೆ ಜಾತ್ರೆ ಸಂದರ್ಭಗಳಲ್ಲಿ ಬಲಿಕೊಟ್ಟು ಹರಕೆ ತೀರಿಸುವುದು. ಒಂದು ರೀತಿ ಬೇಟೆ ಪದಕ್ಕೆ ಹತ್ತಿರವೆನಿಸುತ್ತದೆ. ಭಾರತದಲ್ಲಿ ಬೇರೆ ಬೇರೆ ಪ್ರದೇಶಗಳಿಗೆ ಅನ್ವಯಿಸುವಂತೆ ಬೇರೆ ಬೇರೆ ಬುಡಕಟ್ಟುಗಳಿವೆ.

ಆಯಾ ರಾಜ್ಯಗಳಲ್ಲಿ ವಿಭಿನ್ನ ಬುಡಕಟ್ಟುಗಳ ವೃತ್ತಿಯೇ ಈ ಬೇಟೆಯಾಗಿರುವುದು ಗಮನಾರ್ಹವಾಗಿದೆ. ಅರುಣಾಚಲ ಪ್ರದೇಶದಲ್ಲಿ ಆದಿರಾಮೊರು ಬೇಟೆಗಾರಿಕೆಯನ್ನು ಇಂದಿಗೂ

ವೃತ್ತಿಯಾಗಿಸಿಕೊಂಡಿರುವುದು. ಕೇರಳದ ಅರಾಂದಾನ್ ಬೇಟೆಯಲ್ಲಿ ತೊಡಗಿಸಿಕೊಂಡಿರುವುದು. ಮಣಿಪುರದ ಐಮೋಲ್ ಬುಡಕಟ್ಟು, ಮಹಾರಾಷ್ಟ್ರದ ಬರ್ದಾ ಬುಡಕಟ್ಟು, ಗುಜರಾತ್‌ನ ಬರೊಡಿಯಾ ಹಾಗೂ ಕರ್ನಾಟಕದಲ್ಲಿ ಹಕ್ಕಿ-ಪಿಕ್ಕಿ ಬುಡಕಟ್ಟು ಸಮುದಾಯವಿದ್ದು, ಪ್ರಮುಖವಾಗಿ ಗಿರಿ ಪ್ರದೇಶಗಳಾದ ದಕ್ಷಿಣಕನ್ನಡ, ಉತ್ತರಕನ್ನಡ ಭಾಗಗಳಲ್ಲಿ ಬೇಟೆಯಲ್ಲಿಯೇ ಹೆಚ್ಚು ಕಾಲ ಕಳೆಯುತ್ತಿದ್ದರು. ಬೇಟೆಯಾಡುವ ಜನಾಂಗದವರನ್ನೇ ದಕ್ಷಿಣ ಭಾರತದಲ್ಲಿ ಕೆಲವು ಪರ್ಯಾಯ ಪದಗಳಿಂದ ಕರೆಯಲಾಗುತ್ತದೆ. ಅಂದರೆ ಭಿಲ್ಲ, ಬೊಯೊ, ವಾಲ್ಮೀಕಿ, ವೇಡನ್, ನಾಯರ್, ಬೇಡ, ಮುಂಡ ಹೀಗೆ ಹಲವಾರು ಪದಗಳಿಂದ ಕರೆಯುವುದು ಕಂಡುಬರುತ್ತದೆ.

ಮಧ್ಯಕಾಲದಲ್ಲಿ ಬೇಟೆಯು ತುಂಬಾ ಪರಿಣಾಮಕಾರಿಯಾದ ವೃತ್ತಿಯೂ ಹಾಗೂ ಹವ್ಯಾಸವೂ ಆಗಿತ್ತು. ಹಲವು ಕಾವ್ಯಗಳು ಹಾಗೂ ಶಿಲಾಶಾಸನಗಳಲ್ಲಿ ಬೇಟೆಯ ವಿಚಾರಗಳ ಕುರಿತು ದಾಖಲಿಸಿದ್ದಾರೆ. ಹೊಯ್ಸಳ ದೊರೆಗಳಿಗೆ 'ಮಲೆಪೆರೊಳ್‌ಗಂಡ' ಹಾಗೂ 'ಗಿರಿದುರ್ಗಮಲ್ಲ' ಎಂಬ ಕೆಲವು ಬಿರುದುಗಳಿದ್ದು, ಅಂದರೆ ಇವರು ಗಿರಿಜನರಾಗಿದ್ದರೆಂದು, ಬೇಟೆ ಇವರ ವೃತ್ತಿಯೂ ಆಗಿತ್ತೇನೊ ಎಂದು ಅನಿಸುತ್ತದೆ. ಹೊಯ್ಸಳ ಸ್ಥಾಪಕನಾದ ಸಳನ ಬೇಟೆಯ ಕುರಿತು ಬೆಳವಡಿಯ ಶಾಸನ ಹೇಳುತ್ತದೆ. ಕವಿ ಜನ್ನನು ರಚಿಸಿರುವ ಯಶೋಧರ ಚರಿತ್ರೆಯಲ್ಲಿ ಹೀಗೆ ಹೇಳಲಾಗಿದೆ.

ಸಳನೆಂಬ ಯಾದವಂ ಹೊಯ್
ಸಳನಾದಂ ಶಶಕಪುರದ ವಾಸಂತಿಕೆಯೆಳ್
ಮುಳಿದು ಪುಳಿ ಪಾಯ್ವುದುಂ ಹೊಯ್
ಸಳ ಎಂದೊಡೆ ಗುರುಗಳಿತ್ತು ಕುಂಚದ ಸೆಳೆಯಂ[೧೦]

ಅಂದರೆ ಸಳನು ಹೀಗೆ ಹುಲಿಯನ್ನು ಕೊಂದು ರಾಜ್ಯವನ್ನು ಕಟ್ಟಿದನೆಂದು ಹೇಳುವ ಸಂದರ್ಭ ಬೇಟೆಯನ್ನು ಕುರಿತು ಬಿಂಬಿಸುತ್ತದೆ. ಈ ಮಧ್ಯಕಾಲದಲ್ಲಿ ಭೇಟಿ ನೀಡಿದ ಹಲವು ವಿದೇಶಿ ಪ್ರವಾಸಿಗರು ಬೇಟೆಯ ಪ್ರಸಂಗಗಳನ್ನು ಕುರಿತು ತಿಳಿಸಿರುವುದನ್ನು ಕಾಣಬಹುದು. ಮುಖ್ಯವಾಗಿ ಮಧ್ಯಕಾಲೀನ ಯುಗದಲ್ಲಿ ವಿಜಯನಗರ ಕಾಲದ ಬೇಟೆಯು ತುಂಬಾ ಮಹತ್ವವನ್ನು ಪಡೆದುಕೊಂಡಿದೆ. ಅಂದರೆ ಈ ಕಾಲದಲ್ಲಿ ಕೆತ್ತನೆ ಮಾಡಿರುವ ಶಿಲ್ಪಗಳು ಹಾಗೂ ಚಿತ್ರಗಳನ್ನು ಗಮನಿಸಿದಾಗ ಅರ್ಜುನನು ನೀರಿನಲ್ಲಿ ಮೀನಿನ ಪ್ರತಿಬಿಂಬ ನೋಡಿ ಗುರಿಯಿಟ್ಟು ಹೊಡೆಯುವ ಚಿತ್ರ, ಬೇಟೆಗಾರ್ತಿಯರ ಚಿತ್ರಗಳು ಕಂಡುಬರುತ್ತವೆ. ಮಹಾನವಮಿ ದಿಬ್ಬದ ಶಿಲ್ಪಗಳಲ್ಲಿ ಆನೆಗಳು, ಒಂಟೆಯ ದೃಶ್ಯ, ಕಾಡಿನ ದೃಶ್ಯ ಮೊದಲಾದ ಉಬ್ಬು ಕೆತ್ತನೆಗಳಿಂದ ಅಲಂಕಾರ ಮಾಡಿದ್ದಾರೆ.[೧೧] ಬೇಡ ಬೇಡತಿಯರಿಬ್ಬರೂ ಸೇರಿ ಜಿಂಕೆಯನ್ನು ಬೇಟೆಯಾಡುವ ದೃಶ್ಯಗಳನ್ನು ಹಂಪಿಯ ಮಹಾನವಮಿದಿಬ್ಬದಲ್ಲಿ ಕಾಣಬಹುದು. ಹಾಗೆಯೇ ಕಂಪಲಿ ಸೋಮೇಶ್ವರ ದೇವಾಯದಲ್ಲಿಯೂ ಬೇಟೆಯ ಉಬ್ಬುಶಿಲ್ಪಗಳಿರುವುದು ಕಂಡುಬರುತ್ತದೆ.

ಮಾನವನಿಗೆ ಬೇಟೆಯು ಅನಿವಾರ್ಯವಾಗಿತ್ತು. ನಂತರ ಮನರಂಜನೆಯ ಹವ್ಯಾಸವಾಯಿತು. ಮಾನವನ ಬದುಕಿನ ಭಾಗಗಳಲ್ಲಿ ಇದು ಒಂದಾಗುತ್ತಾ ಹೋಯಿತು. ಮಧ್ಯಕಾಲದಲ್ಲಿ ಅಂದರೆ ಕ್ರಿ.ಶ. ೧೩, ೧೪ನೇ ಶತಮಾನಗಳ ಕಾಲಾವಧಿಯಲ್ಲಿ ಭೇಟಿ ಕೊಟ್ಟಂತಹ ವಿದೇಶಿ ಯಾತ್ರಿಕರ ಬರವಣಿಗೆಗಳು ಬೇಟೆಯನ್ನು ಅದರ ಮೌಲ್ಯವನ್ನು ಕುರಿತು ಅಲ್ಲಲ್ಲಿ ಹೇಳುತ್ತಾ ಹೋಗಿದ್ದಾರೆ. ಕ್ರಿ.ಶ. ೧೪೪೧ರಲ್ಲಿ ಭೇಟಿಕೊಟ್ಟ ಅಬ್ದುಲ್ ರಜಾಕನು ಆನೆಗಳನ್ನು ಹೇಗೆ ಹಿಡಿಯಬೇಕು ಎಂಬುದರ ಕುರಿತು ಮಾಹಿತಿ ನೀಡಿದ್ದಾನೆ. ಬಾರ್ಬೋಸಾ ಇಲ್ಲಿನ ಜನರು ಒಳ್ಳೆಯ ಬೇಟೆಗಾರರು ಎಂದು ಉಲ್ಲೇಖಿಸಿದ್ದಾನೆ. ನ್ಯೂನಿಜ್‌ನು ದೇವರಾಯನು ಹಂಪಿಯಲ್ಲಿ ದೇವಾಲಯವನ್ನು ಕಟ್ಟಿಸಿದನೆಂದರೆ ಅದಕ್ಕೆ ಪ್ರಮುಖ ಕಾರಣ ಬೇಟೆ ಎಂದು ಹೇಳಿರುವುದನ್ನು ಗಮನಿಸಿದರೆ ಬೇಟೆಗೆ ನೀಡುತ್ತಿದ್ದ ಪ್ರಾಮುಖ್ಯತೆಯ ಬಗ್ಗೆ ತಿಳಿಯುತ್ತದೆ. ಅಷ್ಟಾದಶ ವರ್ಣನೆಗಳಲ್ಲೂ ಬೇಟೆಯ ವರ್ಣನೆಗಳು ಸಮಗ್ರವಾಗಿವೆ. ಅಲ್ಲಿ ವಿವಿಧ ರೀತಿಯ ಪ್ರಾಣಿಗಳನ್ನು ಹಿಡಿಯಲು ವಿವಿಧ ಬಗೆಯ ಬಲೆಗಳನ್ನು ಬಳಸುತ್ತಿದ್ದರು.[೧೩] ಕಾಲಾನಂತರ ಬೇಟೆಯು ಒಂದು ವೃತ್ತಿಯಾಗತೊಡಗಿತು. ಅಂದರೆ ಪ್ರಾಣಿಗಳನ್ನು ಬೇಟೆಯಾಡಿ ಅದರ ಚರ್ಮ, ಕೆಲವು ಅಂಗಾಂಗಗಳನ್ನು ಮಾರುವುದು, ಅದನ್ನೇ ಉದ್ಯಮವಾಗಿಸಿಕೊಳ್ಳವುದು ಬಂದದ್ದು ವಿಶಾದವೆನಿಸುತ್ತದೆ. ಪ್ರಾಣಿಗಳನ್ನಷ್ಟೇ ಅಲ್ಲ ಪಕ್ಷಿಗಳನ್ನೂ ಬೇಟೆಯಾಡುವುದನ್ನು ಕೆಲವೊಂದು ಕಾವ್ಯಗಳಲ್ಲಿ ವರ್ಣಿಸಲಾಗಿದೆ. ರಾಮನಾಥ ಚರಿತೆಯಲ್ಲಿ ಗುಬ್ಬಿ, ಗೊರವಕ್ಕ, ಮರವ, ಪಾರಿವಾಳ, ನವಿಲು, ಕಾಗೆ, ಕೊಂಚೆ, ಗೂಬೆ ಹೀಗೆ ಹಲವು ಪಕ್ಷಿಗಳ ಹೆಸರಿದೆ. ಬೇಟೆಯನ್ನಾಡಬೇಕಾದರೆ ಬೇರೆ ಬೇರೆ ಪ್ರದೇಶಗಳ ಭಿನ್ನತೆಯ ಆಧಾರದ ಮೇಲೆ ಜಲಬೇಟೆ, ನೆಲಬೇಟೆ ಎಂದು ವಿಂಗಡಿಸಿದರೆ ಅದರಲ್ಲಿ ಕೆರೆ, ಸಾಗರ, ತೊರೆ, ಹಳ್ಳಗಳಲ್ಲಿ ಜಲಚರ ಪ್ರಾಣಿಗಳನ್ನು ಬೇಟೆಯಾಡುತ್ತಾ ಬಂದಿರುವುದು ಜಲಬೇಟೆಯಾದರೆ, ನೆಲಬೇಟೆಯಲ್ಲಿ ಪ್ರಾಣಿ–ಪಕ್ಷಿಗಳನ್ನು ಬೇಟೆಯಾಡುತ್ತಿದ್ದನು. ಕೃಷಿಯು ಮಾನವನ ದಿನನಿತ್ಯ ಭಾಗದಲ್ಲಿ ಸೇರಿಹೋಗಿದೆ. ಬಹುಶಃ ಇದು ಬರುವವರೆಗೂ ಬೇಟೆ ಮಾನವನ ಮುಖ್ಯ ವೃತ್ತಿಯಾಗಿತ್ತೆಂದು ಅನಿಸುತ್ತದೆ. ಬೇಟೆಗೆ ಕಾರಣಗಳನ್ನು ಗಮನಿಸಿದಾಗ ಎರಡು ರೀತಿಯಲ್ಲಿ ಹೇಳಬಹುದು.

೧. ಪ್ರಜೆಗಳ ರಕ್ಷಣೆ ಮಾಡುವುದು ರಾಜನ ಕರ್ತವ್ಯವಾಗಿರುವುದರಿಂದ ಕಾಡುಪ್ರಾಣಿಗಳಿಂದ ಜನರನ್ನು ರಕ್ಷಿಸಲಿಕ್ಕಾಗಿ ಕಾಡು ಪ್ರಾಣಿಗಳನ್ನು ಬೇಟೆಯಾಡುತ್ತಿದ್ದನು.

೨. ರಾಜನು ನುರಿತ ಬೇಟೆಗಾರನಾಗಿದ್ದರೆ ರಾಜನ ಸಾಹಸ, ಧೈರ್ಯಕ್ಕೆ ಮನ್ನಣೆ ಸಿಗುತ್ತದೆ ಎನ್ನುವ ಕಾರಣದಿಂದಲೂ ಹಾಗೂ ಕೆಲವೊಮ್ಮ ವಿಚಾರ ಮಾಡಬೇಕಾದಾಗಲೂ ಬೇಟೆಯಾಡುತ್ತಿದ್ದುದು ಕಂಡುಬರುತ್ತದೆ.

ಪಂಪಭಾರತದಲ್ಲಿ ಹೇಳುವ ಪ್ರಕಾರ ಅರ್ಜುನನು ಸಾಹಸ ಮತ್ತು ವಿನೋದಕ್ಕಾಗಿ ವಸಂತ ಋತುವಿನಲ್ಲಿ ಬೇಟೆಗೆ ತೆರಳುತ್ತಿದ್ದನು. ಆದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಂಪಿಲನು ಬೇಡರ ಕೋರಿಕೆಯ ಮೇರೆಗೆ ಕಾಡುಪ್ರಾಣಿಗಳಿಂದಾಗುವ ಅನಾಹುತಗಳಿಂದ ತಪ್ಪಿಸಿಕೊಳ್ಳಲು ಜನರನ್ನು ರಕ್ಷಿಸಲಿಕ್ಕೋಸ್ಕರ ಬೇಟೆಯಾಡಲು ಹೋಗುತ್ತಿದ್ದ ಎಂದು ರಾಮನಾಥ ಚರಿತೆ ಹೇಳುತ್ತದೆ.

ಬೇಟೆ ಜನಪದ ಜೀವನಕ್ಕೆ ಹೊಂದಿಕೊಂಡು ಬಂದ ಸಹಜಕ್ರಿಯೆ. ಪ್ರಾಚೀನ ಕಾಲದಲ್ಲಿ ಆಹಾರ ಸಂಗ್ರಹಣೆ ಮತ್ತು ತಮ್ಮ ರಕ್ಷಣೆಗಾಗಿ ಬೇಟೆಯು ಅವಶ್ಯಕವಾಗಿತ್ತು. ಕಾಡಿನ ಪ್ರದೇಶಗಳಲ್ಲಿ ಬದುಕುವ ಜನವರ್ಗಕ್ಕೆ ಬೇಟೆ ಅನಿವಾರ್ಯವಾಗಿತ್ತು. ಬೇಟೆಯನ್ನು ತಮ್ಮ ಆಹಾರೋತ್ಪಾದನಾ ಮಾರ್ಗಗಳಲ್ಲೊಂದಾಗಿ ಮಾಡಿಕೊಂಡು ಸಾಂಸ್ಕೃತಿಕವಾಗಿ ವಿಕಾಸವಾಗುತ್ತಾ ಬೇಟೆಯು ಹಲವಾರು ಸಾಮ್ರಾಜ್ಯಗಳ ಉದಯಕ್ಕೆ ಕಾರಣವಾಗುತ್ತದೆ. ವಿಜಯನಗರ ಸಾಮ್ರಾಜ್ಯದ ಹುಟ್ಟಿನ ಬಗೆಗೆ ಐತಿಹ್ಯ ಒಂದು ಹೀಗಿದೆ. ಹಿಂದೆ ಹಕ್ಕಬುಕ್ಕರು ಹಂಪಿಯ ಪ್ರದೇಶಕ್ಕೆ ಬೇಟೆಯಾಡುತ್ತ ಬಂದಾಗ ಅಲ್ಲಿ ವಾಸವಾಗಿದ್ದ ಮೊಲಗಳು ಅವರ ಬೇಟೆ ನಾಯಿಗಳನ್ನು ಬೆನ್ನಟ್ಟಿ ಹೋದವು. ಇಷ್ಟೇ ಅಲ್ಲ ಅವರು ಏರಿದ ಕುದುರೆಗಳ ಕಾಲುಗಳನ್ನು ಕಚ್ಚಿದವಂತೆ ಅಲ್ಲಿ ನಡೆದ ವಿಚಿತ್ರವೂ, ಅಸಹಜವೂ, ಆಶ್ಚರ್ಯವೂ ಆದ ಘಟನೆಯನ್ನು ಆ ಪ್ರದೇಶದ ಋಷಿಮಾನ್ಯರಾದ ವಿದ್ಯಾರಣ್ಯರಿಗೆ ತಿಳಿಸಿದರು. ಬಹುಕಾಲದಿಂದಲೂ ಆ ತಪೋಭೂಮಿಯಲ್ಲಿ ನೆಲೆಯಾಗಿದ್ದ ವಿದ್ಯಾರಣ್ಯರು ಚಿಂತಿಸಿ ನಂತರ ಹೀಗೆ ಹೇಳಿದರು. ಇದು ಗಂಡು ಮೆಟ್ಟಿದ ನೆಲ. ಎಲ್ಲ ಪ್ರದೇಶಗಳಲ್ಲೂ ಹೀಗೆ ಆಗಲು ಸಾಧ್ಯವಿಲ್ಲ. ಎಲ್ಲಿ ದುರ್ಬಲವೂ, ಸಾಮಾನ್ಯವೂ ಆದ ಪ್ರಾಣಿ ಬಲಿಷ್ಠವೂ ದರ್ಪವೂ ಆಗಿ ವರ್ತಿಸುತ್ತದೆಯೋ ಅಲ್ಲಿ ಭೂಮಿಯು ದೈವಿಕ ಮಹತ್ವವನ್ನು ಹೊಂದಿರುತ್ತದೆ. ನೀವು ಸಾಮ್ರಾಜ್ಯ ಸ್ಥಾಪಿಸಲು ಇದು ಒಳ್ಳೆಯ ಗಂಡುಭೂಮಿ. ಈ ಸಲುವಾಗಿ ನಾನು ತಾಯಿ ಭುವನೇಶ್ವರಿಯನ್ನು ಕುರಿತು ತಪಸ್ಸು ಮಾಡಿ ವರ ಪಡೆಯುತ್ತೇನೆ. ತಪಸ್ಸಿನಿಂದ ಫಲ ಸಿಕ್ಕ ನಂತರ ಶಂಖ ಊದುತ್ತೇನೆ. ಶಂಖನಾದ ಕೇಳಿದ ಮರುಕ್ಷಣದಲ್ಲಿಯೇ ನೀವು ಸಾಮ್ರಾಜ್ಯ ಸ್ಥಾಪಿಸಿ ಎಂದು ಹೇಳಿದರು. ಅದರಂತೆ ಸಾಮ್ರಾಜ್ಯ ಸ್ಥಾಪನೆಗೆ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡು ಹಕ್ಕ-ಬುಕ್ಕರು ಎದುರು ನೋಡುತ್ತಿರುತ್ತಾರೆ. ಇತ್ತ ವಿದ್ಯಾರಣ್ಯರು ದೇವಿಯಿಂದ ಎಂದೂ ಅಳಿಯದ ಸಾಮ್ರಾಜ್ಯ ಸ್ಥಾಪಿಸುವ ವರ ಪಡೆಯಲು ತಪಸ್ಸು ಮಾಡುತ್ತಾರೆ. ದೇವಿ ಪ್ರತ್ಯಕ್ಷವಾಗಿ ಏನು ವರಬೇಕು ಎಂದು ಕೇಳುವ ವೇಳೆಗೆ ಭಿಕ್ಷುಕನೊಬ್ಬ ಶಂಖವನ್ನು ಬಿಡದೆ ಊದುತ್ತಾನೆ. ಶಂಖ ನಾದವನ್ನು ಕೇಳಿದ ಹಕ್ಕ-ಬುಕ್ಕರು ವಿದ್ಯಾರಣ್ಯರು ಊದಿದ ಶಂಖನಾದವೆಂದೇ ತಿಳಿದು ಸಾಮ್ರಾಜ್ಯ ಸ್ಥಾಪನೆ ಮಾಡಿಬಿಟ್ಟರು. ಇದರಿಂದ ನೊಂದ ವಿದ್ಯಾರಣ್ಯರು ದೇವಿಯನ್ನು ಕೇಳಲಾಗಿ ಪ್ರಕೃತಿ ನಿಯಮದಂತೆ ಹುಟ್ಟಿದುದು ಅಳಿಯಲೇಬೇಕು. ಚಿರಕಾಲ ಉಳಿಯುವ ಸಾಮ್ರಾಜ್ಯ ಸ್ಥಾಪಿಸಲು ಸಾಧ್ಯವಿಲ್ಲ ಎಂದು ತಾಯಿ ಭುವನೇಶ್ವರಿ ಹೇಳಿದಳಂತೆ. ಮುಂದೆ ಸಾಮ್ರಾಜ್ಯ ಸ್ಥಾಪಿಸಲು ಆ ಭಾಗಕ್ಕೆ ಬಂಗಾರದ ಮಳೆ ಸುರಿಸಿದಳಂತೆ. ದೇವಿ ಸುರಿಸಿದ ಬಂಗಾರದ ಮಳೆಯಿಂದ ವಿದ್ಯಾರಣ್ಯರು ಹಕ್ಕ-ಬುಕ್ಕರಿಂದ ವಿಜಯನಗರ ಸಾಮ್ರಾಜ್ಯಗಳ ಹಿಂದೆ ಬೇಟೆ ಸಂಸ್ಕೃತಿಯ ಐತಿಹ್ಯಗಳು ಹೇರಳವಾಗಿ ಸಿಗುತ್ತವೆ.

**ರಾಜರು ಬೇಟೆಯಾಡುವ ಪ್ರಸಂಗ**

ಬೇಟೆಯಾಡುವುದು ರಾಜರ ಹವ್ಯಾಸಗಳಲ್ಲಿ ಒಂದಾಗಿತ್ತು. ಕಾಡು ಪ್ರಾಣಿಗಳ ಹಾವಳಿಯಿಂದ ಪ್ರಜೆಗಳು ತೊಂದರೆಗೊಳಗಾದಾಗಲೂ ಅವರನ್ನು ರಕ್ಷಿಸುವುದು ತನ್ನ ಕರ್ತವ್ಯವೆಂದು ಭಾವಿಸಿ ಕಾಡು ಪ್ರಾಣಿಗಳನ್ನು ಬೇಟೆಯಾಡುತ್ತಿದ್ದ. ರಾಜರು ವನ ವಿಹಾರ ಅಥವಾ ಕಾಡು ಪ್ರಾಣಿಗಳೊಂದಿಗೆ

ಹೋರಾಡುವ ಅವರ ಸಾಹಸ-ಶೌರ್ಯಗಳ ಪ್ರದರ್ಶನವನ್ನು ತೋರ್ಪಡಿಸಲು ರಾಜರು ಬೇಟೆಯಾಡುತ್ತಿದ್ದರು.

ಪಾಂಚಾಳಗಂಗ ವಿರಚಿತ ಚೆನ್ನರಾಮನ ಸಾಂಗತ್ಯದಲ್ಲಿ ಬೇಟೆಗೆ ಹೋಗಿರುವ ವರ್ಣನೆಯು ಕಂಡುಬರುತ್ತದೆ. ಜಟ್ಟಿಂಗ ರಾಮೇಶ್ವರನ ವರಪ್ರಸಾದದಿಂದ ಹರಿಯಾಲದೇವಿಗೆ ಗಂಡು ಮಗುವಾದಾಗ ಕಂಪಿಲನ ಸಂಸಾರದಲ್ಲಿ ಮಹದಾನಂದ ಮೊಳಗಿತು. ಕಾಲಾಂತರದಲ್ಲಿ ಕಂಪಿಲರಾಯ ಮಲ್ಲಯುದ್ಧ, ಶಸ್ತ್ರಾಭ್ಯಾಸಗಳನ್ನು ಪೂರೈಸಿದ ಕುಮಾರನನ್ನು ಕೂಡಿಕೊಂಡು ಕಂಪಿಲನು ಒಂದು ಬಾರಿ ಬೇಟೆಯಾಡುತ್ತಿರಲು ಮೊಲಗಳು ಬೇಟೆನಾಯಿಗಳ ಮೇಲೆ ತಿರುಗಿಬಿದ್ದುದನ್ನು ಕಂಡು ಬೆರಗಾಗುತ್ತಾನೆ. ಈ ಸನ್ನಿವೇಶವನ್ನು ಗಮನಿಸಿದರೆ ಕಂಪಿಲರಾಯ ಕುಮಾರರಾಮನ ಆಳ್ವಿಕೆಯ ಕಾಲದಲ್ಲಿ ಬೇಟೆಯ ಮಹತ್ವವನ್ನು ತಿಳಿಯಬಹುದು.

ಬಾಲರಾಮನು ಎಳವೆಯಲ್ಲಿ ಪ್ರತಿದಿನ ಶಿಕಾರಿಗೆ ಹೋಗುತ್ತಿದ್ದನು. ಅವನು ಅನೇಕ ಪ್ರಾಣಿಗಳನ್ನು ಬೇಟೆಯಾಡುತ್ತಿರುವುದನ್ನು ಸಾಂಗತ್ಯಗಳಲ್ಲಿ ಕಾಣಬಹುದು ಅದರಲ್ಲೂ ಆನೆ ಕುದುರೆಗಳೊಡನೆ ಕಾಡಿಗೆ ಹೋಗಿ ಬೇಟೆಯಾಡುವ ಪ್ರಸಂಗವನ್ನು ಬಾಲರಾಮನ ಸಾಂಗತ್ಯದಲ್ಲಿ ಈ ರೀತಿಯಾಗಿ ಕಂಡುಬರುತ್ತದೆ.

'ಬಾಲ ಬುದ್ದಿಯ ಕಳೆದು ಮತಿ ಸಲಿಸಾಗಲು ನಿತ್ಯ ಸ್ವಾರಿ ಶಿಕಾರಿ ಮಾಡುವರು

ಕಾಲಾಳು ಕರಿತುರಗದೊಡನೆ ಬಸವನ ಗಿರಿಯಾಗ ಬೇಂಟೆಯನಾಡಿ ದಿನಚರಿಯ'

ಈ ರೀತಿಯಾಗಿ ಕುಮ್ಮಟದರಸರು ಬೇಟೆಯನ್ನು ಹವ್ಯಾಸ ಮಾಡಿಕೊಂಡಿದ್ದರು. ಅರಸರು ತನ್ನ ದಣಿವನ್ನು ನಿವಾರಿಸಿಕೊಳ್ಳಲು ಬಿಡುವಿನ ವೇಳೆಯಲ್ಲಿ ತನ್ನ ಸಂಗಡಿಗರ ಜೊತೆ ಕಾಡಿಗೆ ಹೋಗಿ ಬೇಟೆಯಾಡುತ್ತಿದ್ದ ಹಲವಾರು ಪ್ರಸಂಗಗಳು ಸಾಂಗತ್ಯಗಳಲ್ಲಿ ಕಂಡುಬರುತ್ತವೆ.[೧೪]

**ಬೇಟೆಯಿಂದ ಕಲಿಯುವ ಕಸರತ್ತುಗಳು ಮತ್ತು ತಂತ್ರಗಳು**

ಒಂದು ಸಾಮ್ರಾಜ್ಯದಲ್ಲಿ ಹಲವು ಜನವರ್ಗಗಳಿರುವ ಕಡೆ ಹಲವಾರು ಸಂಪ್ರದಾಯಗಳು, ಆಚರಣೆಗಳು ರೂಢಿಯಲ್ಲಿರುವುದು ಸಹಜ. ಮಾನವನ ಸಾಂಸ್ಕೃತಿಕ ಇತಿಹಾಸದ ಬೆಳವಣಿಗೆಯ ಮುಂದಿನ ಹಂತಗಳಲ್ಲಿ ಬೇಟೆಯು ವೃತ್ತಿಯನ್ನಾಗಿಸಿಕೊಂಡು, ಅದರಿಂದ ಅನೇಕ ಕಸರತ್ತು ಮತ್ತು ತಂತ್ರಗಳನ್ನು ಕಲಿಯುವುದಕ್ಕೆ ಮುನ್ನುಡಿಯಾಗಿರುತ್ತಿತ್ತು. ಎಷ್ಟೋ ರಾಜಮಹಾರಾಜರು ಬೇಟೆಯನ್ನು ತಮ್ಮ ಆಹಾರೋತ್ಪಾದನಾ ಮಾರ್ಗಗಳಲ್ಲೊಂದಾಗಿ ಮಾಡಿಕೊಂಡು ಮುಂದುವರೆಸಿದರು. ನಂತರ ಯುದ್ಧದ ತಂತ್ರಗಳನ್ನೂ ಅನೇಕ ರಹಸ್ಯ ಮಾರ್ಗಗಗಳನ್ನು, ಶತ್ರುಗಳನ್ನು ಎದುರಿಸಲು ಉಪಾಯಗಳನ್ನು ಈ ಬೇಟೆಯ ಸಂದರ್ಭದಲ್ಲಿ ತಿಳಿಯುತ್ತಿದ್ದವು. ಬೇಟೆಯಲ್ಲಿ ಇಷ್ಟೆಲ್ಲಾ ಗುಣ ವಿಶೇಷಗಳ ಜೊತೆಗೆ ಮಾನವನ ಬುದ್ಧಿವಿಕಾಸದಲ್ಲಿ ಬಹು ಮಹತ್ತರವಾದ ಪಾತ್ರವಹಿಸಿದೆ.

ಶಿಲಾಯುಗದ ಮಾನವನು ವಿವಿಧ ರೂಪದ ಆಯುಧಗಳನ್ನು ಕಲ್ಲಿನಿಂದ ಚೂಪಾಗಿ ತಯಾರಿಸಿಕೊಂಡು ಅದರಿಂದ ಬೇಟೆಯಾಡಿ ಹಸಿ–ಹಸಿ ಮಾಂಸವನ್ನೇ ತಿಂದು ಜೀವನ ಸಾಗಿಸುತ್ತಿದ್ದನು. ಆ ಜನರು ಬೇಟೆಯ ಅನೇಕ ತಂತ್ರಗಳನ್ನು ಕಲಿತಿದ್ದರು. ಕ್ರಮೇಣ ಆಹಾರೋತ್ಪಾದನೆ ಸಾಧನವಾಗಿದ್ದ ಬೇಟೆ, ಚರ್ಮದ ಹೊದಿಕೆ ಉಪಕರಣಗಳನ್ನು ಒದಗಿಸಿತ್ತು. ಬೇಟೆಗೆ ಕಬ್ಬಿಣದಿಂದ ತಯಾರಿಸಿದ ಕೊಡಲಿ, ಈಟಿ, ಖಡ್ಗಗಳನ್ನು ಉಪಯೋಗಿಸಲು ಆರಂಭಿಸಿದನು.

ಕಬ್ಬಿಣದ ಆಯುಧಗಳನ್ನು ಬೇಟೆಗೆ ಬಳಸಿದ ನಂತರ ಪ್ರಾಣಿಗಳನ್ನು ಮರೆಯಲ್ಲಿ ನಿಂತು ಖಡ್ಗದಿಂದ ಕಡಿಯುವುದು. ಈಟಿಯಿಂದ ಇರಿಯುವುದು, ದೂರದಲ್ಲಿದ್ದರೆ ಬಾಣ ಹೂಡಿ ಗುರಿ ನೋಡಿ ಹೊಡೆದು ಬೇಟೆಯನ್ನು ಉರುಳಿಸುವುದು. ಈ ರೀತಿಯಾಗಿ ಹಲವಾರು ತಂತ್ರಗಳನ್ನು ಬೇಟೆಯ ಸಮಯದಲ್ಲಿ ಕಲಿಯುತ್ತಿದ್ದರು. ಬೇಟೆ ವೃತ್ತಿಯನ್ನು ಸುಲಭ ಮತ್ತು ಫಲಪ್ರದಗೊಳಿಸಿಕೊಳ್ಳಲು ಅವನು ನಿರಂತರ ಅನ್ವೇಷಣೆ ನಡೆಸಿದಂತಿದೆ. ಈ ಕ್ಷೇತ್ರದಲ್ಲಿ ಅನೇಕ ಬಗೆಯ ತಂತ್ರಜ್ಞಾನ ರೂಪಗೊಂಡಿತು. ಬೇಟೆಯು ಸುಲಭವಾಗಿ ಯಶಸ್ವಿಯಾಗಲು ಬಲೆಗಳ ಮೊರೆ ಹೋಗಿರಬಹುದು.

**ಬೇಟೆಯ ಸಂದರ್ಭದಲ್ಲಿ ಬಲೆಗಳು ಬಹುಮುಖ್ಯ ಮತ್ತು ಅತ್ಯಗತ್ಯ ಸಾಧನಗಳು**

ಕಷ್ಟಸಾಧ್ಯ ಬೇಟೆಯನ್ನು ಸುಲಭ ಮತ್ತು ಯಶಸ್ವಿಗೊಳಿಸಲು ಈ ಬಲೆಗಳು ನೆರವು ನೀಡುತ್ತವೆ. ಕಾಡು ಪ್ರಾಣಿಗಳಲ್ಲಿ ಇದ್ದ ಕ್ರೂರ ಸ್ವಭಾವ, ಚಲನೆಯ ವೇಗ, ಬೇಟೆಯ ಸಂದರ್ಭದಲ್ಲಿ ಬೇಟೆಗಾರನಿಗೆ ತೀವ್ರ ತೊಡಕಾಗಿ ಸವಾಲಾಗಿ ಕಾಡಿರಬೇಕು. ಇದನ್ನು ಎದುರಿಸಿ ಗೆಲ್ಲಲು ನಿರಂತರವಾಗಿ ಚಿಂತಿಸಿರಬೇಕು. ಬೇಟೆಯ ಸಂದರ್ಭದಲ್ಲಿ ಬಳ್ಳಿಗಳ ತೊಡಕಿನಲ್ಲಿಯೇ ಮೆಳೆ ಪೊದರಿನಲ್ಲಿಯೇ ಸಿಲುಕಿ ಶಕ್ತಿಗುಂದಿ ಅಸಹಾಯಕವಾಗಿ ಪ್ರಾಣಿಗಳು ಬೇಟೆಗಾರನಿಗೆ ಸುಲಭವಾಗಿ ಸೆರೆಯಾಗಲು ಕಷ್ಟವಾಗುತ್ತಿದ್ದ ಸಂದರ್ಭದಲ್ಲಿ ಈ ಬಲೆಗಳು ಬೇಟೆಗಾರನಿಗೆ ಸಹಾಯ ರೀತಿಯಲ್ಲಿ ಬೇಟೆಗಾರಿಕೆಯನ್ನು ಸುಲಭಗೊಳಿಸುವ ಆಲೋಚನೆ ಹೊಳೆದು ಬಲೆಗಳ ಮೊರೆ ಹೋಗಿರಬೇಕು. ಬಲೆಯನ್ನು ಬಳಸಿಕೊಂಡು ಆಡುವ ಬೇಟೆ ಬಹುಮಟ್ಟಿಗೆ ಯಶಸ್ಸು ನೀಡಿದೆ.

ಕಂಪಿಲರಾಯನು ಬೇಟೆಗೆ ಹೊರಟ ಸಂದರ್ಭದಲ್ಲಿ ಬಲೆಯ ಹೊರೆಗಳನ್ನು ಹೊತ್ತು ನಡೆದ ಬೇಡರ ಚಿತ್ರವೊಂದು ಕಾವ್ಯದಲ್ಲಿ ಬರುತ್ತದೆ. ಆ ಬೇಡರ ಹೆಬ್ಬಲೆ, ತೆರೆಸಿರೆ ಕಾಲ್ಕೆನ್ನೆ, ಬೆಳ್ಕಾರ ಹಬ್ಬುಗವಲೆಗಳನ್ನು ಕೊಂಡೊಯ್ಯುತ್ತಾರೆ. ಇದಲ್ಲದೆ ಕನ್ನಡದ ಇನ್ನಿತರ ಕಾವ್ಯಗಳಲ್ಲಿ ಹಲವು ಬಗೆಯ ಬಲೆಗಳ ಹೆಸರುಗಳು ಹೀಗೆ ಉಲ್ಲೇಖವಾಗಿದೆ. ಹೊಡೆವಲೆ, ಕಾಲ್ಕಣ್ಣೆವಲೆ, ತೆಳ್ಳುವಲೆ, ಪುರಿಯೊಕ್ಕಣ್ಣಿವಲೆ, ಉರುಳ್ವಲೆ, ಕಿರುವಲೆ[೧೫], ಮರೆಬಲೆ, ದಡಿವಲೆ, ಸಿಡಿವಲೆ ಕಡ್ಡಿವಲೆ.[೧೬]

ಈ ಹೆಸರುಗಳನ್ನು ಗಮನಿಸಿದರೆ ಅವುಗಳನ್ನು ತಯಾರಿಸುವಲ್ಲಿ ಬಳಸುತ್ತಿದ್ದ ವಸ್ತು ಮತ್ತು ಸ್ಥಗಿತ ಬೇಟೆಯಲ್ಲಿ ಅವುಗಳ ಬಳಕೆಯ ವಿಧಾನ ಇತ್ಯಾದಿ ವಿವರಗಳು ದೊರೆಯುತ್ತವೆ. ಬೇಟೆಗಾರರು ಬಲೆಗಳನ್ನು ಬೇಟೆ ಪ್ರಾಣಿಗಳಿಗೆ ಕಾಣದಂತೆ ಒಡ್ಡುತ್ತಿದ್ದರು. ಬೆಳ್ಳಾರ ಬಲೆಗಳ ಹರಹಿ ಸೊಪ್ಪಿನ

ತೋಹಿನಲಿ ಸಿಲುಕಿಸಿದರಾ ಮೃಗವ ಎಂಬ ಕುಮಾರವ್ಯಾಸ ಭಾರತದ ಪ್ರಯೋಗ ಮೇಲಿನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತದೆ.

ನಂಜುಂಡನ ರಾಮನಾಥ ಚರಿತೆಯಲ್ಲಿ ಉಲ್ಲೇಖಗೊಂಡಿರುವ ಹೆಬ್ಬಲೆ, ಕಾಲ್ಕಣ್ಣೆವಲೆ, ಬೆಳ್ಳಾರವಲೆ, ಹಬ್ಬುಗವಲೆಗಳು ವೈವಿಧ್ಯಮಯ ಬಲೆಗಳಾಗಿವೆ.

### ೫.೨.೨. ಪಶುಪಾಲನೆ

ಭಾರತದಲ್ಲಿ ಹರಪ್ಪಾ ಮತ್ತು ಮೆಹಂಜೋದಾರೋ ನಾಗರೀಕತೆಗಳ ಕಾಲದಿಂದಲೂ ಫಲವತ್ತಾದ ನೆಲ, ಉತ್ತಮ ವಾಯುಗುಣ ಜಲಮೂಲ ಸೌಕರ್ಯಗಳಿದ್ದುದರಿಂದ ಉತ್ತಮವಾದಂತಹ ಸಸ್ಯವರ್ಗಗಳು ಕಂಡುಬರುತ್ತಿದ್ದವು. ಹಾಗೆಯೇ ಅಲ್ಲಿನ ಪ್ರಾಚೀನ ನಗರಗಳು ಆರ್ಥಿಕತೆಯಲ್ಲಿ ಗುರುತಿಸಿಕೊಂಡಿದ್ದವು. ಜೊತೆ ಜೊತೆಗೆ ಪ್ರಾಣಿಗಳನ್ನು ಸಾಕುತ್ತಿದ್ದರು. ಎತ್ತು, ಹಸು, ಎಮ್ಮೆ, ಒಂಟೆ, ಕುದುರೆ, ಆನೆ, ಕೋಳಿ, ಆಡು, ಇತ್ಯಾದಿ ಪ್ರಾಣಿಗಳನ್ನು ಸಲಹುತ್ತಿದ್ದರು. ಕೃಷಿಯ ಜೊತೆಗೆ ಪಶುಪಾಲನೆಯು ನಾಗರೀಕತೆಗಳ ಕಾಲಾವಧಿಯಲ್ಲಿ ಪ್ರಮುಖ ವೃತ್ತಿಯಾಗಿತ್ತು. ಹೀಗಾಗಿಯೇ ಕಾಡಿನಲ್ಲಿ ಅಲೆಯುತ್ತಿದ್ದ ಹಸು, ಎಮ್ಮೆ, ಎತ್ತು, ಕುದುರೆ, ಕುರಿ, ಆಡು, ಕೋಳಿ, ಹಂದಿ, ಒಂಟೆ ಮತ್ತು ಆನೆಗಳನ್ನು ಪಳಗಿಸಿ ಅವುಗಳಿಂದ ನಾನಾ ಪ್ರಯೋಜನಗಳನ್ನು ಪಡೆಯುತ್ತಿದ್ದರು.[೧೭] ಈ ಕಾಲಾವಧಿಯಲ್ಲಿ ಗೂಳಿಗಳನ್ನು ಹೆಚ್ಚು ಸಾಕುತ್ತಿದ್ದುದರಿಂದ ಸಿಂಧೂ ಜನರಿಗೆ ಬೇಟೆಯಾಡಲು ಹೆಚ್ಚು ಆಸಕ್ತಿ ತೋರಿಸದೆ ಪಶುಪಾಲನೆಗೆ ಇಲ್ಲಿನ ಜನರು ಯಾವ ರೀತಿ ಪ್ರಾಧಾನ್ಯತೆ ನೀಡಿದ್ದರು ಎಂದರೆ ಇದಕ್ಕಾಗಿ ವಲಸೆಯನ್ನು ಹೋಗುತ್ತಿದ್ದರು. ಪಶುಪಾಲನೆ ಮತ್ತು ಅಲ್ಪ ಸ್ವಲ್ಪ ವ್ಯವಸಾಯ ಅವರ ಕಸುಬುಗಳಾಗಿದ್ದುದರಿಂದ ಉತ್ತಮವಾದ ಜೀವನಕ್ಕೆ ಹಾತೊರೆದು ಹುಲ್ಲು, ನೀರು ಸಮೃದ್ಧಿಯಾಗಿರುವೆಡೆಗಳಲ್ಲಿ ಹುಡುಕುತ್ತಲೇ ನಡೆದರು.[೧೮]

ವೇದಗಳ ಕಾಲದಲ್ಲೂ ಪಶುಪಾಲನೆಯು ಇತರೆ ಕುಲ ಕಸುಬುಗಳಿಗಿಂತ ತುಂಬಾ ಮುಖ್ಯವಾಗಿತ್ತು. ಪುರುಷರು ತಂದೆಯ ಆಜ್ಞೆಯಂತೆ ಪಶುಪಾಲನೆಯನ್ನು, ಇತರೆ ಮನೆ ಹೊರಗಿನ ಕೆಲಸಗಳನ್ನು ಚಾಚೂ ತಪ್ಪದಂತೆ ಮಾಡಬೇಕಿತ್ತು. ಕೃಷಿ, ಗೋವುಗಳ ರಕ್ಷಣೆಯು ಆರ್ಯರಿಗೆ ತುಂಬಾ ಮುಖ್ಯವಾಗಿತ್ತು. ವೇದಗಳ ಕೊನೆಯ ವೇಳೆಗಾಗಲೇ ಅನಾರ್ಯ ಬುಡಕಟ್ಟುಗಳು ಬೇಟೆ ಪಶುಪಾಲನೆ ಮತ್ತು ಕೃಷಿಯನ್ನು ಅವಲಂಭಿಸಿದ್ದುದು ತಿಳಿದುಬರುತ್ತದೆ. ಮಧ್ಯಕಾಲೀನ ವೇಳೆಗಾಗಲೇ ಬೇಟೆಯ ಜೊತೆ ಪಶುಪಾಲನೆಗಳು ಮುಖ್ಯವೆನಿಸಿದವು. ಈ ಸಂದರ್ಭದಲ್ಲಿ ಅನೇಕ ಗುಂಪುಗಳ ಪಶುಪಾಲನಾ ಕೇಂದ್ರಗಳಿದ್ದವು. ಪಶುಗಳನ್ನು ಅಪಹರಿಸುವುದೇ ಕೆಲವು ಗುಂಪುಗಳ ಹವ್ಯಾಸವಾಗಿತ್ತು. ಒಬ್ಬರ ಪಶುಗಳನ್ನು ಮತ್ತೊಬ್ಬರು ಅಪಹರಿಸುವುದನ್ನು ತುರುಕಾಳಗ ಅಥವಾ ಗೋಗ್ರಹಣ ಎಂದು ಕರೆಯುತ್ತಿದ್ದರು. ಮುಖ್ಯವಾಗಿ ವಿಜಯನಗರ ಪೂರ್ವದಲ್ಲಿ ಕುಮ್ಮಟದುರ್ಗದ ರಾಜಕೀಯ ಇತಿಹಾಸದಲ್ಲಿ ಸಾಂಸ್ಕೃತಿಕ ಹೆಗ್ಗುರುತುಗಳಲ್ಲಿ ಬೇಟೆ ಮತ್ತು ಪಶುಪಾಲನೆ ತುಂಬಾ ಮುಖ್ಯವೆನಿಸಿವೆ. ಕಂಪಿಲರಾಯ ಮತ್ತು ಕುಮಾರರಾಮನ ಕಾಲದಲ್ಲಿ ಅನೇಕ ಪಶುಪಾಲನಾ ಕೇಂದ್ರಗಳಿದ್ದವು. ಅವುಗಳಲ್ಲಿ

ಪ್ರಮುಖವಾದದು 'ಚಿತ್ರದುರ್ಗ ಜಿಲ್ಲೆಯ ಪರಿಸರ'[೧೯] ಹರಿಹರ, ಹೊಳಲ್ಕೆರೆ ಶಾಸನಗಳು ಗೋಗ್ರಹಣಕ್ಕೆ ಸಂಬಂಧಪಟ್ಟಿವೆ ಎಂದು ಹೇಳುವುದು ಸರಿಯೆನಿಸುತ್ತದೆ. ಮುಮ್ಮಡಿಸಿಂಗನ ಮರಣದ ನಂತರ ಮಂಚಕ್ಕ ನಾಲ್ಕಾರು ಬೇಡ ಕುಟುಂಬಗಳ ಸಹಿತ ಮಗನೊಂದಿಗೆ ಜಟ್ಟಿಂಗ ರಾಮೇಶ್ವರ ಪ್ರದೇಶಕ್ಕೆ ವಲಸೆ ಬಂದು ವಾಸಮಾಡುತ್ತಾರೆ. ಅಲ್ಲಿ ಆ ಬೇಡ ಕುಟುಂಬಗಳು ಬೇಟೆಯಾಡುತ್ತಾ ಲೋಹಗಿರಿಯಲ್ಲಿ ಅಲ್ಲೆ ವಾಸಮಾಡುತ್ತಿದ್ದರು.

ಬೇಟೆಯನಾಡುತ ಬಂದರು ಮಲೆಯೊಳು
ಮೀಟಾದ ಲೋಹಾರಿ ಗಿರಿಯ ದಾಟುತ ಕಂಡಾರು[೨೦]

ಹರಿಯಾಲದೇವಿ ಪುತ್ರನನ್ನು ಬಯಸಿ ಜಟ್ಟಂಗಿ ರಾಮೇಶ್ವರನನ್ನು ಪ್ರಾರ್ಥಿಸಿ, ತನಗೆ ಪುತ್ರ ಸಂತಾನವಾಗಿ ರಾಮೇಶ್ವರ ದೇವರಿಗೆ ಹರಕೆಯನ್ನು ಸಲ್ಲಿಸುತ್ತಾಳೆ. ದೇವರಿಗೆ ಮೀಸಲು ಹಾಲು, ತುಪ್ಪ, ಕಳುಹಿಸಿದಳು ಎಂದು ಕುಮಾರರಾಮಯ್ಯನ ಚರಿತ್ರೆ ೨ನೇ ಸಂಧಿಯಲ್ಲಿ ದಾಖಲಾಗಿದೆ. ಅಂದರೆ ಕುಮ್ಮಟದುರ್ಗದ ಅರಸ ಕಾಲದಲ್ಲಿ ದೇವರಿಗೆ ಹಾಲು, ತುಪ್ಪ, ಸಲ್ಲಿಸುತ್ತಾರೆಂದರೆ ಅವರ ಕಾಲದಲ್ಲಿ ಪಶುಪಾಲನೆಯಲ್ಲಿ ಹಸು, ಎಮ್ಮೆಗಳನ್ನು ಸಾಕುತ್ತಿದ್ದರೆಂದು ತಿಳಿಯುತ್ತದೆ.

'ಮೀಸಲು ಹಾಲು ತುಪ್ಪ, ಕದಳಿಯ ಫಲ ಸೂಸಲು ಸಣ್ಣಕ್ಕಿ ಬೇಳೆ
ಬಾಸುರ ತೇಜನ ಬಲಗೊಂಥು ಬನ್ನೆಂದು ಆ ಸಖಿಯರ ಕೂಡ ಕಳುಹೆ'[೨೧]

ಈ ಒಂದು ಪಾಠದಲ್ಲಿ ಈ ರೀತಿಯ ಪಶುಪಾಲನೆಗೆ ಮಹತ್ವ ಕೊಟ್ಟಿದ್ದ ಹಾಲಿನ ಉತ್ಪಾದನೆಯಿಂದ ಸೈನಿಕರಿಗೆ ಅರಮನೆಯ ಪರಿಚಾರಕಿಯರಿಗೆ ರಾಜ ರಾಣಿಯರಿಗೆ ಹಾಲು ತುಪ್ಪದ ಅವಶ್ಯಕತೆ ಇರುವುದರಿಂದ ಇವರು ಪಶುಪಾಲನೆಯನ್ನು ಅವಲಂಭಿಸಿದ್ದರು. ಕುಮ್ಮಟದುರ್ಗದ ಸುತ್ತಮುತ್ತಲ ಪ್ರದೇಶವು ತುಂಗಭದ್ರಾ ನದಿಯ ಭೂಪ್ರದೇಶವಾಗಿದ್ದರಿಂದ ಪಶುಪಾಲನೆಗೆ ಸೂಕ್ತ ಪ್ರದೇಶವಾಗಿತ್ತು. ಕುಮ್ಮಟದ ಅರಸರು ಕುಮ್ಮಟದುರ್ಗವನ್ನು ನಿರ್ಮಿಸುವ ವಿಚಾರವನ್ನು ತಂದೆಗೆ ಹೇಳಿದರು. ಅದರಂತೆ ಕುಮ್ಮಟದಲ್ಲಿ ತನ್ನ ರಾಜ್ಯ ರಕ್ಷಣೆಗಾಗಿ ಶತ್ರುಗಳಿಂದ ಪಾರಾಗಲು ಭದ್ರವಾದ ಕೋಟೆಯನ್ನು ನಿರ್ಮಿಸಿದರು. ಕೋಟೆಯ ಒಳಗಡೆ ರಾಜರಿಗಾಗಿ ಬೃಹತ್ತಾದ ಅರಮನೆಯನ್ನು ಸಹ ನಿರ್ಮಿಸಿದರು. ಹೊಸದಾಗಿ ಕೋಟೆ ಮತ್ತು ಅರಮನೆ ನಿರ್ಮಿಸಿದ ನಂತರ ಈ ಸ್ಥಳದಲ್ಲಿ ಎಮ್ಮೆಗಳ ಹಿಂಡು, ಆಕಳುಗಳ ಹಿಂಡು ನೆರೆದವು ಎಂದು ಉಲ್ಲೇಖಿಸಲಾಗಿದೆ.

'ಕುಮ್ಮಟದುರ್ಗದ ಕೋಟೆಯ ಒಲಿಸಿದ
ತಮ್ಮರ ಮನೆಗಳ ರಚಿಸಿ
ಎಮ್ಮೆಯಹಿಂಡು ಆಕಳ ಹಿಂಡು ಕುರಿಗಳ
ಗಮ್ಮನೆ ಹೊಡೆಸಿ ಕಂಪಳದ'[೨೨]

ಹೀಗೆ ಅರಮನೆಯನ್ನು ನಿರ್ಮಿಸಿದ ನಂತರ ಪ್ರತ್ಯೇಕವಾದ ಅನೇಕ ಮನೆಗಳನ್ನು ನಿರ್ಮಿಸಿದ್ದರು ಎಂಬುದನ್ನು ಉಲ್ಲೇಖಿಸಲಾಗಿದೆ.

ದೊಡ್ಡರ ಮನೆಯು ಚಿಕ್ಕರ ಮನೆ ಪೇಟೆಯು
ದೊಡ್ಡಾನೆ ಸಾಲು ಬೀದಿಗಳು
ಕಾಟಣ್ಣನವರ ಮನೆ ನಾಟಕಸಾಲೆಯು
ಮೀಟಾದ ಕುದುರೆಯ ಲಾಯ[೨೩]

ಹೊಸಬರ ಹಳಬಲ ಅಸಗರ ಕೇರಿಯು
ಮೊಸರ ಮಾರುವರ ಬಜಾರ
ಶಿಶುವಿಗೆ ಪಾಲ್ಗೆಣ್ಣೆ ಛತ್ರದ ಮನೆಗಳು
ಹಸನಾದವು ನಗರದೊಳಗೆ.[೨೪]

ಹೀಗೆ ಕೋಟೆಯ ಒಳಗಡೆ ರಾಣಿಯ ಅರಮನೆಯ ನಂತರ ಹಲವಾರು ಉಪಮನೆಗಳನ್ನು ಕಟ್ಟಿಕೊಂಡಿದ್ದರು. ಅವುಗಳಲ್ಲಿ ಆನೆಬೀದಿಸಾಲು, ಕುದುರೆಲಾಯ, ಮೊಸರು ಮಾರುವವರ ಬಜಾರ ಶಿಶುವಿಗೆ ಹಾಲ್ಗೆಣ್ಣೆ ಮನೆ, ಛತ್ರದ ಮನೆಗಳು ನಿರ್ಮಿಸಿದ್ದರು. ಇವುಗಳನ್ನು ಗಮನಿಸಿದಾಗ ಕುಮ್ಮಟದ ಅರಸರು ಪಶುಪಾಲನೆಗೆ ಪ್ರಾಶಸ್ತ್ಯವನ್ನು ಕೊಟ್ಟಿದ್ದರೆಂಬುದನ್ನು ತಿಳಿಯಬಹುದು. ಅದರಲ್ಲೂ ಮೊಸರು ಮಾರುವವರ ಕೇರಿ ಶಿಶುಗಳಿಗೆ ಹಾಲು ಮಾರುವವರ ಕೇರಿಗಳು ಈ ರಾಜ್ಯದಲ್ಲಿ ಹೆಚ್ಚಾಗಿ ಪಶುಪಾಲನೆಗೆ ಪ್ರಾಶಸ್ತ್ಯ ಕೊಟ್ಟಿದ್ದವು ಎಂಬುದನ್ನು ತಿಳಿಯಬಹುದು.

ಕಂಪಿಲರಾಯನಿಗೆ ಕೊಟ್ಟ ಮಾತಿನಂತೆ ಜಗದಪ್ಪನು ಮಗಳನ್ನು ಕಳುಹಿಸಿಕೊಡಲು ಸಿದ್ಧನಾಗಿ ತನ್ನ ಮಗಳನ್ನು ಮಂತ್ರಿ ತಿಮ್ಮರಸ ಮತ್ತು ಮಗ ಉತ್ತುಂಗರಾಯನೊಂದಿಗೆ ಮಗಳನ್ನು ಕಳುಹಿಸಿದ. ಮಗಳಿಗೆ ಬಂಗಾರ ಬಗೆಬಗೆಯ ಆಭರಣಗಳನ್ನು ಉಂಬಳಿಯಾಗಿ ಐದು ಊರುಗಳನ್ನು ನೀಡಿದರೆ ಅಳಿಯನಿಗೆ ಐದು ಕುದುರೆ ಬಳುವಳಿಯಾಗಿ ಆಕಳ ಹಿಂಡು ಹಾಲು ಕರೆಯುವ ಎಮ್ಮೆ ಹಿಂಡು ಕೊಟ್ಟ ಮಾಹಿತಿಯನ್ನು ಕೊಮಾರರಾಮಯ್ಯನ ಚರಿತ್ರೆಯಲ್ಲಿ ಉಲ್ಲೇಖಿಸಲಾಗಿದೆ.

ಅಳಿಯಗೆ ಕೊಟ್ಟನು ವ ಐದು ತೇಜಿಯ
ಬಳುವಲು ಕೊಟ್ಟಾಕಳ ಹಿಂಡ।
ಸೆಳೆಮಂಚ ಕರೆವೆಮ್ಮೆ ಹಿಂಡನೆ ಹೊಡೆಸಿದ ಕೊಟ್ಟ ಜಗದಪ್ಪ॥[೨೫]

ಹೀಗೆ ಕುಮಾರರಾಮನಿಗೆ ಜಗದಪ್ಪ ತನ್ನ ಮಗಳನ್ನು ವಿವಾಹ ಮಾಡಿಕೊಟ್ಟು ತನ್ನ ಮಗಳಿಗೆ ಒಡವೆ ಆಭರಣಗಳನ್ನು ಕೊಟ್ಟರೆ ಅಳಿಯ ಕಂಪಿಲರಾಯನಿಗೆ ಐದು ಕುದುರೆ ಬಳುವಳಿಯಾಗಿ ಹಸುಗಳ ಹಿಂಡು, ಕರೆಯುವ ಎಮ್ಮೆಗಳ ಹಿಂಡನ್ನು ಕೊಟ್ಟನೆಂದರೆ ಅಂದಿನ ಕಾಲಘಟ್ಟದಲ್ಲಿ ಪಶುಸಂಗೋಪನೆ ಪಶುಪಾಲನೆಗೆ ಹೇಗೆ ಮಹತ್ವವನ್ನು ಕೊಟ್ಟಿದ್ದರೆಂಬುದನ್ನು ತಿಳಿಯಬಹುದು

ಅದರಲ್ಲೂ ಬಳುವಳಿಯಾಗಿ ಹಸುಗಳ ಹಿಂಡನ್ನು ಕೊಡುತ್ತಾರೆಂದರೆ ಪಶುಗಳ ಪಾಲನೆಯಲ್ಲಿ ಅವರಿಗೆ ಅಗಾಧವಾದ ನಂಬಿಕೆ ಇತ್ತು. ಹಾಗಾಗಿ ಕಂಪಿಲರಾಯರ ಕಾಲದಲ್ಲಿ ಪಶುಪಾಲನೆಗೆ ಮಹತ್ವ ಕೊಟ್ಟಿದ್ದರೆಂಬುದನ್ನು ತಿಳಿಯಬಹುದು.

ಗುತ್ತಿಯ ಜಗದಪ್ಪರಾಯ ತನ್ನ ಮಕ್ಕಳನ್ನು ಕುಮಾರರಾಮನಿಗೆ ಮದುವೆ ಮಾಡಿಕೊಡುತ್ತಾನೆ. ಮಾರಮ್ಮ, ಸಿಂಗಮ್ಮ, ಅಣ್ಣನನ್ನು ಕರೆದುಕೊಂಡು ಬಂದು ಅರಿಷಿಣ ಎಣ್ಣೆ ಹಚ್ಚಿದರೂ ಊಟಕ್ಕಾಗಿ ಎಲ್ಲರೂ ಸಾಲುಸಾಲಾಗಿ ಕುಳಿತುಕೊಳ್ಳುತ್ತಾರೆ. ಊಟದ ಸಮಯದಲ್ಲಿ ಬಗೆಬಗೆಯ ತರಕಾರಿ ಪಲ್ಯೆಗಳು, ಸೊಪ್ಪುಗಳು, ಹಾಲಿನ ಪರಮಾನ್ನ, ಸಕ್ಕರೆ ಮಾಡಿಗೆ, ತೊಗರಿ ತೋವೆ, ಅಲಸಂದಿ ತೊಗರಿ ಕಟ್ಟು, ಮಜ್ಜಿಗೆ ಸಾರು, ಹುಳಿಸಾರು, ಆಕಳ, ಎಮ್ಮೆ ಹಾಗೂ ಕುರಿಯ ತುಪ್ಪದ ಜೊತೆಗೆ ಜೇನುತುಪ್ಪದಿಂದ ಬಗೆಬಗೆಯ ಆಹಾರ ಪದಾರ್ಥಗಳನ್ನು ಮದುವೆಯ ಸಂದರ್ಭದಲ್ಲಿ ತಯಾರಿಸುತ್ತಿದ್ದರು. ಇದಕ್ಕೆ ಸಂಬಂಧಿಸಿ ಉಲ್ಲೇಖಿಸಿರುವ ಪದ್ಯವೊಂದನ್ನು ನೋಡಬಹುದು.

ಆಕಳತುಪ್ಪ ಎಮ್ಮೆಯ ತುಪ್ಪ ಕುರಿ ತುಪ್ಪ
ಮೇಕೆ ತುಪ್ಪ ಜೇನು ತಉಪ್ಪ
ಬೇಕೆಂಬಷ್ಟು ತಂದು ನೀಡಿದರು ಬೇಗದಿ
ಏಕ ಚಿತ್ತದಲಿ ನಾರಿಯರು॥[೨೬]

ಮದುವೆಯ ಸಂದರ್ಭದಲ್ಲಿ ಹಾಲು-ಮೊಸರು-ತಪ್ಪವನ್ನು ಹೆಚ್ಚಾಗಿ ಬಳಕೆ ಮಾಡುತ್ತಿದ್ದ ಕುಮ್ಮಟದ ಅರಸರು ಹಾಲು, ಹಾಲಿನ ಉತ್ಪನ್ನಗಳನ್ನು ಬಳಸುತ್ತಿದ್ದರು. ಪಶುಪಾಲನೆಯಲ್ಲಿ ಆಕಳು, ಎಮ್ಮೆ, ಕುರಿ, ಮೇಕೆಗಳನ್ನು ಹೆಚ್ಚಾಗಿ ಸಾಕಾಣಿಕೆ ಮಾಡುತ್ತಿದ್ದುದರ ಬಗ್ಗೆ ಉಲ್ಲೇಖಗಳಿವೆ.

ರತ್ನಾಜಿಯು ಕುಮಾರರಾಮನ ಅಂದ, ಚಂದ, ಶೌರ್ಯಕ್ಕೆ ಪರವಶಳಾಗಿ ಒಮ್ಮೆ ಕುಮಾರರಾಮ ಅರಮನೆಯಂಗಳದಲ್ಲಿ ಚೆಂಡಿನಾಟವನ್ನು ಆಡುವಾಗ ಕಟ್ಟಾಳು ರಾಮನಿಗೆ ತಾನು ತಕ್ಕವಳು ಎಂದು ಬಯಸಿ ರಾಮನನ್ನು ವಶಮಾಡಿಕೊಳ್ಳಲು ಸಂಗಿಯೊಡನೆ ಉಪ್ಪರಿಗೆಯನ್ನು ಏರಿ ಅನೇಕ ದೇವರನ್ನು ಪ್ರಾರ್ಥಿಸಿಕೊಳ್ಳುತ್ತಾಳೆ. ರಾಮ ತನಗೆ ವಶವಾದರೆ ಊರಮುಂದಣ ಮಾರಮ್ಮಗೆ ಮುನ್ನೂರು ಕೋಣ ಬಲಿಕೊಡುವೆ ಎಂದು ಹರಕೆ ಮಾಡುತ್ತಾಳೆ.

ಚೆನ್ನಿಗರಾಮನ ಚೆಂಡು ಎನ್ನಬಳಿಗೆ
ಭಿನ್ನವಿಲ್ಲದೆ ಬೀಳಲೊಡನೆ
ಉನ್ನತ ಊರ ಮುಂದಣ ಮಾಧ್ಯಮ್ಮಗೆ
ಮುನ್ನೂರು ಕೋಣ ಹೊಯ್ಯುವೆನು॥[೨೭]

ರತ್ನಾಜಿಯು ಮಾರಿಗೆ ಮುನ್ಮೂರು ಕೋಣಗಳನ್ನು ಬಲಿಕೊಡಲು ಹರಕೆ ಹೊತ್ತಿದ್ದಳೆಂದರೆ ಅಂದಿನ ಕಾಲದಲ್ಲಿ ಕುಮ್ಮಟದ ಅರಸರ ಪ್ರದೇಶದಲ್ಲಿ ಎಮ್ಮೆಗಳ, ಕೋಣಗಳ ಸಾಕಾಣಿಕೆ ಹೆಚ್ಚಿತ್ತೆಂದು

ಸಾಂಗತ್ಯಗಳಿಂದ ತಿಳಿಯುತ್ತದೆ. ಕುಮಾರರಾಮನು ಸತ್ತ ಸುದ್ದಿ ದೆಹಲಿಗೆ ತಲುಪಿದಾಗ ಸುಲ್ತಾನನು ನೇಮಿಖಾನನನ್ನು ಕುಮ್ಮಟದ ಅರಸರ ಮೇಲೆ ಯುದ್ಧ ಮಾಡಲು ಹಾಗೂ ಕುಮ್ಮಟ ರಾಜ್ಯವನ್ನು ವಶಪಡಿಸಿಕೊಳ್ಳಲು ನೇಮಿನೇತೃತ್ವದಲ್ಲಿ ಸೈನ್ಯ ಸಮೇತ ಕುಮ್ಮಟಕ್ಕೆ ತೆರಳಿತು. ಆ ಸಂದರ್ಭದಲ್ಲಿ ವಿಜಯ ಪುರು-ಕುಮ್ಮಟದ ಪ್ರದೇಶಗಳಲ್ಲಿ ಬೇಡರ ಗೂಳೆ ಹೋಗಲು ತಾನು ಸಾಕಿದ ಹಸುಗಳು, ಕುರಿಗಳು, ಹಕ್ಕಿಯ ಗೂಡು ಸಹಿತ ಗೂಳೆ ನಡೆದರು. ಗೂಳೆ ಹೋಗುವಾಗ ಬೇಡರು ಹೆಬ್ಬಲಿ, ಕಿರುವಲೆ, ಮೊಲವೆಲೆ, ಗುಬ್ಬಿಯ ಬಲೆಯೊಂದಿಗೆ ಗೂಳೆ ಹೊಡದುಕೊಂಡು ಜೊತೆಗೆ ಕುರಿಯ ಹಿಂಡುಗಳನ್ನು ಹೊಡೆದುಕೊಂಡು ಮರಿಗಳನ್ನು ಹೊತ್ತುಕೊಂಡು, ಮರುಗುವ ಹೆಂಡರ ಕೈ ಹಿಡಿದುಕೊಂಡು ಗೊಲ್ಲರು ಗೂಳೆ ಹೋಗುತ್ತಾರೆ. ಆ ಸಂದರ್ಭದಲ್ಲಿ ಕುರಿಗಳ ಹಿಂಡಿನ ಉಲ್ಲೇಖ ಸಾಂಗತ್ಯಗಳಲ್ಲಿವೆ.

> ಕುರಿಯ ಹಿಂಡುಗಳನ್ನು ಕೆರಳಿಸಿಕೊಂಡಾಗ
> ಮರಿಗಳ ಹೆಗಲಿಗೆ ಹೊತ್ತು
> ಮರುಗುವ ಹೆಂಡಿರ ಕೈಯ್ಯ ಪಿಡಿದುಕೊಂಡು ಗೊ
> ಲ್ಲರ ಗೂಳೆಯ ನಡೆಯೆ॥[೨೮]

ಹೀಗೆ ಕುಮ್ಮಟದುರ್ಗ ಚಿಕ್ಕ ರಾಜ್ಯವಾದರೂ ಇತರ ರಾಜ್ಯಗಳಲ್ಲಿ ಕಂಡುಬರುವಂತೆ ಪಶುಪಾಲನೆಗೆ ಹೆಚ್ಚು ಆದ್ಯತೆಯನ್ನು ನೀಡುತ್ತಿದ್ದುದು ಹಾಗೂ ಗೋಗ್ರಹಣ ಕುರಿತು ಶಾಸನಗಳ ಮೂಲಕ ತಿಳಿದು ಬರುತ್ತದೆ. ಅಷ್ಟೇ ಅಲ್ಲದೆ ಒಂದು ಕೋಟೆ, ಒಂದು ಅರಮನೆಯನ್ನು ನಿರ್ಮಿಸಿದರೂ ಅಲ್ಲಿನ ಎಮ್ಮೆಗಳ ಹಿಂಡು, ಆಕಳುಗಳ ಹಿಂಡು, ಬೇಕಿತ್ತು. ಹಾಗೆಯೇ ಉಪಮನೆಗಳನ್ನು ರಾಜರು ನಿರ್ಮಿಸಿಕೊಟ್ಟರೂ ಅಲ್ಲಿಗೂ ಸಾಕುಪ್ರಾಣಿಗಳನ್ನು ಸಲಹುತ್ತಿದ್ದರು. ಜೊತೆ ಜೊತೆಗೆ ಮೊಸರು ಮಾರುವವರ ಕೇರಿಗಳು, ಹಾಲು ಮಾರುವವರ ಕೇರಿಗಳೂ ಪ್ರತ್ಯೇಕವಾಗಿದ್ದವು. ಅಂದರೆ ಪಶುಪಾಲನೆಗೆ ಕುಮ್ಮಟದರಸರು ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದರೆಂದು ರಾಜ ರಾಣಿಯರಿಗೆ, ಪರಿವಾರದವರಿಗೆ, ಪ್ರಜೆಗಳ ಹಿತಕ್ಕಾಗಿ, ಶ್ರೀಮಂತಿಕೆಯನ್ನು ಗುರುತಿಸಲು ಹಾಗೂ ಗೋಗ್ರಹಣ ಮಾಡಿದವರೂ ಪ್ರಭಾವಶಾಲಿಗಳೆಂದು ಗುರುತಿಸಲೂ ಸಹಾಯವಾಗುತ್ತಿತ್ತು. ಒಟ್ಟಿನಲ್ಲಿ ಸಂಪತ್ತಿನ ಕ್ರೂಢೀಕರಣಕ್ಕಾಗಿಯೂ ಪಶುಪಾಲನೆಯು ಅವಶ್ಯಕವಿತ್ತು ಎಂದು ತಿಳಿದುಬರುತ್ತದೆ.

### ೫.೨.೩. ಕೃಷಿ

ಮಧ್ಯಕಾಲೀನ ಕರ್ನಾಟಕದಲ್ಲಿ ಕೃಷಿ ವ್ಯವಸ್ಥೆ ಮತ್ತು ಭೂಸ್ವಾಮ್ಯದ ನಡುವೆ ಸ್ವಲ್ಪ ವ್ಯತ್ಯಾಸವಿದ್ದು, ಬಹುಶಃ ಭೂಮಿಯ ಮಾಲೀಕರು ಭೂಮಿಯನ್ನು ದಾನ ಮಾಡುತ್ತಿದ್ದರು. ಆದರೆ ಇವರು ಸಾಗುವಳಿಮಾಡದೆ, ಬೇರೆಯವರು ಅಂದರೆ ಸಾಗುವಳಿ ಮಾಡುವವರಿಗೆ ನೀಡುತ್ತಿದ್ದರು. ಸಾಗುವಳಿ ಮಾಡುವವರೇ ಗೇಣಿದಾರರು ಆಗಿರುತ್ತಿದ್ದರು. ಈ ಗೇಣಿದಾರರು ತಮ್ಮ ಅಧೀನದಲ್ಲಿ ಕೂಲಿಗಾಗಿ ಕೆಲಸಗಾರರನ್ನು ಇಟ್ಟುಕೊಳ್ಳುತ್ತಿದ್ದರು. ಇವರನ್ನು ಜೀತದಾಳು ಎನ್ನಲಾಗುತ್ತಿತ್ತು.

ಹೀಗೆ ಕೃಷಿಯನ್ನು ಅನುಸರಿಸಲಿಕ್ಕೆ ಭೂರಹಿತ ಕೃಷಿಕರು ಜೀತದಾಳುಗಳಾಗಿಯೂ ದುಡಿಯಬೇಕಿತ್ತು. ಈ ರೀತಿಯ ವ್ಯವಸ್ಥೆಯು ಮಧ್ಯಕಾಲದಲ್ಲಿ ಕೃಷಿಕರನ್ನು ಕೆಲವು ಹಂತಗಳಲ್ಲಿ ಮೂಲೆಗುಂಪು ಮಾಡಿತ್ತು ಎಂದರೆ ತಪ್ಪಾಗಲಾರದು. ಇದು ಏನೇ ಇರಲಿ ರಾಜರುಗಳು ಕೆರೆಗಳನ್ನು ಕಟ್ಟಿಸುವುದು, ಕೃಷಿಗೆ ಅನುಕೂಲ ಮಾಡಿಕೊಡುವುದು ಕದಂಬರ ಪೂರ್ವಕಾಲದಿಂದಲೂ ನಡೆದುಬಂದಿದೆ ಎನ್ನುವುದನ್ನು ಶಾಸನಗಳಿಂದ ತಿಳಿಯಬಹುದು. ಕೆರೆಗಳನ್ನು ರಾಜರು ಕಟ್ಟಿಸಿದಂತಹ ಸಂದರ್ಭದಲ್ಲಿ ಕೆಲವು ಭಾಗಗಳಲ್ಲಿ ಇದರ ರಕ್ಷಣೆಗೆಂದೇ ನೀರುಗಂಟಿಯನ್ನು ನೇಮಿಸುತ್ತಿದ್ದರು. ಕೆರೆಗಳ ಶುಚಿತ್ವವನ್ನು ಕಾಪಾಡಿಕೊಳ್ಳುವುದು ಆ ಊರಿನ ಜನರಿಗೆ ಸೇರಿತ್ತು. ದೂರ ದೂರದ ಜಮೀನುಗಳಿಗೂ ನೀರನ್ನು ಹಾಯಿಸಿಕೊಂಡು ಕೃಷಿಯನ್ನು ಅನುಸರಿಸುವ ಮೂಲಕ ರಾಜ್ಯಕ್ಕೆ ಕೃಷಿಯಿಂದ ಹೆಚ್ಚಿನ ಆದಾಯವನ್ನು ಸಲ್ಲಿಸುತ್ತಿದ್ದರು. ಹೀಗೆ ಕೃಷಿಯ ಉತ್ಪನ್ನಗಳಿಗೆ ಬೇಡಿಕೆ ಹೆಚ್ಚಾದಂತೆಲ್ಲಾ ರಾಜ್ಯಕ್ಕೂ, ಕೃಷಿಕನಿಗೂ ಆದಾಯ ಹೆಚ್ಚಾಗುತ್ತಿತ್ತು. ಆಯಾ ರಾಜ್ಯಗಳಲ್ಲಿ ಕೃಷಿಕನು ತೃಪ್ತಿಕರನಾಗಿದ್ದು ಜೀವನ ನಿರ್ವಹಣೆಯಲ್ಲಿ ಸಂತೃಪ್ತಿಯನ್ನು ಹೊಂದಿದ್ದಾಗ ಆ ರಾಜ್ಯದ ಆರ್ಥಿಕ ವ್ಯವಸ್ಥೆ ಸುಧಾರಿತ ಮಟ್ಟದಲ್ಲಿದೆ ಎಂದು ಗುರ್ತಿಸಬಹುದು.

ಕುಮ್ಮಟದರಸರ ಕಾಲಾವಧಿಯಲ್ಲಿ ಕೃಷಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದರು. ಕೃಷಿಗೆ ಪೂರಕವಾಗಿ ಕೆರೆ, ಕಾಲುವೆ, ಹಳ್ಳ, ಬಾವಿಗಳು, ಇತ್ಯಾದಿ ನೀರಿನ ಮೂಲಗಳನ್ನು ನಿರ್ಮಿಸಿ ಕೃಷಿಕರಿಗೆ ಅನುಕೂಲ ಮಾಡಿಕೊಟ್ಟಿದ್ದರೆಂಬ ಸಂಗತಿಗಳು ತಿಳಿದುಬರುತ್ತವೆ. ದ್ವಿದಳ ಧಾನ್ಯಗಳು, ತರಕಾರಿ, ಹಣ್ಣುಗಳು, ಹೂದೋಟಗಳು, ಹಾಗೂ ತೋಟಗಾರಿಕಾ ಬೆಳೆಗಳ ಜೊತೆಗೆ ಸಾಂಬಾರ ಪದಾರ್ಥಗಳನ್ನು ಬೆಳೆಯುವಷ್ಟರ ಮಟ್ಟಿಗೆ ಜಲಮೂಲ ಸೌಕರ್ಯಗಳನ್ನು ಕುಮ್ಮಟದರಸರು ಒದಗಿಸಿದ್ದರು. ಇಂತಹ ನೀರಾವರಿ ಸೌಕರ್ಯಗಳಿಂದ ಅಲ್ಲಿನ ಜನರ ದಣಿವು, ಪ್ರಾಣಿ ಪಕ್ಷಿಗಳ ದಾಹ ತೀರಿಸಿಕೊಳ್ಳಲು ಸಹಾಯವಾಗುತ್ತಿತ್ತು. ಕುಮ್ಮಟದರಸರ ಅವಧಿಯಲ್ಲಿ ನಿರ್ಮಾಣವಾದಂತಹ ಹಾಗೂ ಪ್ರಸ್ತುತದಲ್ಲೂ ಕಂಡುಬರುವಂತಹ ಕೆಲವು ನೀರಿನ ಮೂಲಗಳಾದ ಹಾಲು ಬಾವಿ, ಬೊಲ್ಲನ ಕೆರೆ, ವಕ್ರಾಣಿ ಕೆರೆ, ದೊಂಬರಕೆರೆ ಹಾಗೂ ನೂಲಿಹನುಮಪ್ಪನ ಬಂಡೆಗಳು ಕುಮ್ಮಟದ ಜನರ ಅನುಕೂಲಕ್ಕಾಗಿಯೇ ನಿರ್ಮಾಣವಾಗಿವೆ.

ಹಾಲುಬಾವಿಯನ್ನು ಕುಮ್ಮಟದರಸರು ತಮ್ಮ ಕೋಟೆಯ ಜನರಿಗಾಗಿಯೇ ನಿರ್ಮಿಸಿದಂತಹ ಜಲಮೂಲವಾಗಿದೆ. ಕುಮ್ಮಟದುರ್ಗದ ಕೋಟೆಯ ಸೈನಿಕರಿಗಾಗಿಯೇ ನಿರ್ಮಿಸಿದಂತಹ ಬಾವಿ ಇದಾಗಿದೆ. ಇದರಿಂದ ಅಲ್ಲಿನ ಜನ ಹಾಗೂ ದನಕರುಗಳಿಗೆ ಅನುಕೂಲವಾಗುವಂತೆ ವ್ಯವಸ್ಥೆ ಕಲ್ಪಿಸಲಾಗಿತ್ತು.

ಬೊಲ್ಲನೆ ಕೆರೆಯು ಕುಮಾರರಾಮನ ಕಾಲಾವಧಿಯಲ್ಲಿ ನಿರ್ಮಾಣವಾದಂತಹ ಕೆರೆಯಾಗಿದೆ. ಈ ಕೆರೆಯನ್ನು ದೊಡ್ಡ ಕಲ್ಲುಗಳಿಂದ ಅರ್ಧವೃತ್ತಾಕಾರದಲ್ಲಿ ನಿರ್ಮಿಸಲಾಗಿದೆ. ಚೌಕಾಕಾರದ ನೀರಿನ ಚಲನೆಯನ್ನು ನಿಯಂತ್ರಿಸುವಲ್ಲಿ ರೂಪಗೊಂಡಿರುವ ಕೆರೆಯಾಗಿದೆ. ಈ ಕೆರೆಯನ್ನು

ಕುಮಾರರಾಮನು ಪ್ರೀತಿಯಿಂದ ಬೊಲ್ಲನೆಕೆರೆ ಎಂದೇ ಹೆಸರಿಟ್ಟಿರುವುದು ಗಮನಾರ್ಹವಾಗಿದೆ. ಇದು ವ್ಯವಸಾಯಕ್ಕೆ ಯೋಗ್ಯವಾದಂತಹ ಕೆರೆಯಾಗಿತ್ತು. ಅಲ್ಲಿನ ಜನರಿಗೆ ಕೃಷಿ ಮಾಡಲು ಹಲವಾರು ರೀತಿಯ ಬೆಳೆಗಳನ್ನು ಬೆಳೆಯಲು ಅನುಕೂಲಕರವಾಗಿತ್ತು.

ಕೃಷಿಗೆ ಪೂರಕವಾಗಿ ನೀರನ್ನು ಒದಗಿಸುತ್ತಿದ್ದ ಮತ್ತೊಂದು ಕೆರೆ ವಕ್ರಾಣಿ ಕೆರೆ. ಇದು ಅರ್ಧ ವೃತ್ತಾಕಾರದಲ್ಲಿ ಬೃಹತ್ ಕಲ್ಲುಗಳಿಂದ ನಿರ್ಮಿಸಲಾಗಿದೆ. ಇದು ಅಗಲವಾದ ಪಥವನ್ನು ಹೊಂದಿದ್ದು, ಕಲ್ಲುಗಳಿಂದ ರಚನೆಯಾಗಿದೆ. ಈ ಕೆರೆಯಿಂದ ಕೊಳಗಳಿಗೆ ನೀರು ತಲುಪಿಸುವ ವ್ಯವಸ್ಥೆ ಮಾಡಲಾಗಿತ್ತು. ಈ ಕೆರೆಯಿಂದ ಕುಮ್ಮಟದ ಸುತ್ತಮುತ್ತಲಿನ ಪ್ರದೇಶಗಳು ಕೃಷಿ ಭೂಮಿಗಳಾಗಿ ಪರಿವರ್ತಿತವಾಗಿದ್ದವು. ಅಂದರೆ ವ್ಯವಸಾಯಕ್ಕೆ ನೀರು ಒದಗಿಸುವ ಸೌಕರ್ಯ ಈ ಕೆರೆಯಿಂದ ಸಾಧ್ಯವಾಗುತ್ತಿತ್ತು. ಕೆರೆಯ ನೀರು ಕುಡಿಯಲು ಯೋಗ್ಯವಾಗಿದ್ದು, ದನಕರುಗಳ ದಾಹವನ್ನು ತೀರಿಸಿಕೊಳ್ಳಲು ಅನುಕೂಲವಾಗಿತ್ತು.

ವ್ಯವಸಾಯಕ್ಕೆ ಯೋಗ್ಯವಾದಂತಹ ಮತ್ತೊಂದು ಕೆರೆ ದೊಂಬರ ಕೆರೆ. ಈ ಕೆರೆಯನ್ನು ಕಂಪಿಲರಾಯನ ಕಿರಿಯ ಹೆಂಡತಿಯಾದ ರತ್ನಾಜಿ ಮತ್ತು ಅವರ ಬಳಗಕ್ಕಾಗಿ ನಿರ್ಮಿಸಿದ್ದ ಎನ್ನುವ ಸಂಗತಿ ತಿಳಿದು ಬರುತ್ತದೆ. ಇದನ್ನು ರತ್ನಾಜಿಯೇ ನಿರ್ಮಿಸಿದ್ದಳು ಎಂಬ ಪ್ರತೀತಿಯೂ ಇದೆ. ಈ ಕೆರೆಯ ಪಕ್ಕದಲ್ಲೇ ದೊಂಬರ ಸಮುದಾಯವು ವಾಸವಾಗಿದ್ದು, ಅವರಿಗೆ ವ್ಯವಸಾಯ ಮಾಡಲು ಪೂರಕವಾದ ಸೌಕರ್ಯಗಳು ಈ ಕೆರೆಯಿಂದ ದೊರೆಯುತ್ತಿದ್ದವು. ಈ ಕೆರೆಯನ್ನು ದೊಂಬರ ಬಿಂಚೀ ಕೆರೆ ಎಂದೇ ಕರೆಯಲಾಗುತ್ತಿತ್ತು. ಇಲ್ಲಿ ದೊಂಬರ ಸಮುದಾಯದವರು ಮಾತ್ರ ಕೆರೆಯ ನೀರನ್ನು ಬಳಸಿಕೊಳ್ಳಬೇಕಿತ್ತು. ಅಂದರೆ ವ್ಯವಸಾಯಕ್ಕೆ ಕುಡಿಯಲಿಕ್ಕೆ ದನಕರುಗಳಿಗೆ ಪ್ರತಿಯೊಂದಕ್ಕೂ ಈ ಕೆರೆಯನ್ನು ಆಧರಿಸಿಕೊಂಡಿದ್ದರು ಎಂದು ತಿಳಿದುಬರುತ್ತದೆ.

**ಕುಮ್ಮಟದರಸರ ಕಾಲಾವಧಿಯಲ್ಲಿ ಬೆಳೆಯುತ್ತಿದ್ದ ಕೃಷಿ ಬೆಳೆಗಳು**

**ತರಕಾರಿಗಳ ಪಟ್ಟಿ:**

ಹಾಲಗುಂಬಳಕಾಯಿ, ಸಕ್ಕರೆಗುಂಬಳಕಾಯಿ, ಚೀಣಿಯಕಾಯಿ, ಹಾಗಲಕಾಯಿ, ಹೀರೆಕಾಯಿ, ಕೋಗುಲೆ, ಸೆಂಬೆಯಕಾಯಿ, ಪಡುವಲಕಾಯಿ, ಬದನೆಕಾಯಿ, ಬಿಳಿಯ ಚೆಳ್ಳವರೆಕಾಯಿಗಳನ್ನು ಬೆಳೆಯುತ್ತಿದ್ದರು.

**ಧಾನ್ಯಗಳ ಪಟ್ಟಿ:**

ಭತ್ತ, ಗೋಧಿ, ಕಬ್ಬು, ಬೇಳೆ, ಕಡಲೆ, ಜಾಜಿಕಾಯಿ, ಜಾಪತ್ರೆ, ಎಣ್ಣೆಕಾಳುಗಳನ್ನು ಬೆಳೆಯುತ್ತಿದ್ದರು.

**ಹಣ್ಣುಗಳು ಮತ್ತು ಹೂಗಳ ಪಟ್ಟಿ:**

ಬಾಳೆ, ಹಲಸು, ಗೆಣಸು, ಮಾವು, ನಿಂಬೆ, ಖರ್ಜೂರ, ಇತ್ಯಾದಿ ಹಣ್ಣುಗಳು ಹಾಗೂ ಜಾಜಿ, ಮಲ್ಲಿಗೆ, ಸಂಪಿಗೆ ಹೂಗಳನ್ನು ಬೆಳೆಯುತ್ತಿದ್ದರು. ಹಾಗೆಯೇ ಅಡಕೆ ಮತ್ತು ವೀಳ್ಯದೆಲೆಯನ್ನು ಬೆಳೆಯುತ್ತಿದ್ದು, ಇವು ತುಂಬಾ ಮುಖ್ಯವಾಗಿದ್ದು ಹಾಗೂ ಸೊಪ್ಪುಗಳಾದ ಬಸಲೆ ಸೊಪ್ಪು, ಹರಲೆ

ಸೊಪ್ಪು, ಮೆಂತೆ ಸೊಪ್ಪುಗಳನ್ನು ಬೆಳೆಯುತ್ತಿದ್ದು, ಕೃಷಿಗೆ ಹೆಚ್ಚಿನ ಆದ್ಯತೆ ನೀಡುವ ಮೂಲಕ ರಾಜ್ಯಕ್ಕೆ ಕೃಷಿಯ ವಿವಿಧ ಮೂಲಗಳಿಂದ ಆದಾಯ ಸೇರುವಂತೆ ಮಾಡಿದ್ದರು. ಮೇಲಿನ ಎಲ್ಲಾ ವಿಷಯಗಳನ್ನು ಗಮನಕ್ಕೆ ತಂದುಕೊಂಡಾಗ ಕುಮ್ಮಟದರಸರ ಕಾಲಾವಧಿಯಲ್ಲಿ ಕೃಷಿ ಮೂಲದಿಂದ ಹೆಚ್ಚು ಆದಾಯ ರಾಜ್ಯದ ಬೊಕ್ಕಸಕ್ಕೆ ಬರುತ್ತಿತ್ತು. ಇದರಿಂದ ಕೃಷಿಕರು ಆರ್ಥಿಕವಾಗಿ ಸಂತುಷ್ಟರಾಗಿದ್ದರು ಎಂದು ತಿಳಿದುಬರುತ್ತದೆ.

### ೫.೨.೪ ಕೈಗಾರಿಕೆ

ಕೈಗಾರಿಕೆಯು ಕೃಷಿಯಷ್ಟೇ ಒಂದು ರಾಜ್ಯದ ಆರ್ಥಿಕತೆಯ ಬೆನ್ನೆಲುಬಾಗಿ ಸ್ಥಾನ ಪಡೆದುಕೊಂಡಿದೆ. ಕೃಷಿಯು ಮೊದಲ ಸ್ಥಾನದಲ್ಲಿದ್ದರೆ, ಕೈಗಾರಿಕೆಯು ಎರಡನೇ ಸ್ಥಾನದಲ್ಲಿದೆ. ಕೈಗಾರಿಕೆಗಳಿಗೆ ಮೂಲ ಎಂದರೆ ಭೂಮಿಯಲ್ಲಿ ಬೆಳೆದ ಕಚ್ಚಾ ಪದಾರ್ಥಗಳು ಅತಿ ಮುಖ್ಯವಾದವು. ಮಧ್ಯಕಾಲೀನ ಕರ್ನಾಟಕದಲ್ಲಿ ಕೈಗಾರಿಕೆಗಳ ಪಾತ್ರ ಗಮನಾರ್ಹವಾದುದು. ಅದರಲ್ಲಿಯೂ ಪ್ರಮುಖವಾಗಿ ಕುಮ್ಮಟದರಸರ ಕಾಲಾವಧಿಯಲ್ಲಿ ರಾಜ್ಯದಾದ್ಯಂತ ಕೈಗಾರಿಕೆಗಳು ತಲೆಎತ್ತಿದ್ದವು ಎಂಬ ಅಭಿಪ್ರಾಯ ಸರಿಯೆನಿಸುತ್ತದೆ. ಕಾರಣವೆಂದರೆ ಯುದ್ಧದ ಸಂದರ್ಭದಲ್ಲಿ ವೈರಿಗಳನ್ನು ಶಮನ ಮಾಡಲಿಕ್ಕಾಗಿಯೇ ದೊಡ್ಡ ಗಾತ್ರದ ಸಲಕರಣೆಗಳನ್ನು ತಯಾರು ಮಾಡುತ್ತಿದ್ದರೆಂದು ನಂಜುಂಡ ಕವಿಯು ತನ್ನ ರಾಮನಾಥ ಚರಿತ್ರೆಯಲ್ಲಿ ಹೇಳುತ್ತಾ ಹೋಗುತ್ತಾನೆ. ಯುದ್ಧಗಳಿಗಾಗಿಯೇ ವಿವಿಧ ರೀತಿಯ ಸಲಕರಣೆಗಳು, ಆಯುಧಗಳು ಹಾಗೂ ವಾದ್ಯಗಳನ್ನು ತಯಾರು ಮಾಡುತ್ತಿದ್ದರು. ಬೇಟೆಗೆ ಹೋಗುವ ಸಂದರ್ಭಗಳಲ್ಲಿ ಬಳಸುವ ಆಯುಧಗಳು, ಯುದ್ದವು ಪ್ರಾರಂಭವಾಗುವ ವೇಳೆಯಲ್ಲಿ ಬಾರಿಸುವ ವಾದ್ಯಗಳು, ಯುದ್ದ ವಿಜಯದ ದ್ಯೋತಕವಾಗಿ ಬಾರಿಸುವ ವಾದ್ಯಗಳು, ವಿವಾಹ ಜಾತ್ರಾ ಉತ್ಸವಗಳಲ್ಲಿ ಬಳಸಲು ಹಿತ್ತಾಳೆ, ತಾಮ್ರದಿಂದ ಮಾಡಿದ ಕೊಪ್ಪರಿಗೆಗಳು, ಕೃಷಿ ಸಲಕರಣೆಗಳು, ಆಭರಣಗಳ ತಯಾರಿಕೆ ಇತ್ಯಾದಿ ವಸ್ತುಗಳನ್ನು ತಯಾರಿಸುವ ಗುಡಿ ಮತ್ತು ಗೃಹ ಕೈಗಾರಿಕೆಗಳು ಇದ್ದವೆಂದು ರಾಮನಾಥ ಚರಿತ್ರೆಯಿಂದ ತಿಳಿಯಬಹುದು.

ಕುಮ್ಮಟದರಸರ ಕಾಲಾವಧಿಯಲ್ಲಿ ಕಚ್ಚಾವಸ್ತುಗಳನ್ನು ಬಳಸಿಕೊಂಡು ಸಿದ್ಧವಸ್ತುಗಳನ್ನಾಗಿ ಬಳಸುವ ಕೈಗಾರಿಕೆಗಳು ಇದ್ದವೆಂದು ಕೆಲವು ಆಧಾರಗಳ ಮೇಲೆ ಗುರ್ತಿಸಬಹುದು.

ಕುಡುಗೋಲು, ಕೊಡಲಿ, ಹಾರೆ, ಗುದ್ದಲಿ, ಮಚ್ಚು, ಕತ್ತಿಗಳನ್ನು[೨೯] ಕಬ್ಬಿಣ ಲೋಹದಿಂದ ತಯಾರಿಸುವ ಕೈಗಾರಿಕೆ.

ಯುದ್ದವು ಪ್ರಾರಂಭವಾದ ಸಂದರ್ಭದಲ್ಲಿ ಸೈನಿಕರ ಮನಸ್ಸನ್ನು ಹೊರಬಿಡದೆ ಶತ್ರುಗಳ ವಿರುದ್ದ ಆವೇಶ ತರಿಸಲು ರಣವಾದ್ಯಗಳಾದ ಚರ್ಮವಾದ್ಯಗಳು ಮತ್ತು ಲೋಹವಾದ್ಯಗಳು ಎಂದು ವಿಂಗಡಿಸಿ ಈ ಕೆಳಗಿನಂತೆ ತಿಳಿಯಬಹುದು.

ಅ) ಡೋಳು, ಭೇರಿ, ಡಿಂಡಿಮ, ಪಟಹ, ಪಣವ, ಡಮರು, ಢಕ್ಕೆ, ಬೊಂಬುಳಿ ಮತ್ತು ಮದ್ದಳೆಗಳು[೩೦] ಒಂದೊಂದು ಫೌಜಿಗೂ ಪ್ರತ್ಯೇಕವಾಗಿ ಇರುತ್ತಿದ್ದು, ಇವು ತುಂಬಾ

ಅವಶ್ಯವಿದ್ದರಿಂದ ಚರ್ಮವಾದ್ಯಗಳಾದ ಇವುಗಳನ್ನು ತಯಾರಿಸುವ ಕೈಗಾರಿಕೆಗಳು ಇರುವುದರಲ್ಲಿ ಸಂಶಯವಿಲ್ಲ.

ಆ) ಲೋಹವಾದ್ಯಗಳಾದ ಕಹಳೆ, ಕೊಂಬು, ತಿತ್ತಿರಿ, ಜಿನಗಾಳೆ, ಹೆಗ್ಗಾಳೆ, ಬೊಗ್ಗು, ಬುರುಗುಗಳು[೩೧] ಇವು ಊದುವಂತಹ ವಾದ್ಯಗಳಾಗಿದ್ದು, ಇವುಗಳಲ್ಲಿ ಕೆಲವುಗಳನ್ನು ನಿರ್ದಿಷ್ಟ ಸಮಯ ಮತ್ತು ಉದ್ದೇಶಕ್ಕಾಗಿ ಬಳಸುತ್ತಿದ್ದು, ಇವು ತುಂಬಾ ಅನಿವಾರ್ಯವಾಗಿದ್ದರಿಂದ ಇವುಗಳನ್ನು ತಯಾರಿಸುವ ಕೈಗಾರಿಕೆಗಳು ನಿರ್ಮಾಣವಾಗಿದ್ದವು.

ಹಿತ್ತಾಳೆ ಅಥವಾ ತಾಮ್ರದಿಂದ ತಯಾರಿಸುವ ಕೊಪ್ಪರಿಗೆಗಳನ್ನು ಭಾರಿ ಉತ್ಸವಗಳು ಮದುವೆ ಕಾರ್ಯಗಳಲ್ಲಿ ಬಳಸುತ್ತಿದ್ದು, ಇವುಗಳ ತಯಾರಿಕಾ ಕೈಗಾರಿಕೆಗಳು ಇದ್ದವೆಂದು ತೋರುತ್ತದೆ.

ಪ್ರತಿದಾಳಿಗಳನ್ನು ಮಾಡಲಿಕ್ಕಾಗಿಯೇ ಬಡಗಿಗಳು ಭೀಮಗದೆ, ತಿರುಗಣಿ, ಪಂದಿದಲೆಗಳನ್ನು[೩೨] ಕೆತ್ತುವ ಕೆಲಸಗಳನ್ನು ಮಾಡಿಕೊಡುತ್ತಿದ್ದರು.

ಕೊಡಲಿ, ಗುದ್ದಲಿ, ಮಚ್ಚು, ದಬ್ಬುಕ, ಕೈಪಾರೆ, ಮರಳು, ಕೈಗಳನ್ನು ಕಡಿಕೆಯ್ದು ತಯಾರು ಮಾಡುವ ಕಮ್ಮಾರರ ಕರಕುಶಲ ಕೈಗಾರಿಕೆಗಳು.

ಪೆಟಲು ಹಾಗೂ ಡೆಂಕಣಿಗಳಿಗೆ ಕಲ್ಲು ಗುಂಡುಗಳನ್ನು ಕೆತ್ತುವ ಕಾರ್ಯಗಳಲ್ಲಿ ಕಲ್ಲು ಕುಟಿಗರು ತೊಡಗುತ್ತಿದ್ದರು.

ಅಸಿ, ಪಿಂಡಿವಾಳ, ಶಲ್ಯಹ, ಭಲ್ಯಹ, ಕತ್ತಿ, ಮುಸಲ, ಮುದ್ಗರ ಹಾಗೂ ತೋಮರಗಳನ್ನು ಮಸೆಯುವ ಕಾರ್ಯದಲ್ಲಿ ಸಾಣೆಗಾರರು ಇರುತ್ತಿದ್ದರು.

ಪರಾಜಿತನಾದ ಅರಸ ಜಯಶಾಲಿಯಾದ ಅರಸನಿಗೆ ನಿಗಧಿತ ಅವಧಿ ಮತ್ತು ಪ್ರಮಾಣದಲ್ಲಿ ಗೌರವ ಪೂರ್ವಕವಾಗಿ ಒದಗಿಸುತ್ತಿದ್ದ ಸಂಪತ್ತು ಕಪ್ಪ ಕಾಣಿಕೆಗಳು. ಕಪ್ಪ ಕಾಣಿಕೆಗಳಾಗಿ ನೀಡುವ ಇಂತಹ ವಸ್ತುಗಳನ್ನು ಯಥೇಚ್ಚವಾಗಿ ತಯಾರಿಸುವ ಕಾರ್ಯಗಳು ಮುಂಚೂಣಿಯಲ್ಲಿದ್ದವೆಂದು ತೋರುತ್ತಿದೆ. ಹೀಗಾಗಿಯೇ ಜೀನವೆಸದ ತೆರೆ (ಕುಸುರಿ ಕೆಲಸದಿಂದ ಅಲಂಕೃತವಾದ ಪರದೆ), ಝುಲ್ಲಿ (ಆನೆ ಕುದುರೆಗಳಿಗೆ ತೊಡಿಸುವ ತುಚ್ಚು ಇದೊಂದು ಅಲಂಕಾರ ಸಾಧನ), ಚೀನಾಂಬರ (ರೇಷ್ಮೆ ವಸ್ತ್ರ), ಚಿತ್ರಾವಳಿ (ಬಣ್ಣ ಬಣ್ಣದ ವಸ್ತ್ರಗಳು), ಸಿಂಗಾಡಿ(ಬಿಲ್ಲು), ತರಕಸ (ಬತ್ತಳಿಕೆ), ಲೋಹವಕ್ಕರೆ (ಆನೆ ಕುದುರೆಗಳಿಗೆ ತೊಡಿಸುವ ಉಕ್ಕಿನ ಕವಚ), ಹೊಂಗೆಲಸದ ಜೋಡು (ಹೊನ್ನ ಕೆಲಸದಿಂದ ಅಲಂಕರಿಸಲ್ಪಟ್ಟ ಉಕ್ಕಿನರಕ್ಷಾ ಕವಚ ಉಕ್ಕಿನ ಅಂಗಿ), ಸಮಗ (ಕವಚ), ಸೀಸಕ (ಶಿರಸ್ತ್ರಾಣ), ಸಿಂಗರಲೇವೆ (ಹೊಲಿದು ಸಿದ್ದಪಡಿಸಿ ಅಲಂಕರಿಸಿದ ಆಸನಗಳು)[೩೩] ಹೀಗೆ ವಿವಿಧ ರೀತಿಯ ಕರಕುಶಲ ಕಸುಬುಗಳಿದ್ದು, ಅವು ಗೃಹ ಮತ್ತು ಗುಡಿ ಕೈಗಾರಿಕೆಗಳ ರೀತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದವು.

ರಾಜ್ಯದಲ್ಲಿ ಇನ್ನೂ ಹತ್ತು ಹಲವು ಚಿಕ್ಕ ಪುಟ್ಟ ಕೆಲಸಗಾರರಿದ್ದುದ್ದನ್ನು ಕಾಣಬಹುದು.

ಚರ್ಮದ ವಸ್ತುಗಳನ್ನು ತಯಾರಿಸುವವರು – ಸಮಗಾರರು

ಕಂಚು, ಹಿತ್ತಾಳೆ, ಕೆಲಸ ಮಾಡುವವರು - ಕಂಚುಗಾರರು

ಲೋಹ ಮತ್ತು ಪಾಕವನ್ನು ಎರಕ ಹೊಯ್ಯುವವರು – ಅಚ್ಚುಗಾರರು

ಕಬ್ಬಿಣ ಕೆಲಸ ಮಾಡುವವರು ಕಮ್ಮಾರರು

ಬಟ್ಟೆಗಳಿಗೆ ಅಂಚು ಕಟ್ಟುವವರು ಅಂಚುಗಾರರು

ಕಲ್ಲು ಕೆತ್ತನೆ ಮಾಡುವವರು ಕಲ್ಲುಕುಟಿಕರು

ಆಟಿಕೆ ವಸ್ತುಗಳು ಮತ್ತು ಬಟ್ಟೆಗಳಿಗೆ ಬಣ್ಣ ಹಾಕುವವರು – ಬಣ್ಣಗಾರರು

ವಾಸ್ತು ಕಲಾನಿಪುಣರು, ಕರಕುಶಲಕರ್ಮಿಗಳು

ಹೀಗೆ ವಿವಿಧ ರೀತಿಯ ಕರಕುಶಲ ಕೆಲಸಗಾರರು ಹಾಗೂ ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳು ಇದ್ದವೆಂದು ತಿಳಿದುಬರುತ್ತದೆ. ಹೀಗಾಗಿ ರಾಜ್ಯಕ್ಕೆ ಕೈಗಾರಿಕೆಗಳ ಮೂಲದಿಂದ ಸಾಕಷ್ಟು ಆದಾಯ ಬರುತ್ತಿದ್ದುದು ಗಮನಕ್ಕೆ ಬರುತ್ತದೆ. ಇದರಿಂದ ರಾಜ್ಯದಲ್ಲಿ ಬೇರೆ ಬೇರೆ ವೃತ್ತಿಗನುಗುಣವಾಗಿ ಜಾತಿಗಳಿಗನುಗುಣವಾಗಿ, ವರ್ಗಗಳಿಗನುಗುಣವಾಗಿ ವೃತ್ತಿಯನ್ನು ಅನುಸರಿಸುತ್ತಿದ್ದುದರಿಂದ ಸಕಲ ಕಾಲದಲ್ಲೂ ಕೆಲಸದಲ್ಲೇ ನಿರತರಾಗುತ್ತಾ ವರ್ಷಪೂರ್ತಿ ಆದಾಯ ಗಳಿಕೆಯಲ್ಲಿ ಪ್ರಗತಿ ಹೊಂದುತ್ತಿದ್ದುದು ಅಲ್ಲಿನ ಆರ್ಥಿಕ ಸುಸ್ಥಿತಿಗೆ ಉತ್ತಮ ಉದಾಹರಣೆಯಾಗಿದೆ.

**೫.೨.೫ ಕಂದಾಯ ವ್ಯವಸ್ಥೆ**

ಒಂದು ಸಾಮ್ರಾಜ್ಯ ಏಳಿಗೆಯಾಗಬೇಕೆಂದರೆ ಆ ರಾಜ್ಯವು ಆರ್ಥಿಕತೆಯನ್ನು ಅವಲಂಬಿಸಿರುತ್ತದೆ. ಆರ್ಥಿಕ ಪರಿಸ್ಥಿತಿ ಅಲ್ಲಿ ಉತ್ತಮವಾಗಿತ್ತೆಂದರೆ ಅದರ ಅಭಿವೃದ್ಧಿ ಸಾಗುತ್ತಲೇ ಇರುತ್ತದೆ. ಆರ್ಥಿಕತೆಯನ್ನು ಅವಲಂಬಿಸಿ ಕರ್ನಾಟಕದ ಹಲವು ಅರಸು ಮನೆತನಗಳು ಮೊದಲ ಸ್ಥಾನದಲ್ಲಿ ಉಳಿದುಕೊಂಡಿವೆ. ಆರ್ಥಿಕತೆಯ ಬೆನ್ನೆಲುಬೇ ರಾಜ್ಯದ ಅಭಿವೃದ್ಧಿಗೆ ಪ್ರಮುಖ ಕಾರಣವಾಗುತ್ತದೆ. ಕರ್ನಾಟಕದಲ್ಲಿ ಹಲವಾರು ಅರಸು ಮನೆತನಗಳು ಆಳಿ ಹೋಗಿವೆ. ಪ್ರಮುಖವಾಗಿ ಮಧ್ಯಕಾಲೀನ ಕರ್ನಾಟಕವನ್ನು ಅವಲೋಕಿಸಿದಾಗ ವಿಶೇಷವಾಗಿ ಕಾಣಸಿಗುವುದೇ ಕುಮ್ಮಟದುರ್ಗ ಎಂಬ ಚಿಕ್ಕ ರಾಜ್ಯ. ಈ ರಾಜ್ಯವನ್ನು ಆಳಿದ ಅರಸುರುಗಳಾದ ಮುಮ್ಮಡಿಸಿಂಗ, ಕಂಪಿಲರಾಯ, ಕುಮಾರರಾಮ ಇವರ ಸಾಧನೆಗಳು ಅಪೂರ್ವವಾಗಿವೆ. ಇಲ್ಲಿ ಪ್ರಮುಖವಾಗಿ ಒತ್ತುಕೊಡುವ ಸಂಗತಿಯೆಂದರೆ ಕುಮ್ಮಟದುರ್ಗವು ಅಭಿವೃದ್ಧಿ ಹೊಂದಿರಬೇಕಾದರೆ ಇದಕ್ಕೆ ಬೆನ್ನೆಲುಬೇ ಆರ್ಥಿಕತೆ ಆಗಿದ್ದಿರಬೇಕು. ಕಾರಣ ಒಂದು ರಾಜ್ಯದ ಏಳಿಗೆಗೆ ಪ್ರತಿಯೊಬ್ಬ ನಾಗರಿಕನು ಶ್ರಮಿಸಬೇಕು. ಶ್ರಮಿಸಿದ ಪ್ರತಿಫಲವೇ ಅವನಿಗೂ ಆದಾಯ, ರಾಜ್ಯಕ್ಕೂ ಆದಾಯವಾಗುತ್ತದೆ.

ಕುಮ್ಮಟದುರ್ಗ ರಾಜ್ಯವು ಸಹ ಆರ್ಥಿಕತೆಯನ್ನು ಬೆನ್ನೆಲುಬಾಗಿಸಿಕೊಂಡಿತ್ತು ಎಂಬ ವಿಚಾರಗಳನ್ನು ಕೆಲವು ಸಾಂಗತ್ಯಗಳಿಂದ ತಿಳಿಯಲಾಗುವುದು. ಆರ್ಥಿಕತೆಯಲ್ಲಿ ಮುಖ್ಯವಾಗಿ ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ, ಕಂದಾಯ ವ್ಯವಸ್ಥೆ, ಕಪ್ಪ ಕಾಣಿಕೆಗಳು ಇತ್ಯಾದಿ ಕ್ಷೇತ್ರಗಳಿದ್ದು, ಇವೆಲ್ಲವುಗಳಿಂದ ಬರುವ ಆದಾಯದ ಮೂಲ ಅಥವಾ ಕಂದಾಯದ ಮೂಲ ಆ ರಾಜ್ಯಕ್ಕೆ ಆಧಾರವಾಗಿರುತ್ತದೆ.

ಪ್ರಮುಖವಾಗಿ ಕಂದಾಯವು ಕೇವಲ ಒಂದು ಕ್ಷೇತ್ರದಿಂದಲ್ಲ, ಕೃಷಿ, ಕೈಗಾರಿಕೆ, ಉಪಕಸುಬುಗಳು, ಕುಲಕಸುಬುಗಳು, ಯುದ್ಧಗಳಿಂದ ಕಪ್ಪ ಕಾಣಿಕೆಗಳಿಂದ ದಾನಗಳಿಂದ ಹೀಗೆ ವಿವಿಧ ರೀತಿಯಲ್ಲಿ ರಾಜ್ಯಕ್ಕೆ ಕಂದಾಯ ಸಲ್ಲುತ್ತಿದ್ದವು.

ಯುದ್ಧಗಳಿಂದ, ಯುದ್ಧದಲ್ಲಿ ಶತ್ರುಗಳ ಸೋಲಿನಿಂದಾಗಿ ರಾಜ್ಯಕ್ಕೆ ಕಂದಾಯ ಬರುತ್ತಿದ್ದುದ್ದು ಇಲ್ಲಿ ಗಮನಕ್ಕೆ ಬರುತ್ತದೆ. ಅಂದರೆ ಕುಮಾರರಾಮನು ಬೊಲ್ಲನ(ಕುದುರೆ)ನ್ನು ಬಿಡಿಸಿಕೊಳ್ಳಲು ಹೋದಾಗ ಓರಗಲ್ಲಿನ ಗಣಪತಿರಾಜನ ಮೇಲೆ ಯುದ್ಧ ಮಾಡಿ ಆತನನ್ನು ಸೋಲಿಸುತ್ತಾನೆ. ಆತನ ವಶದಲ್ಲಿದ್ದ ರೆಕ್ಕೆಯ ಕುದುರೆಯನ್ನು ವಶಮಾಡಿಕೊಂಡು, ಕುಮಾರರಾಮನನ್ನು ಕೊಲ್ಲಿಸುವ ಗಣಪತಿರಾಜನ ಕುತಂತ್ರವನ್ನು ಮಣ್ಣುಪಾಲು ಮಾಡಿ ಓರಗಲ್ಲನ್ನು ತನ್ನ ಅಧೀನಕ್ಕೆ ಸೇರಿಸಿಕೊಳ್ಳುತ್ತಾನೆ. ಈ ವೇಳೆಯಲ್ಲಿ ಸುಂಕವನ್ನು ವಸೂಲಿ ಮಾಡುತ್ತಿದ್ದರು. ಹೀಗಾಗಿ ಯುದ್ಧಗಳಿಂದಲೂ ರಾಜ್ಯಕ್ಕೆ ಕಂದಾಯ ಸಲ್ಲುತ್ತಿತ್ತು ಎಂಬ ವಿಚಾರ ತಿಳಿದುಬರುತ್ತದೆ. ಕುಮಾರರಾಮನ ಎದುರು ಸೋತ ಗಣಪತಿರಾಜನು ಅಲ್ಲಿಯವರೆಗೂ ದಿಲ್ಲಿಯ ಬಾದಶಹನಿಗೆ ಕೊಡುತ್ತಿದ್ದ ಕಂದಾಯದ ಭಾಗವನ್ನು ಇನ್ನೂ ಮುಂದೆ ಕುಮಾರರಾಮ ಪಡೆದುಕೊಳ್ಳುವ ವಿಚಾರ ತಿಳಿಯುತ್ತದೆ. ಕಂದಾಯದ ಭಾಗವನ್ನು ಪಡೆದುಕೊಳ್ಳುವುದಷ್ಟೇ ಅಲ್ಲ ಅದನ್ನು ಹೇಗೆ ಕಾಪಾಡಿಕೊಳ್ಳಬೇಕೆಂಬ ತಂತ್ರವೂ ಕುಮ್ಮಟದರಸರಲ್ಲಿತ್ತು. ಕಂದಾಯದ ಭಾಗವು ಕುಮ್ಮಟದುರ್ಗಕ್ಕೆ ಸಲ್ಲುತ್ತದೆ ಎಂಬ ವಿಚಾರ ತಿಳಿದು ಆಘಾತಗೊಂಡ ದಿಲ್ಲಿ ನವಾಬ ಏಳು ಸಾವಿರ ಸೈನಿಕರೊಂದಿಗೆ ಆನೆಗೊಂದಿ ಮೇಲೆ ಏರಿ ಬರುತ್ತಾನೆ. ಇದನ್ನು ಕಂಡ ಮಂತ್ರಿ ಬೈಚಪ್ಪ ಹೆದರಿ ಕಂದಾಯವನ್ನು ಹಿಂದಕ್ಕೆ ತಿರುಗಿಸುವ ಸೂಚನೆ ನೀಡಿದಾಗ ಕುಮಾರರಾಮ ದಿಟ್ಟತನದಿ ಹೋರಾಡಿ ಕಂದಾಯವನ್ನು ಕಾಪಾಡಿಕೊಳ್ಳುತ್ತಾನೆ.

ಇಷ್ಟೇ ಅಲ್ಲದೆ ಕುಮ್ಮಟದುರ್ಗವು ಆರ್ಥಿಕವಾಗಿ ಸದೃಢವಾಗಿತ್ತೆನ್ನಲು ಆ ರಾಜ್ಯದ ಸೈನಿಕರಿಗೆ ನೀಡುತ್ತಿದ್ದ ಸಂಭಾವನೆಯ ಸೌಲಭ್ಯಗಳೇ ಸಾಕು. ಏಕೆಂದರೆ ಸೈನಿಕರು ಮೂರು ರೀತಿಯಲ್ಲಿ ಸಂಭಾವನೆಯನ್ನು ಪಡೆಯುತ್ತಿದ್ದರು.

೧. ಮೂಲ ಸಂಬಳ

೨. ಸಮರ ಕಾಲದ ವಿಶೇಷ ಕೊಡುಗೆಗಳು

೩. ವಿಜಯದ ಖುಷಿ ಕಾಣಿಕೆಗಳು

ಈ ರೀತಿಯ ಕೊಡುಗೆಗಳನ್ನು ಸೈನಿಕರಿಗೆ ಹುರಿದುಂಬಿಸಲು ನೀಡುತ್ತಿದ್ದರು. ಆದರೆ ಸೂಕ್ಷ್ಮವಾಗಿ

ಗಮನಿಸಿದಾಗ ತಿಳಿದುಬರುವ ಸಂಗತಿಯೆಂದರೆ ಕುಮ್ಮಟದುರ್ಗದ ರಾಜ್ಯವು ಈ ರೀತಿಯ ಸೌಲಭ್ಯಗಳನ್ನು ನೀಡುತ್ತಿತ್ತೆಂದರೆ ಆರ್ಥಿಕವಾಗಿ ಸದೃಢವಾಗಿತ್ತೆಂದು ಹೇಳಬಹುದು.

ಕುಮ್ಮಟದ ಅರಸರ ಕಾಲದಲ್ಲಿ ರಾಜ್ಯದ ಆದಾಯವನ್ನು ಸರಿದೂಗಿಸಲು ಅನೇಕ ವಿಧಿವಿಧಾನಗಳ ಮೂಲಕ ಕಂದಾಯವನ್ನು ಸಂಗ್ರಹ ಮಾಡುತ್ತಿದ್ದರು. ಅವುಗಳಲ್ಲಿ ಕೃಷಿ ಕ್ಷೇತ್ರಗಳಿಂದ ಇಂತಿಷ್ಟು ಆದಾಯ ರಾಜ್ಯದ ಬೊಕ್ಕಸಕ್ಕೆ ಬರುತ್ತಿತ್ತು. ಕೆಲವೊಮ್ಮೆ ತನ್ನ ರಾಜ್ಯದ ಆದಾಯವನ್ನು ಹೆಚ್ಚಿಸಿಕೊಳ್ಳಲು ಅಕ್ಕ ಪಕ್ಕ ರಾಜ್ಯಗಳ ಮೇಲೆ ಆಕ್ರಮಣ ಮಾಡಿ ಸೋತ ಅರಸರಿಂದ ವಾರ್ಷಿಕವಾಗಿ ಇಂತಿಷ್ಟು ಕಪ್ಪ ಕಾಣಿಕೆಗಳನ್ನು ಪಡೆಯುತ್ತಿದ್ದನು. ಹೀಗೆ ಕುಮ್ಮಟದರಸರ ಕಾಲದಲ್ಲಿ ತನ್ನ ರಾಜ್ಯದ ಬೊಕ್ಕಸಕ್ಕೆ ಅನೇಕ ಮೂಲಗಳಿಂದ ಕಂದಾಯ ಹರಿದು ಬರುತ್ತಿತ್ತು. ಕೆಲವೊಮ್ಮೆ ಸಾಮಂತ ಅರಸರ ಕಪ್ಪ ಕಾಣಿಕೆಗಳು ಒಪ್ಪಿಸದಿದ್ದಾಗ ಪುನಃ ಅವರ ಮೇಲೆ ಯುದ್ಧ ಮಾಡಿ ಸಂಪತ್ತನ್ನು ಪಡೆಯುತ್ತಿದ್ದರು. ಹೀಗೆ ಕಂಪಿಲನ ಕಾಲದಲ್ಲಿ ಅನೇಕ ಸಾಮಂತ ರಾಜರು ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಆದರೆ ಕುಮಾರರಾಮನ ಕಾಲಕ್ಕೆ ತನ್ನ ತಂದೆಯ ಕಾಲದಲ್ಲಿ ಕೊಡುತ್ತಿದ್ದ ಅನೇಕ ಅರಸರು ಕುಮಾರರಾಮನ ಕಾಲದಲ್ಲಿ ಕಾಣಿಕೆ ಕೊಡಲು ಸಿದ್ದರಿರಲಿಲ್ಲ ಎನ್ನುವುದನ್ನು ನೋಡಿದರೆ ಕಂಪಿಲರಾಯನ ಕಾಲದಲ್ಲಿ ರಾಜ್ಯದ ಸಂಪತ್ತು ಹೆಚ್ಚಾಗಿತ್ತು. ಆದರೆ ಕುಮಾರರಾಮನ ಕಾಲಕ್ಕಾಗಲೇ ರಾಜ್ಯದ ಆದಾಯ ಕ್ಷೀಣಿಸುತ್ತಿರುವುದನ್ನು ಸಾಂಗತ್ಯಗಳಲ್ಲಿ ನೋಡಬಹುದು.

ಪುತ್ರಕೇಳೈ ನಿಮ್ಮ ಹೆತ್ತನ ಕಾಲಕವರು ಕೊಟ್ಟು ಕಪ್ಪಗಳ ಕಾದಿಹರು
ಇತ್ತೆನ್ನಾ ಆಳಿಕೆ ಆಳರೊಬ್ಬ ಮೊದಲಾಗಿ– ಸೊಪ್ಪು ಹಾಕರು ಎನ್ನ ಕಡೆಗೆ
ಎಡಬಲದೊಲಗಿರುವ ಬಡ ಪಾಳೆಗಾರರು ರೊಕ್ಕ ! ಕೊಡದಂತೆ ಸುರಿತಾಳ ಎನಗೇ
ಅದು ಹೋಗಿ ಕಡೆಗೆನ್ನ ಗ್ರಾಮವ ಬಿಡುಯೆಂದು ಬರೆದ ಕಾಗದವು ಕಡೆಯಿಲ್ಲ.

ಕಪ್ಪವನು ಕೊಡುಯೆಂದು ನಿತ್ಯುಬಾಗಿಲ ತಟ್ಟಿ । ಮುತ್ತಿಕೊಂಬರು ಅರಮನೆಯ
ದಿಟ್ಟಗಾರನು ಮಂತ್ರಿ ತಕ್ಕ ಮನ್ನಣೆ ಮಾ(ಡೆ) । ಹೊತ್ತ ನೂಕಿದೆನಿಂದಿ ನೊರೆಗೆ॥೩೪

ಪ್ರಸ್ತುತ ಮಹಾಲಿಂಗಸ್ವಾಮಿಯ ಬಾಲರಾಮನ ಸಾಂಗತ್ಯ ಎಂಬ ಕಾವ್ಯದಲ್ಲಿ ಕುಮ್ಮಟದ ಅರಸರ ಆದಾಯವು ಕಂಪಿಲನ ಕಾಲದಲ್ಲಿ ಇದ್ದಂತಹ ಆದಾಯ ಕುಮಾರರಾಮನ ಕಾಲದಲ್ಲಿ ಕ್ಷೀಣಿಸುತ್ತಾ ಹೋಗುವುದನ್ನು ಕಾಣಬಹುದು. ಕಂಪಿಲನ ಕಾಲದಲ್ಲಿ ಕಪ್ಪ ಕಾಣಿಕೆಗಳನ್ನು ಕೊಡಲು ಕಾಯುತ್ತಿದ್ದರು. ಆದರೆ ಕುಮಾರರಾಮನ ಕಾಲದಲ್ಲಿ ಯಾರೂ ಕಪ್ಪ ಕಾಣಿಕೆ ಕೊಡಲು ಸಿದ್ಧರಿರಲಿಲ್ಲ. ಅದಕ್ಕೆ ಕಾರಣ ಕುಮ್ಮಟದ ಅರಸರ ಸಾಮಂತರಾಜರು ಮತ್ತು ಅಕ್ಕ ಪಕ್ಕದಲ್ಲಿರುವ ಪಾಳೆಯಗಾರರು ಕೊಡುತ್ತಿದ್ದ ಕಪ್ಪ ಕಾಣಿಕೆಯನ್ನು ಕೊಡದಂತೆ ಸುಲ್ತಾನ ತಡೆಯನ್ನು ಹೇರಿದ್ದ ಎನ್ನುವುದನ್ನು ಇದರಿಂದ ತಿಳಿಯಬಹುದು. ಹೊಯ್ಸಳರ ಬಲ್ಲಾಳನಿಗೆ ಕಪ್ಪ ಕಾಣಿಕೆಗಳನ್ನು ಕಳುಹಿಸಬೇಕೆಂಬ ಪತ್ರವನ್ನು ಬರೆಸುತ್ತಾನೆ.

ಒಳಿತಾಗಲಿ ಮಂತ್ರಿ ಬಲ್ಲ ತೆರಮಾಡೆನಲು! ಅಲ್ಲಿದ ಹೇಜೀಬರ ಕರೆಸಿ
ಬಲ್ಮೆ ಸದನದೊಳು ಲೇಖನವು ಬರೆಯೆಂದು । ಅಲ್ಲಿ ಮಂತ್ರಿಯು ಪೇಳಿದನು.

ಶ್ರೀಮತು ಸಚ್ಚಿತ ಬೋಗದಿ ದೇವೇಂದ್ರ । ರಾಮಭೂಪಾಲ ಕಂಪಿಲನು
ಮಾಡುವ ವಿನಯಾರ್ಥ ಹಳೆಬೀಡ ಬಲ್ಲಾಳನಿಗೆ । ಸಾಗಿಸಿ ಬಿಡು ನಮ್ಮ ಹೊನ್ನ

ರಾಜೇಂದ್ರ ಕಂಪಿಲನ ಕುಮಾರರು ಬಂದಿವೆ ಕೊಂ । ಭೇರುಂಡ ರಾಮಕಾಟರಸ
ಅಲಸ್ಯ ಮಾಡದೆ ಮೂರು ತಲೆಯೊಳಾದ । ಕಾಣಿಕೆ ಕಪ್ಪ ಕಳುಹುವುದು॥[೩೫]

ಕುಮಾರರಾಮನ ಆಳ್ವಿಕೆಯ ಸಂದರ್ಭದಲ್ಲಿ ಎಲ್ಲಾ ಸಾಮಂತ ಅರಸರು ಇದ್ದಕ್ಕಿದ್ದಂತೆ ಕಪ್ಪ ಕಾಣಿಕೆ ಕೊಡುವುದನ್ನು ನಿಲ್ಲಿಸಿದ್ದರಿಂದ ರಾಜ್ಯದ ಬೊಕ್ಕಸಕ್ಕೆ ಆದಾಯ ಕಡಿಮೆ ಆದಾಗ ಎಲ್ಲಾ ಅರಸರಿಗೆ ಪತ್ರಗಳನ್ನು ಕಳುಹಿಸಿ ಕಾಣಿಕೆಗಳನ್ನು ಕಳುಹಿಸಬೇಕೆಂದು ಪತ್ರ ಕಳುಹಿಸುತ್ತಿದ್ದನು. ಅವರಲ್ಲಿ ಹೊಯ್ಸಳರ ಬಲ್ಲಾಳನಿಗೆ ಕಪ್ಪ ಕಾಣಿಕೆಗಳನ್ನು ಕಳುಹಿಸಬೇಕೆಂದು ಪತ್ರವನ್ನು ಬರೆಸುತ್ತಾನೆ. ಪತ್ರದ ಜೊತೆಗೆ ರಾಮ ಕಾಟರಸ ಬಂದರೆ ಆಲಸ್ಯ ಮಾಡದೆ ಕಪ್ಪ ಕಾಣಿಕೆಯನ್ನು ಕಳುಹಿಸಬೇಕೆಂದು ಪತ್ರದಲ್ಲಿ ತಿಳಿಸುವ ವಿಚಾರವನ್ನು ಈ ಸಾಂಗತ್ಯಗಳಲ್ಲಿ ತಿಳಿಸಲಾಗಿದೆ.

ಹೊಯ್ಸಳರ ಬಲ್ಲಾಳನು ಕುಮ್ಮಟದ ನಾಯಕರಿಗೆ ಕಪ್ಪ ಕಾಣಿಕೆಯನ್ನು ಕೊಡಲು ನಿರಾಕರಿಸುತ್ತಾನೆ. ಕಾರಣ ಕಂಪಿಲನು ಮೊದಲಿನಂತೆ ಬಲಶಾಲಿಯಲ್ಲ ಅವನ ಉತ್ತರಾಧಿಕಾರಿಯಾದ ಕುಮಾರರಾಮನು ಚಿಕ್ಕ ಹುಡುಗ ಎನ್ನುವ ಕಾರಣದಿಂದ ಕಪ್ಪ ಕಾಣಿಕೆಯನ್ನು ಕೊಡುವುದಿಲ್ಲ. ಅದಕ್ಕೆ ಕುಮ್ಮಟದ ಅರಸ ಹೊಯ್ಸಳರ ಮೇಲೆ ದಂಡೆತ್ತಿ ಹೋಗಿ ಯುದ್ದದಲ್ಲಿ ಗೆದ್ದ ನಂತರ ಸೋತ ಹೊಯ್ಸಳರು (ಮೇಲೆ ದಂಡೆತ್ತಿ ಹೋಗಿ ಯುದ್ದದಲ್ಲಿ ಗೆದ್ದ ನಂತರ) ಕಪ್ಪ ಕಾಣಿಕೆಯನ್ನು ಕೊಡಲು ಒಪ್ಪಿಕೊಳ್ಳುತ್ತಾರೆ ಎನ್ನುವ ವಿಷಯವನ್ನು ಸಾಂಗತ್ಯಗಳಲ್ಲಿ ತಿಳಿಸಲಾಗಿದೆ.

ಕಪ್ಪವ ಕೊಡಲಿಕ್ಕೆ ಒಪ್ಪಿ ಬಲ್ಲಾಳರಾಯ । ಮತ್ತೊಮ್ಮೆ ಕಂಡ ದೇವರಸ
ಹುಟ್ಟಿಸಿ ಛಲ ಪಂಥ ಕಿಚ್ಚನು ಎಳೆವನು । ಆ(ಹು)ತಿಯಾಗಿ ರಾಯಗೆ

ರಾಯಬಲ್ಲಾಳನೆ ಲಾಲಿಸು ಭಿನ್ನಹೆ । ಹೋಯಿತ್ತೆ ಎಲ್ಲ ಬಲವು
ತಿಳಿಯಬಾರದೆ ಭೂಪ ಅವನಿಗಿಟ್ಟನೆ ನಾಮ । ನಿಮಗಿಟ್ಟ ರಾಮ ಭೂಮೀಂದ್ರ

ಕಪ್ಪ ಒಪ್ಪಿದ ಮೇಲೆ ಕಡೆಗೆ ಪಟ್ಟದ ರಾಣಿ। ಬಿಟ್ಟು ಏಳೆಗೆ ಕೊಡಬೇಕು
ಲಕ್ಷ ಕುದುರೆ ಮಂದಿ ಕಟ್ಟನ್ನು ಫಲವೇನು । ಮುಕ್ಕಗೆ ಹೆದರಿ ಹೊನ್ನ ಕೊಡಲು॥[೩೬]

ಹೊಯ್ಸಳರು ಯುದ್ಧದಲ್ಲಿ ಸೋತ ನಂತರ ಕಪ್ಪ ಕಾಣಿಕೆಗಳನ್ನು ಕೊಡಲು ಒಪ್ಪಿಕೊಳ್ಳುತ್ತಾರೆ.

ಕಪ್ಪ ಕಾಣಿಕೆ ಬಂದು ಒಪ್ಪಲು ರಾಮನಿಗೆ । ಕೇಡಾದ ರಾಹುತರ ಕಳೆದು
ಕಟ್ಟಿದ ರಾಜ್ಯದ ಬಿಡುಯೆಂಬ ರಾಯನಿಗೆ । ದಕ್ಷವಾಗಿರು ರಾಯ ಸುಖದೊಳಗೆ
ಯಾತರ ಭಯ ಬೇಡ ಭೂಪ ಬಲ್ಲಾಳರಾಯ । ಹೊಕ್ಕು ನಡೆದರೆ ಎಮ್ಮೊಳಗೆ
ಸಹಕಾರದೊಳು ನಡೆ ಸುರಿತಾಳ ಬಂದರೆ ನಿನ್ನ । ಮಾತಿಗೆ ಪ್ರಾಣ ಕೊಡುವೆನು॥

ರಾಮನಿಗೆ ಕಪ್ಪ ಕಾಣಿಕೆಯನ್ನು ಕೊಡಲು ಒಪ್ಪಿಕೊಂಡು ತನ್ನ ರಾಜ್ಯದ ಮೇಲೆ ಯಾರೇ ಆಕ್ರಮಣ ಮಾಡಿದರೂ ಪರಸ್ಪರ ಸಹಕಾರ ಮಾಡಬೇಕೆಂದು ಕೇಳಿಕೊಳ್ಳುತ್ತಾನೆ. ತನ್ನ ರಾಜ್ಯದ ಮೇಲೆ ಯಾರೇ ಬಂದರೂ ಅದರಲ್ಲೂ ಸುರತಾಳ ಬಂದರೆ ತನ್ನ ಪ್ರಾಣವನ್ನೇ ಕೊಡುವುದಕ್ಕೆ ಸಿದ್ಧನಾಗಿರುತ್ತೇನೆಂದು ಹೊಯ್ಸಳರ ಅರಸ ಹೇಳುತ್ತಾನೆ.

ಅರಸರಿಗೆ ಹೊಯ್ಸಳರು ಅಲ್ಲದೆ ಮತ್ತೆ ಯಾವ ಯಾವ ಅರಸರು ಕಪ್ಪ ಕಾಣಿಕೆಗಳನ್ನು ಕೊಡುತ್ತಿದ್ದರು ಅದರಲ್ಲೂ ಪ್ರಮುಖವಾಗಿ ಕೊಡಗು, ಕಳಿಂಗ, ಕಾಶ್ಮೀರ, ಪಾಗೊಂಡೆ, ನಿಡಗಲ್ಲು, ಮಿಡಿಗೇಸಿ, ಮಾಗಡಿ, ಬಳ್ಳಾರಿ, ಕಡಪ, ರಾಯದುರ್ಗ, ಮುಂತಾದರಸರು ಕುಮ್ಮಟದ ಅರಸರಿಗೆ ಸಾಕಷ್ಟು ಕಪ್ಪ ಕಾಣಿಕೆಗಳನ್ನು ಕೊಡುತ್ತಿದ್ದರು.

ಕೊಡಗು ಕೊಲ್ಲಾರ ಕಾಳಿಂಗ ಕಾಶ್ಮೀರ ದೇಶ । ಬೇಡಗಳ ಬಿಕ್ಕ ಶೃಂಗಾರ
ನಡೆದರು ಮುಂದೆ ದಂಡ ಕಡಲೆದ್ದು ಬರುವಂತೆ । ಪೊಡೆವ ಜಂಡೆಗಳು ಹದಿನೆಂಟು॥

ಪಾಗೊಂಡೆ ನಿಡಗಲ್ಲು ಮೇಗಾಳ ಮಿಡಿಗೇಸಿ । ಮಾಗಡಿ ಮಲೆತ ಮದ್ಗಿರಿಯ
ಸಾಗಲು ದಂಡೆದ್ದು ಮೇಘವು ನಡೆದಂತೆ ಎಂಬತ್ತು ಸಾವಿರ ಬಲದೊಡನೆ॥

ಬಳ್ಳಾರಿ ನಿಡಗಲ್ಲು ಗೊಲ್ಲಾರ ಬೂದ್ಯಾಳ । ಕಲ್ಹೊಳೆ ದಣ್ಣ ಕಂಗೊಡೆ
ಎಲ್ಲರು ನಡೆದರು ಇಪ್ಪತ್ತು ಸಾವಿರದೊಡನೆ । ತಮ್ಮ(ಹೊನ್ನು)ಗಳು ಸಹವಾಗಿ॥

ಕಡಪೆಯು ಕರ್ನೂಲು ಗುಡಮುಂಡೆ ರಾಯದುರ್ಗ । ನೆಲೆಕೊಲಪೆಚಂಪಕ ಪುರವು
ಕೆಲವಾಗಿ ನಡೆದರು ಸಲುವ ಭಷ್ಯವ ಹೇರಿ ಬಲಗೊಡಿ(ಮೂಟೆ) ಮೂರು ದಶಕ॥[೨೭]

ಕುಮ್ಮಟದುರ್ಗದ ನಾಯಕರಿಗೆ ಕಂದಾಯ ಹಾಗೂ ಕಪ್ಪ ಕಾಣಿಕೆಗಳಿಂದ ಸಾಕಷ್ಟು ಹಣವು ಬೊಕ್ಕಸಕ್ಕೆ ಬರುತ್ತಿತ್ತು. ಅದರಲ್ಲಿ ಪ್ರಮುಖವಾಗಿ ಕೊಡಗು, ಕೊಲ್ಲಾರ, ಕಾಳಿಂಗ, ಕಾಶ್ಮೀರ, ದೇಶಗಳಿಂದ ವರ್ಷಕ್ಕೆ ಹದಿನೆಂಟು ಸಾವಿರ ಕಪ್ಪ ಕೊಡುತ್ತಿದ್ದರು. ಪಾಗೊಂಡೆ ನಿಡಗಲ್ಲು, ಮಿಡಿಗೇಸಿ, ಮಧುಗಿರಿಯಿಂದ ವಾರ್ಷಿಕವಾಗಿ ಎಂಭತ್ತು ಸಾವಿರ ಬಲದೊಡನೆ ಬಳ್ಳಾರಿ ನಿಡಗಲ್ಲು ಬೂದ್ಯಾಳ, ಕಲ್ಹೊಳೆ, ದಣ್ಣ ಎಲ್ಲರು ನಡೆದು ಇಪ್ಪತ್ತು ಸಾವಿರದೊಡನೆ ತಮ್ಮ ಹೊನ್ನುಗಳನ್ನು

ಕೊಡುತ್ತಾರೆ. ಹೀಗೆ ನಾಲ್ಕು ದಿಕ್ಕುಗಳಿಂದ ಕುಮ್ಮಟದ ಅರಸರಿಗೆ ಎಲ್ಲಾ ಅರಸರು ಬಂದು ಕಪ್ಪ ಕಾಣಿಕೆಗಳನ್ನು ಕೊಡುತ್ತಿದ್ದರಿಂದ ರಾಜ್ಯದ ಸಂಪತ್ತು ಹೆಚ್ಚಾಗಿತ್ತು.

ಕರ್ನಾಟಕದಲ್ಲಿ ನಾಣ್ಯಶಾಸ್ತ್ರದ ಅಧ್ಯಯನ ಕುರಿತಂತೆ ಹೆಚ್ಚು ಹೆಚ್ಚು ಲೇಖನಗಳಾಗಲೀ, ಸಂಶೋಧನಾತ್ಮಕ ಗ್ರಂಥಗಳಾಗಲೀ ಪ್ರಾರಂಭದಲ್ಲಿ ಹೊರಬಂದಿರಲಿಲ್ಲ. ಕಾಲಾನಂತರ ನಾಣ್ಯಶಾಸ್ತ್ರ ಕುರಿತಂತೆ ಹಲವಾರು ಕೃತಿಗಳು ಬೆಳಕಿಗೆ ಬಂದವು. ಎ.ವಿ.ನರಸಿಂಹಮೂರ್ತಿ ಅವರ 'ಕಾಯಿನ್ಸ್ ಆಫ್ ಕರ್ನಾಟಕ' ಎಂಬ ಗ್ರಂಥವು ಮಾತ್ರ ನಾಣ್ಯಗಳನ್ನು ಕುರಿತಂತೆ ಸಮಗ್ರವಾಗಿ ರಚಿಸಲಾಗಿದೆ. ಪ್ರಾರಂಭದಲ್ಲಿ ರಂಧ್ರದ ಗುರುತುಳ್ಳ ನಾಣ್ಯಗಳು ಕರ್ನಾಟಕದಲ್ಲಿ ದೊರೆತಿದ್ದವು. ಕರ್ನಾಟಕದಲ್ಲಿ ಚುಟು ಸಂತತಿಯ ನಾಣ್ಯಗಳೇ ಪ್ರಾಚೀನ ನಾಣ್ಯಗಳಾಗಿದ್ದು, ಬಹಳ ಹಿಂದೆಯೇ ದೊರೆತಿವೆ.[೩೮]

ಕುಮ್ಮಟದರಸರ ಸಮಕಾಲೀನರಾದ ಹೊಯ್ಸಳರ ಕಾಲದ 'ದಕ್ಷಿಣ ಕನ್ನಡದಲ್ಲಿ ದೊರೆತ ನಾಣ್ಯವೊಂದನ್ನು ಎಂ.ಎ.ಪ್ರಭು ಅವರು ಪ್ರಕಟಿಸಿದ್ದರು.[೩೯] ಇದು ಮೂರನೇ ಬಲ್ಲಾಳನ ಕಾಲದ್ದೆಂದು ಹೇಳಲಾಗಿದೆ. ಸೇವುಣರ ಕಾಲದ ಪದ್ಮಟಂಕ ವರ್ಗದ ನಾಣ್ಯಗಳು ಕರ್ನಾಟಕದಲ್ಲಿ ದೊರೆತಿವೆ. ಕುಮ್ಮಟದರಸರ ನಂತರದ ವಿಜಯನಗರ ಕಾಲದಲ್ಲಿ ನಾಣ್ಯಗಳು ಹೇರಳವಾಗಿ ದೊರೆತಿವೆ. ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳು ದೊರೆತಿವೆ. ಕುಮ್ಮಟದುರ್ಗದ ಪೂರ್ವದ ಮತ್ತು ನಂತರದ ಕಾಲದ ನಾಣ್ಯಗಳು ಬೆಳಕಿಗೆ ಬಂದಿದ್ದು, ಕುಮ್ಮಟದುರ್ಗದ ಕಾಲದ ನಾಣ್ಯಗಳು ಬೆಳಕಿಗೆ ಬಂದಿಲ್ಲದಿರುವುದು ದುರದೃಷ್ಟಕರವಾದ ಸಂಗತಿ.

ಕುಮ್ಮಟದುರ್ಗದರಸರ ರಾಜ್ಯವು ಮಾಂಡಳಿಕ ರಾಜ್ಯವಾಗಿತ್ತು. ವಿಜಯನಗರ ಸಾಮ್ರಾಜ್ಯದ ಪತನಾನಂತರ ಚಿತ್ರದುರ್ಗದ ನಾಯಕರು ಸೇರಿದಂತೆ ಇತರೆ ದಕ್ಷಿಣ ಭಾರತದ ರಾಜರುಗಳು ಅವರ ಮಾಂಡಳಿಕರಾಗಿದ್ದು, ಅನೇಕ ಬಗೆಯ ನಾಣ್ಯಗಳನ್ನು ಟಂಕಿಸಿರುವ ಮಾಹಿತಿಯಿದೆ. ಪ್ರಾಚೀನ ಕಾಲದಿಂದಲೂ ಸರಣಿಯಲ್ಲಿ ನಾಣ್ಯಗಳು ಪರಿಚಯವಾಗಿದ್ದು, ಕುಮ್ಮಟದರಸರ ಕಾಲಾವಧಿಯಲ್ಲಿ ನಾಣ್ಯಗಳ ಟಂಕಿಸುವ ಕಾರ್ಯವಿದ್ದು ಅವು ಬೆಳಕಿಗೆ ಬರುವುದರಲ್ಲಿ ತಡವಾಗುತ್ತಿದೆ. ಮೊದಲು ರಂಧ್ರವೊತ್ತುವ ಪದ್ಧತಿಯಿದ್ದು, ಕಾಲಾನಂತರದಲ್ಲಿ ಅಚ್ಚು ಮಾಡುವ ಪದ್ಧತಿಯು ರೂಢಿಯಾಯಿತು. ಈ ಹೇಳಿಕೆಗೆ ಪೂರಕವಾಗಿ ಕುಮ್ಮಟ ರಾಜ್ಯದಲ್ಲಿ ಅಚ್ಚು ಮಾಡುವವರ ಕೇರಿಯು ಇತ್ತು ಎಂಬ ವಿಚಾರವು ನಂಜುಂಡ ಕವಿ ವಿರಚಿತ ರಾಮನಾಥ ಚರಿತೆಯಿಂದ ತಿಳಿದುಬರುತ್ತದೆ.

ಕುಮ್ಮಟದರಸರ ಕಾಲದ ಸಮಾಜದಲ್ಲಿ ವಿವಿಧ ರೀತಿಯ ಕರಕುಶಲ ಕಾರ್ಮಿಕರು ಇದ್ದರೆಂದು, ನಾನಾ ರೀತಿಯ ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳು ಇದ್ದವೆಂಬ ಸಂಗತಿಯನ್ನು ಹಿಂದಿನ ಪುಟಗಳಲ್ಲಿ ತಿಳಿಸಲಾಗಿದೆ. ಇಲ್ಲಿ ಪ್ರಮುಖವಾಗಿ ಲೋಹವನ್ನು ಎರಕ ಹೊಯ್ಯುವವರ ಗುಂಪನ್ನು 'ಅಚ್ಚುಗಾರರ ಕೇರಿ' ಎಂದು ಕರೆಯುತ್ತಿದ್ದರು ಎಂಬ ಅಂಶವು ರಾಮನಾಥ ಚರಿತೆಯಿಂದ ತಿಳಿದುಬರುತ್ತದೆ. ಅಚ್ಚುಗಾರರು ಮಾಡುತ್ತಿದ್ದ ಕಾರ್ಯವೆಂದರೆ ಲೋಹವನ್ನು ಕರಗಿಸಿ, ಪಾಕವನ್ನು

ಎರಕ ಹೊಯ್ದು, ಅಚ್ಚನ್ನು ತಯಾರಿಸುವುದಾಗಿತ್ತು. ಇಂತಹ ಲೋಹದ ಅಚ್ಚುಗಳು ನಾಣ್ಯಗಳಿಗೆ ಸಮನಾಗುತ್ತದೆ. ಇದರರ್ಥ ಲೋಹದಿಂದ ತಯಾರಿಸಿದ ನಾಣ್ಯಗಳು ಕುಮ್ಮಟದರಸರ ಕಾಲದಲ್ಲಿ ಬಳಕೆಯಲ್ಲಿತ್ತು ಎಂಬ ಆಧಾರ ದೊರೆಯುತ್ತದೆ. ಇದಕ್ಕೆ ಪೂರಕವಾಗಿ ಕುಮ್ಮಟದರಸರು ತಮ್ಮ ಕಾಲದಲ್ಲಿ ವ್ಯಾಪಾರಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದರು. ಬಾಹ್ಯವಾಗಿ, ಆಂತರಿಕವಾಗಿ ವಸ್ತುಗಳನ್ನು ಆಮದು ರಫ್ತುಗಳಾಗಿ ಸಾಗಿಸುತ್ತಿದ್ದರು. ಬಹುಶಃ ಇಂತಹ ಸಂದರ್ಭಗಳಲ್ಲಿ ಹೊನ್ನುಗಳ ಜೊತೆಗೆ ಲೋಹದ ನಾಣ್ಯಗಳು ವಿನಿಮಯವಾಗಿದ್ದಿರಬಹುದು.

ಕುಮ್ಮಟದರಸರ ರಾಜ್ಯಕ್ಕೆ ವಿವಿದೆಡೆಗಳಿಂದ ಕಂದಾಯ ಹರಿದುಬರುತ್ತಿತ್ತು. ಕೃಷಿ ಕ್ಷೇತ್ರಗಳಿಂದ, ಸೋತ ರಾಜರುಗಳಿಂದ, ಯುದ್ಧದಲ್ಲಿ ಗೆದ್ದ ಸಂಪತ್ತಿನಿಂದ, ಸಾಮಂತ ಅರಸರುಗಳಿಂದ ವ್ಯಾಪಾರ ವಹಿವಾಟಿನಿಂದ ಇತ್ಯಾದಿ ಮೂಲಗಳಿಂದ ಸಂಪತ್ತು ಹರಿದುಬರುತ್ತಿತ್ತು. ರಾಮನಾಥ ಚರಿತೆಯಲ್ಲಿ ಪ್ರಸ್ತಾಪವಾಗಿರುವಂತೆ ಕಳಿಂಗ, ಕಾಶ್ಮೀರ, ಕೊಡಗು, ಕೊಲ್ಲಾರ ದೇಶಗಳಿಂದ ವರ್ಷಕ್ಕೆ 'ಹದಿನೆಂಟು ಸಾವಿರ' ಕಪ್ಪ ಸಂದಾಯವಾಗುತ್ತಿತ್ತು. ನಿಡಗಲ್ಲು ಮಿಡಿಗೇಸಿ, ಮಧುಗಿರಿಯಿಂದ ವಾರ್ಷಿಕವಾಗಿ ಎಂಭತ್ತು ಸಾವಿರ ಸೇನೆ ತಲುಪುತ್ತಿತ್ತು. ಹಾಗೂ ಬಳ್ಳಾರಿ, ಬೂದ್ಯಾಳ ಇತ್ಯಾದಿ ಕಡೆಯಿಂದ 'ಇಪ್ಪತ್ತು ಸಾವಿರ'ದ ಜೊತೆಗೆ ಹೊನ್ನುಗಳನ್ನು ಸಲ್ಲಿಸುತ್ತಿದ್ದರೆಂಬ ಮಾಹಿತಿಗಳು ನಾಣ್ಯಗಳ ಚಲಾವಣೆಯ ಕುರುಹನ್ನು ಹುಟ್ಟಿ ಹಾಕುತ್ತವೆ. 'ಹದಿನೆಂಟು ಸಾವಿರ' ಹಾಗೂ 'ಇಪ್ಪತ್ತು ಸಾವಿರ' ಎಂಬ ಈ ಪದಗಳು ಮೌಲ್ಯವನ್ನು ಸೂಚಿಸಿರುವುದರಿಂದ ನಾಣ್ಯಗಳು ಇವರ ಕಾಲದಲ್ಲಿ ಪರಿಚಯವಿದ್ದಿರಬಹುದು. ಅಷ್ಟೇ ಅಲ್ಲದೆ ಪ್ರತಿಯಾಗಿ ವ್ಯವಹರಿಸಲು ಇವರೂ ನಾಣ್ಯಗಳನ್ನು ಬಳಸಿದ್ದಿರಬಹುದು. ಆದರೆ ಇವರ ಕಾಲದ ನಾಣ್ಯಗಳ ಕುರುಹು ಇಲ್ಲಿಯವರೆಗೂ ದೊರೆತಿಲ್ಲದಿರುವುದಕ್ಕೆ ಹಲವಾರು ಕಾರಣಗಳಿರಬಹುದು. ಕುಮ್ಮಟದರಸರ ಅಲ್ಪ ಕಾಲಾವಧಿಯಲ್ಲಿ ಅಲ್ಲೊಂದು ಇಲ್ಲೊಂದು ಎನ್ನುವ ಮಟ್ಟಿಗೆ ಕಡಿಮೆ ಮುಖಬೆಲೆಯ ನಾಣ್ಯಗಳನ್ನು ಪ್ರತಿಯಾಗಿ ಸಲ್ಲಿಸಲಿಕ್ಕಾದರೂ ವ್ಯವಹರಿಸಿರಬಹುದು. ಆದರೆ ಅವು ಬೆಳಕಿಗೆ ಬಂದಿಲ್ಲದಿರುವುದು ಗೊಂದಲವಾಗಿದೆ. ಇದು ಚಿಕ್ಕ ರಾಜ್ಯವಾಗಿದ್ದರಿಂದ ವಿದೇಶಿ ಪ್ರವಾಸಿಗರು ಹೆಚ್ಚು ಗಮನ ನೀಡಲು ಮುಂದಾಗಿಲ್ಲವೆಂದೆನಿಸುತ್ತದೆ. ಈ ಕಾರಣಕ್ಕಾಗಿ ಇವರು ಯಾವ ರೀತಿಯ ಮೌಲ್ಯಗಳನ್ನು ವ್ಯವಹಾರಕ್ಕಾಗಿ ಬಳಸುತ್ತಿದ್ದರೆಂಬ ಮಾಹಿತಿಯು ಅಸ್ಪಷ್ಟವಾಗಿದ್ದು ಗಮನಕ್ಕೆ ಬಂದಿಲ್ಲದಿರುವುದು ಬೇಸರದ ಸಂಗತಿಯಾಗಿದೆ. ಮುಂದಿನ ದಿನಗಳಲ್ಲಿ ಕುಮ್ಮಟದರಸರ ಕಾಲದಲ್ಲಿ ನಾಣ್ಯದ ವ್ಯವಸ್ಥೆ ಇತ್ತು ಎಂಬ ಖಚಿತ ಮಾಹಿತಿಗಳು ಪ್ರಾಕ್ತನ ಆಧಾರಗಳಿಂದ ತಿಳಿದುಬರಬೇಕಿದೆ.

### ೫.೨.೬ ವ್ಯಾಪಾರ

ಕುಮ್ಮಟದರಸರ ಕಾಲಾವಧಿಯಲ್ಲಿ ವ್ಯಾಪಾರ ವಹಿವಾಟುಗಳು ತುಂಬಾ ಬಿರುಸಾಗಿದ್ದವು. ರಾಜ್ಯದ ಬೀದಿಬೀದಿಗಳಲ್ಲಿ ವಸ್ತುಗಳನ್ನು ಮಾರಾಟ ಮಾಡುವುದು ಪ್ರತಿ ನಿತ್ಯವೂ ನಡೆಯುತ್ತಿತ್ತು. ಪ್ರತಿದಿನವೂ ಅಂಗಡಿ ಮುಗ್ಗಟ್ಟುಗಳು ತೆರೆದಿರುತ್ತಿದ್ದವು. ಅಲ್ಲಿನ ಸಾಮಾನ್ಯ ಜನರು, ವೃತ್ತಿನಿರತರು, ಸೈನಿಕರು ದೀರ್ಘಕಾಲದ ಯುದ್ದಗಳಿಗೆ ಹೋಗಬೇಕಾದ ಅನಿವಾರ್ಯತೆ ಇದ್ದಂತಹ ಸಂದರ್ಭಗಳಲ್ಲಿ

ಅಗತ್ಯವಾದ ವಸ್ತುಗಳನ್ನು ಪಡೆದುಕೊಳ್ಳಲು ಅಂಗಡಿಗಳು ಅನಿವಾರ್ಯವಾಗಿದ್ದವು. ಹಾಗೆಯೇ ಯುದ್ಧ ಕಾಲದ ಸಂದರ್ಭದಲ್ಲಿ ಹೆಚ್ಚು ಹೆಚ್ಚು ಅಂಗಡಿಗಳು ನೆಲೆಯೂರುತ್ತಿದ್ದವು. ಕಾರಣ ಈ ಸಂದರ್ಭದಲ್ಲಿ ರಾಜರುಗಳು ಸೈನಿಕರಿಗೆ ಪ್ರೋತ್ಸಾಹ ಭತ್ಯೆಯನ್ನು ನೀಡುವ ಮೂಲಕ ಉತ್ತೇಜಿಸುತ್ತಿದ್ದರು. ಹೀಗಾಗಿ ಸೈನಿಕರ ಆರ್ಥಿಕ ಸ್ಥಿತಿಯೂ ಉತ್ತಮವಾಗಿರುತ್ತಿತ್ತು. ಇದನ್ನು ಅರಿತಿದ್ದ ವರ್ತಕರು ಯುದ್ಧ ಬಿಡಾರಗಳಲ್ಲೂ ಅಂಗಡಿಗಳನ್ನು ತೆರೆಯುತ್ತಿದ್ದುದು ತಿಳಿದುಬರುತ್ತದೆ. ಯುದ್ಧ ಕಾಲದ ಬಿಡಾರಗಳಲ್ಲಿ ಆಹಾರ ಪದಾರ್ಥಗಳನ್ನು ಮಾರುವ ಬೇಹಾರಿಗಳಿದ್ದರು.[೬೦] ವಿದೇಶಿ ಪ್ರವಾಸಿಗ ಹೇಳುವಂತೆ ಯುದ್ಧದ ಬಿಡಾರಗಳಲ್ಲಿ ಒಬ್ಬೊಬ್ಬ ದಳವಾಯಿ ಗುಂಪಿಗೂ ಒಂದೊಂದು ರೀತಿಯ ಅಂಗಡಿಗಳಿದ್ದವು.

ಆನೆ, ಕುದುರೆಗಳಿಗೆ ಹುಲ್ಲಿನ ಮೆದೆಗಳ ಮಾರಾಟದ ಅಂಗಡಿಗಳು

ವಜ್ರ, ವೈಡೂರ್ಯ, ಚಿನ್ನ, ಮುತ್ತುಗಳ ಮಾರಾಟದ ಅಂಗಡಿಗಳು

ಭತ್ತ, ಗೋಧಿ ಧಾನ್ಯಗಳ ಮಾರಾಟದ ಅಂಗಡಿಗಳು

ಮೇಕೆ, ಕುರಿ, ಹಂದಿ, ಕೋಳಿ ಮಾಂಸದ ಮಾರಾಟದ ಅಂಗಡಿಗಳು

ಬಟ್ಟೆಗಳ ಮಾರಾಟದ ಅಂಗಡಿಗಳು

ಆಯುಧಗಳನ್ನು ಹರಿತಗೊಳಿಸುವ ಅಂಗಡಿಗಳು

ಅಮಲು ಪದಾರ್ಥಗಳ ಮಾರಾಟ ಮಾಡುವ ಅಂಗಡಿಗಳನ್ನು ತೆರೆಯುತ್ತಿದ್ದರು. ಭಂಗಿ ಮತ್ತು ಸಾರಾಯಿಯನ್ನು, ಸೇರು ಮತ್ತು ಪಿಪಾಯಿಗಟ್ಟಲೆ ಸಮರ ಭೂಮಿಗೆ ಸಾಗಾಣೆ ಮಾಡಿದ ವಿವರವಿದೆ.[೬೧] ಕುಮ್ಮಟದರಸರು ತಮ್ಮ ರಾಜಧಾನಿಯಲ್ಲಿ ವೃತ್ತಿಗನುಸಾರವಾಗಿ, ಜಾತಿಗಳಿಗನುಸಾರವಾಗಿ ಕೆಲಸ ನಿರ್ವಹಿಸುವವರಿಗೆ ಪ್ರತ್ಯೇಕ ಓಣಿಗಳನ್ನು ಕಲ್ಪಿಸಿಕೊಡುವಲ್ಲಿ ಯಶಸ್ವಿಯಾಗಿದ್ದರು. ಇಲ್ಲಿ ವರ್ತಕರಿಗೆ ಪ್ರತ್ಯೇಕವಾದ ಓಣಿಯಿದ್ದು, ಅದನ್ನು 'ವಣಿಗ್ವಲ್ಲಭರ' ಓಣಿ ಎಂದೇ ಕರೆಯಲಾಗುತ್ತಿತ್ತು. ಹಾಗೆಯೇ ಪ್ರಸಿದ್ಧ ವರ್ತಕರು ದೊಡ್ಡ ದೊಡ್ಡ ವ್ಯಾಪಾರಿಗಳು ಇದ್ದುದು ಕಂಡುಬರುತ್ತದೆ. ಇಲ್ಲಿ ಕೆಲವು ವರ್ತಕರನ್ನು ನೋಡಬಹುದು.

ದವಸ ಧಾನ್ಯಗಳ ವ್ಯಾಪಾರಿ

ಮುತ್ತು, ರತ್ನ, ಹವಳ, ಬಂಗಾರದ ವ್ಯಾಪಾರಿ

ಬಟ್ಟೆ ನೇಯುವ ವ್ಯಾಪಾರಿ – ಸೇಲಿಗ

ಗಂಧ ತಯಾರಿಸುವ ವ್ಯಾಪಾರಿ ಗಂಧಿಕ

ಬಟ್ಟೆ ಹೊಲಿಯುವ ವ್ಯಾಪಾರಿ – ಸಿಂಪಿಗ

ಪಂಜುಗಳನ್ನು ತಯಾರಿಸುವ ವ್ಯಾಪಾರಿ – ದೀವಟಿಗ

ಹೀಗೆ ರಾಜಧಾನಿಯ ತುಂಬೆಲ್ಲಾ ವಿವಿಧ ರೀತಿಯ ವಸ್ತುಗಳನ್ನು ಮಾರುವ ವ್ಯಾಪಾರಿಗಳ ಅಂಗಡಿಗಳಿದ್ದು, ವಿವಾಹ ಕಾರ್ಯ, ಸಭೆ, ಸಮಾರಂಭ, ಜಾತ್ರಾ ಮಹೋತ್ಸವ, ಮೆರವಣಿಗೆಗಳು, ಯುದ್ದ ಸಂದರ್ಭಗಳಿಗೆ ಬೇಕಾಗುವಂತಹ ವಿಶೇಷ ವಸ್ತುಗಳನ್ನು ಮಾರುವ ವ್ಯಾಪಾರಿಗಳಿದ್ದುದು ಗಮನಾರ್ಹ ಸಂಗತಿಯಾಗಿದೆ. ಇಲ್ಲಿ ವ್ಯಾಪಾರಿಗಳು ವಸ್ತುಗಳ ಮೌಲ್ಯಗಳಿಗನುಗುಣವಾಗಿ ತೆರಿಗೆಗಳನ್ನು ವಿಧಿಸುತ್ತಿದ್ದರಿಂದ ರಾಜ್ಯಕ್ಕೆ ಸಾಕಷ್ಟು ಆದಾಯ ಸಂಗ್ರಹವಾಗುತ್ತಿತ್ತು. ಇಲ್ಲಿ ದೊಡ್ಡ ದೊಡ್ಡ ವರ್ತಕರ ಜೊತೆ ಸಣ್ಣ ಪುಟ್ಟ ವರ್ತಕರುಗಳಿಗೂ ತಮ್ಮ ಜೀವನಾಧಾರಕ್ಕೆ ವ್ಯಾಪಾರ ವೃತ್ತಿಯು ಮುಖ್ಯವೆನಿಸಿತ್ತು ಹಾಗೂ ತೃಪ್ತಿಯನ್ನು ತಂದುಕೊಟ್ಟಿತ್ತು.

ವ್ಯಾಪಾರ ಮಾಡುವ ವರ್ತಕರು ಕೇವಲ ವ್ಯಾಪಾರ ಮಾಡುವುದಷ್ಟೇ ಅಲ್ಲ, ಸಾಮ್ರಾಜ್ಯದ ಜನರ ಮನೋಭಿಲಾಷೆಗಳು, ಇಷ್ಟಾರ್ಥಗಳನ್ನು ಅವರ ಬಯಕೆ, ಬೇಡಿಕೆಗಳನ್ನು ಅರಿಯುವಂತವರಾಗಿದ್ದರು. ಇಲ್ಲಿನ ವರ್ತಕರಿಗೆ ಪ್ರಮುಖ ಸ್ಥಾನಗಳಿದ್ದು, ಅವರಿಗೆ ಪ್ರತ್ಯೇಕವಾದ ಓಣಿಗಳಿದ್ದುದನ್ನು ಗಮನಿಸಿದರೆ ಕುಮ್ಮಟದರಸರು ವ್ಯಾಪಾರ ಅಭಿವೃದ್ಧಿಗೆ ಎಷ್ಟರ ಮಟ್ಟಿಗೆ ಉತ್ತೇಜನ ನೀಡಿದ್ದರೆಂದು ತಿಳಿಯುತ್ತದೆ. ಹಾಗೆಯೇ ವೇಶ್ಯಾಗೃಹಗಳ ಸಮೀಪದಲ್ಲಿಯೇ ಹೂವಿನ ಅಂಗಡಿಗಳ ಮಾರುಕಟ್ಟೆಯೇ ಇದ್ದು, ಸುಗಂಧಭರಿತ ಪುಷ್ಪಗಳು ದೊರೆಯುತ್ತಿದ್ದವು. ಅಂದರೆ ಅವರ ವೃತ್ತಿಗಳಿಗೆ ಪೂರಕವಾಗಿ ಅರಸರ ಬೆಂಬಲ ದೊರೆಯುತ್ತಿದ್ದುದು ಇಲ್ಲಿ ತಿಳಿದುಬರುತ್ತದೆ. ರಾಜ್ಯದಲ್ಲಿ ಆಂತರಿಕವಾಗಿ ಯುದ್ಧದ ಸಂದರ್ಭದಲ್ಲಿ ವ್ಯಾಪಾರ ಮಾಡುವ ಉದ್ದೇಶದಿಂದ ಬೇರೆಡೆಗೆ ಹೋಗಲು ಕೆಲವು ಪ್ರಾಣಿಗಳನ್ನು ಬಳಸುತ್ತಿದ್ದರು. ಸಾಗಾಣಿಕೆಗೆ ಒಂಟೆಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಕಬ್ಬಿಣದ ಯುದ್ದ ಸಾಮಾಗ್ರಿಗಳನ್ನು ಬಂಡಿಗಳಲ್ಲಿ ಸಾಗಿಸಲಾಗುತ್ತಿತ್ತು. (ಮಚ್ಚು, ಕುಡುಗೋಲು, ಕೊಡಲಿ, ಕತ್ತಿ, ಹಾರೆ) ಅದರಲ್ಲೂ ಈ ವಸ್ತುಗಳನ್ನು ಸಾಗಿಸಲು ವಿಶೇಷವಾಗಿ ಕೊಲ್ಲಾರದ 'ಬಂಡಿ'ಗಳನ್ನೇ ತರಿಸಿಕೊಳ್ಳುತ್ತಿದ್ದರು.[೪೨] ಹಾಗೆಯೇ ಹೊರದೇಶಗಳಿಂದ ಯುದ್ಧಗಳಿಗೆಂದೇ ವಿದೇಶಿ ಕುದುರೆಗಳನ್ನು (ಜಾತ್ಯಾಶ್ವಗಳು) ಆಮದು ಮಾಡಿಕೊಳ್ಳುತ್ತಿದ್ದುದು ಗಮನಾರ್ಹ. ಬಂಗಿ, ಸಾರಾಯಿ ಪಿಪಾಯಿಗಳನ್ನು ಹೇಸರಗತ್ತೆಯ ಮೇಲೆ, ಎತ್ತಿನ ಮೇಲೆ ಯುದ್ದ ಸಾಮಗ್ರಿಗಳನ್ನು ಹಾಕಿಕೊಂಡು ವ್ಯಾಪಾರ ಮಾಡಲೆಂದೇ ಊರಿಂದ ಊರುಗಳಿಗೆ ಪ್ರಯಾಣ ಮಾಡುತ್ತಿದ್ದ, ವರ್ತಕರುಗಳ ಜೀವನ ಸಂತೃಪ್ತಿಯಾಗಿತ್ತು. ಇವರಿಗೆ ಸಾಕಷ್ಟು ಲಾಭ ಇದ್ದುದರಿಂದಲೇ ಬಹುಶಃ ವರ್ತಕ ವೃತ್ತಿಯನ್ನು ಬಿಡದೇ ಅನುಸರಿಸುತ್ತಿದ್ದರೆಂದು ಅನಿಸುತ್ತದೆ. ಹಾಗೆಯೇ ಅರಸರು ವರ್ತಕರಿಗೆ ಸ್ವಾತಂತ್ರ್ಯ ನೀಡಿದ್ದರೆಂದು, ಯಾವ ವಸ್ತುಗಳನ್ನು ಯಾರೂ ಬೇಕಾದರೂ ಮಾರಾಟ ಮಾಡುವಂತಹ ಅವಕಾಶವನ್ನು ನೀಡಿದ್ದಿರಬಹುದು. ಹೀಗಾಗಿಯೇ ವರ್ತಕರು ಮತ್ತು ಅವರ ವೃತ್ತಿ ಜೀವನವು ಸಾರ್ಥಕವಾಗಿರುವುದು ಗಮನಾರ್ಹವೆನಿಸುತ್ತದೆ.

ಬಹು ಮುಖ್ಯವಾಗಿ ದಿನನಿತ್ಯದ ಬಳಕೆ ವಸ್ತುಗಳ ಮಾರುವ ಮಾರುಕಟ್ಟೆಗಳಿದ್ದವು. ಹೂವಿನ ಮಾರುಕಟ್ಟೆಗಳ ಜೊತೆಗೆ ತರಕಾರಿಗಳು, ಧಾನ್ಯಗಳು, ಹಣ್ಣುಗಳು, ಸುಗಂಧ ದ್ರವ್ಯಗಳು, ಪೂಜಾ

ವಸ್ತುಗಳು, ಒಣಗಿದ ಹಣ್ಣುಗಳು ಹೀಗೆ ನಾನಾ ರೀತಿಯ ವಸ್ತುಗಳನ್ನು ಮಾರಾಟ ಮಾಡುತ್ತಾ ತಮ್ಮ ಜೀವನ ಸಾಗಿಸಲು ವ್ಯಾಪಾರವನ್ನೇ ಅವಲಂಬಿಸಿಕೊಂಡಿದ್ದುದು ವಿಶೇಷವೆನಿಸುತ್ತದೆ.

**೫.೩. ಸಾಮಾಜಿಕ ವ್ಯವಸ್ಥೆ**

೧೨ನೇ ಶತಮಾನದಲ್ಲಿ ವಚನ ಕ್ರಾಂತಿಯಿಂದ ಸಮಾಜದಲ್ಲಿ ಸಮಕಾಲೀನ ಸಾಮಾಜಿಕ ಜೀವನ ಬಹಳಷ್ಟು ಜೀವಂತವಾಗಿಯೇ ಪ್ರತಿಬಿಂಬಿತವಾಗಿದೆ. ಆ ಕಾಲದ ಜೀವನ ಮೌಲ್ಯ, ನಂಬಿಕೆ, ಸಂಪ್ರದಾಯ ಮೊದಲಾದ ಸಾಮಾಜಿಕ ಸಂಗತಿಗಳನ್ನು ಪರಿಶೀಲಿಸಿದರೆ ಜ್ಯೋತಿಷ್ಯ ಶಕುನಗಳ ಬಗೆಗೆ ನಂಬಿಕೆ, ಹರಕೆ, ಆಚರಣೆಗಳು ಇಲ್ಲಿದ್ದು ಅವು ಕುತೂಹಲಕರವಾಗಿವೆ.

ಕುಮ್ಮಟದುರ್ಗದ ಅರಸರ ಕಾಲದಲ್ಲಿ ರಂಗಮಂಟಪವಿದ್ದುದರ ಬಗ್ಗೆ ಪ್ರಸ್ತಾಪ ಬರುತ್ತದೆ. ಆ ಕಾಲಘಟ್ಟದಲ್ಲಿ ರಂಗಕಲೆಗೆ ಪ್ರೋತ್ಸಾಹ ನೀಡಿರುವ ಕುರಿತು ದಾಖಲೆಗಳು ಸಿಗುತ್ತವೆ.

ಅಂಗಡಿ ಬೀದಿಯು ರಂಗಮಂಟಪಗಳು
ಶೃಂಗಾರ ವಿಟರ ಕೇರಿಗಳು
ಹೊಂಗೆಲಸದ ಅರಮನೆಯುಪ್ಪರಿಗೆಯು
ಸಂಗ್ರಾಮಧೀರಗೆ ರಚಿಸಿ (೪-೨೩)

**೫.೩.೧. ಜಾತಿ ಪದ್ಧತಿ**

ನೇಮಿಯ ದಂಡು ಕುಮ್ಮಟದುರ್ಗವನ್ನು ಮುತ್ತಿದಾಗ ರಾಮ ಸಕಲ ಯುದ್ಧಾಸ್ತ್ರಗಳಾದ ಕತ್ತಿ, ಈಟಿ, ಬಾಣ, ಕಠಾರಿ, ಆನೆ, ಕುದುರೆ, ಕಾಲ್ದಳದೊಂದಿಗೆ ಯುದ್ಧಕ್ಕೆ ಸಿದ್ಧನಾಗುತ್ತಾನೆ. ಕುಮಾರರಾಮನು ಯುದ್ಧಕ್ಕೆ ಸಿದ್ದನಾದಾಗ ಕೇವಲ ಯಾವುದೋ ಒಂದು ಜನಾಂಗದ ಸೈನಿಕರು ಸೈನ್ಯದಲ್ಲಿ ಇರಲಿಲ್ಲ. ಎಲ್ಲಾ ಜಾತಿ ಜನಾಂಗದ ಜನರು ಕುಮಾರರಾಮನ ಸೈನ್ಯದಲ್ಲಿ ಇದ್ದರು. ಕುಮ್ಮಟದುರ್ಗದ ಮೇಲೆ ವೈರಿಗಳು ದಾಳಿ ಮಾಡಿದಾಗ ಗಡಿಯ ಕಾವಲು ಕಾಯುವ ನಾಯಕರು, ಹೊಲೆಯರು, ಒಕ್ಕಲಿಗರು, ಮೀನುಗಾರರು, ಮಾದಿಗರು, ಇನ್ನೂ ಹಲವು ಜಾತಿ ಜನಾಂಗದವರು ರಾಮನ ಸೈನ್ಯದಲ್ಲಿದ್ದರು. ನೇಮಿಯಖಾನನು ಕುಮ್ಮಟದುರ್ಗದ ಮೇಲೆ ದಾಳಿ ಮಾಡಿದಾಗ ಜಾತಿ ಭೇದವಿಲ್ಲದೆ ವೈರಿಗಳನ್ನು ಸೆರೆ ಹಿಡಿದ ಮಾಹಿತಿಯನ್ನು ತಿಳಿಯಬಹುದು.

ಗಡಿಯ ಕಾಲದ ಕಾವೆ ಕಾಟನಾಯಕ ಹೋಗಿ
ಕಡೆಯಕಲ್ಲನು ನೀನು (ಸೂ)ರೆ
ಬಿಡಬೇಡ ಬರುವಂಥ ಖಾನರನವ
ಕಡಿದು ಹಿಂದಕೆ ಹಾಕೊ ನೀನು (೧೧-೧೫)

ಮಲೆಯ ಕಾವಲ ಕಾವ ಹೊಳೆಯರ ಹೊನ್ನುಗ
ಸತಿ ಕೋಡ್ಲಲ್ಲ ನೀನೇರೊ ಒಳಹೊಕ್ಕು ಬಾಹಂಥ ಖಾನ ವಜೀರರ
ಬಲಿಯನಿಕ್ಕಿಸೊ ಕಣಿವೆಯೊಳಗೆ (೧೧-೧೯)

ಒಕ್ಕಲಿಗರ ಮುದ್ದಹೊಕ್ಕನು ರಣದೊಳು
ಸೊಕ್ಕಾನೆ ಹಿಂಡನು ಕಂಡು
ಗಕ್ಕನೆ ನಿಂತು ಮುಂದಕೆ ಬರಲೀಸದೆ
ಸಿಕ್ಕಿದವೆಲ್ಲವ ಕಡಿದ (೧೧-೩೭)

ಆನೆಯ ಕಲ್ಲಿಗಾತು ಕೊಂಡರು ಶರಬರು
ಮೌನದೊಳಡಗಿ ಕೊಂಡಿಹರು
ಜಾಣ ಖಾನನು ಒತ್ತಿ ಬರುವ ದಾರಿಯಕಟ್ಟೆ
ಮೀನಿಗರ ಲಕ್ಕ ಹೊಕ್ಕಿರದ (೧೧-೩೯)

ಮಾದಿಗ ಹಂಪನು ಕೋಟಿಗರ ದ್ಯಾವನು
ಆದವನ್ನಿಯ ಗಿರಿಯನವ(ನು)
ಸಂಧಿಸಿ ಹೊಕ್ಕು ತಲೆಗಳನು ಚಂಡಾಡಿದ ವಿ
ನೋದವನೇನ ಬಣ್ಣಿಸುವೆ (೧೧-೪೧)

ಹೀಗೆ ಕುಮಾರರಾಮನ ಸೈನ್ಯದಲ್ಲಿ ಜಾತಿಭೇದವಿಲ್ಲದೆ ಎಲ್ಲರೂ ಶತ್ರುಗಳನ್ನು ಸೆರೆಹಿಡಿಯುತ್ತಿದರು. ಗಡಿಯ ಕಾವಲು ಕಾಯುವ ನಾಯಕರ ಕಾಟನಾಯಕ ಕಡೆಯಕಲ್ಲ ಹತ್ತಿರ ವೈರಿಗಳನ್ನು ಎದುರಿಸಿದರೆ, ಮಲೆಯ ಕಾವಲು ಕಾಯುವ ಹೊಲೆಯರ ಹೊನ್ನುಗ ಕೊಂಡುಗಲ್ಲನೇರಿ ವೈರಿಗಳನ್ನು ಕೊಂದು, ಆನೆ ಕುದುರೆ ಸೈನಿಕರನ್ನು ಸೆರೆಹಿಡಿದು ಕುಮಾರರಾಮನಿಗೆ ಒಪ್ಪಿಸಿದ ಮಾಹಿತಿಯನ್ನು ತಿಳಿಯಬಹುದು. ಹಾಗೆಯೇ ಒಕ್ಕಲಿಗರ ಮುದ್ದನು ರಣರಂಗದಲ್ಲಿ ತಾನೂ ಸಹ ಯುದ್ದದಲ್ಲಿ ಬಾಗಿಯಾಗಿ ತುರುಕರನ್ನು ತುಂಡರಿಸಿದ. ಅದೇ ರೀತಿ ಮಾದಿಗರ ಹಂಪನು ಅಸಂಖ್ಯಾತ ಸೈನಿಕರನ್ನು ಕೊಂದ ಮಾಹಿತಿಯನ್ನು ತಿಳಿಯಬಹುದು. ಹಾಗಾಗಿ ಕುಮಾರರಾಮನ ಸೈನ್ಯದಲ್ಲಿ ಹಲವು ಜಾತಿ ಸಮುದಾಯದ ಸೈನಿಕರು ರಾಜ್ಯದ ಆಪತ್ಕಾಲದಲ್ಲಿ ಪಾಲ್ಗೊಂಡು ರಾಜ್ಯದ ರಕ್ಷಣೆಗೆ ಮುಂದಾಗುತ್ತಿದ್ದರೆಂಬ ವಿಷಯ ತಿಳಿದುಬರುತ್ತದೆ.

ಬೂಟಕ ಬೊಮ್ಮಯ್ಯ, ಗುತ್ತಿಯಖಾನ, ಯನುಮಾಲಚಿತ್ತ, ಯರಚೀತುಗಂಗ, ಚಿನುಮದ ಚಿಕ್ಕ, ತಮ್ಮುಗ, ಪೆನುಗೊಂಡ ಪಾಪನಾಯಕರೆಲ್ಲಾ ಸೇರಿ ರಣಧೂಲಖಾನನನ್ನು ಕೊಲ್ಲುತ್ತಾರೆ. ನಂತರ ಕಬ್ಬಿಲನಾಗ, ಹೆಬ್ಬುಲಿ, ಚಿಕ್ಕಬೈಯಣ್ಣ ಅಬ್ಬಿಯ್ಯನಾಯಕರು ಅಬ್ದುಲಖಾನನ್ನು ಕೊಂದರು. ಕುಮ್ಮಟದರಸರ ಸೈನ್ಯದಲ್ಲಿ ಇನ್ನೂ ಯಾವ ಯಾವ ಜಾತಿಯ ಸೈನಿಕರು ಇದ್ದರೆಂಬುದನ್ನು ನೋಡುವುದಾದರೆ, ಅಸಗೊಡ ಬಸವ, ಅಕ್ಕಸಾಲೆರ ಚಿಕ್ಕ, ಬಕ್ಕಲ ಪಾಲ, ಗಾಣಿಗ ಬೊಮ್ಮ, ಕಾಮಗೇತಿಯ ತಿಮ್ಮ, ಒಕ್ಕಲಿಗರ ಮುದ್ದ, ರಕ್ಕಸಮಾದ, ನಲ್ಲೂರ ನಲ್ಲ, ಮಾದಿಗರ ಹಂಪ. ಹೊಲೆಯರ ಹೊನ್ನುಗ ಹೀಗೆ ಎಲ್ಲಾ ಜಾತಿಯ ಸೈನಿಕರು ನೇಮಿಯಖಾನನ ಸೈನ್ಯವನ್ನು ಮುತ್ತಿರುವ ಮಾಹಿತಿ ತಿಳಿದುಬರುತ್ತದೆ.

### ೫.೩.೨. ಬಳುವಳಿ ಪದ್ದತಿ

ಕುಮ್ಮಟದುರ್ಗದ ನಾಯಕರ ಕಾಲದಲ್ಲಿ ಸ್ತ್ರೀಯರಿಗೆ ಹೆಚ್ಚು ಗೌರವವನ್ನು ಕೊಡುತ್ತಿದ್ದರು. ಸ್ತ್ರೀಯರೆಂದರೆ ಅವರಿಗೆ ತಾಯಿಯ ಸಮಾನವಾಗಿ, ಪೂಜ್ಯನೀಯ ಭಾವನೆಯಿಂದ ಕಾಣುತ್ತಿದ್ದರು. ತಮ್ಮ ಸಮಾಜದಲ್ಲಿ ಹೆಣ್ಣು ಮಕ್ಕಳಿಗೆ ಗೌರವವನ್ನು ಸಲ್ಲಿಸುವುದಕ್ಕಾಗಿ ಬಳುವಳಿ ಪದ್ದತಿ ಆಚರಣೆಯಲ್ಲಿತ್ತು. ಹೊಸದಾಗಿ ಮದುವೆಯಾಗಿ ಗಂಡನ ಮನೆ ಸೇರುವ ಹೆಣ್ಣು ಮಕ್ಕಳಿಗೆ ತಮ್ಮ ನೆನಪಿಗಾಗಿ ಯಾವುದಾದರೊಂದು ಹಸು, ಎಮ್ಮೆ, ಕುರಿ, ಮೇಕೆಗಳನ್ನು ಹೆಣ್ಣಿಗೆ ತನ್ನ ತವರು ಮನೆಯವರು ಉಡುಗೊರೆಯಾಗಿ ನೀಡುತ್ತಿದ್ದರು. ಇದನ್ನು ಬಳುವಳಿ ಪದ್ದತಿ ಎನ್ನುತ್ತಿದ್ದರು. ಇಂತಹ ಬಳುವಳಿ ಪದ್ದತಿ ಕುಮ್ಮಟದುರ್ಗದ ನಾಯಕರ ಎಲ್ಲಾ ಕಾಲದಲ್ಲಿ ಆಚರಣೆಯಲ್ಲಿತ್ತು ಎಂಬುದನ್ನು ತಿಳಿಯಬಹುದು.

ಗುತ್ತಿಯ ಜಗದಪ್ಪ ತನ್ನ ಮಗಳನ್ನು ಕುಮಾರರಾಮನಿಗೆ ಕೊಡಲು ಒಪ್ಪಿದಾಗ ಕಂಪಿಲರಾಯ ಇದಕ್ಕೆ ಒಪ್ಪಿಗೆಯನ್ನು ಕೊಡುತ್ತಾನೆ. ಇದರಿಂದ ಜಗದಪ್ಪ ತುಂಬಾ ಸಂತೋಷದಿಂದ ತನ್ನ ಮಂತ್ರಿ ತಿಮ್ಮರಸ ಮತ್ತು ಮಗ ಉತ್ತುಂಗರಾಯನೊಂದಿಗೆ ಮಗಳನ್ನು ಕಳುಹಿಸಿದ. ಮಗಳಿಗೆ ಉಡುಗೊರೆಯಾಗಿ ಮುತ್ತು, ಬಂಗಾರ, ಬಗೆಬಗೆಯ ಆಭರಣಗಳನ್ನು ಉಡುಗೊರೆಯಾಗಿ ಕೊಟ್ಟನು. ಜೊತೆಗೆ ಅಳಿಯನಿಗೆ ಕುದುರೆ, ಆಕಳ ಹಿಂಡು, ಸೆಳೆ ಮಂಚ, ಹಾಲು ಕರೆಯುವ ಎಮ್ಮೆ ಹಿಂಡು ಉಡುಗೊರೆಯಾಗಿ ಕೊಟ್ಟಿರುವ ಮಾಹಿತಿ ದೊರೆಯುತ್ತದೆ.

ಮಗಳಿಗೆ ಕೊಟ್ಟನು ಮುತ್ತು ಬಂಗಾರವ
ಬಗೆಬಗೆ ಆಭರಣಗಳ
ಅಗಣಿವಾದ ಐನೂರು ಉಮ್ಮಳಿಯನು
ಮಗಳು ಮೈದೊಡಿಗೆ ವಸ್ತುಗಳು (೭-೧೩)

ಅಳಿಯಗ ಕೊಟ್ಟನು ಮಿಗೆ ಐದು ತೇಜಿಯ
ಬಳುವುಲಿ ಕೊಟ್ಟಾಕಳ ಹಿಂಡ
ಸೆಳೆಮಂಚ ಕರೆವೆಮ್ಮೆ ಹಿಂಡನ ಹೊಡೆಸಿದ
ಒಳಿತಾಗಿ ಕೊಟ್ಟ ಜಗದಪ್ಪ (೭-೧೪)

### ೫.೩.೩. ಹರಕೆ ಪದ್ದತಿ

ಕುಮ್ಮಟದರಸರ ಕಾಲದಲ್ಲಿ ಹರಕೆ ಪದ್ದತಿ ಅಸ್ತಿತ್ವದಲ್ಲಿ ಇರುವುದು ತಿಳಿದುಬರುತ್ತದೆ. ಹರಕೆ ಪದ್ಧತಿ ಎಂದರೆ, ತಾವು ಬೇಡಿದ ವರಗಳನ್ನು ದೇವರು ಪೂರೈಸಿದರೆ ದೇವರಿಗೆ ಸಂತುಷ್ಟಿಗೊಳಿಸಲು ಅನೇಕ ಕೊಡುಗೆಗಳನ್ನು ನೀಡುತ್ತಿದ್ದರು. ಇದನ್ನು ಹರಕೆ ಪದ್ಧತಿ ಎನ್ನುವರು. ಇಂತಹ ಪದ್ಧತಿ ಈ ಅರಸರ ಕಾಲದಲ್ಲಿ ಆಚರಣೆಯಲ್ಲಿರುವುದನ್ನು ಕಾಣಬಹುದು.

ಕಂಪಿಲರಾಯ ಕುಮಾರರಾಮಯ್ಯನನ್ನು ಕರೆದು ನಿನ್ನಲ್ಲಿ ಸಾಮರ್ಥ್ಯವಿದ್ದರೆ, ಓರುಗಲ್ಲ ರುದ್ರನ ಮಗ ಎಪ್ಪತ್ತಿರಾಜನ ಕುದುರೆ ಬೊಲ್ಲನನ್ನು ಗೆದ್ದುತಾ ಎಂದು ಮೂದಲಿಸಿದಾಗ ರಾಮಯ್ಯ ಓರುಗಲ್ಲಿಗೆ ಹೋಗಲು ಸಿದ್ದನಾಗಿ ತನ್ನ ತಾಯಿ ಹರಿಯಾಲದೇವಿ ಆರತಿ ಎತ್ತಿ ಮನ್ನೆಯರೊಂದಿಗೆ ಓರುಗಲ್ಲಿಗೆ ಪ್ರಯಾಣ ಬೆಳೆಸಿದ. ಎಪ್ಪತ್ತಿರಾಜ ಕುದುರೆ ಬೊಲ್ಲನನ್ನು ನೆಲಮಾಳಿಗೆಯಲ್ಲಿಟ್ಟು ಉಕ್ಕಿನ ಕಡಲೆ ಮೇಯಿಸುತ್ತಿದ್ದ. ಈ ಕುದುರೆ ತರಲು ಹೊರಟಿದ್ದ ಕುಮಾರರಾಮ ಇಂದ್ರಕಾಲದಿಂದ ರಹುರೇಕಮರಕ್ಕೆ ನಂತರ ಕಂದರ ಮಾಳ, ಕರಾಳ ದೇಶಗಳಿಗೆ ಮಾದ್ರಿಗಿರಿಗೆ ಬಂದರೂ ಅಲ್ಲಿಂದ ರುದ್ರನಗರಿ, ಮೈಲಾಪುರ, ಧರ್ಮಾವತಿ ಮಾರ್ಗವಾಗಿ ನಲ್ಲೂರಪುರ, ಉದ್ದುರಪುರಗಳಿಗೆ ಬಂದು ಅಲ್ಲಿಯ ಶರಣರ ಮಠ ಸೇರಿ ತನಗೆ ಬೊಲ್ಲ ಕೈ ಸೇರಿದರೆ ಶೂಲದ ಹಬ್ಬ ಮಾಡಿಸುವೆ ಎಂದು ಅಲ್ಲಿಯ ಗುಂಡಬ್ರಹ್ಮಯ್ಯ ದೇವರಿಗೆ ಹರಕೆ ಹೊತ್ತಿರುವ ಮಾಹಿತಿಯನ್ನು ತಿಳಿಯಬಹುದು.

ಶರಣರ ಮದವನು ಸೇರಿದ ರಾಮಯ್ಯ
ಉರತರ ಹರಕೆಯನಾಂತು
ಪುರದೋರುಗಲ್ಲ ಪ್ರತಾಪರುದ್ರನ ತೇಜಿ
ಭರದಿಂದಲೆನ್ನ ಸೇರಿದರೆ (೮–೩೮)

ದೊರೆ ರಾಮನಾಥನು ಗುಂಡ ಬ್ರಹ್ಮಯ್ಯಗೆ
ಊರುಕರವಾದ ಶೂಲವನು
ಸರಿಮಿಗಿಲಪ್ರತಿ ಹರುಷದಿ ಪೂಜೆಯ
ಧರೆಯೊಳಪ್ರತಿ ಮಾಡಿಸುವೆನು (೮–೩೯)

ಹೀಗೆ ಕುಮಾರರಾಮನು ತನಗೆ ಇಷ್ಟವಾದ ಕುದುರೆ ಸಿಕ್ಕಿದರೆ ಹರಕೆಯನ್ನು ತೀರಿಸುವುದಾಗಿ ಗುಂಡಬ್ರಹ್ಮಯ್ಯ ದೇವರಿಗೆ ಹರಕೆಯನ್ನು ಮಾಡಿಸುತ್ತೇನೆ ಎಂದು ಹೇಳುತ್ತಾನೆ.

ರತ್ನಾಜಿಯು ಕುಮಾರರಾಮ ತನಗೆ ಬೇಕೆಂದು ಬಯಸಿದಾಗ ಚೆಂಡಿನಾಟವನ್ನು ಆಡುವಾಗ ಚೆಂಡಿನಾಟದ ಗದ್ದಲದ ಕೂಗು ರಾಜಧಾನಿಯಲ್ಲಿ ಪ್ರತಿಧ್ವನಿಸಿತು. ರತ್ನಾಜಿಯ ಸೂಚನೆಯಂತೆ ಸಂಗಿ ಹೊರಬಂದು ನೋಡಿ ರಾಮನ ಆಟದ ಸುದ್ದಿ ತಲುಪಿಸಿದಳು. ತಾನು ರಾಮನನ್ನು ನೋಡಬೇಕೆಂದು ಹೊರಬಂದು ಸಿಂಗರಿಸಿಕೊಂಡು ತಲೆಬಾಚಿ, ಬೈತಲೆ ತೆಗೆದು ನುಣ್ಣಗೆ, ತುರುಬ ಸಿಕ್ಕಿಸಿದಳು. ಕಟ್ಟಿದ ನಿಲುಗನ್ನಡಿಯ ಮುಂದೆ ನಿಂತು ಕಟ್ಟಾಳು ರಾಮನಿಗೆ ತಾನು ತಕ್ಕವಳು ಎಂದು ನಕ್ಕಳು. ಹೀಗೆ ಸಿಂಗಾರವಾಗಿ ಸಂಗಿಯೊಡನೆ ಉಪ್ಪರಿಗೆ ಏರಿದಳು. ರಾಮನನ್ನು ವಶಮಾಡಿಕೊಳ್ಳುವ ಸಲುವಾಗಿ ಚತ್ತಜ ಜಯತು, ತ್ರಯಂಬಕ ಜಯತು ಎಂದು ಪ್ರಾರ್ಥಿಸಿದಳು.

ರಾಮನು ವಶವಾದರೆ ಅನೇಕ ಹರಕೆಗಳನ್ನು ತೀರಿಸುವುದಾಗಿ ಹರಕೆ ಮಾಡಿಕೊಳ್ಳುವ ಘಟನೆಯನ್ನು ಸಾಂಗತ್ಯಗಳ ಮುಖಾಂತರ ತಿಳಿಯಬಹುದು.

ಚೆನ್ನಿಗರಾಮನ ಚೆಂಡು ಎನ್ನ ಬಳಿಗೆ
ಭಿನ್ನವಿಲ್ಲದೆ ಬೀಳಲೊಡನೆ
ಉನ್ನತ ಊರ ಮುಂದಣ ಮಾರಮ್ಮಗೆ
ಮುನ್ನೂರ ಕೋಣ ಹೊಯ್ಯುವೆನು (೧೬-೨೪)

ಮಾನವ ರಾಮನಾಡುವ ಮುತ್ತಿನ ಚೆಂಡು
ಮೌನದಲೆನಗೆ ಸೇರಿದರೆ
ಬೋನಗುರಿಯ ಹೊಯ್ಯುವೆನು ಮನದಣಿಯಲಿ
ಮನದಣಿಯಲಿ ಹಾರುಗೋಳಿಯ ಬಿಡಿಸುವೆನು (೧೬-೨೫)

**೫.೩.೪. ದೇವದಾಸಿ ಪದ್ಧತಿ**

ಕುಮ್ಮಟದುರ್ಗದ ನಾಯಕರ ಕಾಲದಲ್ಲಿ ರಂಗಮಂಟಪದ ಜೊತೆಗೆ ಸೂಳೆಗೇರಿ ಇದ್ದುದರ ಪ್ರಸ್ತಾಪ ಬರುತ್ತದೆ. ಇವರ ಕೇರಿಯು ಬಹುಮುಖ್ಯವಾಗಿ ಸೈನಿಕರು ಯುದ್ಧದಂತಹ ಸಂದರ್ಭದಲ್ಲಿ ಹೆಂಡತಿಯರನ್ನು ಬಿಟ್ಟು ತಿಂಗಳುಗಟ್ಟಲೆ ಮನೆಯ ಹೊರಗಡೆ ಇರುತ್ತಿದ್ದುದರಿಂದ ಅವರ ಕಾಮತೃಷೆಯನ್ನು ತೀರಿಸಿಕೊಳ್ಳಲು ಈ ಕೇರಿಯ ಮೊರೆ ಹೋಗುತ್ತಿದ್ದರು. ವೇಶ್ಯಾವಾಟಿಕೆಯು ಸಮಾಜದಲ್ಲಿ ಒಂದು ವರ್ಗವಾಗಿದ್ದಿತು. ಸಮಾಜದಲ್ಲಿ ಈ ಪದ್ಧತಿಯನ್ನು ಸ್ವೀಕರಿಸದಿದ್ದರೂ ರಾಜರು ಸೈನಿಕರು ಈ ಕೇರಿಯಲ್ಲಿ ಹೋಗಿ ಬರುತ್ತಿದ್ದರು ಎಂಬುದನ್ನು ತಿಳಿಯಬಹುದು.

ಕುಮಾರರಾಮನ ಸ್ನೇಹಿತರೆಲ್ಲರೂ ಸೇರಿ ಮುತ್ತಿನ ಚೆಂಡಿನ ಆಟ ಆಡಲು ಸೇರುತ್ತಾರೆ. ಅದರಲ್ಲಿ ಗಾಣಿಗ ಬೊಮ್ಮ, ಕುಂಬಾರ ಸೋಮ, ಭಟ್ಟರ ಭೀಮ, ಚಿಕ್ಕ ಒಕ್ಕಲಿಗರ ಮುದ್ದ, ಅಕ್ಕಸಾಲಿಯ ಚಿಕ್ಕ ಇವರ ಜೊತೆಗೆ ಅನೇಕ ಸ್ನೇಹಿತರು ಜೊತೆಗೂಡಿ ಅರಮನೆಯ ಮೈದಾನದಲ್ಲಿ ಮುತ್ತಿನ ಚೆಂಡಿನ ಆಟ ಆಡುತ್ತಿರುತ್ತಾರೆ. ಅಂತಹ ಸಂದರ್ಭದಲ್ಲಿ ರತ್ನಾಜಿಯು ಅರಮನೆಯ ಬಯಲಿಗೆ ಹೋದಾಗ ಚೆಂಡಿನಾಟವನ್ನು ನೋಡಲು ಅನೇಕ ವೇಶ್ಯೆಯರ ಸಮೂಹ ಅಲ್ಲಿ ನೆರೆದಿರುವ ಮಾಹಿತಿಯನ್ನು ತಿಳಿಯಬಹುದು.

ಲೋಲ ರಾಮಯ್ಯ ಚೆಂಡಾಡುವ ಬಯಲಿಗೆ
ಸೂಳೆಯರೆಲ್ಲ ಶೃಂಗರಿಸಿ
ಲೀಲೆಯಿಂದಲಿ ಹೊರಟು ಬಂದರು ಬೇಗದಿ
ಮೂಲೋಕ ಜನರು ಕಂಗೆಡಲು (೧೫-೧೦೪)

ಸೂಳೆ ಹಂಪಾಜಿ ಬಂದಳು ಬೆಂಗದಲಿಂದ
ಮೇಲೆ ರಹುಡೆಯನು ಹೊಡೆಸುತಲಿ
ಬಾಳ ಪಂಥವನಾಡುವ ವಿಟರೆದೆಗೊಂದು
ಲಾಳಸರದ ಬೊಂಬೆಯಂತೆ (೧೫-೧೦೫)

ಕಳಪಳಿಸುವ ಕಾಂತಿ ಹೊಳೆವುತ ನಡೆದಳು
ಲಲನೆಯರೆಡಬಲದಲ್ಲಿ
ಹೊಳೆಯ ಹೊನ್ನೂರ ರಾಮಾಜಿ ಬಂದಳು ಬೇಗ
ಗೆಲವಿಂದ ಚೆಂಡ ನೋಡುವರೆ (೧೫-೧೦೬)

ಪಟ್ಟಾವಳಿಯ ಸೀರೆಯುಟ್ಟು ಆಭರಣವ
ತೊಟ್ಟು ಶೃಂಗಾರದಿ ನಡೆದು
ಕೊಟ್ಟೂರ ಕಾಮಾಜಿ ಬಂದು ನಿಂದಳು ಬೇಗ
ದಿಟ್ಟ ರಾಮುಗನ ನೋಡುವರೆ (೧೫-೧೧೨)

ಮಸುರಿ ಬಣ್ಣದ ಸೀರೆಹೊಸ ಮುತ್ತಿನೋಲೆಯು
ಕುಸುಮಶರನ ಸೋಲಿಸುತ
ಹಸುರು ಕುಪ್ಪಸವು ಕಸ್ತೂರಿ ನೊಸಲೊಳಗಿಟ್ಟು
ಹೊಸಪ್ಯಾಟೆಯ ಜಂಜುಲಿಂಗಿ (೧೫-೧೨೧)

ಹೀಗೆ ಕುಮಾರರಾಮ ಮತ್ತು ಆತನ ಸ್ನೇಹಿತರು ಆಡುವ ಚೆಂಡಿನಾಟ ನೋಡಲು ಸೂಳೆ ಹಂಪಾಜಿ, ಹೊಳೆ ಹೊನ್ನೂರ ರಾಮಾಜಿ, ಇಕ್ಕೇರಿ ದುರ್ಗಾಯಿ ಭದ್ರಿ, ಕೊಟ್ಟೂರ ಕಾಮಾಜಿ, ಬಾದಾಮಿ ಬಸವಿ, ಕುಂದುರ್ಪೆ ಕೊಂಡಾಜಿ, ಬೇಲೂರ ಬೆನಕಾಜಿ, ಚೆನ್ನಪಟ್ಟಣದ ಚೆನ್ನಾಜಿ, ಚಂದ್ರಗಿರಿಯ ಚೆನ್ನೆ, ಹೊಸಪ್ಯಾಟೆಯ ಜಂಬುಲಿಂಗಿ, ವಸಂತಪುರದ ಮಲ್ಲಾಜಿ ಈ ವೇಶ್ಯೆಯರೆಲ್ಲರೂ ಚೆಂಡಿನಾಟವನ್ನು ನೋಡಲು ಅಲ್ಲಿ ನೆರೆದಿದ್ದರು ಎಂಬುದನ್ನು ಕುಮಾರರಾಮಯ್ಯನ ಸಾಂಗತ್ಯದಲ್ಲಿ ಉಲ್ಲೇಖಿತವಾಗಿದೆ. ಬಹುಶಃ ಕುಮ್ಮಟದರಸರ ಕಾಲಾವಧಿಯಲ್ಲಿದ್ದ ವೇಶ್ಯಾ ಪದ್ಧತಿಯು ವಿಜಯನಗರ ಕಾಲದಲ್ಲಿ ದೇವದಾಸಿ ಪದ್ಧತಿಯಾಗಿ ಮಾರ್ಪಾಡು ಹೊಂದಿರುವ ಸಾಧ್ಯತೆ ಇದೆ. ಹಾಗೆಯೆ ಇಲ್ಲಿನ ಸಮಾಜದ ಪ್ರಭಾವ ವಿಜಯನಗರ ಸಾಮ್ರಾಜ್ಯದ ಸಮಾಜದ ಮೇಲೂ ಹಾಗಿದೆ.

**೫.೩.೫. ಜೂಜು ಪದ್ಧತಿ (ವ್ಯಸನ)**

ವೇದಗಳು, ರಾಮಾಯಣ, ಮಹಾಭಾರತದಂತಹ ಕಾವ್ಯಗಳ ಕಾಲದಿಂದಲೂ ಜೂಜು ಆಡುವ ಪದ್ಧತಿ ಇದ್ದಿತು. ರಾಜ ಮಹಾರಾಜರು, ಮಂತ್ರಿಗಳು ತಮ್ಮ ಬುದ್ಧಿಶಕ್ತಿಯ ಪರೀಕ್ಷೆಗಾಗಿ ಬೇಸರದ ಸಮಯದಲ್ಲಿ ಅನೇಕ ಆಟಗಳನ್ನು ಆಡುತ್ತಿದ್ದರು. ಆಡುವಾಗ ಹಣಕ್ಕೆ ಆಸ್ತಿ-ಪಾಸ್ತಿ, ರಾಜ್ಯ ಎಲ್ಲವನ್ನು ಇಡುತ್ತಿದ್ದರು. ಎಷ್ಟೋ ಸಲ ರಾಜರು ಜೂಜಿನಲ್ಲಿ ತಮ್ಮ ಸಾಮ್ರಾಜ್ಯವನ್ನೇ ಕಳೆದುಕೊಂಡು ವನವಾಸ ಅನುಭವಿಸಿದ ಸಂದರ್ಭಗಳು ದಾಖಲಾಗಿರುವುದು ಕಂಡುಬರುತ್ತದೆ.

ಜೂಜಿನಲ್ಲಿ ಸಾಮಾನ್ಯವಾಗಿ ಪಗಡೆಯಾಟ, ನೆತ್ತ, ಚೆಂಡಿನಾಟಗಳನ್ನು ಆಡುತ್ತಾರೆ. ಜೂಜನ್ನು ಆಡುವಾಗ ಸೋತವರು ಏನೆಲ್ಲಾ ಕಷ್ಟಗಳನ್ನು ಅನುಭವಿಸಿರುವ ಸಾಕಷ್ಟು ಉದಾಹರಣೆಗಳನ್ನು

ನೋಡಬಹುದು. ಕೃತ ಯುಗದಲ್ಲಿ ಕಾರ್ತವೀರ್ಯನನ್ನು, ದ್ವಾಪರಯುಗದಲ್ಲಿ ಪಾಂಡವರು, ಕೌರವರ ಕುತಂತ್ರದಿಂದ ಪಗಡೆಯಾಟದಲ್ಲಿ ರಾಜ್ಯವನ್ನು, ಸಂಪತ್ತನ್ನು ಸೋತು ಕೊನೆಗೆ ದ್ರೌಪದಿಯನ್ನು ಪಣಕ್ಕಿಟ್ಟು ಸೋತು, ಎಲ್ಲವನ್ನು ಕಳೆದುಕೊಂಡ ನಂತರ ವನವಾಸ ಆರಂಭಿಸಿದರು. ಹೀಗೆ ಜೂಜು ಆಟದಿಂದ ಅನೇಕ ಸಾಮ್ರಾಜ್ಯಗಳೇ ನಾಶವಾಗಿರುವ ಉದಾಹರಣೆಗಳನ್ನು ಕಾಣಬಹುದು.

ಕುಮ್ಮಟದುರ್ಗದ ನಾಯಕರ ಕಾಲದಲ್ಲಿ ಜೂಜು ಪದ್ಧತಿ ಆಚರಣೆಯಲ್ಲಿತ್ತು. ಕುಮಾರರಾಮ ತನ್ನ ತಂದೆಯಾದ ಕಂಪಿಲರಾಯನೊಡನೆ ಬೇಟೆಗೆ ಹೋಗದೆ ಅರಮನೆಯಲ್ಲಿಯೇ ಉಳಿದುಕೊಂಡು ನೀರಾಟವಾಡಲು ಬಯಸಿ ತನ್ನ ಸಂಗಡಿಗರಾದ ಹಂಪಿಯ ಹಂಪರಾಜು, ಕಂಪರಾಗ, ಸಂಪಿಗೆರಾಯ, ಸಿಂಗಿರಾಜ, ಹಡಪದ ಬೊಲ್ಲುಗ ಇವರೆಲ್ಲರೊಂದಿಗೆ ಪರಸ್ಪರರು ಮೇಲೆ ನೀರು ಎರಚಿಕೊಂಡು ಸಂತೋಷಪಟ್ಟು ಅರಮನೆಗೆ ಬರುತ್ತಾನೆ. ಮಗನ ಆಗಮನ ನೋಡಿದ ಹರಿಯಾಲದೇವಿ ಸಂತೋಷಪಡುತ್ತಾಳೆ.

"ನೆತ್ತಮ ಪಗಡೆ ಜೂಜು ಆಡಿದೇವು ಹೊತ್ತು ಹೋಗುತ್ತಿಲ್ಲ
ಅಟವಾಡಲು ಮುತ್ತಿನ ಚೆಂಡು ಕೊಡು"[೪೩]

ಎಂದು ತನ್ನ ತಾಯಿಯನ್ನು ಕೇಳುತ್ತಾನೆ. ಹೀಗೆ ಪಗಡೆ ಆಟ ನೆತ್ತನಾಟ, ಜೂಜುಗಳು ಅಂದಿನ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದವು ಎಂಬುದನ್ನು ತಿಳಿಯಬಹುದು.

### ೫.೩.೬ ಕಾನೂನು ವ್ಯವಸ್ಥೆ

ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರ ಪರಿವಾರ ಮತ್ತು ಪರಿಸರದ ಸಂಸ್ಕೃತಿಗಳೇ ವಿಭಿನ್ನವಾದವು. ಇವರ ಕಾಲಾವಧಿಯಲ್ಲಿ ಉನ್ನತ ಸ್ಥಾನಮಾನಗಳನ್ನು ಗಳಿಸಲು ರಾಜಧರ್ಮವೂ ಅಷ್ಟೇ ಮುಖ್ಯವಾಗಿತ್ತು. ರಾಜಧರ್ಮ ಎಂದರೆ ರಾಜಸತ್ತೆ ಯುಗದ ವೀರತನಕ್ಕೆ ಮೆರುಗನ್ನು ನೀಡುವಂತದ್ದಾಗಿತ್ತು. ವೀರಭೋಜ್ಯಾ ವಸುಂಧರಾ ಎನ್ನುವ ಹಾಗೆ ಆಯಾ ರಾಜ್ಯದ ರಾಜನ ತೋಳು ಬಲದ ಮೇಲೆ ಆತನ ರಾಜ್ಯದ ಏಳಿಗೆ, ಉನ್ನತಿ, ಸರ್ವ ಅಭಿವೃದ್ಧಿಗಳೂ ನಿಂತಿರುತ್ತವೆ. ಹಾಗೆಯೇ ರಾಜ್ಯಗಳು ನ್ಯಾಯ, ಅನ್ಯಾಯಗಳನ್ನು ನೀಯತ್ತಿನಿಂದ ತುಲನೆಮಾಡುವ ನ್ಯಾಯಿಕ ಕೇಂದ್ರಗಳಾಗಿರಬೇಕಾಗುತ್ತದೆ. ಹೀಗಾಗಿ ರಾಜನು ನ್ಯಾಯ ಅನ್ಯಾಯಗಳನ್ನು ಅಪರಾಧಿ, ನಿರಪರಾಧಿಗಳನ್ನು ಗುರ್ತಿಸುವ ಹರಿಕಾರನಾಗಿರಬೇಕು. ಆಗಲೇ ಒಂದು ರಾಜ್ಯಕ್ಕೆ ಬಲಿಷ್ಠ ರಾಜನಾಗಿ ಆಳ್ವಿಕೆ ಮಾಡಲು ಮಾರ್ಗವನ್ನು ಒದಗಿಸುತ್ತದೆ. ನ್ಯಾಯ ಅನ್ಯಾಯಗಳನ್ನು ನಿರ್ಧರಿಸಲು ರಾಜನು ಎಷ್ಟು ಮುಖ್ಯವೋ ರಾಜನು ರೂಪಿಸುವ ರಾಜ್ಯದ ಒಂದು ಅಂಗವಾಗಿರುವ ನ್ಯಾಯ ವ್ಯವಸ್ಥೆಯೂ ಅಷ್ಟೇ ಪ್ರಾಮುಖ್ಯತೆ ಪಡೆದಿರುತ್ತದೆ. ಇಂತಹ ನ್ಯಾಯ ಪಂಚಾಯಿತಿಗಳು ಮಧ್ಯಕಾಲೀನ ಪಾಳೆಯಗಾರರ ಕಾಲಾವಧಿಯಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದ್ದವು ಎಂದರೆ ತಪ್ಪಾಗಲಾರದು.

ಕುಮ್ಮಟದರಸರ ಕಾಲಾವಧಿಯಲ್ಲಿ ನ್ಯಾಯ ಪಂಚಾಯ್ತಿಯ ಚರ್ಚೆಗಳು, ಚಿಂತನೆಗಳು, ತುಂಬಾ ಮುಖ್ಯವಾಗಿದ್ದವು. ಇಲ್ಲಿನ ಚಿಂತನೆಗಳು ನಿರ್ಣಾಯಕ ಅಭಿಪ್ರಾಯಗಳು ರಾಜನ ಆದರ್ಶ

ನಿಲುವುಗಳನ್ನು ಪ್ರತಿಬಿಂಬಿಸುವಂತಿದ್ದವು. ಕುಮ್ಮಟದರಸರ ನ್ಯಾಯಾಡಳಿತದ ಮುಖ್ಯ ಗುರಿ ದುಷ್ಟನಿಗ್ರಹ ಶಿಷ್ಟ ಪರಿಪಾಲನೆಯಾಗಿದೆ. ಇವರ ಸಾಮ್ರಾಜ್ಯದ ಕೇಂದ್ರ ಸ್ಥಳವೆ ಮುಖ್ಯ ನ್ಯಾಯಸ್ಥಳವಾಗಿತ್ತು. ಈ ಅರಸರೆ ಅಥವಾ ರಾಜನೆ ಅಂತಿಮ ನ್ಯಾಯಧೀಶರಾಗಿದ್ದರು. ಧರ್ಮಶಾಸ್ತ್ರ ಮತ್ತು ಸಾಮಾಜಿಕ ಕುಲಾಚಾರಗಳನ್ನು ಗಮನದಲ್ಲಿಟ್ಟುಕೊಂಡು ಅರಸನು ನ್ಯಾಯ ತೀರ್ಮಾನವನ್ನು ಮಾಡುತ್ತಿದ್ದನು. ತ್ವರಿತ ನ್ಯಾಯವಿಧಾನ ಪದ್ಧತಿಯು ಹೆಚ್ಚು ಜನಪ್ರಿಯವಾಗಿತ್ತು. ಅಲ್ಲದೆ ಸಂಸ್ಥಾನದ ನ್ಯಾಯ ವ್ಯವಸ್ಥೆಯಲ್ಲಿ ಮುಖ್ಯ ಪಾತ್ರ ರಾಜನು ನಿರ್ವಹಿಸುತ್ತಿದ್ದನು. ಕಂಪಿಲರಾಯನ ಕಿರಿಯ ರಾಣಿ ಹಾಗೂ ಕುಮಾರರಾಮನ ಮಲತಾಯಿಯಾದ ರತ್ನಾಜಿಯು, ರಾಮನು ತನಗೆ ವಶವಾಗಲಿಲ್ಲವೆಂದು ರಾಮ ತನ್ನ ಮಾನಾಪಹರಣ ಮಾಡಲು ಬಂದುದಾಗಿ ಅಪವಾದ ಹೊರಿಸಿದಾಗ ಕಂಪಿಲರಾಯನು ಮಗ ಎನ್ನುವುದನ್ನು ಮರೆತು ತನಗೆ ನ್ಯಾಯವೇ ಮುಖ್ಯವೆನ್ನುವಂತೆ ಮಗನನ್ನು ಶಿರಚ್ಛೇದ ಮಾಡಲು ಆಜ್ಞಾಪಿಸುವ ನ್ಯಾಯ ವಿಧಾನವನ್ನು ಕಾಣಬಹುದು.

'ಮನದ ಮೋಹದ ಗಿಣಿಯೆ ಗಣಿಸದಲೆ ಮಾತಾಡ
ಮನನೊಂದ ಕಾರಣವ ನನಗ್ಹೇಳ! ರತ್ನಾಲಿ
ಚಣದಾಗ ಹೊಡೆವೆ ಹಣ ಕರಣವ'[೪೪]

ಇಲ್ಲಿ ಕಂಪಿಲರಾಯ ಬೇಟೆಗೆ ಹೋಗಿ ಬಂದಾಗ ರತ್ನಾಜಿಯು ಮೌನವಾಗಿರುವುದಕ್ಕೆ ತನ್ನ ಮನಸ್ಸು ನೊಂದಿರುವುದಕ್ಕೆ ಕಾರಣವನ್ನು ಹೇಳಿದರೆ ಈಗಲೇ ಪರಿಹಾರ ಮಾಡುವುದಾಗಿ ಕಂಪಿಲರಾಯ ಹೇಳತ್ತಾನೆ. ಈ ಸಂದರ್ಭವನ್ನೇ ಕಾಯುತ್ತಿದ್ದ ರತ್ನಾಜಿಯು ಕುಮಾರರಾಮನ ಮೇಲೆ ಆಪಾದನೆ ಹೊರಿಸುತ್ತಾಳೆ.

'ನಮಿಸಿದೆನು ಕೇಳದಲೆ ಕೊಮರಾಮ ಕೈಹಿಡಿದ
ಧುಮಕೀಯ ಮಾಡಿ ಕಾಮಿಸಿದ । ರಕ್ಕಸನ
ಗಮನಿಸ್ದೆ ಕರೆಸಿ ತಲೆ ಹೊಡಿಸು॥'[೪೫]
ಕಾದ ಕಂಪಿಲಿರಾಯ, ಬೇದವೆನರಿಯದಲೆ
ಭೇದಿಸಲು ಸಿರವ ಹೇಳಿಸಿದ । ಮಗರಾಮ ಸಾದು ಶಿವನೆಂದು ತಲೆಗೊಟ್ಟ ॥[೪೬]

ರತ್ನಾಜಿಯು ಕುಮಾರರಾಮನ ಮೇಲೆ ಕೈಹಿಡಿದು ಪೀಡಿಸಿದ ಎಂದು ಕಂಪಿಲರಾಯನಿಗೆ ಹೇಳಿದ ತಕ್ಷಣ ತಡಮಾಡದೆ ತನಗೆ ನ್ಯಾಯವೆ ಮುಖ್ಯ ಎನ್ನುವ ತೀರ್ಮಾನಕ್ಕೆ ಕಟ್ಟು ಬಿದ್ದು ಮಗನ ಶಿರಚ್ಛೇದ ಮಾಡಲು ಆಜ್ಞಾಪಿಸುತ್ತಾನೆ. ಕಂಪಿಲರಾಯನು ಇಲ್ಲಿ ನ್ಯಾಯತೀರ್ಮಾನದಲ್ಲಿ ಎಡವಿದನಾದರೂ ಶಿಕ್ಷೆ ನೀಡುವ ಅಂತಿಮ ನಿರ್ಧಾರದಲ್ಲಿ ನ್ಯಾಯ ಪಂಚಾಯ್ತಿಯ ಮುಂದೆ ಮಗ ಸಂಬಂಧಗಳಾವುವು ಲೆಕ್ಕಕ್ಕೆ ತೆಗೆದುಕೊಳ್ಳದೆ ಎಲ್ಲೂರೂ ಒಂದೇ, ತಪ್ಪು ಮಾಡಿದ ಪ್ರತಿಯೊಬ್ಬನೂ ಶಿಕ್ಷೆಗೆ ಗುರಿಯಾಗಲೇಬೇಕು ಎಂಬ ನಿಲುವು ಕಂಪಿಲರಾಯನಿಗೆ ಆದರ್ಶಪ್ರಾಯವಾಗಿತ್ತು. ಶಿಕ್ಷೆಯು ಸರ್ವರಿಗೂ ಅನ್ವಯವಾಗುತ್ತಿತ್ತು. ಹಾಗೆಯೇ ಅಷ್ಟೇ ಕಠಿಣವಾಗಿಯೂ ಇರುತ್ತಿತ್ತು. ಕಂಪಿಲರಾಯನಿಗೆ

ತನ್ನ ಕಿರಿಯ ಹೆಂಡತಿ ರತ್ನಾಜಿಯು ತಪ್ಪಿತಸ್ಥಳೆಂದು ಅರಿವಾದಾಗ ಮಡದಿಯೆಂದು ಲೆಕ್ಕಿಸದೆ ಕಠಿಣ ಶಿಕ್ಷೆಯನ್ನು ಕೊಟ್ಟನು ಎಂಬ ವಿಷಯ ನಂಜುಂಡ ಕವಿಯ ರಾಮನಾಥ ಚರಿತೆಯಲ್ಲಿ ಪ್ರಸ್ತಾಪಿಸಲಾಗಿದೆ. 'ಕಂಪಿಲರಾಯನಿಗೆ ರತ್ನಾಕ್ಷಿಯ ಕಾರಸ್ಥಾನದ ಅರಿವಾಗಲು ಆಕೆಯನ್ನು ಸುಣ್ಣದ ಗುಮ್ಮಿಯಲ್ಲಿ ಹಾಕಿ ಸುಡಿಸುತ್ತಾನೆ'.[೪೭] ಎನ್ನುವ ವಿಚಾರವನ್ನು ಗಮನಿಸಿದಾಗ ಕಂಪಿಲರಾಯನ ನ್ಯಾಯಿಕ ತೀರ್ಮಾನವನ್ನು ತಿಳಿಯಬಹುದು. ಅನ್ಯಾಯ ಮಾಡಿದವರಿಗೆ, ಅಪರಾಧಿಗಳಿಗೆ ತಲೆ ಕಡಿಯುವುದು, ಸುಣ್ಣದ ಗುಮ್ಮಿಯಲ್ಲಿ ಹಾಕಿ ಸುಡಿಸುವುದು, ಅಂತವರ ಹೆಣವನ್ನು ಕತ್ತೆಕಾಲಿಗೆ ಕಟ್ಟಿ ಎಳೆಸುವುದು, ಈ ರೀತಿಯ ಶಿಕ್ಷೆಗಳನ್ನು ನೀಡುವ ಮೂಲಕ ನಿರಪರಾಧಿಗಳಿಗೆ ನ್ಯಾಯವನ್ನು ಒದಗಿಸಿಕೊಡುವ ಮಹಾನ್ ಕಾರ್ಯಗಳು ಕುಮ್ಮಟದರಸರಿಂದ ನಡೆಯುತ್ತಿದ್ದವು. ಅರಸನಿಗೆ ಮೊರೆಯಿಟ್ಟು ರಕ್ಷಿಸು ಎಂದು ಬಂದವರು ಶತ್ರುಗಳೇ ಆಗಲಿ, ಅವರಿಗೆ ಭಾಷೆ ನೀಡಿದ ಮೇಲೆ ಪ್ರಾಣದ ಹಂಗನ್ನು ತೊರೆದಾದರೂ ಅವರನ್ನು ರಕ್ಷಿಸುವುದು ಕುಮ್ಮಟದರಸರ ಧರ್ಮವಾಗಿತ್ತು. ನೇಮಿಯಿಂದ ತಪ್ಪಿಸಿಕೊಂಡು ಬಹಾವುದ್ದೀನ್ ತನ್ನ ಹಾಗೂ ಕುಟುಂಬದ ರಕ್ಷಣೆಗಾಗಿ ಕುಮಾರರಾಮನಲ್ಲಿಗೆ ಮೊರೆಯಿಟ್ಟಾಗ 'ಬೆನ್ನ ಬಿದ್ದವರನು ಮುನ್ನ ಕೊಡುವರೆ ಮೂಳೆ'[೪೮] ಎಂದು ರಾಜನ ನೈತಿಕತೆಯನ್ನು ಗುರ್ತಿಸಿಕೊಳ್ಳುವುದು ಕುಮಾರರಾಮನ ಸರ್ವಶ್ರೇಷ್ಠ ಗುಣವಾಗಿತ್ತು. ಹಾಗೆಯೇ ನ್ಯಾಯ, ನೀತಿ, ಧರ್ಮವನ್ನು ನಂಬಿದವನಿಗೆ ಆತನ ನೈತಿಕ ಮೌಲ್ಯಗಳೇ ರಕ್ಷಣೆ ನೀಡುತ್ತವೆ ಎಂಬುದು ಅಕ್ಷರಶಃ ಸತ್ಯವೆನಿಸುತ್ತದೆ. ಏಕೆಂದರೆ ಕಂಪಿಲರಾಯನು ತನ್ನ ಹೆಂಡತಿಯಾದ ರತ್ನಾಜಿಯ ಮಾತಿನಂತೆ ರಾಮನ ತಲೆ ಕಡಿಯುವಂತೆ ಆಜ್ಞೆ ಮಾಡಿದಾಗ ಎಷ್ಟೇ ಪ್ರಯತ್ನ ಪಟ್ಟರೂ ತಲೆಕಡಿಯಲು ಹೋದಾಗ ಆ ಹೊಡೆತಗಳು ಹೂವಿನ ಹಾರಗಳಾಗುತ್ತಿದ್ದವಂತೆ. ಧರ್ಮ, ನಿಷ್ಠೆ, ನೈತಿಕತೆಯನ್ನು ಆದರ್ಶಪ್ರಾಯವಾಗಿಸಿಕೊಂಡಿದ್ದ ಕುಮಾರರಾಮನನ್ನು ಆತನ ಆದರ್ಶಗುಣವಾದ ನ್ಯಾಯ, ಧರ್ಮ, ನೈತಿಕತೆಯೇ ರಕ್ಷಣೆ ಮಾಡಿದುದು ಇಲ್ಲಿ ಗಮನಾರ್ಹವಾಗಿದೆ. ಹೀಗೆ ನೈತಿಕತೆಯಿಂದ ನ್ಯಾಯ ನೀಡುವ ಆದರ್ಶಗುಣ ಕುಮ್ಮಟದರಸರ ವ್ಯಕ್ತಿತ್ವದಲ್ಲೇ ಅಂತರ್ಗತವಾಗಿದ್ದವು. ಪ್ರಮುಖವಾಗಿ ಅರ್ಥಮಾಡಿಕೊಳ್ಳಬೇಕಾದ ಸಂಗತಿಯೆಂದರೆ ರಾಜ ಪರಿವಾರದವರು, ಸಾಮಾನ್ಯರು ಎಂಬ ಭೇದಭಾವವಿಲ್ಲದೆ ಶಿಕ್ಷೆಯು ಸಾಮಾನ್ಯವಾಗಿ ಇರುತ್ತಿತ್ತು. ನ್ಯಾಯ ಅನ್ಯಾಯಗಳನ್ನು ದೀರ್ಘವಾಗಿ ಆಲೋಚಿಸಿ ನಿರ್ಣಯಗಳನ್ನು ತೆಗೆದುಕೊಳ್ಳುವಂತಹ ನ್ಯಾಯ ಪಂಚಾಯ್ತಿಗಳಿಗೆ ಇಲ್ಲಿ ಅವಕಾಶವಿತ್ತು. ಅಲ್ಲದೆ ಅಲ್ಲಿನ ಸಮಾಜದಲ್ಲಿ ಯಾರಾದರೂ ಎರಡು ಗುಂಪುಗಳ ನಡುವೆ ವೈಮನಸ್ಸುಗಳು ತಲೆದೂರಿದರೆ ಆಗ ಈ ಎರಡೂ ಗುಂಪುಗಳು ಮತ್ತೊಬ್ಬರ ಮಧ್ಯಸ್ಥಿಕೆಯಲ್ಲಿ ನ್ಯಾಯ ತೀರ್ಮಾನ ಮಾಡುತ್ತಿದ್ದವು. ಹಾಗೆಯೇ ರಾಜರುಗಳಿಗೂ ಇದು ಹೊರತಾಗಿರಲಿಲ್ಲ. ಹೊಯ್ಸಳರು ಮತ್ತು ಕುಮ್ಮಟದ ಅರಸರ ನಡುವೆ ಕಪ್ಪ ಕಾಣಿಕೆಗಳ ವಿಚಾರವಾಗಿ ಸಮಸ್ಯೆಗಳು ಬಂದಾಗ ಬಗೆಹರಿಸಿಕೊಳ್ಳಲು ನ್ಯಾಯದ ಮೊರೆಹೋಗುತ್ತಿದ್ದುದು ಕಾಣಬಹುದು

ಆಗಲೊ ಎಲೆ ಮಂತ್ರಿ ಹದಿನೇಳು ವರ್ಷದ ಲೆಕ್ಕ । ಸಾಗಿದರೆ ನ್ಯಾಯ ತೀರುವುದು।
ಬಾಳ ಬಡತನಗಳ ಹೇಳಿಕೊಂಡರೆ ಹೊತ್ತ । ಸಾಲಬಿಡುವುದೆ ಧರೆಯೊಳಗೆ[೮೯]

ಆಗಲಿ ಮಂತ್ರಿ ನಿಮ್ಮರಸನ್ನು ಬರಹೇಳು । ಯಾಯ ರೀತಿಯಲಿ ಪೇಳುವನು
[ನಾಳೆ] ನಾವಿರ್ವರು ಕೂಡಿಮಾತಾಡು । ನೊಡುವ ಲೆಕ್ಕ ಹೆಚ್ಚು ಕಡಿಮೆ[೫೦]

ಈ ರೀತಿಯಾಗಿ ಸಮಾಜದಲ್ಲಿ ಯಾವುದಾದರು ಒಂದು ಸಮಸ್ಯೆ ಉದ್ಭವವಾದಾಗ ಅದನ್ನು ನ್ಯಾಯ ಪಂಚಾಯತಿಯ ಮೂಲಕ ಬಗೆಹರಿಸಿಕೊಳ್ಳುತಿದ್ದರು. ಇವರ ದೃಷ್ಟಿಯಲ್ಲಿ ನ್ಯಾಯ ಎಲ್ಲರಿಗೂ ಒಂದೇ ಎಂಬ ಸಂದೇಶವನ್ನು ಬಿಂಬಿಸುತ್ತದೆ. ಕುಮ್ಮಟದರಸರು ಹೊರಡಿಸುತ್ತಿದ್ದ ತೀರ್ಪು, ಆಜ್ಞೆಗಳು ನಮಗೆ ಶಾಸನ ಅಥವಾ ಕೈಫಿಯತ್ತುಗಳಿಂದ ತಿಳಿದುಬರುವುದಿಲ್ಲ ಆದರೆ ಕುಮ್ಮಟದರಸರ ಬದುಕಿನಲ್ಲಿ ಜರಗುವ ಅನೇಕ ಘಟನೆಗಳನ್ನು ಸಾಹಿತ್ಯಿಕ ಕಥನ ಗೀತೆಗಳಲ್ಲಿ ದಾಖಲಿಸಿರುವುದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

**೫.೪. ಧರ್ಮ**

ಕರ್ನಾಟಕದಲ್ಲಿ ಮಧ್ಯಕಾಲೀನ ಸಮಾಜವು ಯಾವ ರೀತಿಯಿಂದಲೂ ಏಕರೂಪದ್ದಾಗಿರಲಿಲ್ಲವಾದರೂ ವಿವಿಧ ಧರ್ಮಗಳ ಆರಾಧನೆಯ ಆಚರಣೆಗಳು ಮತ್ತು ವ್ಯವಸ್ಥೆಗಳಿಗೆ ಹೊಂದಿಕೊಳ್ಳುವಂತಹ ಸಿದ್ಧಾಂತಗಳು ಇಲ್ಲಿದ್ದವು. ಕಾರಣ ಗುಪ್ತರ ನಂತರ ಬಂದ ದೇವಾಲಯಗಳನ್ನು ಆರಾಧನೆಯ ಆಚರಣೆಗಳ ಕೇಂದ್ರಗಳನ್ನಾಗಿ ಮಾಡಿಕೊಂಡರು. ೮ ರಿಂದ ೧೩ನೇ ಶತಮಾನಗಳ ಅವಧಿಯಲ್ಲಿದ್ದ ಭಕ್ತಿ ಆಂದೋಲನವು ಅಲ್ಲಿದ್ದ ಊಳಿಗಮಾನ್ಯ ಸಮಾಜವನ್ನು ಪ್ರತಿಬಿಂಬಿಸಲು, ಶಾಸನಬದ್ಧಗೊಳಿಸಲು ಈ ಮಾರ್ಗವನ್ನು ಉಪಯೋಗಿಸಿಕೊಂಡಿತು ಎಂದರೆ ತಪ್ಪಾಗಲಾರದು. ಈ ಕಾಲಾವಧಿಯಲ್ಲಿ ಪ್ರಮುಖವಾಗಿ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು, ಬಸವಣ್ಣನವರು ಸೇರಿದಂತೆ ಕರ್ನಾಟಕದ ಮೇಲೆ ಅಪಾರವಾದ ಪ್ರಭಾವ ಬೀರಿದರು. ಮುಖ್ಯವಾಗಿ ಈ ಮೂವರು ಆಚಾರ್ಯರು ಅಪಾರವಾದ ಲೌಕಿಕ ಚಿಂತನೆಗಳನ್ನು ಹಾಗೂ ಪ್ರಭಾವಿ ಧಾರ್ಮಿಕ ಆಂದೋಲನಗಳನ್ನು ಅಲೆಗಳನ್ನುಂಟುಮಾಡಿದರೂ ಇವು ಸಮಾಜದ ಎಲ್ಲಾ ವರ್ಗಗಳಿಗೆ ಅನುಕೂಲವಾಗದೇ ಕೇವಲ ಬ್ರಾಹ್ಮಣರ ಸಾಂಪ್ರದಾಯಿಕತೆಯ ಚೌಕಟ್ಟಿಗೆ ಸೀಮಿತವಾಗಿತ್ತು. ಈ ಹರಿದಾಸರುಗಳು ಸಾಮಾಜಿಕ ಕಳಕಳಿಯನ್ನು, ಸಮಾಜದ ವಿಮರ್ಶೆಗಳನ್ನು ಹೊಂದಿದ್ದರೂ ಸಮಾಜದಲ್ಲಿ ಸಮಾನತೆ ತರುವಲ್ಲಿ ವಿಫಲವಾಗಿದ್ದೇ ಸರಿ ಎನಿಸುತ್ತದೆ.

ಮಧ್ಯಕಾಲೀನ ಇತಿಹಾಸದಲ್ಲಿ ಒಂದೇ ಪರಿಸರದಲ್ಲಿರುವ ಸಾಮ್ರಾಜ್ಯಗಳಾದ ಸೇವುಣರು, ಹೊಯ್ಸಳರು, ಕಾಕತೀಯರು ಇವರ ಹಲವು ಭಾಷೆ, ಮತ, ಧರ್ಮ, ಸಂಸ್ಕೃತಿಗಳು ಪರಸ್ಪರ ಮುಖಾಮುಖಿಗೊಂಡು ತಮ್ಮ ನಾಡಿನ ಬಹುರೂಪಿ ಸಂಸ್ಕೃತಿಯನ್ನು ಅರಿಯುವ ಅವಕಾಶಗಳು ಕ್ಷೀಣಗೊಳ್ಳುತ್ತವೆ. ಕಾರಣ ಪರಸ್ಪರರ ಸಾಂಸ್ಕೃತಿಕ ವಿಶಿಷ್ಟತೆಗಳು ಪರಕೀಯ ಭಾವನೆಗಳಿಂದ ಪ್ರಭಾವಿತಗೊಂಡು ಹಗೆತನವನ್ನು ಸಾಧಿಸಿ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮುಖಾಮುಖಿಯಾಗಿ

ರಕ್ತಸಿಕ್ತ ಚರಿತ್ರೆಯನ್ನು ಹೊಂದಲು ಪ್ರಯತ್ನಿಸುತ್ತಾರೆ. ಮೊದಲಿಗೆ ಸಾಮ್ರಾಜ್ಯದ ವಿಸ್ತರಣೆಗೆ, ವೀರತ್ವಕ್ಕೆ ಸಂಪತ್ತನ್ನು ಪಡೆಯುವ ಪಶು, ಪೈರುಗಳಿಗಾಗಿ ಎದುರಾಳಿಗಳ ವಿರುದ್ಧ ಹೋರಾಡುವ ಕುಮ್ಮಟದರಸರು ನಂತರದ ದಿನಗಳಲ್ಲಿ ರಾಜನೀತಿಯ ಪ್ರಭುತ್ವದ ರಣದೇವತೆಗಳಾಗಿ ಕೋಟೆ ರಕ್ಷಣೆಯಂತಹ ರಾಜಕೀಯ ಕ್ರಿಯೆಗಳ ಭಾಗವಾಯಿತು.

ಭಾರತದಲ್ಲಿ ಒಂದೊಂದು ಜನಾಂಗವು ತನ್ನದೇ ಆದ ಸಂಸ್ಕೃತಿಯನ್ನು ಒಳಗೊಂಡಿದೆ. ವಿಶಿಷ್ಟವಾದ ಕಲೆ, ಆಚರಣೆ, ಸಂಪ್ರದಾಯಗಳು ಜೀವನದ ರೀತಿ–ನೀತಿಗಳು ವಿಭಿನ್ನವಾಗಿಯೇ ಕಂಡುಬರುತ್ತವೆ. ತಮ್ಮ ತಮ್ಮ ವೃತ್ತಿಗಳನ್ನು ಆಧರಿಸಿಕೊಂಡು ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದರು. ಕಾಲಾನಂತರ ಅಲೆಮಾರಿ ಜೀವನದಿಂದ ಮುಕ್ತಿ ಹೊಂದಿ ಒಂದು ಕಡೆ ನೆಲೆಸುವುದನ್ನು ರೂಢಿ ಮಾಡಿಕೊಳ್ಳುತ್ತಾ ಬಂದರು. ಈ ಸಂದರ್ಭದಲ್ಲಿ ಇವರ ಜೀವನಕ್ರಮಕ್ಕೆ ತಕ್ಕಂತೆ ತಮ್ಮದೇ ಆದ ದೇವರನ್ನು ಸೃಷ್ಟಿಸಿಕೊಂಡರು. ಇದಕ್ಕೆ ಪೂರಕವಾದಂತಹ ಧಾರ್ಮಿಕ ನಿಯಮಾವಳಿಗಳನ್ನು ಕಟ್ಟಿಕೊಳ್ಳುತ್ತಾ ಧಾರ್ಮಿಕ ಆಚರಣೆಗಳನ್ನು ಆಚರಿಸುತ್ತಾ ಬಂದರು. ಹೀಗಾಗಿ ಒಂದೊಂದು ಜನಾಂಗವು ತಮ್ಮದೇ ಆದಂತಹ ಧರ್ಮ, ಧಾರ್ಮಿಕ ಆಚರಣೆಗಳನ್ನು ತಮ್ಮ ಸುತ್ತಲೂ ಕಟ್ಟಿಕೊಳ್ಳುತ್ತಾ ಬಂದರು.

ವೀರಶೈವ ಧರ್ಮವು ವಿಚಾರ ಸಂಕಿರಣಗಳ, ಚರ್ಚಾಗೋಷ್ಠಿಗಳ ಆಂದೋಲನವನ್ನು ಕುರಿತು ಚರ್ಚಿಸುವ ವೇದಿಕೆಯಾಗಿತ್ತು. ಬಸವಣ್ಣನವರು ಮಾರ್ಗದರ್ಶಕರಾಗಿದ್ದರು. ಅಲ್ಲಮಪ್ರಭು ಸೇರಿದಂತೆ ಅಂಬಿಗರ ಚೌಡಯ್ಯ, ಸಿದ್ಧರಾಮ ಹಾಗೂ ಅಕ್ಕಮಹಾದೇವಿಯರ ವಚನಗಳು ಸಮಾಜವನ್ನು ವಿಮರ್ಶೆ ಮಾಡುವ ಆಯುಧಗಳಾದವು. ಚೋಳ ಅರಸ ವೈಷ್ಣವರಿಗೆ ಚಿತ್ರಹಿಂಸೆ ಕೊಟ್ಟಿದುದರಿಂದ ರಾಮಾನುಜರು ಕರ್ನಾಟಕಕ್ಕೆ ಬಂದು ವಿಷ್ಣುವರ್ಧನನ ಆಶ್ರಯದಲ್ಲಿ ವೈಷ್ಣವ ಧರ್ಮ ಗುರ್ತಿಸಿಕೊಂಡಿತು. ವೈಷ್ಣವರು ಉತ್ತುಂಗಕ್ಕೇರಿದರು ಸಮಾಜದಲ್ಲಿ ಸಮಾನತೆ ತರುವಲ್ಲಿ ವಿಫಲರಾದಾಗ ೧೨ನೆಯ ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಬೆಳಕಿಗೆ ಬಂದ ಶೈವ ಆಂದೋಲನವು ಧರ್ಮವನ್ನು ಎಲ್ಲಾ ಜನರಿಗೂ ಸಮಾನವಾಗಿ ತೆರೆದಿಡುವ ಕೆಲಸವನ್ನು ಮಾಡಿತು ಎಂದರೆ ತಪ್ಪಾಗಲಾರದು. ಬಹುಶಃ ಈ ಕಾರಣಕ್ಕಾಗಿಯೇ ಶೈವ ಸಿದ್ಧಾಂತಗಳ ಪರಿಜ್ಞಾನವನ್ನು ಅರಿತುಕೊಂಡರು ಪಾಶುಪತ, ಕಾಳಾಮುಖ ಪಂಥಗಳು ತಮ್ಮದೇ ವಿಸ್ತಾರವನ್ನು ಗುರ್ತಿಸಿಕೊಂಡರೂ ಈ ಕಾಲಾವಧಿಯಲ್ಲಿ ಉತ್ತರ ಕರ್ನಾಟಕದಲ್ಲಿ ವಿಭಿನ್ನ ಛಾಯೆಗಳು ಜೈನ ಧರ್ಮವು ನೆಲೆಗೊಂಡಿತ್ತು.

ಜೈನ ಧರ್ಮ ಮತ್ತು ಬೌದ್ಧ ಧರ್ಮಗಳ ಆಂದೋಲನಗಳು ಹೊರಗಿನಿಂದ ಆದ ಕ್ರಾಂತಿಯಾದರೆ, ವೀರಶೈವ ಆಂದೋಲನ ಆಂತರಿಕವಾಗಿ ಆದ ಕ್ರಾಂತಿಯಾಗಿದೆ. ಹೀಗಾಗಿ ತಮ್ಮದೇ ಅಸ್ತಿತ್ವಗಳನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಹಲವು ಧರ್ಮಗಳ ಪಾತ್ರ ಮುಖ್ಯವಾಗಿದ್ದವು. ೧೨ನೇ ಶತಮಾನದ ಅವಧಿಯಲ್ಲಿ ಆದ ಬದಲಾವಣೆಗಳು ನಂತರದ ರಾಜಮನೆತನಗಳ ಸಾಮಾಜಿಕ ಪ್ರಜ್ಞೆ, ಅವಿರತ ಬದಲಾವಣೆಗಳಿಗೆ ಅಡಿಪಾಯ ಆದವೆಂದರೆ ತಪ್ಪಾಗಲಾರದು. ಹೀಗಾಗಿ ಕುಮ್ಮಟದರಸರು ಹೊಯ್ಸಳರ

ಆಡಳಿತದ ಕೆಲವು ಮಜಲುಗಳನ್ನು ಅಳವಡಿಸಿಕೊಂಡರೂ ವೈಷ್ಣವ, ಶೈವ ಎಂಬ ಪ್ರತ್ಯೇಕತೆಯನ್ನು ತೋರಿಸದೆ ಸಾಮಾಜಿಕ ಮೌಲ್ಯ, ಮಾನವೀಯತೆಗಳೇ ನಿಜವಾದ ಧರ್ಮ ಎನ್ನುವ ಆಶಯವನ್ನು ತಮ್ಮ ಆಡಳಿತದ ಮೂಲಕ ಗುರ್ತಿಸಿಕೊಂಡರು. ಇವರು ತಮ್ಮ ಅಂತಿಮ ಅವಸಾನದವರೆವಿಗೂ ಹಿಂದೂ ಧರ್ಮದಲ್ಲಿ ಅಪಾರ ಗೌರವವನ್ನು ಇಟ್ಟುಕೊಂಡಿದ್ದುದರ ಜೊತೆಗೆ ಅನ್ಯ ಧರ್ಮೀಯರಿಗೂ ಗೌರವಿಸಿದರು. ಈ ಮಧ್ಯ ಕಾಲಘಟ್ಟದಲ್ಲಿ ಧರ್ಮಗಳ ಸಾಮರಸ್ಯಗಳಿಲ್ಲದೆ ತಾನು ಉತ್ತಮ, ತಾನು ಶ್ರೇಷ್ಠ ಎಂಬ ಪೈಪೋಟಿಗಳೇ ಹೆಚ್ಚಾಗಿದ್ದವು. ಸಾಕಷ್ಟು ಹಿಂದೂ ಅರಸರುಗಳು ಅನ್ಯ ಧರ್ಮಗಳಿಗೆ ತಲೆಬಾಗಿದರು. ಆದರೆ ಹಿಂದೂ ಧರ್ಮದ ಜೊತೆಗೆ ಅನ್ಯ ಧರ್ಮೀಯರನ್ನು ಸ್ವಾಗತಿಸಿದ್ದು ಕುಮ್ಮಟದರಸರ ನಿಜವಾದ ಧರ್ಮವಾಗಿತ್ತು. ಇಲ್ಲಿ ಕುಮ್ಮಟದರಸರು ಜೈನ ಧರ್ಮವನ್ನು ದೂಷಿಸಲಿಲ್ಲ. ಜೈನ ಧರ್ಮದ ತತ್ವಗಳು, ನಿಯಮಗಳ ಪಾಲನೆಯ ದುರುಪಯೋಗವನ್ನು ಖಂಡಿಸುವ ಪ್ರಯತ್ನಗಳು ಇವರಿಂದಾದವು. ಹೀಗಾಗಿಯೇ ಜೈನರು ಕುಮ್ಮಟದರಸರ ಪ್ರದೇಶಗಳನ್ನು ತೊರೆದು ಕೊಪ್ಪಳ ಭಾಗಗಳಲ್ಲಿ ನೆಲೆಗೊಂಡರು.

ಈ ಕಾಲಾವಧಿಯಲ್ಲಿ ವಿಜಯನಗರ ಪೂರ್ವದಲ್ಲಿ ಕುಮ್ಮಟದರಸರು ಧರ್ಮಕ್ಕೆ ಕಟ್ಟುಬಿದ್ದಿದರು ಎಂದರೆ ತಪ್ಪಾಗಲಾರದು. ಧರ್ಮ, ನಂಬಿಕೆ, ಧಾರ್ಮಿಕ ಆಚರಣೆಗಳಲ್ಲಿ ವಿಶೇಷ ಆಸಕ್ತಿಯುಳ್ಳವರಾಗಿದ್ದರು. ಕುಮ್ಮಟದರಸರಿಗೆ ಜಟ್ಟಂಗಿ ರಾಮೇಶ್ವರ ಮತ್ತು ಕಂಪಿಲ ಸೋಮೇಶ್ವರರು ಕುಲದೈವಗಳಾಗಿದ್ದರಿಂದ ಇಲ್ಲಿ ಶೈವ ವಾತಾವರಣವು ಮನೆಮಾಡಿತ್ತು ಎಂದು ಅನಿಸುತ್ತದೆ. ದೇವರುಗಳ ಅನುಗ್ರಹವೇ ಕಂಪಿಲರಾಯ ಮತ್ತು ಕುಮಾರರಾಮ ಜನಿಸಲು ಕಾರಣ ಎಂಬ ನಂಬಿಕೆ ಇವರಲ್ಲಿ ಬಲವಾಗಿತ್ತು. ಧರ್ಮದಲ್ಲಿ ಇವರಿಗಿದ್ದ ನಂಬಿಕೆಗಳು ಇವರ ಜೀವನದುದ್ದಕ್ಕೂ ಹೊಂದಿಕೊಳ್ಳುತ್ತಾ ಹೋಗಿವೆ. ಓರಂಗಲ್ಲಿನ ಗುಂಡ ಬ್ರಹ್ಮಯ್ಯನ ವರದಿಂದ ಯುದ್ದವನ್ನು ಗೆದ್ದ ಕುಮಾರರಾಮ ಶೂಲದ ಹಬ್ಬ ಆಚರಿಸುವುದು[೫೧] ಇವರ ಧಾರ್ಮಿಕ ನಂಬುಗೆಯನ್ನು ಬಿಂಬಿಸುತ್ತದೆ. ಇಲ್ಲಿ ಗುಂಡ ಬ್ರಹ್ಮಯ್ಯನ ಅನುಗ್ರಹ, ಆಶೀರ್ವಾದ ಕುಮಾರರಾಮನು ವೈರಿಗಳ ಮುಂದೆ ಸಿಂಹಸ್ವಪ್ನದಂತೆ ಕಾಣುತ್ತಿದ್ದುದ್ದು ಕುಮಾರರಾಮನಿಗೆ ಗುಂಡಬ್ರಹ್ಮಯ್ಯನ ಮೇಲಿದ್ದ ಭಕ್ತಿ, ನಂಬಿಕೆಯನ್ನು ತೋರಿಸುತ್ತದೆ. ಹಾಗೆಯೇ ಕುಮಾರರಾಮನ ವ್ಯಕ್ತಿತ್ವದಲ್ಲಿ ಧರ್ಮವನ್ನು ಆರಾಧಿಸುವುದನ್ನು ಕಾಣಬಹುದು. ರತ್ನಾಜಿಯು ರಾಮನ ಮೇಲೆ ಮೋಹಪರವಶಳಾಗಿ ಬಲತ್ಕಾರಕ್ಕೆ ಮುಂದಾದಾಗ ರಾಮನು ನೀನು ನನಗೆ ತಾಯಿ ಸಮಾನವೆಂದು ನನ್ನನ್ನು ಹೀಗೆ ಬಯಸುವುದು ಧರ್ಮವಲ್ಲ[೫೨] ಎಂಬ ತಿಳುವಳಿಕೆಯ ಮಾತುಗಳು ಕುಮಾರರಾಮನನ್ನು ಧರ್ಮಪುರುಷನನ್ನಾಗಿ ಬಿಂಬಿಸುವುದರಲ್ಲಿ ಅರ್ಥವಿದೆ.

ಕುಮಾರರಾಮನು ಪರಸ್ತ್ರೀಯನ್ನು ಬಯಸುವುದು ಎಷ್ಟು ಅಪರಾಧವೋ ಸ್ತ್ರೀಯೊಂದಿಗೆ ಯುದ್ದ ಮಾಡುವುದು ಅಷ್ಟೇ ಅಪರಾಧವೆಂದು ತಿಳಿದಿದ್ದನು. ರಾಮನ ಹೋರಾಟ ಉಗ್ರಸ್ಥಿತಿ ತಲುಪಿದಾಗ ನವಾಬನ ಸೇನೆಯ ಮುಖಂಡತ್ವವನ್ನು ವಹಿಸಿದ್ದ ಹುಸೇನಿ ಎಂಬುವವಳು ತನ್ನ

ಸ್ತ್ರೀ ರೂಪ ತೋರಿಸಿ ಯುದ್ಧ ಮಾಡಲು ಮುಂದಾದಾಗ ಕುಮಾರರಾಮ ಸ್ತ್ರೀಯೊಂದಿಗೆ ಸಮರ ಸಲ್ಲದೆಂದು ಹತಿಯಾರ ಎಸೆದು ಸುಮ್ಮನಾಗುತ್ತಾನೆ.[೫೩] ಈ ನಿಟ್ಟಿನಲ್ಲಿ ಕುಮಾರರಾಮನಿಗೆ ಧರ್ಮವು ಶ್ರೇಷ್ಠವೆನಿಸುತ್ತಿತ್ತು. ಈ ಸಂದರ್ಭದಲ್ಲಿ ಕುಮ್ಮಟದರಸರು ನಡೆಸುತ್ತಿದ್ದ ಪೂಜೆ ಪುನಸ್ಕಾರಗಳು ಆಚರಣೆಗಳಲ್ಲಿ ನಂಬಿಕೆ ಇಟ್ಟು ಧರ್ಮದ ಮೌಲ್ಯವನ್ನು ಗುರುತಿಸುವುದಷ್ಟೇ ಅಲ್ಲ, ಪರಸ್ತ್ರೀಯನ್ನು ತಾಯಿಯಂತೆ ನೋಡುವುದು ಧರ್ಮ, ಸ್ತ್ರೀಯೊಂದಿಗೆ ಯುದ್ಧ ಮಾಡದಿರುವುದು ಧರ್ಮ, ರಾಜನಾದವನ ಬಳಿ ಶರಣೂ ಎಂದು ಬಂದವನಿಗೆ ರಕ್ಷಣೆ ನೀಡುವುದು ಧರ್ಮ, ತಾಯಿಗೆ ಕೊಟ್ಟ ಮಾತಿನಂತೆ ನಡೆದುಕೊಳ್ಳುವುದು ಧರ್ಮವಾಗಿತ್ತು. ಕುಮಾರರಾಮ ಈ ರೀತಿಯ ಅರ್ಥಪೂರ್ಣವಾದ ಧರ್ಮ ನಂಬಿಕೆಗಳನ್ನು ಗುಣ ಶುಚಿತ್ವಗಳನ್ನು ಅಳವಡಿಸಿಕೊಂಡಿದ್ದರಿಂದಲೇ ಪ್ರಸ್ತುತ ಕಾಲಾವಧಿಯಲ್ಲಿಯೂ ಕುಮಾರರಾಮನು ದೈವತ್ವಕ್ಕೆ ತಲುಪಿರುವುದು ಗಮನಾರ್ಹವೆನಿಸುತ್ತದೆ.

**ಕುಮಾರರಾಮನ ಆಚರಣಾತ್ಮಕ ನೆಲೆಗಳು**

ತುಂಗಭದ್ರ ನದಿಯ ಮೇಲೆ ಇರುವ ಏಳು ಬೆಟ್ಟಗಳ ಮಧ್ಯೆ ಕುಮ್ಮಟದುರ್ಗವನ್ನು ಕುಮಾರರಾಮ ಸ್ಥಾಪಿಸಿದನು ಅಥವಾ ನಿರ್ಮಿಸಿದನು. ಈ ಕುಮ್ಮಟದುರ್ಗವು ಕೇವಲ ಸಾಮಂತ ರಾಜ್ಯವಾಗಿದ್ದು, ಪ್ರಜೆಗಳ ರಕ್ಷಣೆ ಮತ್ತು ಕ್ಷೇಮಾಭಿವೃದ್ದಿಗಾಗಿಯೇ ಸ್ಥಾಪಿಸಿದನು. ಈ ರಾಜ್ಯದೊಳಗೆ ಪ್ರತಿಯೊಬ್ಬ ಜನಾಂಗದವರು ವಾಸಿಸುತ್ತಿದ್ದರು.

ಯಾವುದೇ ಜಾತಿ, ಸಂಪ್ರದಾಯಗಳು, ಭೇದ-ಬಾವ ಮಾಡದೇ ಎಲ್ಲರನ್ನು ಒಟ್ಟಿಗೆ ಒಂದೇ ರೀತಿಯಲ್ಲಿ ನೋಡಿಕೊಂಡು ಹೋಗುತ್ತಿದ್ದನು. ಇದೇ ಮುಂದೆ ಕುಮಾರರಾಮ ಪ್ರಜೆಗಳ ದೃಷ್ಟಿಯಲ್ಲಿ ಒಬ್ಬ ದೈವ ಮಾನವನಾಗಿ ಉಳಿದುಕೊಂಡನು. ಕುಮಾರರಾಮನ ಹೆಸರಿನಲ್ಲಿ ವಿಶೇಷ ರೀತಿಯ ಗುಡಿಗಳನ್ನು ಕಟ್ಟಿಸಿದರು. ಕುಮಾರರಾಮನ ಧೈರ್ಯ, ಶೌರ್ಯ, ಸಾಹಸ, ಬುದ್ಧಿವಂತ, ಚಾತುರ್ಯಗಳನ್ನು ಕಂಡು ಅವನಂತೆಯೇ ನಮ್ಮ ಮಕ್ಕಳು ಬೆಳೆಯಬೇಕೆಂದು ತಮ್ಮ ಮಕ್ಕಳಿಗೆ ಆತನ ಹೆಸರು ಇಟ್ಟರು. (ಉದಾ: ರಾಜೇಶ ಪಾಳೆಗಾರ ತನ್ನ ಮಗನಿಗೆ ಕುಮಾರರಾಮ ಎಂದು ಹೆಸರು ಇಟ್ಟಿದ್ದಾರೆ.) ಕುಮಾರರಾಮ ಒಬ್ಬ ದೇವರೆಂದು, ಆತನನ್ನು ಮನೆಯಲ್ಲಿ ಪೂಜೆ ಮಾಡತೊಡಗಿದ್ದರು. ಕುಮಾರರಾಮನ ದೋಣಿ ಎಂದು ಒಂದು ಬಾವಿಯನ್ನು ಕರೆದರು. ಅದು ಇಂದಿಗೂ ಬಾವಿಯಲ್ಲಿ ನೀರು ಸದಾ ತುಂಬಿರುತ್ತದೆ.

ಆ ನೀರು ಕುಡಿಯಲು, ಸ್ನಾನ ಮಾಡಲು ಬೆಳೆನಾಶವಾಗಿದ್ದರೆ, ರೋಗ ರುಜಿನ ಬಂದಿದ್ದರೆ ಈ ನೀರನ್ನು ಚುಮುಕಿಸಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಜನರಲ್ಲಿತ್ತು. ಹಾಗೆ ಹಳ್ಳಿಯ ಜನರು ಆ ಪರಿಸರದ ಸುತ್ತಮುತ್ತಲಿನ ಕುಮಾರರಾಮನ ಕುರಿತು ಜನರು ಮೌಖಿಕ ಪರಂಪರೆಯಲ್ಲಿ ಹಾಡು ಹಾಡುತ್ತಾರೆ.

ಡೊಳ್ಳಿನ ಹಾಡು, ಲಾವಣಿ ಹಾಡು ಹೀಗೆ ಕುಮಾರರಾಮನನ್ನು ಆ ಪರಿಸರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ವಾಸಿಸುವ ಜನರಿಗೆ ಕುಮಾರರಾಮ ದೇವನಾಗಿದ್ದಾನೆ. ಕುಮಾರರಾಮನ ಆಚರಣೆಗಳು ಹೇಗೆ ಆಚರಿಸುತ್ತಾರೆ ಎಂಬುವುದನ್ನು ನೋಡಬಹುದು.

ಸ್ಥಳೀಯರು ಹೇಳುವ ಪ್ರಕಾರ ಕುಮ್ಮಟದುರ್ಗವನ್ನು ಆಳಿದ ಗಂಡುಗಲಿ ಕುಮಾರರಾಮನ ಬಲಿದಾನದ ನಿಮಿತ್ತವಾಗಿ ಜಾತ್ರೆಯನ್ನು ಆಚರಣೆ ಮಾಡಲಾಗುತ್ತಿದೆ, ರಾಮಸ್ವಾಮಿ (ಕುಮಾರರಾಮ) ದೇವಸ್ಥಾನದಲ್ಲಿರುವ ಹತ್ತು ಕಲ್ಲಿನ ಗುಂಡುಗಳು ಕುಮಾರರಾಮನ ಮತ್ತು ಆತನ ಸ್ನೇಹಿತರು ರುಂಡಗಳು ಎಂದು ಹೇಳಲಾಗುತ್ತಿದೆ. ಹೀಗಾಗಿ ಜಾತ್ರೆಯ ಸಂದರ್ಭದಲ್ಲಿ ಈ ಹತ್ತು ಜನರ ಹೋಲಿಕೆಯ ಮುಖವಾಡಗಳನ್ನು ಭಕ್ತರು ಹೊತ್ತು ಮೆರವಣಿಗೆ ಮಾಡುತ್ತಾರೆ. ಹುಲಿಗೆಮ್ಮದೇವಿ ಜಾತ್ರೆಗೂ ಕುಮಾರರಾಮನ ಜಾತ್ರೆಗೂ ನಂಟಿದೆ. ಕುಮಾರರಾಮನ ಜಾತ್ರೆಯಲ್ಲಿ ಅಕ್ಕಿಪಡಿ ಕಾರ್ಯಕ್ರಮ ನಂತರ ಅಕ್ಕಿಪಡಿಯನ್ನು ಹುಲಿಗೆಮ್ಮದೇವಿ ದೇವಸ್ಥಾನಕ್ಕೆ ಕಳಿಸಲಾಗುತ್ತದೆ. ಕುಮಾರರಾಮನ ಅಕ್ಕಿಪಡಿ ಹುಲಿಗೆಮ್ಮದೇವಿ ದೇವಸ್ಥಾನಕ್ಕೆ ತಲುಪಿದ ಬಳಿಕ ಶ್ರೀ ಹುಲಿಗೆಮ್ಮದೇವಿ ಜಾತ್ರೆ ಆರಂಭವಾಗುತ್ತದೆ ಎನ್ನುತ್ತಾರೆ ಸ್ಥಳೀಯ ಹಿರಿಯರು.

ಕುಮಾರರಾಮ ಜಾತ್ರೆಯಲ್ಲಿ ವಿಶೇಷವೆಂದರೆ ಅಕ್ಕಿಪಡಿ ಕಾರ್ಯಕ್ರಮ. ಎಲ್ಲ ಧಾನ್ಯಗಳನ್ನು ಮತ್ತು ಬಲಿಕೊಟ್ಟ ಪ್ರಾಣಿಯ ಮಾಂಸವನ್ನು ಸೇರಿಸಿ ಒಂದು ಗುಂಪು ಮಾಡಲಾಗುತ್ತದೆ. ಇದಕ್ಕೆ ಧಾರ್ಮಿಕ ವಿಧಿ-ವಿಧಾನಗಳೊಂದಿಗೆ ಪೂಜೆ ಮಾಡಲಾಗುತ್ತದೆ. ಅಕ್ಕಿಪಡಿಲ್ಲಿನ ಧಾನ್ಯವನ್ನು ತೆಗೆದುಕೊಂಡು ಹೋದ ರೈತರು ಮುಂಗಾರು ಬಿತ್ತನೆ ಬೀಜದಲ್ಲಿ ಬೆರೆಸಿ ಬಿತ್ತುವುದರಿಂದ ಫಸಲು ಹುಲುಸಾಗಿ, ಅಧಿಕ ಬೆಳೆ ಬರುತ್ತದೆ ಎಂಬುದಾಗಿ ನಂಬಿಕೆ ಸ್ಥಳೀಯರಲ್ಲಿದೆ.

ಇತಿಹಾಸದಲ್ಲಿ ಪರನಾರಿ ಸಹೋದರ ಎಂಬ ಖ್ಯಾತಿಗೆ ಪಾತ್ರನಾಗಿರುವ ಗಂಡುಗಲಿ ಕುಮಾರರಾಮ ಜಾತ್ರೆಯ ನಿಮಿತ್ತವಾಗಿ ವಿವಿಧ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತವೆ. ಕುಮಾರರಾಮ ಮತ್ತು ಆತನ ಸ್ನೇಹಿತರ ಮುಖಗಳನ್ನು ಹೋಲುವ ಮುಖವಾಡ ಹೊತ್ತು ಮೆರವಣಿಗೆ ಮಾಡುವುದು ಜಾತ್ರೆಯ ವಿಶೇಷವಾಗಿದೆ. ಕುಮಾರರಾಮನು ವೀರನು, ಶೂರನು, ಧೀರನು, ಅಷ್ಟೇ ಅಲ್ಲದೆ ಸಣ್ಣ ಪ್ರಾಂತದ ದೊರೆಯಾದರೂ ದಿಲ್ಲಿ ಸುಲ್ತಾನರಿಗೆ ನೀರು ಕುಡಿಸಿದ ಭೂಪ. ಪ್ರಸ್ತುತದಲ್ಲಿ ಕುಮಾರರಾಮನನ್ನು ದೈವನೆಂದು ಪರಿಭಾವಿಸಿ ಆತನಿಗೆ ದೇವಾಲಯವನ್ನು ನಿರ್ಮಿಸಿ ಹಬ್ಬ, ಹುಣ್ಣಿಮೆ. ವಾರಗಳನ್ನು, ಜಾತ್ರೆಗಳು, ಮದುವೆ, ಹುಟ್ಟು, ವ್ರತಮಲೆಯಾದ ಮುಂತಾದ ಸಂದರ್ಭಗಳಲ್ಲಿ ಕುಮಾರರಾಮನ ಆಚರಣೆಗಳನ್ನು ನಡೆಸುತ್ತಾರೆ.

ಕರ್ನಾಟಕದ ಕೆಲವು ಪ್ರದೇಶಗಳಿಗೆ ಕುಮಾರರಾಮನ ಆಚರಣೆಗಳು ಇಂದಿಗೂ ನಡೆಸಿಕೊಂಡು ಬರುತ್ತಿದ್ದಾರೆ. ಉದಾ: ಜಬ್ಬಲಗುಡ್ಡ, ಮುಕ್ಕುಂಪಿ, ಹಳೇಕುಮ್ಮಟ, ಇಂದ್ರಿಗಿ, ಮಲ್ಲಾಪುರ, ನಾಗೇಶನಹಳ್ಳಿ, ಕಂಪ್ಲಿ, ಸಂಡೂರು, ತುಮಕೂರು, ಕಾರವಾರ, ಇನ್ನೂ ಮುಂತಾದ ಕಡೆ ಕುಮಾರರಾಮನ ಆಚರಣೆಗಳು ಜೀವಂತವಾಗಿವೆ.

ಕುಮ್ಮಟದುರ್ಗದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನರನ್ನು ಆಚರಣಾತ್ಮಕ ನೆಲೆಯಲ್ಲಿ ನೋಡಿದ್ದಾರೆ. ಕುಮಾರರಾಮನು ಒಬ್ಬ ದೇವ ಮಾನವ ಎಂಬ ನಂಬಿಕೆಯಿದೆ. ಇದರಿಂದ ತಮ್ಮ ಕಷ್ಟಗಳನ್ನು ಜನರು ಆ ದೇವರ ಮುಂದೆ ಇಟ್ಟು ಪರಿಹಾರ ಮಾಡಿಕೊಳ್ಳುವ

ಒಂದು ಆಚರಣೆ ಇಂದಿಗೂ ಇದೆ. ಅಷ್ಟೇ ಅಲ್ಲದೆ ಸರಿಯಾಗಿ ಮಳೆಯಾಗದೇ ಇದ್ದಾಗ, ಬೆಳೆ ಒಣಗಿದರೆ ಅಂತ ಸಂದರ್ಭದಲ್ಲಿ ಕುಮಾರರಾಮನಿಗೆ ಅಭಿಷೇಕ ಮಾಡಿಸುವುದರಿಂದ ಉತ್ತಮವಾದ ಮಳೆ ಬೆಳೆಯಾಗುತ್ತದೆಂಬ ನಂಬಿಕೆ ಇದೆ.

ಕುಮ್ಮಟದುರ್ಗದ ಸುತ್ತಲಿನ ಪರಿಸರದಲ್ಲಿ ಇರುವ ಜನರು ಯಾರಾದರೂ ಮದುವೆ ಹಾಗೂ ಬೆಲೆ ಬಾಳುವ ವಸ್ತು ಖರೀದಿಸಿದರೆ ಮೊದಲು ಗಂಡುಗಲಿ ಕುಮಾರರಾಮನ ದೇವಾಲಯಕ್ಕೆ ಹೋಗಿ ಪೂಜೆ ಮಾಡಿಸುವ ಆಚರಣೆ ಇಂದಿಗೂ ಜೀವಂತವಾಗಿದೆ. ಹೈದ್ರಾಬಾದ್ ಕರ್ನಾಟಕದಲ್ಲಿ ಇರುವ ಕೆಲವು ಪ್ರದೇಶಗಳು ಕುಮಾರರಾಮನ ಆರಾಧ್ಯ ಭಕ್ತರು ಹೆಚ್ಚಾಗಿದ್ದಾರೆ. ಅಲ್ಲದೆ ಕುಮಾರರಾಮ ಒಂದು ಜಾತಿ ಜನಾಂಗಕ್ಕೆ ಮೀಸಲಾಗಿಲ್ಲ. ಎಲ್ಲ ಜಾತಿ ಜನಾಂಗದವರು ಕುಮಾರರಾಮನನ್ನು ದೇವರೆಂದು ಗುಡಿಕಟ್ಟಿ ಪೂಜಿಸುತ್ತಿದ್ದಾರೆ. ಇನ್ನೂ ಕೆಲವು ಜನರು ಕುಮಾರರಾಮನ ಬೆಟ್ಟಕ್ಕೆ ಹೋಗಿ ಜಟ್ಟಂಗಿ ರಾಮೇಶ್ವರ ದೇವಾಲಯದಲ್ಲಿ ಮಕ್ಕಳನ್ನು ಕರುಣಿಸುವಂತೆ ಬೇಡಿಕೊಳ್ಳುವುದುಂಟು.

ಆ ಪ್ರದೇಶದ ಸುತ್ತಮುತ್ತಲಿನ ಜನರು ತಮ್ಮ ಗಂಡು ಮಕ್ಕಳಿಗೆ ರಾಮನ ಹೆಸರು ಇಟ್ಟಿದ್ದಾರೆ. ಉದಾ: ಗಂಗಾವತಿಯ ವಾಲ್ಮೀಕಿ ಸಮುದಾಯದ ರಾಜೇಶ ಪಾಳೇಗಾರ ಇವರು ತನ್ನ ಮಗನಿಗೆ ಕುಮಾರರಾಮ ಎಂದು ಹೆಸರು ಇಟ್ಟಿದ್ದಾರೆ.

ಕುಮಾರರಾಮನ ದೊಣಿ, ಇದು ಕುಮಾರರಾಮ ಬೆಟ್ಟದ ಮೇಲೆ ಇದೆ. ಇದು ವರ್ಷದ ೩೬೫ ದಿನ ಸದಾ ತುಂಬಿ ತುಳುಕುತ್ತದೆ. ಈ ನೀರು ಆಯುರ್ವೇದ ಗಿಡಮೂಲಿಕೆಗಳಿಂದ ಬಂದನೀರು, ಮಳೆಗಾಲದಲ್ಲಿ ಸಂಗ್ರಹವಾಗುತ್ತದೆ. ಈ ನೀರನ್ನು ಪ್ರತಿದಿನ ಜಟ್ಟಂಗಿ ರಾಮೇಶ್ವರನಿಗೆ ಸ್ನಾನ ಮಾಡಿಸಲು ತೆಗೆದುಕೊಂಡು ಹೋಗುವಾಗ ಮಾತನಾಡುವಂತಿಲ್ಲ. ಅಷ್ಟೇ ಅಲ್ಲದೆ ಅಮಾವಾಸ್ಯೆ ಹುಣ್ಣಿಮೆ ದಿನದಂದು ಜನರು ಈ ನೀರನ್ನು ಒಯ್ದು ಮನೆಯಲ್ಲಿ ಎಲ್ಲರೂ ಕುಡಿಯುವುದರಿಂದ ಕಾಯಿಲೆ ಬರುವುದಿಲ್ಲಾ ಎಂದು ಅಲ್ಲಿನ ಹಿರಿಯರು ಹೇಳಿದ್ದಾರೆ.

ಕುಮಾರರಾಮನ ಹೆಸರಿನಲ್ಲಿ ಮಹಿಳೆಯನ್ನು ಬಸವಿಗೆ ಬಿಡುವ ಪದ್ಧತಿ ಇಂದಿಗೂ ಆಚರಣೆಯಲ್ಲಿ ಇದೆ. ಜಬ್ಬಲಗುಡ್ಡದ ಪೂಜಾರಿ ರಾಮಪ್ಪನ ಸಂಬಂಧಿಕರಾದ ಅಣ್ಣಮ್ಮ ಎಂಬುವಳನ್ನು ಸುಮಾರು ನೂರು ವರ್ಷಗಳ ಕೆಳಗೆ ಬಸವಿ ಬಿಟ್ಟಿದ್ದರಂತೆ. ಈಚೆಗೆ ಆ ದೇವಸ್ಥಾನದ ಪೂಜಾರಿ ತನ್ನ ಮಕ್ಕಳಲ್ಲಿ ಯಾರನ್ನಾದರೂ ಬಸವಿ ಬಿಡಲು ಇಚ್ಚೆ ಪಟ್ಟಿದ್ದ. ಆದರೆ ಊರಿನ ಪ್ರಮುಖ ಬೇಡ ಎಂದಿದ್ದಕ್ಕೆ ಬಿಟ್ಟಿಲ್ಲ. ಇಂದರಗಿ ದೇವಸ್ಥಾನದ ಪೂಜಾರಿ ಮನೆತನದವಳಾದ ನಾಗಮ್ಮನನ್ನು (೬೦ ವರ್ಷದ ಕೆಳಗೆ) ಕುಮಾರರಾಮನಿಗೆ ಬಸವಿ ಬಿಟ್ಟಿದ್ದರು. ಆಕೆಗೆ ಕುಮಾರರಾಮನು ಮೈದುಂಬಿ ಈ ವಂಶದಲ್ಲಿ ಮುಂದೆ ಈ ಸಂಪ್ರದಾಯವನ್ನು ನಡೆಸಿಕೊಂಡು ಹೋಗಿ ಎಂದೆನ್ನಲು, ಪೂಜಾರಿ ಮನೆತನದವಳಾದ ನೂಲಮ್ಮ(೬೦ ವರ್ಷ) ತನ್ನ ೪ನೇ ಮಗಳನ್ನು ಕುಮಾರರಾಮನಿಗೆ ಈಗ ೧೪ ವರ್ಷದ ಹಿಂದೆ ಬಸವಿಯನ್ನಾಗಿ ಬಿಟ್ಟಿದ್ದಾರೆ. ಈಗಲೂ ಆಕೆ ಬಸವಿಯಾಗಿಯೇ ಜೀವಿಸುತಿದ್ದಾಳೆ.

ಕರ್ನಾಟಕದ ಹಲವಾರು ಭಾಗಗಳಲ್ಲಿ ಕುಮಾರರಾಮನ ಆಚರಣೆಗಳು ನಡೆಯುತ್ತವೆ. ಕುಮಾರರಾಮನ ಬಗ್ಗೆ ಕುಮ್ಮಟದುರ್ಗ, ಸಾಗರ, ತುಮಕೂರು, ಸಂಡೂರು, ಮುಂತಾದ ಕಡೆಗಳಲ್ಲಿ ವಿಜೃಂಭಣೆಯಿಂದ ಜಾತ್ರೆಗಳು ನಡೆಯುತ್ತಿವೆ. ಮನೆ ದೈವನೆಂದು ಹಬ್ಬ, ಹುಣ್ಣಿಮೆ ಮತ್ತು ವಾರಗಳನ್ನು ನಡೆಸುವುದರ ಜೊತೆಗೆ ಹುಟ್ಟು, ಮುಟ್ಟು ಮದುವೆ ಮುಂತಾದ ಸಂದರ್ಭಗಳಲ್ಲಿ ಆಚರಣೆಗಳನ್ನು ನಡೆಸುತ್ತಾರೆ. ಪ್ರತಿ ವರ್ಷ ಜಾತ್ರೆಯಂದು ಆತನನ್ನು ಪೂಜಿಸಿ ಆರಾಧಿಸುವುದಲ್ಲದೆ ಅಂದು ಯಾರ ಮನೆಯಲ್ಲಿ ರೊಟ್ಟಿ ಸುಡುವುದಿಲ್ಲ. ಅಲ್ಲದೇ ಯಾರು ಹೊಲಗಳಿಗೆ ಗಳೇ ಕಟ್ಟುವುದಿಲ್ಲ. ಜಾತ್ರೆಯಲ್ಲಿ ಜನರು ಕುಮಾರರಾಮನ ಗುಡಿಯಲ್ಲಿ ತಮ್ಮ ಮಕ್ಕಳಿಗೆ ಜವಳ ತೆಗೆಸುವುದು ಹೆಸರಿಡುವುದು, ಅನ್ನಸಂತರ್ಪಣೆ ಇತ್ಯಾದಿ ಸಂಪ್ರದಾಯಗಳೊಂದಿಗೆ ತಮ್ಮ ನೆಂಟರಿಗೆಲ್ಲಾ ಮಾಂಸದೂಟವನ್ನು ಹಾಕುವ ಪದ್ಧತಿ ಇಂದು ಕೂಡ ಇದೆ. ಜೋಳದ ಸೂಗಟಿ ಎಡೆಮಾಡಿಸಿಕೊಂಡು ಉಂಡು ಬರುವ ವಾಡಿಕೆ ಕೂಡ ಇದೆ.

*** ಇಂದರಗಿ**

"ಇಂದರಗಿ ಕುಮ್ಮಟದುರ್ಗದಿಂದ ಸುಮಾರು ಹದಿನೆಂಟು ಮೈಲಿ ದೂರದಲ್ಲಿದೆ. ಇಲ್ಲಿ ಕುಮಾರರಾಮನ ಗುಡಿ ಇದೆ. ಕುಮಾರರಾಮನ ಗುಡಿಯಲ್ಲಿ ಆತನ ಯಾವುದೇ ಮೂರ್ತಿಯಿಲ್ಲ ಆತನ ರುಂಡವನ್ನು ದಿನಾಲೂ ಪೆಟ್ಟಿಗೆಯಲ್ಲಿಡುತ್ತಾರೆ. ಆದರೆ ಆತನ ಭರ್ಜಿ ಮತ್ತು ತುಂಬಿದ ಕೊಡ ಮಾತ್ರ ಜಗಲಿಯ ಮೇಲಿಟ್ಟು ಪೂಜೆ ಮಾಡುತ್ತಾರೆ. ಇಲ್ಲಿನ ಎಷ್ಟೋ ಮನೆತನಗಳಿಗೆ ಈತನು ಮನೆದೇವರಾಗಿದ್ದಾನೆ. ಅಲ್ಲದೆ ದಸರಾ ಹಬ್ಬದ ಒಂಭತ್ತು ದಿನವು ಕುಮಾರರಾಮನನ್ನು ಜಗಲಿಯ ಮೇಲೆ ಕೂರಿಸಿ ದಿನಂಪ್ರತಿ ಪೂಜೆ ಮಾಡುತ್ತಾರೆ. ಭಕ್ತರು ಭಜನೆ ವಾದ್ಯಗಳ ಮೂಲಕ ಕುಮಾರರಾಮನ ಮುಖವಾಡಗಳನ್ನು ಸಂಜೆ ತೆಗೆದುಕೊಂಡು ಬನ್ನಿಗಿಡಕ್ಕೆ ಹೋಗಿ ಬನ್ನಿ ಮುಡಿಯುತ್ತಾರೆ.

ಜಬ್ಬಲಗುಡ್ಡದಲ್ಲಿ ಕುಮಾರರಾಮನ ಗುಡಿ ಇದೆ. ಕುಮ್ಮಟದುರ್ಗದಲ್ಲಿರುವ ಗಂಗಾಮತಸ್ಥರೇ ಕುಮಾರರಾಮನ ಗುಡಿಯ ಪೂಜಾರರಾಗಿದ್ದಾರೆ. ಇಲ್ಲಿರುವ ಗುಡಿಯಲ್ಲಿ ಕುಮಾರರಾಮನ ಆರು ಮುಖವಾಡಗಳಿವೆ. ಜಗಲಿ ಮೇಲಿರುವ ಆರು ಮುಖವಾಡಗಳು ಭರ್ಜಿ ಹಾಗೂ ತುಂಬಿದ ಕೊಡಕ್ಕೆ ಪ್ರತಿದಿನ ಪೂಜೆ ನಡೆಯುತ್ತದೆ. ಕುಮಾರರಾಮನ ಮುಖವಾಡಗಳಿಗೆ ಬಣ್ಣ ಹೋಗಿದ್ದರೆ ಅಥವಾ ಮುಕ್ಕಾಗಿದ್ದರೆ ಮೊದಲು ಮರದ ಮೂರ್ತಿಗಳನ್ನು ಶುದ್ಧೀಕರಿಸಿಕೊಂಡು ಬರುತ್ತಾರೆ. ಬರುವಾಗ ತುಂಬಿದ ಕೊಡ ಮುಖವಾಡಗಳ ಸಮೇತ ಬರುತ್ತಾರೆ.

*** ಮಲ್ಲಾಪುರ**

ಮಲ್ಲಾಪುರ ಕುಮ್ಮಟದುರ್ಗದ ಹತ್ತಿರವಿದೆ. ಗಂಗಾವತಿಯಿಂದ ೮ ಕಿ.ಮೀ. ದೂರದಲ್ಲಿದೆ. ಈ ಮಲ್ಲಾಪುರ ಆನೆಗೊಂದಿ ರಸ್ತೆಯಲ್ಲಿ ಬರುತ್ತದೆ. ಈ ಮಲ್ಲಾಪುರದಲ್ಲಿ ಕುಮಾರರಾಮನ ಗುಡಿ ಇದೆ. ವಾಡಿಕೆಯಂತೆ ಜನರೆಲ್ಲರೂ ರಾಮಸ್ವಾಮಿ ಗುಡಿ ಎಂದು ಕರೆಯುತ್ತಾರೆ. ಇಲ್ಲಿನ ನಾಯಕ

ಸಮುದಾಯದವರು ಮಾತ್ರ ಪೂಜೆ ಮಾಡುತ್ತಾರೆ. ೧೬ ಮನೆಗಳು ಮಾತ್ರ ಪೂಜೆ ಮಾಡುತ್ತಾರೆ. ಮೊದಲು ಕುಮ್ಮಟದುರ್ಗದಲ್ಲಿಯೇ ಜಾತ್ರೆ ನಡೆಯುತ್ತಿತ್ತು, ಕೆಲವು ವೈಮನಸ್ಸಿನಿಂದ ಇಲ್ಲಿನ ಕುಮಾರರಾಮನ ಆರಾಧಕರು ತಾವೇ ತಮ್ಮ ಊರಿನಲ್ಲಿ ಜಾತ್ರೆ ಮಾಡುತ್ತಿದ್ದಾರೆ. ಆ ಜಾತ್ರೆಯು ಕುಮ್ಮಟದುರ್ಗ ಕುಮಾರರಾಮನ ಜಾತ್ರೆ ನಡೆಯುವ ದಿನವೇ ನಡೆಯುತ್ತದೆ.

*** ಕಂಪ್ಲಿ**

ಕಂಪ್ಲಿಯಲ್ಲಿ ಕೆಲವರ ಮನೆ ದೇವರು ಕುಮಾರರಾಮನಾದರೆ ಇನ್ನು ಕೆಲವರಿಗೆ ಸೋಮೇಶ್ವರನು ಮನೆ ದೇವರಾಗಿದ್ದಾನೆ. ಕುಮಾರರಾಮನು ಎಂದೆನಿಸಿಕೊಳ್ಳುವ ಪ್ರತ್ಯೇಕ ದೇವಸ್ಥಾನ ಇಲ್ಲಿ ಕಂಡು ಬರುವುದಿಲ್ಲ. ಆದರೆ ಕುಮಾರರಾಮನ ತಂದೆ ಕಂಪಿಲರಾಯನ ಮನೆ ದೇವರಾದ ಸೋಮೇಶ್ವರ ದೇವಸ್ಥಾನದಲ್ಲಿ ಕುಮಾರರಾಮನ ಶಿಲ್ಪವಿದೆ. ಇದಕ್ಕೆ ಸೋಮೇಶ್ವರ ಜಾತ್ರೆಯ ದಿನ ವಿಶೇಷ ಪೂಜೆ ನಡೆಯುತ್ತದೆ. ದೇವಸ್ಥಾನದ ಆಡಳಿತವನ್ನು ತಳವಾರರು ನೋಡಿಕೊಳ್ಳುತ್ತಾರೆ.

ಆದರೆ ಪೂಜಾರಿಗಳು ಜಂಗಮರಾಗಿದ್ದಾರೆ. ಇಲ್ಲಿನ ಜನರು ಸೋಮವಾರ ಮತ್ತು ರವಿವಾರ ಆತನ ವಾರಗಳಾಗಿ ಪೂಜಿಸುತ್ತಾರೆ. ಜೊತೆಗೆ ಅಂದು ಉಪವಾಸ ಮಾಡುತ್ತಾರೆ. ಇನ್ನು ಏನಾದರೂ ಹರಕೆ ತಲುಪಿಸುವುದು, ಬ್ಯಾಟಿ ಕೊಡುವುದು ಹರಕೆ ಸಲ್ಲಿಸುವುದು ಇದ್ದರೆ ಕುಮ್ಮಟದುರ್ಗಕ್ಕೆ ಹೋಗುತ್ತಾರೆ.

ಮೊದಲು ಇಲ್ಲಿ ಗುಂಡ ಬ್ರಹ್ಮಯ್ಯನ ಆಚರಣೆ ಪ್ರಚಲಿತದಲ್ಲಿತ್ತೆಂದು ತಿಳಿದುಬರುತ್ತದೆ. ಅಂದರೆ ಶೂಲವನ್ನು ಸ್ಥಾಪಿಸಿ ಅದರಲ್ಲಿ ಶಿವನನ್ನು ಪ್ರತಿಷ್ಠಾಪಿಸುತ್ತಾರೆ. ಗುಂಡ ಬ್ರಹ್ಮಯ್ಯನಿಗೆ ವಿಶೇಷ ಪೂಜೆ ನಡೆಯುತ್ತದೆ. ಈ ಆಚರಣೆಗಳು ನಮಗೆ ಇಂದು ಕಂಡುಬರುವುದಿಲ್ಲ.

**ಕುಮಾರರಾಮನ ಜಾತ್ರೆಗಳು**

ಕರ್ನಾಟಕ ಇತಿಹಾಸದಲ್ಲಿ ಮಧ್ಯಕಾಲೀನ ಕಾಲವು ಅತಿ ಮಹತ್ವವಾದದ್ದು. ಏಕೆಂದರೆ ಮಧ್ಯಕಾಲೀನ ಕರ್ನಾಟಕವನ್ನು ಆಳ್ವಿಕೆ ಮಾಡಿದ ರಾಜಮನೆತನಗಳಲ್ಲಿ ಕುಮ್ಮಟದುರ್ಗದ ನಾಯಕರು ರಾಜಕೀಯವಾಗಿ ಅಷ್ಟೇನೂ ಮಹತ್ವದ ರಾಜರೆಂದು ಕಂಡುಬರುವುದಿಲ್ಲ. ಅದರಲ್ಲೂ ಪರನಾರಿ ಸಹೋದರನೆಂದು ಹೆಸರಾದ ಕುಮಾರರಾಮನು ಇಂದಿಗೂ ಜನಮಾನಸದಲ್ಲಿ ನೆಲೆ ನಿಂತು ಆದರ್ಶ ವ್ಯಕ್ತಿಯಾಗಿ ದೈವಸಮಾನರಾಗಿ ಪೂಜಿಸಲ್ಪಡುವ ವ್ಯಕ್ತಿಯಾಗಿದ್ದಾನೆ. ಕುಮಾರರಾಮನ ಆದರ್ಶ ವ್ಯಕ್ತಿತ್ವ ಎಷ್ಟರಮಟ್ಟಿಗೆ ವ್ಯಾಪಿಸಿತ್ತೆಂದರೆ ಆತನನ್ನು ದೇವರಂತೆ ಆರಾಧನೆ ಮಾಡುತ್ತಾರೆ. ಇಂದಿಗೂ ಕರ್ನಾಟಕದಾದ್ಯಂತ ಈತನನ್ನು ದೈವೀ ಸ್ವರೂಪದಲ್ಲಿ ಕಾಣುತ್ತಾ ಹಬ್ಬ ಮತ್ತು ಜಾತ್ರೆಗಳನ್ನು ಆಚರಿಸುತ್ತಾರೆ. ಉತ್ತರ ಕರ್ನಾಟಕದ ಕೊಪ್ಪಳ, ಬಳ್ಳಾರಿ ಜಿಲ್ಲೆಯ ಅನೇಕ ಭಾಗಗಳಲ್ಲಿ ಕುಮಾರರಾಮನ ಜಾತ್ರೆಗಳು, ಆಚರಣೆಗಳು ಇಂದಿಗೂ ಆಚರಣೆಯಲ್ಲಿವೆ. ದಕ್ಷಿಣ ಕರ್ನಾಟಕದಲ್ಲಿ ಕುಮಾರರಾಮನ ಆಚರಣೆಗಳ ಜೊತೆಗೆ ಜಾತ್ರೆಗಳು ನಡೆಯುತ್ತವೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕುಮಾರರಾಮನ ಹಬ್ಬವೆಂದು ಆಚರಿಸುತ್ತಾರೆ.

ಪ್ರಸ್ತುತದಲ್ಲಿ ಕರ್ನಾಟಕದಾದ್ಯಂತ ಒಂದಲ್ಲಾ ಒಂದು ಹೆಸರಿನಲ್ಲಿ ಕುಮಾರರಾಮನ ಜಾತ್ರೆ, ಹಬ್ಬ, ಆಚರಣೆಗಳು ನಡೆಯುತ್ತಿರುವುದನ್ನು ಕಾಣಬಹುದು. ಕರ್ನಾಟಕದಲ್ಲಿ ಕುಮಾರರಾಮನನ್ನು ಪ್ರಾದೇಶಿಕವಾಗಿ ಹಲವು ಕಡೆ ಕೆಲವು ಸಮುದಾಯಗಳು ತಮ್ಮ ದೈವವಾಗಿಸಿಕೊಂಡು ಕುಮಾರರಾಮನ ಹಬ್ಬವನ್ನು ಆಚರಿಸುತ್ತಾರೆ. ಕೆಲವು ಕಡೆ ಅವನ ಹಬ್ಬ ಜಾತ್ರೆಗಳು ಸಾರ್ವತ್ರಿಕವಾಗಿ ಜನಾಚರಣೆಗೆ ಒಳಗಾಗಿವೆ. ಕುಮಾರರಾಮನ ಜಾತ್ರೆ, ಹಬ್ಬ ಆಚರಣೆಗಳು ಕರ್ನಾಟಕದಾದ್ಯಂತ ಬೇರೆ ಬೇರೆ ಹೆಸರುಗಳಿಂದ ನಡೆಯುತ್ತವೆ. ಕೊಪ್ಪಳ, ಬಳ್ಳಾರಿ, ಉತ್ತರ ಕನ್ನಡದ ಭಾಗಗಳಲ್ಲಿ ಕುಮಾರರಾಮನ ಆಚರಣೆಗಳು, ಜಾತ್ರೆಗಳು ನಡೆಯುತ್ತವೆ. ಕುಮಾರರಾಮನ ಆದರ್ಶ ವ್ಯಕ್ತಿತ್ವದ ಗುಣಗಳು ಜನಮಾನಸದಲ್ಲಿ ನೆಲೆಗೊಂಡಿರುವುದರಿಂದ ಅವನ ಜೀವನದ ಮೌಲ್ಯಗಳು, ಗುಣಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವ ಸಲುವಾಗಿ ಪ್ರಚಾರ ಮಾಡುವ ಉದ್ದೇಶದಿಂದ ಅನೇಕ ಆಚರಣೆಗಳನ್ನು ಕುಮಾರರಾಮನ ಹೆಸರಿನಲ್ಲಿ ಆಚರಿಸುತ್ತಿದ್ದಾರೆ. ರಾಯಚೂರು, ಯಾದಗಿರಿ, ಗುಲ್ಬರ್ಗಾ, ಬಿಜಾಪುರ, ಬಾಗಲಕೋಟೆ, ಧಾರವಾಡ, ಹಾವೇರಿ ಹಾಗೂ ಗದಗ ಜಿಲ್ಲೆಗಳಲ್ಲಿ ಕಬ್ಬೇರ ಸಮುದಾಯದವರು ತಮ್ಮ ಕುಟುಂಬದ ಗಂಡುಮಕ್ಕಳ ಮದುವೆಯ ಸಂದರ್ಭದಲ್ಲಿ ಈರ, ಈರ್ಲ, ಈರಣ್ಣ, ಬೀರ ಮುಂತಾದ ಹೆಸರುಗಳಲ್ಲಿ ಆಚರಣೆ ನಡೆಸುತ್ತಿದ್ದು, ಕುಮಾರರಾಮನ ಕುರಿತಾಗಿರುವ ಆಚರಣೆಗಳಾಗಿವೆ.[೫೪]

ಕರ್ನಾಟಕದಲ್ಲಿ ಕುಮಾರರಾಮನ ಜಾತ್ರೆಯನ್ನು ಹಬ್ಬಗಳ ರೀತಿಯಲ್ಲಿ ಆಚರಣೆ ಮಾಡುತ್ತಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಆಚರಿಸುವ ಶೂಲ ಹಬ್ಬವು ಕುಮಾರರಾಮನಿಗೆ ಸಂಬಂಧಿಸಿದೆ. ಪ್ರಸ್ತುತವಾಗಿ ಉತ್ತರ ಕನ್ನಡದಲ್ಲಿ ಪ್ರಚಲಿತವಿರುವಂತೆ ಕುಮಾರರಾಮ ಅಥವಾ ಗಾಮನ ಹಬ್ಬಕ್ಕೆ ಶೂಲ ಹಬ್ಬವೆಂದು ಕರೆಯುತ್ತಾರೆ. ಶಿರಸಿಯಲ್ಲಿ ಶೂಲ ಹಬ್ಬವೆಂದು ಆಚರಿಸುತ್ತಾರೆ. ಶೂಲ ಹಬ್ಬವನ್ನು ಕುರಿತಂತೆ ನಂಜುಂಡನ ರಾಮನಾಥ ಚರಿತೆಯಲ್ಲಿ ಅನೇಕ ಕಡೆ ಉಲ್ಲೇಖಿಸಲಾಗಿದೆ. ಪಾಂಚಾಳಗಂಗನ ಕಾವ್ಯದಲ್ಲಿ ಓರಂಗಲ್ಲಿನ ದೊರೆಯ ಬಳಿ ಇದ್ದ 'ಬೊಲ್ಲ' ಎನ್ನುವ ಕುದುರೆಯನ್ನು ಪಡೆಯಲು ಓರಂಗಲ್ಲಿನ ಸಮೀಪದ ಗುಂಡಬ್ರಹ್ಮಯ್ಯನ ಗುಡಿಯಲ್ಲಿ ತಂಗಿದಾಗ ಕುಮಾರರಾಮನ ಕನಸಿನಲ್ಲಿ ದೇವರು ಪ್ರತ್ಯಕ್ಷವಾಗಿ ಆಶೀರ್ವದಿಸುತ್ತದೆ. ಅನಂತರ ಕುಮಾರರಾಮನಿಗೆ ಬೊಲ್ಲ ಎನ್ನುವ ಕುದುರೆ ದೊರೆಯುತ್ತದೆ. ಈ ರೀತಿಯಾಗಿ ತನ್ನ ಊರಿಗೆ ಮರಳಿ ಬಂದು ತಂದೆಯಾದ ಕಂಪಿಲರಾಯನ ಅಪ್ಪಣೆ ಪಡೆದು ಶೂಲದ ಹಬ್ಬವನ್ನು ಆಚರಿಸುತ್ತಾನೆ.

ಹೀಗೆ ಮಧ್ಯಕಾಲೀನ ಕರ್ನಾಟಕದ ಆಳ್ವಿಕೆಯಲ್ಲಿ ಕುಮಾರರಾಮ ರಾಜಕೀಯವಾಗಿ ಅಷ್ಟೇನು ವಿರಾಜಿಸದೇ ಸಾಂಸ್ಕೃತಿಕವಾಗಿ ಜನರ ಮನಸ್ಸಲ್ಲಿ ಶಾಶ್ವತವಾಗಿ ಉಳಿಯಲು ಅವನ ಆದರ್ಶ ಗುಣ ತತ್ವಗಳೇ ಕಾರಣವಾಗಿವೆ. ಹೀಗಾಗಿ ಅವನ ಆದರ್ಶಗಳನ್ನು ಹಬ್ಬಗಳು, ಆಚರಣೆಗಳನ್ನು ದೈವಿಕ ನೆಲೆಯಲ್ಲಿ ಆಚರಿಸುತ್ತಾರೆ. ಈ ಶೂಲದ ಹಬ್ಬವು ಕರ್ನಾಟಕದಲ್ಲಿ ಕುಮಾರರಾಮನ ಹಬ್ಬವಾಗಿ ಮಾರ್ಪಾಡು ಹೊಂದಿರುವ ಸಾಧ್ಯತೆಗಳಿವೆ. ಈ ಶೂಲ ಹಬ್ಬದ ಕುರಿತು ಕುಮಾರರಾಮನ ಕಾವ್ಯಗಳಲ್ಲಿ ಅನೇಕ ರೀತಿಯ ವಿವರಗಳನ್ನು ಕಾಣಬಹುದು. ಕರ್ನಾಟಕದಲ್ಲಿ ಕುಮಾರರಾಮನ ಹೆಸರಿನಲ್ಲಿ ಅನೇಕ ಹಬ್ಬ ಆಚರಣೆಗಳನ್ನು ನಡೆಯುವುದನ್ನು ಕಾಣುತ್ತೇವೆ. ಪ್ರಾದೇಶಿಕವಾಗಿ ಕೆಲವು

ಸಮುದಾಯಗಳು ಕುಮಾರರಾಮನನ್ನು ತಮ್ಮ ಆರಾಧ್ಯ ದೈವವಾಗಿರಿಸಿಕೊಂಡು ಹಬ್ಬಗಳನ್ನು ಆಚರಿಸಿಕೊಂಡು ಬಂದಿದ್ದಾರೆ. ಕೆಲವು ಹಬ್ಬಗಳು, ಆಚರಣೆಗಳ ಜೊತೆಗೆ ಜಾತ್ರೆಗಳು ಸಹ ಸಾರ್ವತ್ರಿಕವಾಗಿ ನಡೆಯುವುದನ್ನು ಕಾಣುತ್ತೇವೆ. ಉತ್ತರ ಕರ್ನಾಟಕ ಭಾಗಗಳಾದ ಬಳ್ಳಾರಿ, ಕೊಪ್ಪಳ ಜಿಲ್ಲೆಯಲ್ಲಿನ ಗ್ರಾಮಗಳಲ್ಲಿ ನಡೆಯುವ ಕುಮಾರರಾಮನ ಜಾತ್ರೆಗಳು, ಹಬ್ಬಗಳು ಅವನ ಸ್ಮರಣೆಗಾಗಿಯೇ ಆಚರಿಸುವುದನ್ನು ನೋಡಬಹುದು. ಪ್ರಸ್ತುತದಲ್ಲಿ ಕುಮಾರರಾಮನ ಜಾತ್ರೆಯನ್ನು ಮಾಡುವ ಪ್ರಮುಖ ಸ್ಥಳಗಳೆಂದರೆ ಕೊಪ್ಪಳ ಜಿಲ್ಲೆಯ ಕುಮ್ಮಟದುರ್ಗ, ಮಲ್ಲಾಪುರ ಸುತ್ತಮುತ್ತಲಿನ ಗ್ರಾಮಗಳಲ್ಲಿ ನಡೆಯುವ ಜಾತ್ರೆಗಳು ವಿಶೇಷವಾಗಿವೆ.

ಬಳ್ಳಾರಿ ಜಿಲ್ಲೆಯ ಸೊಂಡೂರು ತಾಲ್ಲೂಕಿನಲ್ಲಿ ಕಂಡುಬರುವ ರಾಮನದುರ್ಗ (ಹೊಸಮಲೆದುರ್ಗ)ದಲ್ಲಿ ಇಂದಿಗೂ ಕುಮಾರರಾಮನ ಜಾತ್ರೆ ನಡೆಯುತ್ತದೆ. ಇದೇ ಸೊಂಡೂರಿನಿಂದ ದಕ್ಷಿಣಕ್ಕೆ ಹತ್ತು ಕಿಲೋಮೀಟರ್ ಅಂತರದಲ್ಲಿ ದೇವಗಿರಿಯಲ್ಲಿ ಕುಮಾರರಾಮಸ್ವಾಮಿಯ ದೇವಾಲಯವಿದೆ. ಜನಪದ ಕಾವ್ಯಗಳ ಪ್ರಕಾರ ಇದು ಕುಮಾರರಾಮನೇ ಎಂದು ನಂಬಿಕೆ ಇಟ್ಟಿರುವ ಸ್ಥಳೀಯರು ಪ್ರತಿವರ್ಷ ಜಾತ್ರಾ, ಉತ್ಸವಗಳನ್ನು ನಡೆಸುತ್ತಾರೆ. ಇದೇ ಸೊಂಡೂರು ತಾಲ್ಲೂಕಿಗೆ ಸೇರುವ ಮೆಟ್ರಿಕಿಯಲ್ಲಿ ಕುಮಾರರಾಮನ ದೇವಾಲಯವಿದೆ. ಇಲ್ಲಿ ಪ್ರತಿ ವರ್ಷ ಮೇ/ ಜೂನ್ ತಿಂಗಳ ಬೇಸಿಗೆಯ ಸಂದರ್ಭದಲ್ಲಿ ನಡೆಯುತ್ತದೆ. ಪ್ರತಿವರ್ಷಕ್ಕೊಮ್ಮೆ ಪೆಟ್ಟಿಗೆ ದೇವರನ್ನು ಹೊರತೆಗೆದು ಕುಮಾರರಾಮನ ತಲೆಯನ್ನು ಹೊತ್ತು ಕುಣಿಯುತ್ತಾರೆ. ಇದನ್ನೇ ಅಲ್ಲಿನ ಸ್ಥಳೀಯರು 'ಕಾಲಾಟ' ಎಂದು ಕರೆಯುತ್ತಾರೆ. ಬಳ್ಳಾರಿ ತಾಲ್ಲೂಕಿಗೆ ಸೇರುವ ರಾಂಪುರದಲ್ಲೂ ಕುಮಾರರಾಮನ ನೆನಪಿಗಾಗಿ 'ಚೆಂಡಿನಾಟ ಉತ್ಸವ' ನಡೆಯುತ್ತದೆ.

ಉತ್ತರ ಕನ್ನಡ ಜಿಲ್ಲೆಯ ನಾನಾ ಭಾಗಗಳಲ್ಲಿ ಕುಮಾರರಾಮನ ಜಾತ್ರೆಗಳು, ಉತ್ಸವಗಳು ನಡೆಯುತ್ತವೆ. ಮುಖ್ಯವಾಗಿ ಹೊನ್ನಾವರ ತಾಲ್ಲೂಕಿನ 'ಅಣಿಲಗೋಡು' ಹಾಗೂ 'ಶಿರಸಿ'ಯಲ್ಲಿ ಕುಮಾರರಾಮನ ಜಾತ್ರೆ ಮತ್ತು ಶೂಲದಹಬ್ಬವನ್ನು ಆಚರಿಸಲಾಗುತ್ತದೆ. ಇಲ್ಲಿನ ವಿಶೇಷವೇನೆಂದರೆ ಅಲ್ಲಿನ ಸ್ಥಳೀಯರು ಜಾತ್ರೆಯ ದಿವಸ ಶೂಲದ ಕಂಬಗಳನ್ನು ಏರಿ ವಿಜಯೋತ್ಸವವನ್ನು ಆಚರಿಸುವ ಮೂಲಕ ಕುಮಾರರಾಮನ ದೇವರ ಹೆಸರಿನಲ್ಲಿ ಸಂತಾನಭಾಗ್ಯ ಬೇಡುತ್ತಾರೆ. ಹರಕೆಗಳನ್ನು ಹೊತ್ತು ಇಷ್ಟಾರ್ಥ ಫಲಗಳನ್ನು ಬೇಡುತ್ತಾರೆ.

ಶಿವಮೊಗ್ಗ ಜಿಲ್ಲೆಯಲ್ಲಿನ ಸೊರಬ ಮತ್ತು ಸಾಗರ ತಾಲ್ಲೂಕಿನ ಕೆಲ ಪ್ರದೇಶಗಳಲ್ಲಿ 'ದೊಡ್ಡ ಬಾಗಿಲು ಹಬ್ಬ' ನಡೆಯುತ್ತದೆ. ಇಲ್ಲಿ ವಿಶೇಷ ಏನೆಂದರೆ ಕುಮಾರರಾಮ, ಕಂಪಿಲರಾಯ ಮತ್ತು ಪರಿವಾರದವರ ತಲೆಗಳನ್ನು ಹೊತ್ತು ಮೆರವಣಿಗೆ ಮಾಡುತ್ತಾರೆ. ಆಗ ಪೂಜೆ ಸಲ್ಲಿಸಿ ಇಷ್ಟಾರ್ಥ ಸಿದ್ಧಿಗಳನ್ನು ಕೋರಿಕೊಳ್ಳುತ್ತಾರೆ. ಇದೇ ಜಿಲ್ಲೆಯ ಹೊಸನಗರ ಮತ್ತು ತೀರ್ಥಹಳ್ಳಿಯಲ್ಲಿ 'ದೊಂಬರ ಹಬ್ಬ'ವನ್ನು ಆಚರಿಸಲಾಗುತ್ತದೆ. ಇಲ್ಲಿಯೂ ಸಹ ಕುಮಾರರಾಮನ ತಲೆಯನ್ನು ಆರಾಧಿಸುವ ಪದ್ಧತಿ ಪ್ರಸ್ತುತದಲ್ಲಿ ಆಚರಣೆಯಾಗಿದೆ.

ಧಾರವಾಡ, ಬೆಳಗಾವಿಯ 'ಸುಲದಾಳ' ತುಮಕೂರಿನ 'ಕೊರಟಗೆರೆ' ಹಾಗೂ ಇತ್ತೀಚಿಗೆ ಶೋಧಿತವಾಗಿರುವ ಶಿರಾ ತಾಲ್ಲೂಕಿನ 'ರಾಮನಹಳ್ಳಿ'ಯಲ್ಲಿ ಕುಮಾರಸ್ವಾಮಿ ದೇವಾಲಯವಿದ್ದು ಕುಮಾರರಾಮನನ್ನು ದೈವೀಪುರುಷನಾಗಿ ಕಾಣುವುದು ಕಂಡುಬರುತ್ತದೆ.

**ಕುಮ್ಮಟದುರ್ಗದ ಜಾತ್ರೆ**

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನಲ್ಲಿರುವ ಕುಮ್ಮಟದುರ್ಗವು ತಾಲ್ಲೂಕು ಕೇಂದ್ರದಿಂದ ೧೬ ಕಿ.ಮೀ. ಗಳಷ್ಟು ಅಂತರದಲ್ಲಿದೆ. ಮುಕ್ಕುಂಪಿಯಿಂದ ಸುಮಾರು ೨ ಕಿ.ಮೀ. ದೂರಕ್ಕೆ ಚಲಿಸಿದರೆ ಕಲ್ಲುಗುಡ್ಡದ ಸಮೂಹ ಕಂಡುಬರುತ್ತದೆ. ಈ ಗುಡ್ಡಗಳ ಪರಿಸರದಲ್ಲಿಯೇ ಕುಮ್ಮಟದುರ್ಗವು ಇದೆ. ಕುಮ್ಮಟದುರ್ಗದಲ್ಲಿ ಕುಮಾರರಾನ ಜಾತ್ರೆಯು ಪ್ರತೀ ವರ್ಷವು ನಡೆಯುತ್ತದೆ. ಏಪ್ರಿಲ್-ಮೇ ತಿಂಗಳಲ್ಲಿ ಹುಲಿಗಿ ಜಾತ್ರೆಯ ಒಂದು ದಿನ ಮುಂಚಿತವಾಗಿ ಕುಮ್ಮಟದುರ್ಗದ ಕುಮಾರರಾನ ಜಾತ್ರೆ ನಡೆಯುತ್ತದೆ. ಈ ಜಾತ್ರೆಯ ವಿಶೇಷವೇನೆಂದರೆ ಹುಲಿಗಿ ಜಾತ್ರೆಗೆ ಕುಮ್ಮಟದುರ್ಗದಿಂದ ಅಕ್ಕಿಪಡಿಯನ್ನು ಕಳುಹಿಸಲಾಗುತ್ತದೆ. ಕುಮ್ಮಟದುರ್ಗದಿಂದ ಅಕ್ಕಿಪಡಿ ಹೋದ ನಂತರವೇ ಹುಲಿಗಿಯಲ್ಲಿ ಉಗ್ಗಿ ಪವಾಡ ನಡೆಯುತ್ತದೆ. ಕುಮಾರರಾಮನ ಜಾತ್ರೆಯು ಆರು ದಿನಗಳ ಕಾಲ ನಡೆಯುತ್ತದೆ. ಈ ಜಾತ್ರೆಯು ಆಗಿ ಹುಣ್ಣಿಮೆಯಿಂದಲೇ ಪ್ರಾರಂಭವಾಗುತ್ತದೆ. ಆಗಿ ಹುಣ್ಣಿಮೆಯ ಮಾರನೆಯ ದಿನ ಇಂದರಗಿಯಲ್ಲಿ ಸಾಯಂಕಾಲ ಕುಮಾರರಾಮ ಮತ್ತು ಆತನ ಸಂಗಡಿಗರೆಂದು ತಿಳಿಸುವ ಒಟ್ಟು ಆರು ಕಟ್ಟಿಗೆಯ ಮುಖವಾಡಗಳನ್ನು ಪೆಟ್ಟಿಗೆಯಿಂದ ಹೊರ ತೆಗೆದು ಪೂಜೆ ಮಾಡುತ್ತಾರೆ. ನಂತರ ಗಂಗಾ ಪೂಜೆ ಮಾಡುತ್ತಾರೆ. ಗಂಗಾ ಪೂಜೆಯ ನಂತರ ಪೂಜಾರಿಗೆ ಕೇಲು ಹೊರಿಸಿಕೊಂಡು ಮರಳಿ ಗುಡಿಗೆ ಹೋಗುತ್ತಾರೆ. ಕೇಲನ್ನು (ಮಣ್ಣಿನ ಬಿಂದಿಗೆ) ಗುಡಿ ತುಂಬಿಸಿದ ನಂತರ ದೇವರಿಗೆ ಕಂಕಣ ಕಟ್ಟಿ, ಉಡಿ ತುಂಬಲಾಗುತ್ತದೆ. ಉಡಿ ತುಂಬಿಸಿದ ನಂತರ ಬಿಲ್ಲಾಟ ಎಂಬ ಆಚರಣೆ ನಡೆಯುತ್ತದೆ. ಬಿಲ್ಲಾಟವೆಂದರೆ ಪ್ರಾಯಶಃ "ರಾಜನು ಯುದ್ಧಕ್ಕೆ ಹೊರಟ ಸಂಕೇತವಾಗಿರಬೇಕೆಂದೇ ಎನಿಸುತ್ತದೆ."[೫೫] ಬಿಲ್ಲಾಟದ ತರುವಾಯ ಕುರಿಯನ್ನು ಬಲಿ ಕೊಡುತ್ತಾರೆ. ಬಲಿ ಕೊಟ್ಟ ಕುರಿಯನ್ನು ಪ್ರಸಾದದ ರೂಪದಲ್ಲಿ ಭಕ್ತರಿಗೆ ಕೊಡಲಾಗುತ್ತದೆ. ಎರಡನೆಯ ದಿನ ಇಂದರಗಿ ಗ್ರಾಮದ ಭಕ್ತಾದಿಗಳು ಕುಮಾರರಾಮನಿಗೆ ಹಣ್ಣು ಕಾಯಿ ಮಾಡಿಸುತ್ತಾರೆ. ಪ್ರತಿಯೊಂದು ಮನೆಯಲ್ಲಿ ಹೋಳಿಗೆ, ಉಗ್ಗಿ ಸಿಹಿ ಅಡುಗೆ ಮಾಡಿ ದೇವರಿಗೆ ಎಡೆ ಹಾಕಿ ನಂತರ ಊಟ ಮಾಡುತ್ತಾರೆ. ಮೂರನೆಯ ದಿನ ಇಂದರಗಿಯಲ್ಲಿನ ಆರು ಮುಖಗಳನ್ನು ಜಬ್ಬಲ ಗುಡ್ಡಕ್ಕೆ ತರುತ್ತಾರೆ. ಅಂದು ಸಂಜೆ ಕುಮ್ಮಟದುರ್ಗದ ಪೂಜಾರಿಗಳ ಮನೆಯ ಪೆಟ್ಟಿಗೆಯಲ್ಲಿರಿಸಿರುವ ಕುಮಾರರಾಮ, ಹೋಲಿಕೆರಾಮ ಮತ್ತು ಪರಿವಾರದವರ ನಾಲ್ಕು ತಲೆಗಳಿಗೆ ಪೂಜೆ ಸಲ್ಲಿಸಿ ಇಂದರಗಿಯ ಆರು ಮುಖವಾಡದ ಪಕ್ಕದಲ್ಲಿಯೇ ಇರಿಸಲಾಗುತ್ತದೆ. ಜಬ್ಬಲಗುಡ್ಡದಲ್ಲಿ ದೇವರನ್ನು ಪ್ರತಿಷ್ಠಾಪಿಸಿದ ಮಾರನೆಯ ದಿನ ಸಂಜೆ ೧೦ ತಲೆಗಳನ್ನು ಹತ್ತು ಜನ ಕೈಯಲ್ಲಿರಿಸಿಕೊಂಡು ಮುಕ್ಕುಂಪಿಗೆ ಹೊರಡುತ್ತಾರೆ. ಹೀಗೆ ಮುಕ್ಕುಂಪಿಯಲ್ಲಿನ ಎರಡು ತಲೆಗಳನ್ನು ಸೇರಿಸಿ ೧೨ ತಲೆಗಳನ್ನು ಮುಕ್ಕುಂಪಿಯಲ್ಲಿ ರಾತ್ರಿ ಮೆರವಣಿಗೆ ಮಾಡಿ ಗುಡಿಯ ಮುಂಭಾಗ ಗದ್ದಿಗೆಯ ಮೇಲೆ ಕೂರಿಸುತ್ತಾರೆ. ರಾತ್ರಿ ಮುಖವಾಡಗಳನ್ನು ಕೂರಿಸಿದ ನಂತರ

ವಿಶೇಷ ಪೂಜೆ ಸಲ್ಲಿಸಿ ೧೨ ಮುಖವಾಡಗಳನ್ನು ಬಣ್ಣದ 'ವಾಕಮಲ್ಲ' ಬಟ್ಟೆಯಿಂದ ಮುಚ್ಚಲಾಗುತ್ತದೆ. ಮಾರನೆಯ ದಿನ ಕುಮ್ಮಟದುರ್ಗದಲ್ಲಿ ಕುರಿ, ಕೋಳಿಗಳನ್ನು ಬಲಿ ಕೊಡುವುದರ ಮೂಲಕ ಹರಕೆ ತೀರಿಸುತ್ತಾರೆ. ನಂತರ ಓಕಳಿ ಆಡುವ ಶಾಸ್ತ್ರ, ನೀರಗೂಳಿನ ಹಂಚಿಕೆಯಾದ ನಂತರ ೧೨ ತಲೆಗಳಿಗೆ ಆರತಿ ಬೆಳಗಿ ಪೂಜೆಯ ನಂತರ ಪ್ರತೀ ಹಳ್ಳಿಯ ಭಕ್ತರಿಗೆ ಅಕ್ಕಿಪಡಿ ಮತ್ತು ತೆಂಗಿನ ಕಾಯಿ ಓಳನ್ನು ಹಂಚಲಾಗುತ್ತದೆ. ಅಕ್ಕಿಪಡಿಯನ್ನು ಮೊಟ್ಟ ಮೊದಲಿಗೆ ಹುಲಿಗಿಗೆ ಕೊಡುತ್ತಾರೆ. ಈ ಅಕ್ಕಿ ಹೋದ ತರುವಾಯವೇ ಹುಲಿಗಿ ಜಾತ್ರೆ ಪ್ರಾರಂಭವಾಗುತ್ತದೆ. ಜಾತ್ರೆಯಾದ ಮಾರನೆಯ ದಿನ ಆಯಾ ಊರಿನ ದೇವರುಗಳನ್ನು ಮುಖವಾಡಗಳನ್ನು ಆಯಾ ಊರಿಗೆ ಮರಳಿ ಒಯ್ಯಲಾಗುತ್ತದೆ. ಇಂದರಗಿಯವರು ತಮ್ಮ ಊರಿನಿಂದ ತಂದ ಕೇಲನ್ನು ಪೂಜಾರಿಯ ಮೂಲಕ ತಮ್ಮ ಊರಿಗೆ ಮರಳಿ ಒಯ್ದು ದೇವರ ಗುಡಿಯಲ್ಲಿ ಪ್ರತಿಷ್ಠಾಪಿಸುವುದರೊಂದಿಗೆ ಕುಮ್ಮಟದುರ್ಗದ ಕುಮಾರರಾಮನ ಜಾತ್ರೆ ಮುಕ್ತಾಯವಾಗುತ್ತದೆ.

**ಕುಮಾರರಾಮನ ಆರಾಧನೆಗೆ ಸಂಬಂಧಿಸಿದ ನಂಬಿಕೆಗಳು**

ಕುಮಾರರಾಮನು ಸಾಮಾನ್ಯ ಅರಸನಾಗಿದ್ದು ಇವನ ಆದರ್ಶ ಗುಣಗಳಿಂದ ಜನರಲ್ಲಿ ನಂಬಿಕೆಯನ್ನು ಗಳಿಸಿಕೊಂಡಿದ್ದಾನೆ. ಕುಮಾರರಾಮನಿಗೆ ಸಂಬಂಧಿಸಿದ ನಂಬಿಕೆಗಳು ಜನಸಾಮಾನ್ಯರು ತಮ್ಮ ದಿನನಿತ್ಯ ಬದುಕಿನ ಕ್ರಿಯಾಶೀಲತೆಯಲ್ಲಿ ಅಳವಡಿಸಿಕೊಂಡಿದ್ದಾರೆ. ಹಾಗೆಯೇ ಮಕ್ಕಳಾಗದ ಸ್ತ್ರೀ ಆತನ ಹೆಸರಿನಲ್ಲಿ ಹರಕೆ ಕಟ್ಟಿಕೊಂಡು ಗಂಡು ಮಗುವನ್ನು ಹೆತ್ತರೆ ನಿನ್ನ ಹೆಸರನ್ನೇ ಕರೆಯುತ್ತೇನೆಂದು ಹರಕೆ ಹೊರುತ್ತಾರೆ. ಕುಮಾರರಾಮನು ಬೇಡರ ಕುಲದವನಾಗಿದ್ದರಿಂದ ಆತನ ಪ್ರತೀಕವಾಗಿ ಕುಮಾರರಾಮ ಎಂದು ನಾಮಕರಣ ಮಾಡುತ್ತಾರೆ. ಜೊತೆಗೆ ಕುಮಾರರಾಮನ ಆದರ್ಶ ವ್ಯಕ್ತಿತ್ವ, ಶೌರ್ಯ, ಪರಾಕ್ರಮ, ತ್ಯಾಗ, ಶೀಲ, ಚಾರಿತ್ರ್ಯ, ಸ್ತ್ರೀಯರ ಬಗ್ಗೆ ಗೌರವ ಇಂತಹ ಸಾಮಾಜಿಕ ಮೌಲ್ಯಗಳಿರುವ ವ್ಯಕ್ತಿಯ ಹೆಸರಿಟ್ಟುಕೊಂಡರೆ ತಮ್ಮ ವ್ಯಕ್ತಿತ್ವವೂ ಹಾಗೆಯೇ ಇರುತ್ತದೆ ಎಂಬ ನಂಬಿಕೆ ಜನಸಾಮಾನ್ಯರಲ್ಲಿ ಇರುವುದರಿಂದ ಕುಮಾರರಾಮನು ನಂಬಿಕಸ್ತ ದೈವವಾಗಿ ಕಾಣಿಸಿಕೊಂಡಿದ್ದಾನೆ. ಕುಮಾರರಾಮನಿಗೆ ಸಂಬಂಧಿಸಿದ ಆಚರಣೆಗಳು ವಿಭಿನ್ನ ಸಂಸ್ಕೃತಿಗಳಲ್ಲಿ ಬೆಳೆದುಬಂದಿದ್ದು ಆತನ ಸಂಸ್ಕೃತಿಯ ವಿವರಗಳು ಆತನ ಸಮುದಾಯವಾದ ಬೇಡರಲ್ಲಿ ಮಾತ್ರವಲ್ಲದೇ ಸಮಾಜದ ವಿಭಿನ್ನ ಸಮುದಾಯಗಳ ಜೊತೆಗೆ ಅವನ ಸಂಸ್ಕೃತಿ, ಜನಪದರ ಆಚರಣೆಯ ಮೂಲಕ ವಿಕಾಸಗೊಂಡಿವೆ.

ಕುಮ್ಮಟದರಸರು ಚಾರಿತ್ರಿಕ ವ್ಯಕ್ತಿಗಳಾಗಿ ಬೆಳಕಿಗೆ ಬಂದಿರುವುದು ಎಷ್ಟು ಸತ್ಯವೋ ಅವರ ಕಾಲಾವಧಿಯಲ್ಲಿ ತಮ್ಮ ಪ್ರಜೆಗಳ ಹಿತದೃಷ್ಟಿಯಿಂದ ಉತ್ತಮವಾದ ಆಡಳಿತ ವ್ಯವಸ್ಥೆ, ಆರ್ಥಿಕ ವ್ಯವಸ್ಥೆಯನ್ನು ಅಳವಡಿಸಿದ್ದರೆಂಬುದು ಸತ್ಯಸಂಗತಿಯಾಗಿದೆ. ಇಲ್ಲಿ ಕೇವಲ ಪ್ರಜೆಗಳಿಗೆ ಅರಸನಾಗಿದ್ದಷ್ಟೇ ಅಲ್ಲ, ಅವರ ಸೈನಿಕರನ್ನು ಮಕ್ಕಳಂತೆ ಶುಶ್ರೂಷೆ ಮಾಡು ವೈದ್ಯರಾಗಿದ್ದರೆಂದರೆ ತಪ್ಪಾಗಲಾರದು. ಕೊಟ್ಟ ಭಾಷೆಗೆ ಪ್ರಾಣವನ್ನು ತ್ಯಜಿಸಲೂ ಸಿದ್ಧ ಎನ್ನುವಂತಹ ಧ್ಯೇಯವನ್ನು ಮೈದುಂಬಿಕೊಂಡಂತವರು

ಕುಮ್ಮಟದರಸರು. ಇವರು ಆರಂಭದಲ್ಲಿ ಮಾಂಡಲಿಕರಾಗಿದ್ದು ನಂತರದಲ್ಲಿ ಸ್ವತಂತ್ರರಾಗುತ್ತಾರೆ. ಇವರ ಅಂತ್ಯದ ವೇಳೆ ಅಂದರೆ ಕ್ರಿ.ಶ. ೧೩೨೬-೨೭ರಲ್ಲಿ ಮಾಂಡಲಿಕರಾದ ಶಿವಮೊಗ್ಗದ ಹೊಸಗುಂದದ ಸಾಂತರರು ಇವರಿಗೆ ವಿಧೇಯದಿಂದಿದ್ದರು. ಹಾಗೆಯೇ ಆರ್ಥಿಕವಾಗಿ ರಾಜ್ಯಕ್ಕೆ ಎಲ್ಲಾ ಮೂಲಗಳಿಂದ ಆದಾಯ ಬರುತ್ತಿತ್ತು. ಕೃಷಿ, ಕೈಗಾರಿಕೆ, ವ್ಯಾಪಾರ, ತೆರಿಗೆ, ಪಶುಪಾಲನೆ ಇತ್ಯಾದಿ ಕ್ಷೇತ್ರಗಳಿಗೆ ಹೆಚ್ಚು ಒತ್ತನ್ನು ಕೊಟ್ಟಿದ್ದರೆಂಬ ಮಾಹಿತಿಯು ಅವರ ಕಾಲದಲ್ಲಾದ ಬೆಳವಣಿಗೆಗಳಿಂದ ತಿಳಿದುಬರುತ್ತದೆ. 'ಮನುಷ್ಯನಿಂದ ಹುಟ್ಟುವುದು ಧರ್ಮವಲ್ಲ, ಮನಸ್ಸಿನಿಂದ, ಹುಟ್ಟುವುದೇ ಧರ್ಮ' ಎನ್ನುವ ಧ್ಯೇಯಕ್ಕೆ ಬದ್ಧರಾಗಿದ್ದರು. ಕುಮ್ಮಟದರಸರು ಈ ಕಾರಣಕ್ಕಾಗಿಯೇ ಚಾರಿತ್ರಿಕ ವ್ಯಕ್ತಿಯಾದರೂ ಸಾಂಸ್ಕೃತಿಕ ವ್ಯಕ್ತಿಯಾಗಿ ಪ್ರಸ್ತುತದಲ್ಲೂ ಕುಮಾರರಾಮ ನೆಲೆಸಿದ್ದಾರೆ. ಪ್ರಸ್ತುತ ಸಮಾಜಕ್ಕೆ ಅವಶ್ಯಕವಾಗಿರುವುದು ಗುಡಿಗಳಲ್ಲಿರುವ ದೇವರಲ್ಲ, ಬದಲಾಗಿ ನಿಷ್ಠೆ, ಶ್ರದ್ಧೆ, ಭಕ್ತಿ, ತಾಳ್ಮೆ, ನಂಬಿ ಬಂದವರಿಗೆ ರಕ್ಷೆ, ಆದರ್ಶ ಗುಣ, ಗುರುಹಿರಿಯರಿಗೆ ಗೌರವ, ಪ್ರಜೆಗಳಿಗೆ ಆಸರೆಯಾಗಿ ಬೆಳೆಸಿಕೊಂಡಿದ್ದ ಆ ಸಮಾಜದಲ್ಲಿ ಒಬ್ಬನಾದ ಕುಮಾರರಾಮ ಈಗಲೂ ಆರಾಧ್ಯ ದೈವನಾಗಿ ಕಾಣಿಸಿಕೊಳ್ಳುತ್ತಿರುವುದು ಈ ಕಾರಣದಿಂದ ಎಂಬುದು ಸ್ಪಷ್ಟವಾಗುತ್ತದೆ. ಸಮಾಜದಲ್ಲಿರುವ ಅನಿಷ್ಟತೆಗಳನ್ನು ಹೋಗಲಾಡಿಸಲು ಇಂತಹ ಆದರ್ಶ ಗುಣಗಳು ತುಂಬಾ ಅನಿವಾರ್ಯವಾಗಿವೆ. ಹೀಗಾಗಿಯೇ ಕುಮಾರರಾಮನನ್ನು ಕರ್ನಾಟಕದಾದ್ಯಂತ, ಅದರಾಚೆ ಪ್ರದೇಶಗಳಲ್ಲೂ ಪೂಜಿಸುತ್ತಿರುವುದು ಕಂಡುಬರುತ್ತದೆ. ಇಲ್ಲಿ ವಲಸೆ ಪ್ರಕ್ರಿಯೆಗಳೂ ನಡೆದಿರಬಹುದು. ಅಂದರೆ ಕುಮಾರರಾಮ ದೆಹಲಿಸುಲ್ತಾನರ ವಿರುದ್ಧ ಸೋಲನ್ನಪ್ಪಿ ಸಾವನ್ನು ತಂದುಕೊಂಡಾಗ ಅಲ್ಲಿದ್ದ ಪರಿವಾರದವರು ವಿವಿಧೆಡೆಗೆ ಜೀವಭಯದಿಂದ ಪಲಾಯನ ಮಾಡಿರುವುದುಂಟು. ಆದ್ದರಿಂದಲೇ ಕರ್ನಾಟಕದ ನಾನಾ ಭಾಗಗಳಲ್ಲಿ ಕುಮಾರರಾಮನ ಹೆಸರಿನಲ್ಲಿ ಊರಿನ ಹೆಸರು ಕರೆದುಕೊಂಡಿರುವುದು, ಶಾಲೆಗಳಿಗೆ ಹೆಸರಿಟ್ಟಿರುವುದು, ಈತನ ಹೆಸರಿನಲ್ಲಿ ಪರೋಪಕಾರ ಮಾಡಿರುವುದು ಪ್ರಸ್ತುತದಲ್ಲಿ ಕಂಡುಬರುತ್ತಿವೆ.[೫೬] ಪ್ರಸ್ತುತ ಅಧ್ಯಯನದ ನಿಲುವು ಮೇಲಿನ ವಾಕ್ಯಗಳಿಗೆ ಬದ್ಧವಾಗಿದೆ.

**ಕೊನೆ ಟಿಪ್ಪಣಿಗಳು**

೧. ತಳವಾರ, ಎನ್.ಎಂ., ನಂಜುಂಡ ಕವಿಯ ರಾಮನಾಥ ಚರಿತೆ: ಸಾಂಸ್ಕೃತಿಕ ಅಧ್ಯಯನ, ಪು. ೨೬೫

೨. ಅದೇ, ಪು. ೨೬೪

೩. ಬಸವರಾಜು ಎಲ್. ಸರಳ ಪಂಪ ಭಾರತ, ೨-೩೪

೪. ತಳವಾರ, ಎನ್.ಎಂ., ನಂಜುಂಡ ಕವಿಯ ರಾಮನಾಥ ಚರಿತೆ: ಸಾಂಸ್ಕೃತಿಕ ಅಧ್ಯಯನ, ಪು. ೨೬೬

೫. ಎಫಿಗ್ರಫಿಯಾ ಕರ್ನಾಟಿಕಾ, ಮೈ ೧೩೦ (ಕ್ರಿ. ಶ. ೧೧೦೯ - ೧೦) ಅದೇ, ಕೆ.ಎನ್. ೧೧೮ ಕ್ರಿ.ಶ. ೧೧೬-೧೭

೬. ಅದೇ, ಕೆ.ಎನ್. ೩೯

೭. ದಿವಾಕರ್, ಆರ್ .ಆರ್ : (ಸಂ) : ಕರ್ನಾಟಕ ಥ್ರೂಥಿ ಏಜಸ್, ಬೆಂಗಳೂರು, ೧೯೬೮, ಪು: ೪೫೭ -೪೫೮

೮. ಕರ್ನಾಟಕ ಚರಿತ್ರೆ ಸಂ (೨), ಕ್ರಿ. ಶ. ೬೪೦ - ೧೩೩೬, ಪು. ೧೩೫.

೯. ಅದೇ, ೧೩೬

೧೦. ಕನ್ನಡದಲ್ಲಿ ಬೇಟೆ ಸಾಹಿತ್ಯ, ೧೯೯೫, ಪು. ೮

೧೧. ಜನ್ನನ ಯಶೋಧರ ಚರಿತ್ರೆ, ೧೯೯೭, ಪು. ೧೭

೧೨. ಕರ್ನಾಟಕ ಚರಿತ್ರೆ ಸಂಪುಟ ೩, ಪು. ೩೬೨

೧೩. ಮೊಲಕ್ಕೊಡ್ಡಿದ ಬಲೆಯೊಳ್ ಮೃಗರಾಜಂ ತೊಡರ್ಗುಮೆ, ಶಾಂತಿಪುರಾಣ, ಪು. ೩-೯೩

೧೪. ಮಹಾಲಿಂಗ ಸ್ವಾಮಿಯ ಬಾಲರಾಮನ ಸಾಂಗತ್ಯ, ಪು. ೫೦

೧೫. ನಂಜುಂಡ ಕವಿಯ ರಾಮನಾಥ ಚರಿತೆ, ೨೦೦೨, ಪು. ೨೩೩

೧೬. ಅದೇ, ಪು. ೨೩೩

೧೭. ಸಮಗ್ರ ಭಾರತ ದರ್ಶನ, ಪು. ೧೨

೧೮. ಬೇಟೆ ಮತ್ತು ಬೇಡರು, ೨೦೦೭, ಪು. ೪೮

೧೯. ಅದೇ, ಪು. ೫೮

೨೦. ಕುಮಾರರಾಮಯ್ಯನ ಚರಿತ್ರೆ, ೨೦೦೧, ಪು. ೫

೨೧. ಅದೇ, ಪು. ೧೦

೨೨. ಅದೇ, ಪು. ೨೧

೨೩. ಅದೇ, ಪು. ೨೧

೨೪. ಅದೇ, ಪು. ೨೨

೨೫. ಅದೇ, ಪು. ೬೦

೨೬. ಅದೇ, ಪು. ೭೬

೨೭. ಅದೇ, ಪು. ೨೨೭

೨೮. ಅದೇ, ಪು. ೩೧೧

೨೯. ನಂಜುಂಡ ಕವಿಯ ರಾಮನಾಥ ಚರಿತೆ : ಸಾಂಸ್ಕೃತಿಕ ಅಧ್ಯಯನ, ೨೦೦೨, ಪು. ೧೨೭

೩೦. ಅದೇ, ಪು. ೧೨೮

೩೧. ಅದೇ, ಪು. ೧೨೮

೩೨. ಅದೇ, ಪು. ೧೪೧

೩೩. ಅದೇ ಪುಟ.೨೭೧

೩೪. ಬಾಲ ಕುಮಾರರಾಮನ ಸಾಂಗತ್ಯ, ಎಂ.ಎಂ.ಕಲಬುರ್ಗಿ, ೨೦೦೭, ಪು. ೫೪

೩೫. ಅದೇ, ಪು. ೬೩

೩೬. ಅದೇ, ಪು. ೮೦

೩೭. ಅದೇ, ಪು. ೧೦೭

೩೮. ಲಕ್ಷ್ಮಣ್ ತೆಲಗಾವಿ, ಹರತಿಸಿರಿ, ೪೪೬

೩೯. ಅದೇ, ಪು. ೪೫೦

೪೦. ಕಂಠೀರವ ನರಸರಾಜ ವಿಜಯ, ಪು. ೧೦೭

೪೧. ಅದೇ, ಪು. ೧೧-೩೮

೪೨. ಅದೇ, ಪು. ೧೧-೩೩

೪೩. ಕೊಮಾರರಾಮಯ್ಯನ ಚರಿತ್ರೆ, ೨೦೦೧, ಪು. ೨೭

೪೪. ಐತಿಹಾಸಿಕ ಕಥನಗೀತೆಗಳು, ಕೃಷ್ಣಮೂರ್ತಿ ಹನೂರ, ಪು. ೪

೪೫. ಅದೇ, ಪು. ೨೩

೪೬. ಅದೇ, ಪು. ೨೩

೪೭. ನಂಜುಂಡ ಕವಿಯ ರಾಮನಾಥ ಚರಿತೆ : ಸಾಂಸ್ಕೃತಿಕ ಅಧ್ಯಯನ, ೨೦೦೨, ಪು. ೧೨೭

೪೮. ಮಹಾಲಿಂಗಸ್ವಾಮಿ ವಿರಚಿತ ಬಾಲರಾಮನ ಸಾಂಗತ್ಯ, ೨೦೦೭, ಪು. ೩೧

೪೯. ಅದೇ, ಪು. ೧೯೩

೫೦. ಅದೇ, ಪು. ೧೯೪

೫೧. ಹೊಸ ಕುಮಾರರಾಮನ ಸಾಂಗತ್ಯ, ಪು. ೨೮

೫೨. ನಂಜುಂಡ ಕವಿಯ ರಾಮನಾಥ ಚರಿತೆ : ಸಾಂಸ್ಕೃತಿಕ ಅಧ್ಯಯನ, ೨೦೦೨, ಪು. ೩೧

೫೩. ಅದೇ, ಪು. ೨೩

೫೪. ಆರ್.ಬಿ. ದಿವಾಕರ ಮತ್ತು ಆರ್.ಬಿ. ಕುಮಾರ, ಕರ್ನಾಟಕದಲ್ಲಿ ಕುಮಾರರಾಮನ ಹಬ್ಬ ಜಾತ್ರೆಗಳು, ಪು. ೦೫

೫೫. ಅದೇ, ಪು. ೩೩

೫೬. ಹೆಚ್ಚಿನ ವಿವರಕ್ಕೆ ನೋಡಿ: ತಳವಾರ ಎನ್.ಎಂ., (ಡಾ), ನಂಜುಂಡ ಕವಿಯ ರಾಮನಾಥ ಚರಿತೆ : ಸಾಂಸ್ಕೃತಿಕ ಅಧ್ಯಯನ, ಅಭಿರುಚಿ ಪ್ರಕಾಶನ, ಮೈಸೂರು, ೨೦೦೨, ಪುಟ-೧ ರಿಂದ ೨೮೦ ರವರೆಗೆ ಕವಿ ಕಾವ್ಯ ಪರಿಚಯ, ಕುಮ್ಮಟ ಅರಸರ ಮೂಲ, ವಂಶಾವಳಿ, ಯುದ್ಧಪದ್ಧತಿ, ಸಾಮಾಜಿಕ ಜೀವನ, ಬೇಟೆ, ಸಾಂಸ್ಕೃತಿಕ ವಿವರಗಳನ್ನು ತಮ್ಮ ಪಿಎಚ್.ಡಿ ಪ್ರಬಂಧದಲ್ಲಿ ತಿಳಿಸಿದ್ದಾರೆ.



# ಅಧ್ಯಾಯ : ಆರು

## ಕುಮ್ಮಟದುರ್ಗದ ನಾಯಕರ ಕಾಲದ ಸಾಹಿತ್ಯ

೬.೧ ಸಾಹಿತ್ಯ

೬.೧.೧. ಲಿಖಿತ ಸಾಹಿತ್ಯ

೬.೧.೨. ಮೌಖಿಕ ಸಾಹಿತ್ಯ

# ಅಧ್ಯಾಯ: ಆರು

# ಕುಮ್ಮಟದುರ್ಗದ ನಾಯಕರ ಕಾಲದ ಸಾಹಿತ್ಯ

## ೬.೧. ಸಾಹಿತ್ಯ

ಸಾಹಿತ್ಯಕ್ಕೆ ರಾಮಾಯಣ ಮಹಾಭಾರತ ಪುರಾಣಗಳಿಗೆ ಅವಿನಾಭಾವ ಸಂಬಂಧವಿದೆ. ಆದಿಕವಿ ಪಂಪನಿಂದ ಆರಂಭವಾದ ಸಾಹಿತ್ಯಕ್ಕೆ ಕಥಾವಸ್ತುವಾಗಿ ಪುರಾಣ ಮತ್ತು ಮಹಾಭಾರತದ ವಸ್ತು ಕಥಾವಸ್ತುವಾಗಿದೆ. ನಂತರ ಸಾಹಿತ್ಯ ಇತಿಹಾಸಗಳೊಂದಿಗೆ ಸಂಬಂಧ ಬೆಸೆಯುವ ಮೂಲಕ ಇವೆರಡರ ಸಂಬಂಧದಿಂದ ಅನೇಕ ಇತಿಹಾಸದ ಘಟನೆಗಳು ಸಾಹಿತ್ಯದಲ್ಲಿ ಕಥಾವಸ್ತುವಾಗಿ ಪ್ರವೇಶ ಪಡೆಯುತ್ತವೆ. ಇತಿಹಾಸ ಯುಗದ ಸಾಹಿತ್ಯದಲ್ಲಿ ಪುರಾಣ ಇತಿಹಾಸವೇ ಸಾಹಿತ್ಯದ ವಸ್ತುವಾಯಿತು. ಮಧ್ಯಕಾಲೀನ ಕರ್ನಾಟಕದಲ್ಲಿ ಸ್ವತಂತ್ರವಾದ ಇತಿಹಾಸ ಕಾವ್ಯಗಳೇ ಹುಟ್ಟಿಕೊಂಡವು. ಕರ್ನಾಟಕದಲ್ಲಿ ಕನ್ನಡ ನಾಡಿನ ವಿವಿಧ ಅರಸು ಮನೆತನಗಳ ಬಗೆಗೆ ಅರಸರ ಬಗೆಗೆ ಚಾರಿತ್ರಿಕ-ಸಾಂಸ್ಕೃತಿ ನಾಯಕರ ಬಗ್ಗೆ ಅನೇಕ ಬಗೆಯ ಕಾವ್ಯಗಳು ರಚನೆಗೊಂಡವು.

ಹೀಗೆ ಕಾವ್ಯಕ್ಕೆ ವಸ್ತುವಾದ ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ನಾಯಕರಲ್ಲಿ ಕುಮ್ಮಟದುರ್ಗ ಅರಸನಾದ ಕುಮಾರರಾಮನು ಕೂಡ ಒಬ್ಬನಾಗಿದ್ದಾನೆ.

ವಿಜಯನಗರ ಪೂರ್ವದ ಇತಿಹಾಸದಲ್ಲಿ ಕುಮ್ಮಟದುರ್ಗದ ನಾಯಕರ ಮನೆತನದಲ್ಲಿ ಕೊನೆಯ ಅರಸನಾಗಿ ಈತ ಉಲ್ಲೇಖಿತನಾಗಿದ್ದಾನೆ. ಐತಿಹಾಸಿಕ ಆಕರಗಳಲ್ಲಿ ಈತನ ಬಗೆಗೆ ಹೆಚ್ಚಿನ ವಿವರಗಳು ಲಭಿಸದೇ ಹೋದರೂ ಮೌಖಿಕ ಸಾಹಿತ್ಯ, ಲಿಖಿತ ಸಾಹಿತ್ಯ, ಸಾಂಗತ್ಯಗಳಲ್ಲಿ ಈತನ ಬಗೆಗೆ ಸಾಕಷ್ಟು ವಿವರಗಳು ಲಭ್ಯವಾಗುತ್ತವೆ. ಮಧ್ಯಕಾಲೀನ ಸಾಹಿತ್ಯದ ಸಂದರ್ಭದಲ್ಲಿ ಹಲವು ಮಂದಿ ಕವಿಗಳು ಕುಮಾರರಾಮನನ್ನು ನಾಯಕನನ್ನಾಗಿಸುವ ಕಾವ್ಯಗಳನ್ನು ರಚಿಸಿದ್ದಾರೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕುಮಾರರಾಮನು ಒಂದು ಭಾಗವಾಗಿದ್ದು, ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ವೀರನಾಗಿ ಪರಿಚಯವಾಗಿದ್ದು, ಈತನ ಜೀವನ ಸಾಧನೆಗಳನ್ನು ಸಾಹಿತ್ಯಿಕವಾಗಿ ವಿಭಿನ್ನ ನೆಲೆಗಳಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಮಧ್ಯಕಾಲೀನ ಕರ್ನಾಟಕದಲ್ಲಿ ಶಿಷ್ಟ ಸಾಹಿತ್ಯಕ್ಕೆ ಉದಾಹರಣೆಯಾಗಿ ಕುಮಾರರಾಮನನ್ನು ಕುರಿತಂತೆ ಕಾದಂಬರಿಗಳು,

ನಾಟಕಗಳು, ಯಕ್ಷಗಾನಗಳು, ಜನಪದ ಸಾಹಿತ್ಯ, ಗಾದೆಗಳು ಕೋಲಾಟ ಪದಗಳು ಹಾಗೂ ಬಹುಮುಖ್ಯವಾಗಿ ಲಾವಣಿಗಳ ರಚನೆಯನ್ನು ಗುರುತಿಸಬಹುದು. ಮಧ್ಯಕಾಲೀನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕುಮಾರವ್ಯಾಸ, ರತ್ನಾಕರವರ್ಣಿ, ನಂಜುಂಡ ಮಹಾಕವಿಗಳಂತಹ ಶಿಷ್ಟ ಕಾವ್ಯ ರಚನೆಗಳು ಬೆಳಕಿಗೆ ಬಂದವು. ನಂಜುಂಡ ಕವಿಯ ಕಾಲಕ್ಕೆ ಚರಿತ್ರೆಗೆ ಪುರಾಣದ ಅಂಶಗಳನ್ನು ಸೇರಿಸುವುದು ಹಾಗೂ ರಾಜರ ಇತಿಹಾಸವನ್ನು ಕುರಿತಂತೆ ಕಾವ್ಯ ಕೃತಿಗಳು ಹೊರಹೊಮ್ಮಲು ಆರಂಭವಾದವು. ಈ ಕಾಲಘಟ್ಟದ ಹೆಚ್ಚಿನ ಕಾವ್ಯಗಳಲ್ಲಿ ಒಬ್ಬ ಐತಿಹಾಸಿಕ ವೀರಪುರುಷನ ಕುರಿತು ಕಾವ್ಯ ಕೃತಿಗಳು, ಪುರಾಣಗಳ ನೆಲೆಯಲ್ಲಿ ರಚಿತವಾಗಿರುವುದು ತುಂಬಾ ವಿರಳ ಆದರೆ ಕುಮಾರರಾಮನ ವಿಚಾರದಲ್ಲಿ ಹಾಗಾಗಿಲ್ಲ, ಕಾರಣ ನಂಜುಂಡರಂತಹ ದಿಗ್ಗಜ ಕವಿಗಳು ಕುಮಾರರಾಮನ ಸುತ್ತ ಸಾಹಿತ್ಯ ಪರಂಪರೆಯನ್ನೆ ಪರಿಚಯ ಮಾಡಿಸಿಕೊಟ್ಟಿರುವುದು ಹೆಚ್ಚು ಗಮನಾರ್ಹವಾಗಿದೆ. ಕುಮಾರರಾಮನು ಐತಿಹಾಸಿಕ ವ್ಯಕ್ತಿ ಆಗಿದ್ದು ಪುರಾಣ ಪ್ರಸಿದ್ಧಿ ಪಡೆದುಕೊಂಡು ಕನ್ನಡ ಸಾಹಿತ್ಯ ಚರಿತ್ರೆಯ ಪರಂಪರೆಯ ಮೂಲಕ ಅಂದರೆ ನಡುಗನ್ನಡ ಕಾಲದ ಸಾಂಗತ್ಯಗಳ ರಚನೆಯಲ್ಲಿ ಹೊರಹೊಮ್ಮಿದ್ದಾನೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಸಾಂಗತ್ಯವು ಇಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಏಕೆಂದರೆ ಕುಮಾರರಾಮನು ಮೊಟ್ಟಮೊದಲಬಾರಿಗೆ ಲೋಕಕ್ಕೆ ಪರಿಚಯವಾಗಿದ್ದಾನೆಂದರೆ ಹಾಗೂ ಇಂದಿಗೂ ಆತನ ಆದರ್ಶ ವ್ಯಕ್ತಿತ್ವ ಮಾರ್ಗದರ್ಶನವಾಗಿ ಉಳಿದುಕೊಂಡಿದೆ ಎಂದರೆ ಸಾಂಗತ್ಯಗಳ ಪಾತ್ರ ಬಹುಮುಖ್ಯವಾಗಿದೆ ಎಂದೆನಿಸುತ್ತದೆ. ಇಂತಹ ಸಾಂಗತ್ಯಗಳು ಕುಮಾರರಾಮನ ಕುರಿತಂತೆ ಸುಮಾರು ಮೂರು ಬಗೆಗಳಲ್ಲಿ ಬೆಳಕಿಗೆ ಬಂದಿವೆ. ಹಾಗೆಯೇ ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಸಾಹಿತ್ಯವನ್ನು ಲಿಖಿತ ಸಾಹಿತ್ಯ ಮತ್ತು ಮೌಖಿಕ ಸಾಹಿತ್ಯ ಎಂದು ಎರಡು ಭಾಗಗಳಾಗಿ ವಿಂಗಡಿಸಿಕೊಂಡು ಅದರಲ್ಲಿ ಲಿಖಿತ ಸಾಹಿತ್ಯವನ್ನು ೨ ಭಾಗಗಳಾಗಿ ಅಂದರೆ ಮಧ್ಯಕಾಲೀನ ಕನ್ನಡ ಸಾಹಿತ್ಯ ಹಾಗೂ ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳಾಗಿ ವಿಭಾಗಿಸಿಕೊಳ್ಳಲಾಗಿದೆ ಹಾಗೂ ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಮೂರು ಸಾಂಗತ್ಯಗಳನ್ನು ವಿಶ್ಲೇಷಿಸುವುದರ ಜೊತೆಗೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ನಾಟಕಗಳು, ಕಾದಂಬರಿಗಳು, ಕಥೆಗಳು ಹಾಗೂ ಕೆಲವು ಕೃತಿಗಳು ಒಳಗೊಂಡಂತೆ ಚರ್ಚಿಸುವುದು ಎರಡನೆಯದಾಗಿ ಮೌಖಿಕ ಸಾಹಿತ್ಯದಲ್ಲಿ ಜನಪದ ಸಾಹಿತ್ಯವನ್ನು ಆಯ್ಕೆಮಾಡಿಕೊಂಡಿದ್ದು ಅದರಲ್ಲಿ ಲಾವಣಿಗಳು, ಯಕ್ಷಗಾನಗಳು, ಗಾದೆಗಳು, ಕೋಲಾಟ ಪದಗಳನ್ನು ಚರ್ಚಿಸಲಾಗಿದೆ.

ಸಾಹಿತ್ಯ

ಲಿಖಿತ ಸಾಹಿತ್ಯ | ಮೌಖಿಕ ಸಾಹಿತ್ಯ

| | | |
|---|---|---|
| ಮಧ್ಯಕಾಲಿನ ಕನ್ನಡ ಸಾಹಿತ್ಯ | ಆಧುನಿಕ ಕನ್ನಡ ಸಾಹಿತ್ಯ | ಜನಪದ ಸಾಹಿತ್ಯ |
| ರಾಮನಾಥ ಚರಿತೆ | ನಾಟಕಗಳು | ಲಾವಣಿಗಳು |
| ಬಾಲರಾಮನ ಸಾಂಗತ್ಯ | ಕಾದಂಬರಿಗಳು | ಯಕ್ಷಗಾನಗಳು |
| ಚೆನ್ನರಾಮನ ಸಾಂಗತ್ಯ | ಕಥನ ಗೀತೆಗಳು | ಬುರ‍್ರಕಥಾ (ದರೋಜಿ ಈರಮ್ಮ) |
| | ಇತರೆ ಕೃತಿಗಳು | ಕೋಲಾಟ ಪದಗಳು |

### ೬.೧.೧. ಲಿಖಿತ ಸಾಹಿತ್ಯ

ಬರವಣಿಗೆಯ ರೂಪದಲ್ಲಿ ರಚನೆಯಾದ ಸಾಹಿತ್ಯವೇ ಲಿಖಿತ ಸಾಹಿತ್ಯ. ಮಾನವ ತನ್ನ ಚಿಂತನೆಗಳನ್ನು, ಆಲೋಚನೆಗಳನ್ನು ಒಂದೆಡೆ ದಾಖಲಿಸುವ ಪ್ರಯತ್ನ ಮಾಡಿದುದರ ಫಲವಾಗಿಯೇ ಲಿಖಿತ ಸಾಹಿತ್ಯ ರೂಪುಗೊಂಡಿತು. ಇದು ಮುಂದಿನ ತಲೆಮಾರಿಗೂ ತನ್ನ ಚಿಂತನಾ ಕ್ರಮವನ್ನು ತಿಳಿಸುವ, ಶಾಶ್ವತವಾಗಿ ಉಳಿಸುವ ಉದ್ದೇಶದಿಂದ ರಚಿತವಾದದ್ದಾಗಿದೆ. ಅನಾದಿ ಕಾಲದಿಂದಲೂ ವೇದಗಳು ಮೌಖಿಕವಾಗಿಯೇ ಇದ್ದವು. ನಂತರ ಲಿಖಿತ ರೂಪ ಪಡೆದುಕೊಂಡು ನಮಗೆ ದೊರೆಯುವಂತಾದವು. ಇದು ಅಕ್ಷರ ರೂಪ ಪಡೆದ ಸಾಹಿತ್ಯದ ಮಹತ್ವವನ್ನು ಸಾರಿ ಹೇಳುತ್ತದೆ. ಹೀಗೆ ಕುಮಾರರಾಮನು ಕನ್ನಡ ಸಾಹಿತ್ಯದಲ್ಲಿ ಪುನರ್‌ಸೃಷ್ಠಿಯನ್ನು ಪಡೆದುಕೊಂಡು, ಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ, ಪ್ರಬಂಧಗಳು ಹೀಗೆ ವಿಭಿನ್ನ ನೆಲೆಗಳಲ್ಲಿ ಗುರ್ತಿಸಿಕೊಂಡಿದ್ದಾನೆ. ಕುಮಾರರಾಮನನ್ನು ಕುರಿತು ರಚನೆಯಾದಂತಹ ಸಾಹಿತ್ಯ ಕೃತಿಗಳನ್ನು ಅಧ್ಯಯನದ ದೃಷ್ಟಿಯಿಂದ ವಿಂಗಡಿಸಿಕೊಂಡು ಲಿಖಿತ ಸಾಹಿತ್ಯವನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ ಹಾಗೂ ಲಿಖಿತ ಸಾಹಿತ್ಯವನ್ನು ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಆಧುನಿಕ ಕನ್ನಡ ಸಾಹಿತ್ಯ ಎಂದು ವಿಭಾಗಿಸಿಕೊಳ್ಳುವ ಮೂಲಕ ಮುಂದುವರೆಸಲಾಗಿದೆ.

### ಮಧ್ಯಕಾಲೀನ ಕನ್ನಡ ಸಾಹಿತ್ಯ

ಚರಿತ್ರೆ ಮತ್ತು ಸಾಹಿತ್ಯದ ನಡುವಿನ ಸಂಬಂಧಗಳನ್ನು ಸಾಹಿತ್ಯಾಧ್ಯಯನಗಳು ಗುರುತಿಸುತ್ತ ಬಂದಿವೆ ಹಾಗೂ ಈ ಎರಡಕ್ಕೂ ಅವಿನಾಭಾವ ಸಂಬಂಧವಿದೆ. ಮಧ್ಯಕಾಲದಲ್ಲಿಯೇ ಅತಿಹೆಚ್ಚು ಸ್ವತಂತ್ರವಾದ ಚರಿತ್ರೆಯನ್ನು ಆಧರಿಸಿ ಕಾವ್ಯ ಕೃತಿಗಳು ಹುಟ್ಟಿಕೊಂಡಿವೆ. ಮಧ್ಯಕಾಲೀನ ಪ್ರಾರಂಭದಲ್ಲಿ ಸಾಹಿತ್ಯವು ಕೇವಲ ಕಾವ್ಯಗಳಿಗಷ್ಟೇ ಸೀಮಿತವಾಗಿದ್ದವು. ಅದರಲ್ಲೂ ಚರಿತ್ರಾತ್ಮಕ ವ್ಯಕ್ತಿಗಳ ಇತಿಹಾಸವೇ ಹೆಚ್ಚು ಹೊರಹೊಮ್ಮುತ್ತಿದ್ದವು. ಕಾಲಾಂತರ ಅವು ಸಾಹಿತ್ಯದ ವಿವಿಧ ಪ್ರಕಾರಗಳಿಗೆ ವಿಸ್ತಾರಗೊಳ್ಳುತ್ತಾ

ಹೋದವು. ರಾಜರು, ರಾಜ್ಯಗಳು ಅಲ್ಲಿನ ಆಡಳಿತ ಕ್ರಮಗಳ ಸಾಂಸ್ಕೃತಿಕ ವಿವರಗಳನ್ನು ಕುರಿತಂತೆ ಕಾವ್ಯಗಳು ಮಧ್ಯಕಾಲೀನ ಸಂದರ್ಭಗಳಲ್ಲಿ ರಚನೆಯಾಗುತ್ತಾ ಬಂದವು.

ಪ್ರಸ್ತುತ ಅಧ್ಯಯನ ಸಂಬಂಧಿಸಿದಂತೆ ಕುಮಾರರಾಮ ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ತನ್ನದೇ ಆದ ವ್ಯಕ್ತಿತ್ವ ಶೀಲಸಂಪನ್ನತೆಯನ್ನು ಉಳಿಸಿಕೊಂಡ ಅರಸ. ಮಧ್ಯಕಾಲೀನ ಸಂದರ್ಭದಲ್ಲಿ ಕುಮಾರರಾಮನನ್ನು ವಿಭಿನ್ನ ನೆಲೆಗಳಿಂದ, ವಿಭಿನ್ನ ಸಾಹಿತ್ಯ ಪ್ರಕಾರಗಳವರೆಗೂ ಗುರುತಿಸುತ್ತ ಬಂದಿರುವ ಹೆಗ್ಗಳಿಕೆ ಸಾಹಿತ್ಯಕ್ಕೆ ಸೇರುತ್ತದೆ. ಈ ಸಂದರ್ಭದಲ್ಲಿ ಕವಿಗಳು ತಮ್ಮ ಕಾವ್ಯಗಳಲ್ಲಿ ಕುಮಾರರಾಮನನ್ನು ನಾಯಕನನ್ನಾಗಿ ನೋಡುವುದರ ಜೊತೆಗೆ ಪ್ರಭುತ್ವ ಮತ್ತು ಸಾಮಾನ್ಯನ ನಡುವಿನ ಅಂತರಗಳನ್ನು ತೊಡೆದು ಹಾಕುವಲ್ಲಿ ಅದರಲ್ಲೂ ಕುಮಾರರಾಮನ ಕಾವ್ಯಗಳಲ್ಲಿ ಇದು ಗಮನಾರ್ಹವಾಗಿದೆ.

**ರಾಮನಾಥ ಚರಿತೆ**

ನಂಜುಂಡ ಕವಿಯ ರಾಮನಾಥ ಚರಿತೆಯು ಸಾಂಸ್ಕೃತಿಕವಾಗಿ ಬಿಂಬಿತವಾಗಿರುವ ಅನನ್ಯ ಕಾವ್ಯವಾಗಿದೆ. ಕುಮಾರರಾಮನನ್ನು ಕುರಿತಂತೆ ಶಾಸನಗಳು, ಕೈಫಿಯತ್ತುಗಳು, ಜನಪದ ಸಾಹಿತ್ಯಗಳು, ಕೆಲವು ಪ್ರದೇಶಗಳಲ್ಲಿನ ಧಾರ್ಮಿಕ ಸಂಪ್ರದಾಯಗಳು ಇವುಗಳೆಲ್ಲದರ ಆಕರಗಳನ್ನು ಪೂರಕವಾಗಿರಿಸಿಕೊಂಡು ಈ ಕಾವ್ಯವು ಹೊರಹೊಮ್ಮಿದೆ. ನಂಜುಂಡ ಕವಿಯು ರಾಮನಾಥ ಚರಿತೆಯನ್ನು ಸಾಂಸ್ಕೃತಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲುವ ರೀತಿಯಲ್ಲಿ ಅರ್ಥೈಸುವ ಪ್ರಯತ್ನ ಮಾಡಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಕವಿಕಾವ್ಯ ಪರಿಚಯ, ಕಾವ್ಯವಸ್ತು, ಐತಿಹಾಸಿಕ, ಪೌರಾಣಿಕ, ಜಾನಪದ ನೆಲೆಯಲ್ಲಿ ಕಾವ್ಯವನ್ನು ನೋಡುವ ಬಗೆ, ಕಥಾ ಸಾರಾಂಶ ಹಾಗೂ ಕಥಾವಿಮರ್ಶೆ ಮಾಡುವ ಮೂಲಕ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

**ಕವಿ ಪರಿಚಯ**

ನಂಜುಂಡ ಕವಿಯು ಮಧ್ಯಕಾಲೀನ ಕನ್ನಡ ಸಾಹಿತ್ಯ ರಚನೆಯ ಹರಿಕಾರರಲ್ಲಿ ಒಬ್ಬರಾಗಿದ್ದಾರೆ. ಇವರು ರತ್ನಾಕರವರ್ಣಿ ಕುಮಾರವ್ಯಾಸರ ಪೂರ್ವದಲ್ಲಿಯೇ ಸಾಹಿತ್ಯ ಪರಂಪರೆಯನ್ನು ಪೋಷಿಸುವ ಹಂತದಲ್ಲಿದ್ದರು. ಸಾಮಾನ್ಯವಾಗಿ ಪ್ರಾಚೀನ ಕವಿಗಳಾರು ತಮ್ಮ ವಿವರಗಳನ್ನು ಕುರಿತೂ ಎಲ್ಲಿಯೂ ನಮೂದಿಸಿಲ್ಲ. ಹೀಗಾಗಿ ನಂಜುಂಡ ಕವಿಯ ಕಾಲ, ಕೃತಿಯ ರಚನೆ ಕುರಿತು ತನ್ನ ಕೃತಿಯಲ್ಲಿ ಎಲ್ಲಿಯೂ ಹೇಳಿಕೊಂಡಿಲ್ಲ. ಈ ಕಾವ್ಯದ ಆರಂಭದ ಪೀಠಿಕೆ ಹಾಗೂ ಸಂಧಿಗಳ ಸಮಾಪ್ತಿಯನ್ನು ಆಧರಿಸಿ ಆರ್.ನರಸಿಂಹಾಚಾರ್ಯ ಅವರ ನಂಜುಂಡನ ಕಾಲ ಕ್ರಿ.ಶ.ಸು ೧೫೨೫ ಎಂದು ಅಭಿಪ್ರಾಯಪಟ್ಟಿದ್ದಾರೆ.[1] ಆದರೆ ಜಿ.ವರದರಾಜರಾವ್ ಅವರು ನಂಜುಂಡ ಕವಿಯು ಕ್ರಿಶ ೧೫೧೨ರ ನಂತರ ರಾಮನಾಥ ಚರಿತೆಯನ್ನು ರಚಿಸಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ[2]. ಆದರೆ ಪದ್ಮರಸನ ಕಾವ್ಯವಾದ 'ಶೃಂಗಾರ ಕಥೆ'ಯಲ್ಲಿ ನಂಜುಂಡ ಕವಿಯನ್ನು ಸ್ಮರಿಸಿದ್ದಾನೆ. ಅಂದರೆ ಪದ್ಮರಸನ ಕಾಲ ಕ್ರಿಶ ೧೪೮೫ ಆಗಿದೆ. ಹೀಗಾಗಿ ಪದ್ಮರಸನ ಪೂರ್ವದಲ್ಲಿಯೇ ನಂಜುಂಡ ಬದುಕಿರಬೇಕು ಎಂದೆನಿಸುತ್ತದೆ. ಮತ್ತೊಂದು ಸಂಗತಿಯೆಂದರೆ ಮೂರನೇ ಮಂಗರಸನು ಕ್ರಿಶ ೧೫೦೮ರಲ್ಲಿ

'ಕನ್ನಡ ಸಾಹಿತ್ಯ ಚರಿತ್ರೆ'[೩] ಎಂಬ ಕೃತಿಯನ್ನು ರಚಿಸಿದ್ದು, ನಂತರದಲ್ಲಿ ಈತನ ತಮ್ಮನ ಮಗನಾದ ನಂಜುಂಡನೇ ಜೀವಿಸಿರಬಹುದೆಂಬ ಸಂಗತಿಗಳು ಹೊರಬೀಳುತ್ತವೆ.

ನಂಜುಂಡನ ಕಾವ್ಯದಲ್ಲಿ ಆರಂಭದ ಪದ್ಯಗಳನ್ನು ಗಮನಿಸಿದರೆ ಈತನ ವಂಶ ಮತ್ತು ಕಾಲದ ಬಗ್ಗೆ ಸ್ವಲ್ಪ ಅರಿವು ಮೂಡಬಹುದು.

ಚಂಗಳನಾಡ ನಲ್ವತ್ತು ನಾಯಕಗಜ
ಸಿಂಗವೆನಿಸ ಮಾಧವನ
ಅಂಗೋದ್ಭವ ನಂಜುಂಡನಾನಿದನು ಮ
ನಂಗೊಳೆ ಪೇಳ್ದೆ ರಸಿಕರ[೪]

ಈ ಪದ್ಯದ ಆಧಾರದ ಮೇಲೆ ಚೆಂಗಾಳ್ವರ ಕಾಲಕ್ಕೆ ನಂಜುಂಡ ಕವಿಯು ಸೇರಿದ್ದನೆಂದು, ಈತನ ಹಿರಿಯರು ಚೆಂಗಾಳ್ವ ಅರಸರ ಅಮಾತ್ಯರಾಗಿದ್ದರೆಂದೂ ತಿಳಿಯುತ್ತದೆ. ಹೀಗಾಗಿ ನಂಜುಂಡ ಕವಿಯ ಈ ಪದ್ಯದ ಆಧಾರದ ಮೇಲೆ ಹಾಗೂ ಜಿ.ವರದರಾಜರಾವ್ ಅವರ ವಂಶವಾಹಿಯ ಆಧಾರದ ಮೇಲೆ ನಂಜುಂಡ ಮೂರನೇ ಮಂಗರಸನ ಸಹೋದರನ ಮಗನೆಂಬುದು ಸ್ಪಷ್ಟವಾಗಿ ವಿಧಿತವಾಗುತ್ತದೆ.

**ಕಾವ್ಯ ಪರಿಚಯ**

ನಂಜುಂಡ ಕವಿಯು ರಾಮನಾಥ ಚರಿತೆಯನ್ನು ವಿಶಿಷ್ಟ ಬಗೆಯಲ್ಲಿ ರಚಿಸಿದ್ದು, ಪರಮೇಶ್ವರ ಸ್ತುತಿಯನ್ನಿಟ್ಟುಕೊಂಡು ಆರಂಭಿಸಿರುವುದು ಈ ಕೆಳಗಿನ ಪದ್ಯದಿಂದ ತಿಳಿದುಬರುತ್ತದೆ.

"ಶ್ರೀಗಿರಿಜಾಸ್ಯಾಂಬುಜ ದಿನನಾಯ"[೫] ಎಂದು ಆರಂಭಿಸಿರುವುದು ಹೀಗೆ ಸುಮಾರು ಈ ಕಾವ್ಯದಲ್ಲಿ ೨೩ ಪದ್ಯಗಳಲ್ಲಿ ಶಿವನನ್ನು ಸ್ಮರಿಸಿರುವುದು ಕಂಡುಬರುತ್ತದೆ. ನಂತರ ಗಜಮುಖನನ್ನು ಸ್ಮರಿಸಿರುವುದೂ ಕಂಡುಬರುತ್ತದೆ. ಸುಮಾರು ೩ ಪದ್ಯಗಳಲ್ಲಿ ಕಾಣಬಹುದು ಹಾಗೂ ಶಾರದೆಯಲ್ಲಿ ಸುಮಾರು ೫ ಪದ್ಯಗಳಲ್ಲಿ ಸ್ಮರಿಸಿರುವುದನ್ನು ಕಾಣಬಹುದು. ಹಾಗೆಯೇ ಈ ಕಾವ್ಯವು ದೇವರುಗಳನ್ನು ಸ್ಮರಿಸಿರುವದಷ್ಟೇ ಅಲ್ಲ ಪ್ರಾಚೀನ ಕನ್ನಡ ಸಾಹಿತ್ಯ ದಿಗ್ಗಜರಾದ ಹರಿಹರ, ಪಂಪ, ನೇಮಿಚಂದ್ರರನ್ನು ಸ್ಮರಿಸಿರುವುದರಿಂದ ವಿಶೇಷವಾಗಿದೆ. ಕನ್ನಡ ಭಾಷೆ, ಸಂಸ್ಕೃತಿ, ಕರ್ನಾಟಕದ ಮೇಲಿನ ಅಭಿಮಾನವನ್ನು ಸ್ಫುಟಿಸುವಂತಹ ರೀತಿಯಲ್ಲಿ ಕೆಲವು ವಾಕ್ಯಗಳನ್ನು ಬಳಸಿರುವುದು ಅಂದರೆ ನಂಜುಂಡ ಕವಿಯು ತನ್ನ ಕಾವ್ಯದಲ್ಲಿ ಕರ್ನಾಟಕವನ್ನು ಕೊಂಡಾಡಿರುವುದು, ಪಂಪಾಪುರವನ್ನು ವರ್ಣಿಸಿರುವುದು ಆರಂಭಕ್ಕೂ ಪೂರ್ವದಲ್ಲಿ ಕಂಡುಬರುತ್ತದೆ. ಒಟ್ಟಾರೆ ಹೇಳುವುದಾದರೆ ಈ ಕಾವ್ಯವು ಪ್ರಶಂಸೆಯಯನ್ನು ಒಳಗೊಂಡಿದ್ದು, ಸಹೃದಯ ಸಜ್ಜನರನ್ನು ನೆನೆಯುತ್ತಾ ತಮ್ಮ ನಾಡಿನ ಮೇಲಿರುವ ಅಭಿಮಾನವನ್ನು ವ್ಯಕ್ತಪಡಿಸುತ್ತದೆ.

### ಕಾವ್ಯದ ವಸ್ತು

"ಪುಣ್ಯಕಥೆಯಲ್ಲಿದು ಪೂರ್ವಚರತವಲ್ಲಿದು ಪುರಾಣದೊಳುಕ್ತವಲ್ಲ"[೧] ಎಂದು ಹೇಳುವ ಮೂಲಕ ನಂಜುಂಡ ಕವಿಯು ತನ್ನ ಕಾವ್ಯದ ಶ್ರೇಷ್ಠತೆಯನ್ನು ಅರ್ಥೈಸಿರುವುದು ಬಿಂಬಿತವಾಗಿದೆ. ಅಂದರೆ ತನ್ನ ಕಾವ್ಯವನ್ನು ಯಾವುದೇ ಮಹಾ ಸಾಹಿತ್ಯಗಳಿಗೆ ಹೋಲಿಸದೆ ಪುರಾಣಗಳನ್ನೂ ಆಶ್ರಯಿಸದೆ, ಜನಪದದ ಸಾಹಿತ್ಯಗಳನ್ನು ಆಧರಿಸದೆ ಒಂದು ಅಚ್ಚುಕಟ್ಟಾದ ಸುಶ್ರಾವ್ಯ ಕಾವ್ಯದ ರೀತಿಯಲ್ಲಿ ಪರಿಚಯಿಸಲಾಗಿದೆ. ಆದರೆ ಚರಿತ್ರೆ, ಜನಪದ, ಪೌರಾಣಿಕತೆಗಳನ್ನು ಆಧಾರವಾಗಿರಿಸಿಕೊಂಡು ಕಾವ್ಯದ ಮೂಲಕ ಕುಮಾರರಾಮನನ್ನು ಕುರಿತು ಹೊಸ ರೀತಿಯ ಸಂದೇಹವನ್ನು ಕೊಡುವ ಪ್ರಯತ್ನ ನಡೆದಿದೆ. ಯಾವುದೇ ಒಂದು ಕಾವ್ಯಕ್ಕೆ ಅದು ಒಳಗೊಂಡಿರುವ ವಸ್ತುಸ್ಥಿತಿ ಮತ್ತು ಅದು ತಾಳಿರುವ ನಿಲುವುಗಳು ತುಂಬಾ ಮಹತ್ವ ಪೂರ್ಣವಾಗಿರುತ್ತವೆ. ಇಂತಹ ಕಾವ್ಯಗಳ ಸಾಲಿನಲ್ಲಿ' ನಂಜುಂಡ ಕವಿಯ ರಾಮನಾಥ ಚರಿತೆ' ಗುರ್ತಿಸಿಕೊಂಡಿರುವುದು ವಿಶೇಷಾರ್ಹವಾಗಿದೆ.

### ಐತಿಹಾಸಿಕ ಕಾವ್ಯವಾಗಿ ರಾಮನಾಥ ಚರಿತೆ

ನಂಜುಂಡನ ರಾಮನಾಥ ಚರಿತೆಯನ್ನು ಐತಿಹಾಸಿಕ ಕಾವ್ಯವಾಗಿ ನೋಡುವುದು ಎಷ್ಟರಮಟ್ಟಿಗೆ ಸೂಕ್ತ ಎನಿಸುತ್ತದೆ ಎಂಬುದನ್ನು ಚರ್ಚಿಸಲಾಗಿದೆ. ನಂಜುಂಡನು ಐತಿಹಾಸಿಕ ವ್ಯಕ್ತಿಯಾಗಿರುವ ಕುಮಾರರಾಮನನ್ನು ಐತಿಹಾಸಿಕ ದೃಷ್ಟಿಯಿಂದಲೇ ನೋಡಿರುವುದು ಕೆಲವು ಸಂದರ್ಭಗಳು ಸನ್ನಿವೇಶಗಳು ಈ ಕಾವ್ಯದಲ್ಲಿ ಹುಟ್ಟುತ್ತವೆ. ನಂಜುಂಡನ ಈ ಕಾವ್ಯವು ಕನ್ನಡ ಕಾವ್ಯ ಚರಿತ್ರೆಯಲ್ಲಿ ಮೊಟ್ಟಮೊದಲ ಐತಿಹಾಸಿಕ ಕಾವ್ಯವಾಗಿ ಗುರುತಿಸಲ್ಪಟ್ಟಿದೆ. ಕುಮಾರರಾಮ ತನ್ನದೇ ಆದಂತಹ ಇತಿಹಾಸವನ್ನು ವಂಶಾವಳಿಯನ್ನು ಹೊಂದಿರುವಂತಹ ಐತಿಹಾಸಿಕ ವ್ಯಕ್ತಿಯಾಗಿದ್ದಾನೆ. ಈತನ ತಂದೆ ಕಂಪಿಲರಾಯ ಹಾಗೂ ತಾತ ಮುಮ್ಮಡಿಸಿಂಗನು ಚಿಕ್ಕ ರಾಜ್ಯವನ್ನು ಕಟ್ಟಿಕೊಂಡು ಸುತ್ತಮುತ್ತಲಿನ ಪ್ರಭಾವಿ ರಾಜ್ಯಗಳಾದ ಕಾಕತೀಯರು, ಹೊಯ್ಸಳರು, ಸೇವುಣರ ದಾಳಿಗಳನ್ನು ಎದುರಿಸುವಲ್ಲಿ ಯಶಸ್ವಿಯಾದರು. ಸುಮಾರು ೫೦ ವರ್ಷಗಳ ಕಾಲಾವಧಿಯಲ್ಲಿ ಇವರು ಗಳಿಸಿದ ಯಶಸ್ಸು ಅಪಾರವಾದುದು.

ಐತಿಹಾಸಿಕ ನೆಲೆಯಲ್ಲಿ ರಾಮನಾಥ ಚರಿತೆಯನ್ನು ನೋಡುವುದಾದರೆ ಐತಿಹಾಸಿಕ ಹಿನ್ನೆಲೆಗೆ ಸಂಬಂಧಿಸಿದಂತೆ ಅಲ್ಲಲ್ಲಿ ತುಣುಕುಗಳು ಕಾಣಸಿಗುತ್ತದೆ. ಮೊದಲಿಗೆ ಕುಮಾರರಾಮನ ಚರಿತ್ರೆ ಒಂದು ಸ್ಥಳೀಯ ಚರಿತ್ರೆಯನ್ನು ಹೇಳುತ್ತದೆ. "ದೊಡ್ಡ ಸಾಮ್ರಾಜ್ಯಗಳಿಗೆ ದಾಖಲೆ ಒದಗುವ ಹಾಗೆ ಸ್ಥಳಿಯ ಆಳ್ವಿಕೆಗೆ ಸಮರ್ಪಕವಾದ ದಾಖಲೆಗಳು ದೊರೆಯುವುದು ಕಷ್ಟ ಅಂತಹ ಸಂದರ್ಭಗಳಲ್ಲಿ ಇತಿಹಾಸವನ್ನು ಜನಶ್ರುತಿ ಉಳಿಸಿಕೊಂಡು ಬರಬೇಕಾಗುತ್ತದೆ. ಈ ಜನಶ್ರುತಿಯಲ್ಲಿ ವಿಷಯಗಳ ಜೊತೆಗೆ ಉತ್ಪ್ರೇಕ್ಷೆಯ ಅಂಶಗಳು ಸೇರಿಕೊಳ್ಳುವುದು ಸಹಜ. ಇದಲ್ಲದೆ ಜನಪದರಿಗೆ ಐತಿಹ್ಯ ವಿಷಯಗಳನ್ನು ಇತಿಹಾಸದ ಜೊತೆಗೆ ತಪ್ಪು ಕಲ್ಪಿಸಿಕೊಳ್ಳುವುದು ವಾಡಿಕೆ. ಈ ಎಲ್ಲಾ ಕ್ರಿಯೆ ಪ್ರಕ್ರಿಯೆಗಳಿಂದಾದುದು ರಾಮನಾಥ ಚರಿತೆ ಆದರೆ ನಂಜುಂಡ ಕೇವಲ ಮೌಖಿಕ ಪರಂಪರೆಯಿಂದ ಮಾತ್ರವೇ ವಸ್ತುವನ್ನು ರೂಪಿಸಿಕೊಂಡಿಲ್ಲ[೨]. ನಂಜುಂಡನ ಕಾಲಕ್ಕೂ ಕುಮಾರರಾಮನ ಕಾಲಕ್ಕೂ

ಸುಮಾರು ೨೦೦ ವರ್ಷಗಳ ಕಾಲ ಅಂತರವಿರುವುದರಿಂದ ಬಹುಶಃ ಕುಮಾರರಾಮನ ಮನೆತನದ ಬಗ್ಗೆ ಕೆಲವು ಮಾಹಿತಿಗಳನ್ನು ಹತ್ತಿರದಿಂದಲೇ ಕಲೆಹಾಕಿರುವುದು ಕಂಡುಬರುತ್ತದೆ. ಕಾರಣ ಈತನ ಕಾವ್ಯದಲ್ಲಿ ಕೆಲವು ಅಂಶಗಳಿಗೂ ಪ್ರಮುಖ ಆಧಾರಗಳಾಗಿರುವ ಶಾಸನಗಳಿಗೂ ಸಾಮ್ಯತೆ ಇದೆ. ಹೆಚ್ಚು ವಿಷಯಗಳು ನೈಜತೆಯನ್ನು ಹೋಲುವುದರ ಜೊತೆಗೆ ಸಾಹಿತ್ಯ ಬಣ್ಣವನ್ನು ಅಲ್ಲಲ್ಲಿ ಹಚ್ಚುವ ಪ್ರಯತ್ನ ಮಾಡಿದ್ದಾರೆ. ಪ್ರಮುಖವಾಗಿ ವಂಶಾವಳಿಯನ್ನು ಕುರಿತಂತೆ ಐತಿಹಾಸಿಕ ಸಾಮ್ಯತೆಗಳನ್ನು ನೋಡಬಹುದು. ಹಂಪಿಯಲ್ಲಿ ದೊರೆತಿರುವ ಶಾಸನವನ್ನು ಆಧರಿಸಿ ಆರ್.ಎಸ್. ಪಂಚಮುಖಿ ಅವರು ವಂಶಾವಳಿ ಗುರ್ತಿಸಿದ್ದಾರೆ.

ಪೆರುಮೆಯನಾಯಕ (?)

ಮುಮ್ಮಡಿ ಸಿಂಗೇಯನಾಯಕ

ಮಾದನಾಯಕಿತಿ

ವೀರಕಂಪಿಲದೇವ

ಕುಮಾರರಾಮನಾಥ

ಇದೇ ರೀತಿಯಾಗಿ ಚೆನ್ನಬಸಪ್ಪ ಪಾಟೀಲ ಅವರು ಕುಮ್ಮಟದುರ್ಗದ ಶಾಸನದಲ್ಲಿ ವಂಶಾವಳಿಯನ್ನು ಗುರುತಿಸಿದ್ದಾರೆ[೮]. ಹಾಗೆಯೇ ರಾಮಘಡದ ಶಾಸನವೂ ಇದೇ ವಂಶಾವಳಿಯನ್ನು ಹೋಲುವುದರಿಂದ ನಂಜುಂಡ ಕಾವ್ಯವು ಐತಿಹಾಸಿಕ ಕಥೆ ಹತ್ತಿರವಾಗಿದೆ ಎಂದೆನಿಸುತ್ತದೆ. ಬಹು ಮುಖ್ಯವಾಗಿ ಕೈಫಿಯತ್ತುಗಳು ಸಹ ಇದನ್ನೇ ಹೇಳಿರುವುದರಿಂದ ಸಾಮ್ಯತೆಯನ್ನು ಹೋಲುವುದರಿಂದ ಐತಿಹಾಸಿಕ ನೆಲೆಯಲ್ಲಿ ಇದು ಸತ್ಯವೆನಿಸುತ್ತದೆ.

ಕುಮ್ಮಟದರಸರು ಮತ್ತು ನೆರೆ ರಾಜ್ಯಗಳ ನಡುವಿನ ಸಂಘರ್ಷಗಳ ವಿಚಾರದಲ್ಲಿ ನೋಡುವುದಾದರೆ ಕೆಲವು ಯುದ್ಧಗಳು ಶಾಸನಗಳಿಂದ ತಿಳಿದುಬರುತ್ತವೆ. ಇದರಲ್ಲಿಯ ಸಂಗತಿಗಳೇ ನಂಜುಂಡನ ಕಾವ್ಯದಲ್ಲೂ ಯಥಾವತ್ತಾಗಿ ಕಾಣಸಿಗುತ್ತದೆ. ಅಂದರೆ ನಂಜುಂಡನು ಐತಿಹಾಸಿಕ ನಿಲುವಿಗೆ ಮಾನ್ಯತೆಯನ್ನು ಸರಿಯಾದ ರೀತಿಯಲ್ಲಿ ನೀಡಿದ್ದಾನೆಂಬುದು ಅರ್ಥವಾಗುತ್ತದೆ. ಕಂಪಿಲರ ಹೋರಾಟಗಳು ಹೊಯ್ಸಳರ ಜೊತೆ, ಸೇವುಣರ ಜೊತೆ, ಸುಲ್ತಾನರ ಜೊತೆ ನಡೆದಿರುವ ಕುರುಹುಗಳು ಶಾಸನಗಳಿಂದ ವ್ಯಕ್ತವಾಗುತ್ತವೆ. "ಸುರತಾಳ ದಂಡುಂಟೊಳತೊಟಿ ಸಲ್ಲದು"[೯] "ಸೋಮದಂಡಾಧಿಪ ಬೈಚದಣಾಯಕರು ಈ ಸಾಲುಗಳು ಕುಮ್ಮಟದರಸರ ನೈಜ ಸಂಘರ್ಷಗಳಿಗೆ ಸಾಕ್ಷಿಯಾದಂತಿವೆ. ಇದನ್ನು ಶಾಸನಗಳೂ ಸಾಕ್ಷೀಕರಿಸಿರುವುದು ಕಂಡುಬರುತ್ತದೆ.

ಈ ಕಾವ್ಯದಲ್ಲಿ ಕೆಲವೊಂದು ಸಂಗತಿಗಳು ಹೊಸದಾಗಿ ಮೈತಳೆದುಕೊಂಡಿವೆ. ಈ ವಿಚಾರವೊಂದನ್ನು ಹೊರತುಪಡಿಸಿದರೆ ಈ ಕಾವ್ಯವು ಸಂಕೀರ್ಣ ಸ್ವರೂಪವನ್ನು ಪಡೆದುಕೊಂಡಿದೆ ಎಂದು ಹೇಳಬಹುದು. ಒಟ್ಟಾರೆ ಹೇಳುವುದಾದರೆ ಸಂಪೂರ್ಣವಾಗಿ ಇದು ಚಾರಿತ್ರಿಕ ಕೃತಿಯಾಗಲು

ಸಾಧ್ಯವಿಲ್ಲ. "ಜನರು ಏನನ್ನು ನಂಬಿದ್ದರು ಮತ್ತು ಏನನ್ನು ಅನುಭವಿಸಿದರು ಎನ್ನುವುದನ್ನು ತೋರಿಸಿಕೊಡುತ್ತದೆ."[೧೦] ಇದು ರಾಮನಾಥ ಚರಿತ್ರೆಯ ಐತಿಹಾಸಿಕ ಚಿತ್ರಣವಾಗಿದೆ.

**ಪೌರಾಣಿಕ ನೆಲೆಯಲ್ಲಿ ರಾಮನಾಥ ಚರಿತೆ**

ಕನ್ನಡ ಸಾಹಿತ್ಯವು ಪ್ರಾಚೀನತೆಯಿಂದ ಆಧುನಿಕತೆಗೆ ಬೆಳೆದುಬಂದರೂ ಪುರಾಣಗಳಿಂದ ಹೊರತಾಗಿಲ್ಲ ಎನ್ನುವುದು ಸತ್ಯವಾಗಿದೆ. ಈ ಪುರಾಣದ ಪ್ರಭಾವ ಕಲೆ, ಸಾಹಿತ್ಯದ ಮೇಲೆ ಅಷ್ಟೇ ಅಲ್ಲ ಭಾರತೀಯ ಜನಜೀವನದ ಮೇಲೂ ಆಗಿದೆ. ಅದರ ಜೊತೆ ಜೊತೆಗೆ ಜೀವನ ಶೈಲಿಗಳು, ಜನರ ಸಂಸ್ಕೃತಿ, ನೀತಿ ಪ್ರಜ್ಞೆ, ಶೌರ್ಯ, ಗುಣಗಳು, ವ್ಯಕ್ತಿತ್ವ, ಶಪಥ, ಪ್ರತಿಯೊಂದು ಅಂಶಗಳೂ ಪ್ರಸ್ತುತ ಸಮಾಜದಲ್ಲಿ ರೂಢಿಗತವಾಗಿವೆ. ಆದರೆ ಇವುಗಳಿಗೆ ಆಗ ಸಿಗುತ್ತಿದ್ದ ಮೌಲ್ಯಗಳು ಈಗಿಲ್ಲ ಎಂಬುದು ಮಾತ್ರ ದುರ್ಗತಿ ಎನಿಸುತ್ತದೆ. ಇಂತಹ ಮೌಲ್ಯಗಳನ್ನು ಜಗತ್ತಿಗೆ ತಿಳಿಸುವುದರಲ್ಲಿ ಕವಿಗಳ ಪಾತ್ರ ಬಹುಮುಖ್ಯವಾದುದು. ಪ್ರಮುಖವಾಗಿ ಕನ್ನಡ, ಸಂಸ್ಕೃತ ಕವಿಗಳು, ಜೈನ ಕವಿಗಳು, ವೀರಶೈವ ಕವಿಗಳು, ಪುರಾಣವನ್ನು ದೇವರ ಮಹಿಮೆಯನ್ನು ಸಾರುವುದರಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಪುರಾಣವನ್ನು ಆಧರಿಸಿಕೊಂಡು ನಂಜುಂಡ ಕವಿಯು ತನ್ನ ಕಾವ್ಯವನ್ನು ರಚಿಸಿಲ್ಲ. ಆದರೆ ತನ್ನ ಐತಿಹಾಸಿಕ ಕಾವ್ಯಕ್ಕೆ ಪುರಾಣದ ಚೌಕಟ್ಟನ್ನು ಅವಶ್ಯವಿದ್ದಲ್ಲಿ ಬಳಸಿರುವುದು ಗಮನಾರ್ಹವಾಗಿದೆ.

ನಂಜುಂಡ ಕವಿಯು ಕುಮಾರರಾಮನನ್ನು ಪೌರಾಣಿಕ ಹಿನ್ನೆಲೆಯಲ್ಲಿ ವರ್ಣಿಸಿರುವುದು ಕಂಡುಬರುತ್ತದೆ. ಅಂದರೆ ಇಲ್ಲಿ ಪೌರಾಣಿಕ ಅಂಶಗಳು ಕಾಣಸಿಗುತ್ತವೆ. ಕುಮಾರರಾಮನನ್ನು ಅರ್ಜುನನಿಗೆ ಹೋಲಿಸಿ, ಊರ್ವಶಿಯನ್ನು ರತ್ನಾಜಿಗೆ ಹೋಲಿಸಿ, ಕುಮಾರರಾಮನ ಕುದುರೆ ಬೊಲ್ಲ, ಮಾತಂಗಿ, ಬೈಚಪ್ಪ ಇವರೆಲ್ಲರಿಗೆ ಪೌರಾಣಿಕ ಬಣ್ಣ ಬಳಿದು, ಈ ಐತಿಹಾಸಿಕ ನೈಜ ಕಥೆಗೆ ಪುರಾಣ ರೂಪದಲ್ಲಿ ಪ್ರತ್ಯುತ್ತರ ನೀಡಿರುವುದು ವಿಶೇಷವಾಗಿದೆ. ಇಲ್ಲಿ ಕೆಲವು ಸಂಗತಿಗಳನ್ನು ಆಯ್ದುಕೊಂಡಾಗ ನಂಜುಂಡನ ಹೇಳಿಕೆಯಲ್ಲಿ ಉತ್ಪ್ರೇಕ್ಷೆಯಿದ್ದರೂ ನೈಜವೇನೋ ಅನಿಸುತ್ತದೆ. ಈ ಕಾವ್ಯದಲ್ಲಿ ಪೌರಾಣಿಕ ಅಂಶಗಳನ್ನು ಬಿಂಬಿಸುವಂತಹ ಕೆಲವು ಸಂಗತಿಗಳನ್ನು ತಿಳಿಯಬಹುದು.

ಕುಮಾರರಾಮನ ಶಪಥ

ಕುಮಾರರಾಮನ ಮಾತು

ರತ್ನಾಜಿಯ ಮೋಹ, ಬಯಕೆಗಳು

ಕಥೆಯುದ್ದಕ್ಕೂ ಅಲ್ಲಲ್ಲಿ ಪೌರಾಣಿಕ ಎಳೆಯನ್ನು ಕಲ್ಪಿಸಿರುವುದು ಕಂಡುಬರುತ್ತದೆ. ಈ ಚರಿತೆಯಲ್ಲಿ ಬರುವ ಕೆಲವು ಪ್ರಸಂಗಗಳಿಗೆ ನಂಜುಂಡ ಪೌರಾಣಿಕ ರೂಪವನ್ನು ನೀಡುವ ಮೂಲಕ ವಿವರಿಸುತ್ತಾ ಹೋಗಿರುವುದು ಗಮನಾರ್ಹವಾಗಿದೆ. ಅಂದರೆ ಇಲ್ಲಿ ಬೇರೆಯೇ ಉದ್ದೇಶವನ್ನಿಟ್ಟುಕೊಂಡು ಇದಕ್ಕೆ ಪೌರಾಣಿಕ ರೂಪವನ್ನು ಕೊಟ್ಟಿರಬಹುದೇನೋ ಎಂಬ ಸಂದೇಹ

ಮೂಡಿಬರುತ್ತದೆ. ತನ್ನ ಚರಿತೆಯನ್ನು ಜಗತ್ತು ಸ್ವೀಕರಿಸುತ್ತದೆಯೋ ಇಲ್ಲವೋ ಎಂಬ ಭಯದಿಂದ ಇದಕ್ಕೆ ಪೌರಾಣಿಕ ರೂಪ ಕೊಟ್ಟು ಹೇಳಿರುವುದು ಉತ್ಪ್ರೇಕ್ಷೆಯಾಗಿದೆ ಎಂದು ಅನಿಸಿದರೂ ಕೆಲವು ಪ್ರಸಂಗಗಳಲ್ಲಿ ಹೋಲಿಕೆಯನ್ನು ಮಾಡಬಹುದಾಗಿದೆ.

* ಪ್ರತಿಜ್ಞೆ
* ಶಪಥ
* ಮಾತಂಗಿಯ ಕಾಳಗ
* ದೇವೇಂದ್ರನ ಅಶ್ವ
* ಬೈಚಪ್ಪನ ಸಂದಿಗ್ಧ ಪರಿಸ್ಥಿತಿ

೧. **ಪ್ರತಿಜ್ಞೆ:** ಕುಮಾರರಾಮನ ಪರಸ್ತ್ರೀ ಸೋದರತೆಯ ಮನೋಭಾವನೆಯನ್ನು ಪ್ರತಿಜ್ಞೆಯ ಮೂಲಕ ನಡೆದುಕೊಳ್ಳುವ ಈ ಪ್ರಸಂಗಕ್ಕೆ ಪೌರಾಣಿಕ ಅಚ್ಚುಕಟ್ಟನ್ನು ನೀಡಿರುವುದು ವಿಶೇಷವಾಗಿದೆ. ಇಂದ್ರನ ಮಾತಿಗೆ ಮನ್ನಣೆ ನೀಡಿ ದೇವಲೋಕದ ಅಸುರರನ್ನು ಸಂಹರಿಸಲಿಕ್ಕಾಗಿ ಇಂದ್ರಸುತ ಅರ್ಜುನನು ಇಂದ್ರನಲ್ಲಿಗೆ ಬಂದಾಗ ಇಂದ್ರನು ಭವ್ಯ ಸ್ವಾಗತ ಕೋರುತ್ತಾ, ಉಪಚರಿಸುವ ಮೂಲಕ ಊರ್ವಶಿಯ ನೃತ್ಯವನ್ನು ತೋರಿಸುತ್ತಾನೆ. ಅರ್ಜುನನು ಊರ್ವಶಿಯ ನೃತ್ಯವನ್ನು ದಿಟ್ಟಿಸಿ ನೋಡುವುದನ್ನು ಗಮನಿಸಿದ ಇಂದ್ರನು, ಅರ್ಜುನನಿಗೆ ಊರ್ವಶಿಯ ಬಯಕೆ ಇರಬೇಕೆಂದು ತಿಳಿದು, ಊರ್ವಶಿಯನ್ನು ಅರ್ಜುನನ ಬಳಿಗೆ ಕಳಿಸಿದನು. ಆಗ ಅರ್ಜುನನು "ತಂದೆಯ ರಾಣಿ ನೀವೇಕೆ ನಂದನನೆನ್ನೆಡೆಗೆಯ್ತಂದಿರಿ" ಎಂದು ಬೇಸರಗೊಳ್ಳುತ್ತಾ ತಂದೆಯು ತನ್ನನ್ನು ತಪ್ಪಾಗಿ ಗ್ರಹಿಸಿರಬೇಕೆಂದು ತಿಳಿದು ಕೂಡಲೇ "ಪರಸ್ತ್ರೀಯ ಮುಖ ನೋಡೆ" ಎಂದು ಅರ್ಜುನನು ಪ್ರತಿಜ್ಞೆಗೈಯ್ಯುತ್ತಾನೆ. ಈ ಸನ್ನಿವೇಶವನ್ನು ಕುಮಾರರಾಮನು ರತ್ನಾಜಿಯನ್ನು ತನ್ನ ತಂದೆಯ ರಾಣಿ ಹಾಗೂ ತನ್ನ ತಾಯಿಯ ಸಮಾನವಾಗಿ ಕಾಣುವ ಪ್ರಸಂಗಕ್ಕೆ ಹೋಲಿಸಿರುವುದನ್ನು ತುಂಬಾ ನಯವಾಗಿ ಹೇಳಿರುವುದು ಈ ಚರಿತೆಯಿಂದ ತಿಳಿಯಬಹುದು. ಅಂದರೆ ಕವಿಯು ಇಲ್ಲಿ ಕುಮಾರರಾಮನ ಪ್ರತಿಜ್ಞೆ ಅರ್ಜುನನ ಪ್ರತಿಜ್ಞೆಗೆ ಸಮನಾಗಿರುವುದನ್ನು ಕೊಂಡಾಡುತ್ತಾ ಅರ್ಜುನನೇ ಕುಮಾರರಾಮನಾಗಿರುವುದರಲ್ಲಿ ಸಂದೇಹವಿಲ್ಲ ಎನ್ನುವ ಹಾದಿಯಲ್ಲಿ ಚರಿತೆಯ ಎಳೆಯನ್ನು ತಂದಿರುವುದು ಗಮನಾರ್ಹವಾಗಿದೆ.

೨. **ಶಪಥ:** ಕವಿಯು ಪುರುಷ ಪ್ರತಿಜ್ಞೆಗೆ ಅಷ್ಟೇ ಪ್ರಾಮುಖ್ಯತೆಯನ್ನು ಕೊಡದೆ ಸ್ತ್ರೀ ಶಪಥವೂ ಎಷ್ಟು ಪರಿಣಾಮಕಾರಿಯಾದದ್ದು ಎಂಬುದನ್ನು ಬಿಂಬಿಸುವ ಮೂಲಕ ಇದಕ್ಕೆ ಪೌರಾಣಿಕ ಎಳೆಯನ್ನು ಬೆರೆಸಿರುವುದು ಅರ್ಥವಾಗುತ್ತದೆ. ಅರ್ಜುನನು ಊರ್ವಶಿಯನ್ನು ಒಲ್ಲೆಯೆಂದ ಕಾರಣಕ್ಕೆ ಪಾರ್ವತಿಯ ಬಳಿ ಊರ್ವಶಿಯು ಕೋಪಗೊಂಡು ಶಪಥಗೈಯುತ್ತಾಳೆ. "ಕಳುಪಿವನನು ನನ್ನನು ನರಲೋಕಕ್ಕೆ ಇಳೆಯೊಳಗಿವನ ಮೊರೆ ಧರ್ಮವ ಕೆಡಿಸಿ ತಂದೆಯ ತರಳಲೋಚನೆಯ ರೂಪಿಗೆ

ಸೋತನೆಂದು ಮನಜುಲೋಕದವರ ನಿಂದೆಗಿವನನೀಡಾಗಿಸದೊಡೆ ನಾನು ಸುರಸುಂದರಿಯಲ್ಲ" ಎಂದು ಶಪಥವನ್ನು ಮಾಡುವ ಸನ್ನಿವೇಶವನ್ನು ರತ್ನಾಜಿಯ ಶಪಥಕ್ಕೆ ಹೋಲಿಸುವುದು ಒಂದು ದೃಷ್ಟಿಕೋನವಾದರೆ ಶಪಥ ಮಾಡಿದ ಊರ್ವಶಿಯೇ ರತ್ನಾಜಿಯಾಗಿ, ಅರ್ಜುನನೇ ಕುಮಾರರಾಮನಾಗಿ ಜನಿಸಿರುವರೆಂಬ ಮತ್ತೊಂದು ದೃಷ್ಟಿಕೋನದಲ್ಲಿ ಚರಿತೆಯನ್ನು ಎಳೆದೊಯ್ದಿರುವುದು ಪೌರಾಣಿಕ ರೂಪಕ್ಕೆ ಪುಷ್ಟಿ ನೀಡಿದಂತಾಗಿದೆ. ಅಂದರೆ ಇಲ್ಲಿ ಸ್ತ್ರೀಯು ಅಸಾಮಾನ್ಯಳು, ಸ್ತ್ರೀಯ ಶಪಥಕ್ಕೆ ಮನ್ನಣೆಯಿದೆ, ಸ್ತ್ರೀಯು ಮನಸ್ಸು ಮಾಡಿದರೆ ಸಾಮಾನ್ಯ ಸಂಗತಿಯನ್ನು ಅಸಾಮಾನ್ಯ ಸಂಗತಿಯನ್ನಾಗಿಸುವ ಸಾಮರ್ಥ್ಯ ಅವಳಲ್ಲಿದೆ ಎಂಬುದನ್ನು ಪೌರಾಣಿಕ ಹಿನ್ನೆಲೆ ಕೊಡುತ್ತಾ ಬಿಂಬಿಸುವ ಪ್ರಯತ್ನ ಮಾಡಿದ್ದಾರೆ.

೩. **ಮಾತಂಗಿಯ ಕಾಳಗ:** ಕವಿಯು ಮಾತಂಗಿಯ ಕಾಳಗವನ್ನು ಪುರಾಣದ ಅವತಾರವೆಂದೇ ವರ್ಣಿಸಿರುವುದು ಕುತೂಹಲಕಾರಿಯಾಗಿದೆ. ಮಾತಂಗಿಯನ್ನು ಕೌರವರ ಮಹಾತಾಯಿ ಗಾಂಧಾರಿಗೆ ಹೋಲಿಸಿರುವುದು ಗಮನಾರ್ಹವಾಗಿದೆ. ಅಂದರೆ ಕವಿಯು ಚರಿತ್ರೆಗೆ ಪುರಾಣದ ಅಂತ್ಯವನ್ನು ಕೊಟ್ಟಿರುವುದು ತುಂಬಾ ಸೊಗಸಾಗಿದೆ. ಮಾತಂಗಿಯು ಕುಮಾರರಾಮನ ವಿರುದ್ಧವಾಗಿ ದೆಹಲಿ ಸೇನೆಯ ಜೊತೆಗೂಡಿ ಯುದ್ಧ ಮಾಡುವುದು ಚರಿತ್ರೆಯಾದರೆ ೧೦೧ ಜನ ಕೌರವರನ್ನು ಕೊಂದ ಪಾಂಡವರ ಅರ್ಜುನನ ಮೇಲೆ ಸೇಡು ತೀರಿಸಿಕೊಳ್ಳಲು ಕೌರವರ ತಾಯಿಯಾದ ಗಾಂಧಾರಿಯೇ ಇಲ್ಲಿ ಮಾತಂಗಿಯಾಗಿ ಅವತರಿಸಿರುವಳೆಂಬುದು ಪುರಾಣವಾಗಿಸಿರುವುದು ಕಂಡುಬರುತ್ತದೆ. ಅಂದರೆ ಇಲ್ಲಿ ಗಮನಿಸಬೇಕಾದ ಮುಖ್ಯ ವಿಚಾರವೆಂದರೆ ತನ್ನ ಕಥೆಗೆ ಪುಷ್ಟಿ ಕೊಡುವ ಉದ್ದೇಶದಿಂದಲೇ ಕವಿ ನಂಜುಂಡನು ಪುರಾಣ ರೂಪವನ್ನು ಕೊಟ್ಟಿರುವುದು ಉದ್ದೇಶಪೂರ್ವಕವಾಗಿದೆ. ಮಾತಂಗಿಯ ಕಿಚ್ಚು ಗಾಂಧಾರಿಯನ್ನು ಮೀರಿಸುವಂತೆಯಿತ್ತು ಎಂಬರ್ಥ ನೀಡುತ್ತದೆ. ಪ್ರಮುಖವಾಗಿ ತಿಳಿಯಬೇಕಾದ ಅಂಶವೇನೆಂದರೆ ಕುಮ್ಮಟದರಸರ ಮೇಲೆ ದಾಳಿ ಮಾಡಿದಂತಹ ಮುಸ್ಲಿಂಮರು, ಇತರೆ ರಾಜರುಗಳನ್ನು ಕಡುಗಲಿಗಳೂ, ನಿವಾತಕಚವರೂ ಇವರೆಲ್ಲರೂ ಪುರಾಣಪುರುಷರೇ ಎಂದು ಹೇಳಿರುವುದು ವಿಶೇಷಾರ್ಹವಾಗಿದೆ.

೪. **ದೇವೇಂದ್ರನ ಅಶ್ವ:** ಕುಮಾರರಾಮನ ಅಶ್ವವಾದ ಬೊಲ್ಲನಿಗೂ ಪುರಾಣದ ದೈವೀ ಸ್ವರೂಪವನ್ನು ನೀಡಿರುವುದು ಕವಿಯ ಆಲೋಚನೆಗಳಿಗೆ ಬಣ್ಣಕೊಟ್ಟಂತಿದೆ. ಕುಮಾರರಾಮನ ಬೊಲ್ಲ ಸಾಮಾನ್ಯವಾದ ಅಶ್ವವಲ್ಲ. ಇದು ದೈವೀಸ್ವರೂಪವಾದುದು, ದೇವೇಂದ್ರನ ಒಂದು ಶಕ್ತಿಯೇ ಇರಬಹುದೆಂದು ಬಣ್ಣಿಸಿದ್ದಾನೆ. ಅಂದರೆ ದೇವೇಂದ್ರನ ಅಶ್ವವು 'ವನಾಯು' ಎಂಬ ದೇಶದಲ್ಲಿ ಜನಿಸಿದ್ದು, ಇದನ್ನೊಲಿಸಲು ಯಾವ ಸಂಪನ್ನರಿಂದಲೂ ಸಾಧ್ಯವಾಗದ ಕಾರಣ ಎಲ್ಲರೂ ಬೇಸತ್ತು ಹೋಗಿದ್ದರು. ಹೀಗಿರುವಾಗ ಕುಮಾರರಾಮನ ಕನಸಿನಲ್ಲಿ ಶಿವನು ಕಾಣಿಸಿಕೊಂಡು ಅಶ್ವವನ್ನು ಸ್ವೀಕರಿಸಬೇಕೆಂದು ಆಜ್ಞೆ ಮಾಡಿದಾಗ ಕುಮಾರರಾಮನು ಅದನ್ನು ತನ್ನದಾಗಿಸಿಕೊಂಡ ಎಂಬ ಪುರಾಣೋಕ್ತಿಯಲ್ಲಿ ಐತಿಹಾಸಿಕ ಚರಿತ್ರೆಯನ್ನು ಎಳೆಎಳೆಯಾಗಿ ಕೊಂಡೊಯ್ದಿರುವುದು ಕಲ್ಪನೆಗೂ

ಮೀರಿದ್ದು ಎಂದೆನಿಸುತ್ತದೆ. ಕೆಲವೊಂದು ಪ್ರಸಂಗಗಳು ಅತಿಶಯೋಕ್ತಿ ಎನಿಸಿದರೂ ಅಂತ್ಯದಲ್ಲಿ ನೈಜತೆ, ಸರಳತೆ ಕಂಡುಬಂದಿರುವುದು ಗಮನಾರ್ಹವಾಗಿದೆ.

**೫. ಬೈಚಪ್ಪನ ಸಂದಿಗ್ಧ ಪರಿಸ್ಥಿತಿ:** ಬೈಚಪ್ಪನ ಸಂದಿಗ್ಧ ಪರಿಸ್ಥಿತಿಗೆ ಪುರಾಣ ದೈವ ಇಲ್ಲಿ ಆಪತ್ಭಾಂಧವನಾಗಿ ಕಾಣಿಸಿಕೊಂಡು ಸಮಸ್ಯೆಯನ್ನು ಸರಳೀಕರಿಸಿರುವುದು ಬೈಚಪ್ಪನ ಅಂತಃಕರಣಕ್ಕೆ ಸಮನಾಗಿರುವುದು ವಿಶೇಷವಾಗಿದೆ. ರತ್ನಾಜಿಯ ಕುಹಕಕ್ಕೆ ಬಲಿಯಾದ ಕಂಪಿಲನು ಕುಮಾರರಾಮನು ತನ್ನ ಪತ್ನಿಯನ್ನೇ ಬಯಸಿದ್ದನೆಂಬ ಕೆಟ್ಟ ಆಲೋಚನೆಯು ಮನಸ್ಸಿಗೆ ಆವರಿಸಿ ಬೈಚಪ್ಪನಿಗೆ ತಲೆ ಕಡಿಯುವಂತೆ ಆಜ್ಞೆಯಿತ್ತಾಗ ಬೈಚಪ್ಪನಿಗಾದ ಸಂದಿಗ್ಧ ಪರಿಸ್ಥಿತಿಯನ್ನು ಕವಿಯು ಪವಾಡದಂತೆ ವರ್ಣಿಸಿರುವುದು ಪ್ರಾಸಂಗಿಕವಾಗಿ ಬದ್ಧವಾಗಿರುವಂತದ್ದಾಗಿದೆ. ಆ ಸಂದರ್ಭದಲ್ಲಿ ಬೈಚಪ್ಪ ರಾಮನನ್ನು ಇದರಿಂದ ಕಾಪಾಡುವಂತೆ ಇಂದ್ರನಲ್ಲಿ ಪ್ರಾರ್ಥಿಸಿದಾಗ "ವರಸುತನವನೆಮಗದರಿಂ ಜಯಂತಗೆ ಸಂಮಿಗಿಲವಗೆ ಬಂದುದನ್ನು ಪರಿಹರಿಸುವೆನು" ಎಂದು ಇಂದ್ರನು ಅಭಯವನ್ನು ನೀಡಿದಾಗ ಬೈಚಪ್ಪನು ಕುಮಾರರಾಮ ಮತ್ತು ಪರಿವಾರವನ್ನು ರಕ್ಷಿಸುವ ಕಾರ್ಯವನ್ನು ಯಶಸ್ವಿಗೊಳಿಸಿದ ಈ ಪ್ರಸಂಗಕ್ಕೆ ಪೌರಾಣಿಕ ಪ್ರಭಾವ ವಲಯವನ್ನು ತಂದುಕೊಂಡಿರುವುದು ಗಮನಾರ್ಹವಾಗಿದೆ.

**ಕಥಾ ಸಾರಂಶ**

ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಅವಶ್ಯವಿರುವಷ್ಟು ಪ್ರಮುಖ ಸಂಗತಿಗಳ ಮೂಲಕ ನಂಜುಂಡ ಕವಿಯ ರಾಮನಾಥ ಚರಿತೆಯ ಕಥೆಯ ಎಳೆಗಳನ್ನು ವಿವರಿಸಲಾಗಿದೆ. ಈ ಚರಿತೆಯಲ್ಲಿ ನಲವತ್ತೇಳು ಸಂಧಿಗಳಿದ್ದು, ಹನ್ನೊಂದು ಆಶ್ವಾಸಗಳು ಹಾಗೂ ಐದು ಸಾವಿರದ ಐದುನೂರ ಐವತ್ತೊಂಬತ್ತು ಪದ್ಯಗಳನ್ನು ಕಾಣಬಹುದು. ಕರ್ನಾಟಕ ದೇಶದ ಕುಂತಳ ನಾಡಿನ ತುಂಗಭದ್ರಾ ನದಿ ಹರಿಯುತ್ತಿತ್ತು. ಈ ನದಿ ತೀರದಲ್ಲಿ ಪವಿತ್ರವೆನಿಸಿದ ವಿರೂಪಾಕ್ಷದೇವನು ನೆಲೆಸಿದ್ದರಿಂದ ಇದನ್ನು ಪಂಪಾಕ್ಷೇತ್ರವೆಂದು ಕರೆಯಲಾಗಿತ್ತು. ಇಲ್ಲಿಂದ ದಕ್ಷಿಣ ದಿಕ್ಕಿಗೆ ನಡೆದರೆ ಹೊಸಮಲೆದುರ್ಗ ಎಂಬ ಪಟ್ಟಣವಿದ್ದು, ಇಲ್ಲಿ ಕಂಪಿಲರಾಯ ಎಂಬ ಅರಸ ಆಳ್ವಿಕೆ ಮಾಡುತ್ತಿದ್ದನು. ಆತನ ಅರಸಿ ಸದ್ಗುಣಸಂಪನ್ನೆ ಹರಿಹರದೇವಿ ರಾಣಿಯಾಗಿದ್ದಳು. ಕಂಪಿಲದೇವನ ರಾಜ್ಯದಲ್ಲಿ ಆತನ ಅಣ್ಣ ಭೈರದೇವ ಯುವರಾಜನಾಗಿದ್ದು, ಬೈಚಪ್ಪನು ಮಂತ್ರಿಯಾಗಿ ಒಳಿತು ಬಯಸುತ್ತಿದ್ದನು. ಶೀಲಸಂಪನ್ನೆ, ಪರೋಪಕಾರಿ, ಗುಣವತಿಯಾದ ಹರಿಹರದೇವಿಗೆ ಯಾವುದೇ ಕೊರತೆಯಿರಲಿಲ್ಲ. ಅಪಾರ ಸಂಪತ್ತು ಈಕೆಯ ಅಡಿಯಲ್ಲಿ ಬಿದ್ದಿದ್ದರೂ ಒಂದು ಚಿಂತೆ ಮಾತ್ರ ಮನವನ್ನು ಕದಲಿಸುತ್ತಿತ್ತು. ಕಂಪಿಲ ಮತ್ತು ಹರಿಹರದೇವಿಗೆ ಮಕ್ಕಳಾಗಿಲ್ಲವೆಂಬುದೇ ದೊಡ್ಡ ಕೊರಗಾಗಿತ್ತು.

ಇದೇ ಸಂದರ್ಭದಲ್ಲಿ ದೇವಲೋಕದಲ್ಲಿ ಒಂದು ಪವಾಡವೇ ನಡೆಯಿತು. ಶಿವ ಪಾರ್ವತಿಯು ದರ್ಬಾರಿನಲ್ಲಿರುವಾಗ ಒಬ್ಬ ಗಣನಾಥನು ಆಗಮಿಸಿ ಅಲ್ಲಿದ್ದ ಶಿವನಿಗೆ ಮಾತ್ರ ನಮಸ್ಕರಿಸಿ, ಪಾರ್ವತಿಗೆ ನಮಸ್ಕರಿಸದೆ, ತಿರುಗಿ ಸಹ ನೋಡದೆ ಮುನ್ನಡೆಯುತ್ತಾನೆ. ಆಗ ಸಿಟ್ಟಿಗೆದ್ದ ಪಾರ್ವತಿ ಶಿವನನ್ನು ಪ್ರಶ್ನಿಸಿದಾಗ ಶಿವನು ಹೇಳುತ್ತಾನೆ. ಅವನು ಸಾಮಾನ್ಯ ಗಣನಾಥನಲ್ಲ, ಅವನು ಇಂದ್ರನ

ಒಂದು ಅಂಶವಾದ ಅರ್ಜುನನೆಂದು ಹೇಳುತ್ತಾ, ಹಿಂದೆ ನಡೆದ ಘಟನೆಯನ್ನು ವಿವರಿಸಿ ಹೇಳುತ್ತಾ, ಅವನು ರಾಕ್ಷಸರನ್ನು ಸಂಹಾರ ಮಾಡಿ ಇಂದ್ರನ ಲೋಕಕ್ಕೆ ಬಂದಾಗ, ಇಂದ್ರನು ಸ್ವಾಗತ ಕೋರಿ ಊರ್ವಶಿಯಿಂದ ನೃತ್ಯ ಮಾಡಿಸಿದಾಗ, ಊರ್ವಶಿಯನ್ನು ಅರ್ಜುನನು ದಿಟ್ಟಿಸಿ ನೋಡುವುದನ್ನು ಅರಿತು ಇಂದ್ರನು ಅರ್ಜುನನ ಬಳಿಗೆ ಊರ್ವಶಿಯನ್ನು ಕಳುಹಿಸುತ್ತಾನೆ. ಇದರಿಂದ ಕುಪಿತಗೊಂಡ ಅರ್ಜುನನು ಊರ್ವಶಿಯನ್ನು ತಿರಸ್ಕರಿಸಿ, "ಇನ್ನು ಮುಂದೆ ಪರಸ್ತ್ರೀಯರ ಮುಖ ನೋಡಿ ಅವರಿಗೆ ವಂದನೆಯನ್ನು ಮನದೊಳಲ್ಲದೆ ಕಾಯದಿಂದ ಮಾಡೆ" ಎಂದು ಪ್ರತಿಜ್ಞೆಗೈಯ್ದ ಸಂಗತಿಯನ್ನು ಶಿವನು ಪಾರ್ವತಿಗೆ ಹೇಳಿದಾಗ, ಪಾರ್ವತಿಯು ಅಲ್ಲಿಗೂ ಸಮಾಧಾನವಾಗದೆ ಊರ್ವಶಿಯನ್ನು ಕರೆಯಿಸಿ ನಡೆದ ಘಟನೆ ಬಗ್ಗೆ ವಿವರಿಸಿ ಹೇಳೆಂದು ಕೇಳಿದಾಗ ಊರ್ವಶಿಯು ಅರ್ಜುನನ ಮೇಲೆ ಇಲ್ಲಸಲ್ಲದ ಅಪಾದನೆಗಳನ್ನು ಹೊರಿಸುವ ಮೂಲಕ ಒಬ್ಬ ಅಯೋಗ್ಯನೆಂದು ಹೇಳಿ, "ಇಂದಿವನನ್ನು ನನ್ನನು ಕಳುಪಿದೆಯಾದೊಡಿಂದುವದನೆ ಭೂತಳಕೆ ತಂದೆಯ ರಾಣಿಗೆ ತಪ್ಪಿದ ಪಾತಕನೆಂದೆನಿಸುವೆನು ನಾನಿವನ" ಎಂದು ಪಾರ್ವತಿಯ ಬಳಿ ಹೇಳಿಕೊಂಡು ಶಪಥಗೈಯುತ್ತಾಳೆ. ಇದರಿಂದಾಗಿ ಶಿವ ಪಾರ್ವತಿಯರಿಬ್ಬರು ಒಂದಾಗಿ ಊರ್ವಶಿ ಮತ್ತು ಗಣನಾಥರನ್ನು ಭೂಲೋಕಕ್ಕೆ ಕಳಿಸಿ ಮರು ಜನ್ಮದಲ್ಲಿ ಹುಟ್ಟಲು ಅನುಮತಿ ನೀಡುತ್ತಾರೆ.

ಭೂಲೋಕದಲ್ಲಿ ಕಂಪಿಲನು ಬೇಟೆಗೆ ಹೋದಾಗ ಇವನ ವಂಶದ ಅರಸನ ಮಗಳಾದ ರತ್ನಾಜಿಯನ್ನು ಕಂಡು ಮೋಹಪರವಶಗೊಂಡು ಆಕೆಯನ್ನು ಮಡದಿಯನ್ನಾಗಿ ಸ್ವೀಕರಿಸುತ್ತಾನೆ. ಈ ರತ್ನಾಜಿಯೇ ಊರ್ವಶಿಯೆಂದು ಕವಿಯ ಅಭಿಪ್ರಾಯವಾಗಿದೆ. ಹರಿಹರದೇವಿ ಮಕ್ಕಳಾಗಲಿಲ್ಲವೆಂದು ಸಂಕಟದಲ್ಲಿ ಕೊರಗುತ್ತಿದ್ದಾಗ ಕಂಪಿಲನು ಆಕೆಯನ್ನು ಸಂತೈಸಿ ಜಟ್ಟಿಂಗರಾಮೇಶ್ವರನ ಸನ್ನಿಧಿಗೆ ಕರೆದುಕೊಂಡು ಹೋಗಿ ಪೂಜಾ ಪುನಸ್ಕಾರಾಧಿಗಳನ್ನು ಮಾಡಿಸಿಕೊಂಡು ಬರುತ್ತಾರೆ. ಈ ಪೂಜೆಯ ಪ್ರತಿಫಲ ಹರಿಹರದೇವಿಗೆ ಸ್ವಪ್ನಗಳು ಕಾಣಿಸಿಕೊಂಡು, ಕೊನೆಗೆ ಗರ್ಭವತಿಯಾಗಿ ಒಬ್ಬ ಅಸಾಮಾನ್ಯ ಪುರುಷನೆ ಜನಿಸುವಂತ ಸೂಚನೆಗಳು ಕಂಡುಬರುತ್ತಿದ್ದವು. ನಂತರ ಒಂದು ಶುಭ ಘಳಿಗೆಯಲ್ಲಿ ಹರಿಹರದೇವಿ ಅಖಂಡ ತೇಜಸ್ಸುಳ್ಳ, ಮಹಾನ್ ಸ್ಫುರದ್ರೂಪಿ, ಅತ್ಯಂತ ಸರ್ವಲಕ್ಷಣವಂತನೂ ಆದ ಗಂಡುಮಗುವಿಗೆ ಜನ್ಮ ನೀಡಿದಳು. ಇದನ್ನು ಕಂಡ ಕಂಪಿಲರಾಯನು ಮಹಾಸಂತಸಗೊಂಡು ಪುತ್ರೋತ್ಸವವನ್ನು ಆಚರಿಸುವ ಮೂಲಕ ಪುರಜನರೆಲ್ಲ ಸಂತಸಗೊಳಿಸಿದನು. ನಂತರ ಆ ಮಗುವಿಗೆ ಜಾತಕ ಮಾಡಿಸಿ, ಕುಲದೇವರ ಹೆಸರಾದ ರಾಮ ಎಂದೇ "ಭೂಮಿವಿನುತ ಶುಭಲಕ್ಷಣದಿಂದ ಭಿಮರಾಮನಪ್ಪುದರಿಂದ ಸುತಗೆ ರಾಮನೆಂಬನ್ವರ್ಥಕ" ನಾಮಕರಣ ಮಾಡುತ್ತಾನೆ. ಕಂಪಿಲರಾಯನು ಅಂತರಂಗದಲ್ಲೇ ಸಂತಸ ಪಡುತ್ತಿರುತ್ತಾನೆ. ಇಂತಹ ಮಹಾನ್ ಪರಾಕ್ರಮಶಾಲಿಯೇ ಜನಿಸಿರುವಾಗ ಇನ್ನೂ ಬೇರೆ ಯಾವ ಶತ್ರುಗಳ ಭಯವಿರುವುದಿಲ್ಲ. ನಿರಾತಂಕವಾಗಿ ರಾಜ್ಯವನ್ನು ಆಳಬಹುದೆಂಬ ಸಂತಸ ಪಡುತ್ತಿರುತ್ತಾನೆ. ಕೆಲವು ವರ್ಷಗಳ ನಂತರ ರಾಮನು ವಯಸ್ಸಿಗೆ ಬಂದಾಗ ಅವನ ಗುಣ, ರೂಪಕ್ಕೆ ತಕ್ಕದಾದ ಐವರು ಕನ್ಯೆಯರನ್ನು ನೋಡಿ ವಿವಾಹ ಮಾಡಿಸಿದರು. ರಾಮನ ಅಕ್ಕ

ಮಾರಮ್ಮ, ತಂಗಿ ಸಿಂಗೆಮ್ಮರೆಲ್ಲರೂ ವಿಜೃಂಭಣೆಯಿಂದ ಅತ್ಯಂತ ಸಡಗರದಿಂದ ವಿವಾಹ ಕಾರ್ಯದಲ್ಲಿ ಪಾಲ್ಗೊಂಡರು.

ವಿವಾಹದ ನಂತರದಲ್ಲಿ ಕುಮಾರರಾಮನಿಗೆ ಯುವರಾಜ ಪಟ್ಟವನ್ನು ಕಟ್ಟಿ ರಾಜ್ಯದ ನಿರ್ವಹಣೆಯ ಸಂಪೂರ್ಣ ಹೊಣೆಯನ್ನು ಕಂಪಿಲನು ತನ್ನ ಕುವರನಾದ ರಾಮನಿಗೆ ವಹಿಸುತ್ತಾನೆ. ಹೀಗಿರುವಾಗ ಈತನ ಸೇನಾನಿಗಳು ಹೊಯ್ಸಳರ ಗಡಿಭಾಗದ ಕೆಲವು ಪ್ರದೇಶಗಳಲ್ಲಿ ಅಲ್ಲಲ್ಲಿ ಲೂಟಿ ಮಾಡುತ್ತಿರುವ ಸಂದರ್ಭದಲ್ಲಿ ರಾಮನಿಗೆ ಹೊಯ್ಸಳರ ಬಲ್ಲಾಳನ ಅಧೀನದ ಹುಳಿಯೇರು ಭಾಗದಲ್ಲಿ ಉತ್ತಮ ಜಾತಿಯ ಕುದುರೆಗಳಿರುವ ವಿಚಾರ ತಿಳಿದುಬರುತ್ತದೆ. ನಂತರ ಆ ಪ್ರದೇಶಕ್ಕೆ ತನ್ನ ಸೈನಿಕರನ್ನು ಕಳುಹಿಸಿದಾಗ ಅಲ್ಲಿನ ಅಧಿಕಾರಿ ರಾಮನ ಸೈನಿಕರಿಗೆ ಅವಮಾನಿಸುತ್ತಾನೆ. ಬಲ್ಲಾಳನು ಸೈನ್ಯ ಸಮೇತವಾಗಿ ಕುಮಾರನ ಮೇಲೆ ಯುದ್ಧಕ್ಕೆ ಬಂದಾಗ, ಕಂಪಿಲನ ಇಡೀ ಸೇನೆ ಅಂದರೆ ಒಕ್ಕಲಿಗರ ನಾಗಣ್ಣ, ಕೊಳ್ಳಿಯ ನಾಗ, ಹಡಪದ ಬಲ್ಲುಗ, ಕಾಳಂಜಿಯ ಕಂಪ, ಭಂಡಾರಿ ಬಸವಣ್ಣ, ಅಕ್ಕಸಾಲೆಯ ಚಿಕ್ಕ, ಗಿಂಡಿಯ ಲಕ್ಕ, ತೆಲುಗ ಬಾವಣ್ಣ, ಮಾಯಿದೇವ, ಸಾಯಿದೇವರೆಲ್ಲ ವೀರರು ಯುದ್ಧದಲ್ಲಿ ಪಾಲ್ಗೊಳ್ಳುತ್ತಾರೆ. ತುಂಬಾ ಪರಿಣಾಮಕಾರಿಯಾಗಿಯೇ ಯುದ್ಧ ನಡೆಯುತ್ತಿರುವಾಗ ಎರಡೂ ಸೇನೆಗಳ ಅಧಿಕಾರಿಗಳು ಅರಿತುಕೊಂಡು ದಿಲ್ಲಿ ಸುಲ್ತಾನನ ದಾಳಿಯನ್ನು ಯೋಚಿಸಿ, ಮೊದಲು ನಾವು ಒಂದಾಗಿ, ತುರುಕರನ್ನು ಹೆದರಿಸುವ ಪ್ರಯತ್ನ ಮಾಡೋಣವೆಂದು ಒಂದಾಗಿ ರಾಜಿಯಾದರು.

ಹೀಗಿರುವಾಗ ಮತ್ತೊಂದು ಆತಂಕ ಕಂಪಿಲನಿಗೆ ಎದುರಾಯಿತು. ಕುಮಾರರಾಮನ ಶೌರ್ಯ ಪರಾಕ್ರಮಗಳು ಮುಗಿಲು ಮುಟ್ಟಿದವು. ಪಕ್ಕದ ರಾಜ್ಯದ ತೆಲುಗು ಪ್ರದೇಶದ ವೀರರುದ್ರನು ಕುಮಾರರಾಮನಿಗೆ ಸಲ್ಲುತ್ತಿರುವ ಈ ರಾಜಮರ್ಯಾದೆ, ಬಿರುದಾವಳಿಗಳನ್ನು ಸಹಿಸದಾದನು. ಹೀಗಾಗಿ ವೀರರುದ್ರನು ತನ್ನ ಪರಿವಾರದವರ ಜೊತೆ ಸೇರಿ ಕಂಪಿಲ ಮೇಲೆ ಯುದ್ಧಕ್ಕೆ ಬಂದಾಗ ಕಂಪಿಲನ ಭಯವನ್ನು ಕುಮಾರರಾಮನು ಸರಿಸಿ, ಯುದ್ಧಕ್ಕೆ ಸಿದ್ಧನಾಗುತ್ತಾನೆ. "ಹದಿನಾಲ್ಕು ವರ್ಷದ ರಾಮ ಹದಿನಾಲ್ಕು ಕೋಟಿ ದಾನವರನ್ನು ದಿಕ್ಕಾಪಾಪಾಗಿಸಿದಂತೆ, ಅರ್ಜುನನು ಗೋಗ್ರಹಣದಲ್ಲಿ ಕೌರವ ಸೇನೆಯನ್ನು ಸದೆಬಡಿದಂತೆ, ಭೀಮನು ಕೌರವ ಸೇನೆಯನ್ನು ಅಸ್ತವ್ಯಸ್ತವಾಗಿಸಿದಂತೆ" ವೀರರುದ್ರನ ಸೇನೆಯನ್ನು ಅಟ್ಟಾಡಿಸುತ್ತೇನೆ ಎಂದು ಶಪಥ ಮಾಡಿದಂತೆ ಯುದ್ಧದಲ್ಲಿ ವೈರಿಗಳನ್ನು ಸೋಲಿಸುತ್ತಾನೆ. ಇದರಿಂದಾಗಿ ಕುಮಾರರಾಮನ ಶೌರ್ಯವನ್ನು ಅರಿತು ಶರಣಾಗಿ ಉತ್ತಮ ಜಾತಿ ಕುದುರೆಗಳನ್ನು ಕಂಪಿಲನಿಗೆ ಒಪ್ಪಿಸಿದರು. ಇದರಿಂದ ಕಂಪಿಲನಿಗೆ ಅತ್ಯಂತ ಸಂತಸವಾಯಿತು. ನಂತರ ಪಕ್ಕದ ರಾಜ್ಯದ ಕರಿಪತಿ ಕಪಿಲೇಶ್ವರನೆಂಬ ರಾಜನು ರಾಮನ ಸಾಮರ್ಥ್ಯಕ್ಕೆ ಸವಾಲನ್ನು ಹಾಕಿ ತಮ್ಮ ಅಧೀನದ 'ಷೋಡಶಪಾತ್ರೆ' ಎಂಬ ಪರಾಕ್ರಮಿಗಳೊಂದಿಗೆ ಯುದ್ಧ ಮಾಡಲಿ ಎಂಬ ಸವಾಲು ಹಾಕಿ ವಿದ್ಯಾಧರ ಪಾತ್ರೆ, ವಿಕ್ರಮ ಬಾಹುಪಾತ್ರೆ, ಶಿರಶ್ಚಂದ್ರ ಪಾತ್ರೆ, ಹರಿಶ್ಚಂದ್ರ ಪಾತ್ರೆ ಎಂಬುವವರು ಯುದ್ಧಕ್ಕೆ ಸೈನ್ಯ ಸಿದ್ಧಗೊಂಡು ಕುಮಾರನ ವಿರುದ್ಧ

ಯುದ್ಧ ಮಾಡುತ್ತಾರೆ. ಆದರೆ ಕುಮಾರನ ದಾಳಿ ಮತ್ತು ಆತನ ಪರಾಕ್ರಮವನ್ನು ಕಂಡು ಸೋತು ಓಡಿಹೋದರು. ಇದರಿಂದಾಗಿ ಸಂತಸಗೊಂಡ ಕಂಪಿಲನಿಗೆ ಬೇರೆ ಯಾವ ಅಡ್ಡಿ ಆತಂಕವಿಲ್ಲ ಎಂದು ತಿಳಿದುಕೊಂಡು ಸುಖದಿಂದಿದ್ದನು.

ಈ ನಡುವೆ ಕಂಪಿಲನ ರಾಜಧಾನಿಗೆ ನಾಲ್ಕು ಹರದಾರಿಯಷ್ಟು ಅಂತರವಿರುವ ಮುಸ್ಲಿಂ ರಾಜ್ಯವಾದ ದಿಲ್ಲಿಯಲ್ಲಿ ಅಲ್ಲಾವುದ್ದೀನನೆಂಬ ಸುಲ್ತಾನನು ಇಡೀ ಭರತಖಂಡವನ್ನೇ ತನ್ನ ತೆಕ್ಕೆಯಲ್ಲಿಟ್ಟುಕೊಳ್ಳಲು ಹವಣಿಸುತ್ತಿರುತ್ತಾನೆ. ಈ ಸಮಯದಲ್ಲಿ ಸುಲ್ತಾನನು ರೂಪವತಿಯಾಗಿದ್ದ ತನ್ನ ಮಗಳಿಗೆ ವರನನ್ನು ಹುಡುಕುವ ಚಿಂತೆಯೂ ಇತ್ತು. ಆಗ ಕುಮಾರರಾಮನ ಸುದ್ದಿ ತಲುಪಿದ ಕೂಡಲೇ ತನ್ನ ಪರಿಚಾರಕರಿಗೆ ಕುಮಾರರಾಮನನ್ನು ಕರೆತರುವಂತೆ ಹೇಳಿ ಕಳಿಸಿದನು. ಇದನ್ನು ಕೇಳಿದ ಕಂಪಿಲನು ನಯವಾಗಿ ಸುಲ್ತಾನನ ಅಹವಾಲನ್ನು ನಿರಾಕರಿಸಿದಾಗ ಸುಲ್ತಾನನು ಕಂಪಿಲನ ಮೇಲೆ ಸಿಟ್ಟಿಗೆದ್ದು, ಸೇಡು ತೀರಿಸಿಕೊಳ್ಳಲು ಮುಂದಾಗುತ್ತಾನೆ. ಈ ವೇಳೆಯಲ್ಲಿ ಸುಲ್ತಾನನು ತನ್ನ ಮಗಳಿಗಾಗಿ ಸ್ವಯಂವರ ಏರ್ಪಡಿಸಿ ನೂರಾರು ರಾಜಕುಮಾರರನ್ನು ತೋರಿಸಿದರೂ ಅವಳು ಕುಮಾರರಾಮನನ್ನೇ ಮೆಚ್ಚಿದ್ದರಿಂದ ಅವರೆಲ್ಲರನ್ನು ತಿರಸ್ಕರಿಸುತ್ತಾಳೆ. ಇದೇ ಸಂದರ್ಭದಲ್ಲಿ ಸುಲ್ತಾನನಿಗೆ ಸಾಮಂತನಾಗಿದ್ದ ಮುಂಗುಲಿದೇವನು ಧನಕನಕಾದಿ ವಸ್ತುಗಳನ್ನು ತನ್ನ ರಾಯಭಾರಿಗಳೊಂದಿಗೆ ಕಳಿಸಿದಾಗ, ರಾಯಭಾರಿಗಳು ಇದನ್ನು ಎತ್ತುವವರು ಯಾರಾದರೂ ಇದ್ದಾರೆಯೇ ಎಂದು ಸುಲ್ತಾನನಿಗೆ ಕೇಳಿದಾಗ ಅಲ್ಲಿ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು ಸುಮ್ಮನಾದರು. ಹೀಗಾಗಿ ಸುಲ್ತಾನನು ಸಿಟ್ಟಿಗೆದ್ದನು. ಇದನ್ನು ಕಂಡ ಬಾದೂರಖಾನನು ಮುಂದೆ ಬಂದು ಧನಸ್ಸನ್ನು ಎತ್ತಿ ಸುಲ್ತಾನನ ಮರ್ಯಾದೆಯನ್ನು ಉಳಿಸಿದನು. ಇದರಿಂದಾಗಿ ಸುಲ್ತಾನನು ಸಂತಸಗೊಂಡು ಬಾದೂರಖಾನನಿಗೆ ಖಾನನ ರಾಜ್ಯದಲ್ಲಿ ಅರ್ಧಭಾಗವನ್ನು ನೀಡಿ ಮಲ್ಲುಕ ಎಂಬ ಪದವಿಯನ್ನು ನೀಡಿ ಗೌರವಿಸಿದನು. ಇದನ್ನು ಸಹಿಸದ ಕಾದಿಖಾನ, ಜಲಹರಿಖಾನ, ಮಧುರಖಾನ, ಅಬ್ಬಾಸ ಖಾನರು ಸುಲ್ತಾನ ಮತ್ತು ಬಾದೂರನ ನಡುವೆ ಇರುವ ಉತ್ತಮ ಸಂಬಂಧವನ್ನು ಹಾಳುಮಾಡುವ ಉದ್ದೇಶದಿಂದ ಬಾದೂರನಿಗೆ ಸುಲ್ತಾನನ ಬಗ್ಗೆ ಕೆಟ್ಟ ಅಭಿಪ್ರಾಯ ಬರುವಂತೆ ಹೇಳಿದಾಗ, ಬಾದೂರನು ನಂಬಿ ಅಲ್ಲಿಂದ ಭಯದಿಂದ ಹೆದರಿ ಓಡಿ ಕಂಪಿಲನ ಬಳಿ ಆಶ್ರಯ ಕೋರುತ್ತಾನೆ. ಇದರಿಂದ ಕೋಪಗೊಂಡ ಸುಲ್ತಾನನು ನೇಮಿಖಾನನಿಗೆ ಕಂಪಿಲ ಮತ್ತು ಕುಮಾರರಾಮನನ್ನು ಸೆರೆಹಿಡಿದು ತರುವಂತೆ ಆಜ್ಞಾಪಿಸಿದನು. ಇಲ್ಲಿ ಬಾದೂರನಿಗೆ ಆಶ್ರಯ ನೀಡಲು ಬೈಚಪ್ಪ, ಕಂಪಿಲರು ಹಿಂಜರಿದಾಗ ಕುಮಾರರಾಮನು 'ಮೊರೆಹೊಕ್ಕುವರನ್ನು ಕಾಪಾಡುವುದು ಕ್ಷತ್ರಿಯರ ಪ್ರಥಮ ಮತ್ತು ಪರಮ ಧರ್ಮವೆಂದು ತಿಳಿಸಿ ಪ್ರೀತಿಯಿಂದ ಆದರಿಸುತ್ತಾನೆ.

ಸುಲ್ತಾನನ ಆದೇಶದಂತೆ ನೇಮಿಖಾನನು ತನ್ನ ಸೇನೆಯ ಸಮೇತವಾಗಿ ಕುಮ್ಮಟದ ಕಡೆಗೆ ಬರುತ್ತಾನೆ. ಹಲವು ದೇಶಗಳಾದ ಮಗಧ, ಗುರ್ಜರ, ಲಾಳ ದೇಶಗಳ ಮೂಲಕ ಬಿದಿರೆ ದಾಟಿ ಬರುತ್ತಾನೆ. ಇತ್ತ ಕಡೆ ಕಂಪಿಲರಾಯನು ತನ್ನ ಸೇನೆಯನ್ನು ಸಿದ್ಧಗೊಳಿಸಿ, ಇದರ ಜೊತೆಗೆ

ಕುಮಾರರಾಮ, ಭಾವಸಂಗಮ, ಕಾಟಣ್ಣ, ಭೈರದೇವ, ಬಾದೂರಖಾನನೂ ಸೇರಿದಂತೆ ಯುದ್ಧಕ್ಕೆ ಹೊರಡುತ್ತಾರೆ. ಕುಮಾರರಾಮನು ಕುದುರೆಯೇರಿ ಯುದ್ಧ ಮಾಡಲು ಮುಂದಾಗುತ್ತಾನೆ. ಎರಡೂ ಸೇನೆಗಳ ನಡುವೆ ಮಹತ್ವದ ಯುದ್ಧ ನಡೆಯುತ್ತದೆ. ನೇಮಿಖಾನನ ಸೇನೆಯು ತತ್ತರಿಸಿಕೊಂಡು ರಣರಂಗದಿಂದ ಓಡಿಹೋಗುತ್ತದೆ. ಇದರಿಂದ ಕಂಪಿಲನ ಸೇನೆ ವಿಜಯಿಯಿಂದ ಸಂತಸಗೊಳ್ಳುತ್ತಾರೆ. ಈ ಸಮಯದಲ್ಲಿಯೇ ಶೂಲದ ಹಬ್ಬ ತಯಾರಿ ನಡೆಯುತ್ತದೆ. ಅನ್ಯ ದೇಶಗಳ ಅರಸರುಗಳು ತಮ್ಮ ತಮ್ಮ ಶೂಲಗಳನ್ನು ಅಲಂಕಾರಗೊಳಿಸಿಕೊಂಡು ಬಂದು ಆ ಪುರದಲ್ಲಿ ಬೀಡುಬಿಡುತ್ತಾರೆ. ಆ ಪುರವೆಲ್ಲಾ ಸಿಂಗಾರದಿಂದ ಕಂಗೊಳಿಸುತ್ತಿರುತ್ತದೆ. ಈ ಸಡಗರವನ್ನು ಕಂಪಿಲನ ರಾಣಿ ರತ್ನಾಜಿಯು ಉಪ್ಪರಿಗೆಯಿಂದ ವೀಕ್ಷಿಸುತ್ತಿರುವಾಗ ಕಾಟಣ್ಣ, ಭೈರವದೇವ, ಭಾವಸಂಗಮ, ಸಾಯಿದೇವ, ಮಾಯಿದೇವ, ಕೊಪಣದ ತಿಮ್ಮರಾಜ, ತೊರೆಗಲ್ಲ, ಬೊಮ್ಮ, ಪೆನುಗೊಂಡೆಯ ಪಂಪರಾಜ, ರಾಯದುರ್ಗದ ರಾಮದೇವ, ಗಿಂಡಿಯ ಲಕ್ಕ, ದೇವಿಶೆಟ್ಟಿಯ ಲಿಂಗ, ಗುತ್ತಿಯ ಕಾಚಯ್ಯ, ಉದಯಗಿರಿಯ ಸಂಗಮದೇವ, ಹರಿಹರ ಬುಕ್ಕಣ್ಣರೆಂಬ ಹಲವು ವೀರರು ಸೇರಿದ್ದರು. ಇವರ ಮಧ್ಯದಲ್ಲಿ ಹುಣ್ಣಿಮೆಯ ಚಂದ್ರನಂತೆ ಹೊಳೆಯುತ್ತಿದ್ದ ಕುಮಾರರಾಮನನ್ನು ಕಂಡು ಅಲ್ಲಿಯೇ ಮನಸೋತು ಯಾರವನು? ಎಂದು ತನ್ನ ಸಖಿಯಾದ ಸಂಗಾಯಿಯನ್ನು ಕೇಳುತ್ತಾಳೆ. ಆಗ ಅವಳು ಕಂಪಿಲರಾಯನ ಮಗನೆಂದೂ, ಮಹಾನ್ ವೀರರುಗಳನ್ನೇ ಸೋಲಿಸಿದ ಧೀರನೆಂದು ಕುಮಾರರಾಮನ ಬಗ್ಗೆ ಕೊಂಡಾಡುತ್ತಾಳೆ. ಇದರಿಂದಾಗಿ ಆಗಲೇ ರತ್ನಾಜಿಯ ಪ್ರೇಮ ಮೋಹಕ್ಕೊಳಗಾಗಿ ವಿರಹವೇದನೆಗೆ ಜಾರಿರುತ್ತಾಳೆ. ಹೇಗಾದರೂ ಮಾಡಿ ಅವನನ್ನು ಪಡೆಯಲೇಬೇಕೆಂಬ ಕೆಟ್ಟ ಬಯಕೆಯನ್ನು ಸಂಗಾಯಿಗೆ ತಿಳಿಸುತ್ತಾಳೆ. ಆಗ ಕಂಚಿಯ ಕಾಮಾಕ್ಷಿ ಹಂಪೆಯ ಪಂಪಾದೇವಿಯರನ್ನು ಹಾಗೂ ಕುಟಿಲದೇವತೆಗಳನ್ನಾದರೂ ಮೊರೆಹೋಗಿ ನಿನಗೆ ಕುಮಾರರಾಮನು ಸಿಗುವಂತೆ ಮಾಡುತ್ತೇನೆ. ಅಲ್ಲಿಯವರೆಗೂ ಉಟ್ಟ ಸೀರೆಯನ್ನು ಬದಲಿಸುವುದಿಲ್ಲ. ಮುಡಿಯನ್ನು ಕಟ್ಟುವುದಿಲ್ಲ ಎಂದೆಲ್ಲಾ ಹೇಳಿ ರತ್ನಾಜಿಯನ್ನು ಸಂಗಾಯಿಯು ಸಮಾಧಾನ ಪಡಿಸುತ್ತಾಳೆ. ಅದರಂತೆಯೇ ಸಂಗಾಯಿಯು ಭೈರವಿ, ಚಾಮುಂಡಿ, ಕೊಲ್ಲಾಪುರದೇವಿ, ಚಂಡಿ, ಕಾಮಾಕ್ಷಿಯನ್ನು ನೆನೆದು ಹರಕೆ ಹೊತ್ತು ರತ್ನಿಯ ಶಯ್ಯಾಗೃಹಕ್ಕೆ ರಾಮನು ಬರುವಂತಾಗಬೇಕೆಂದು ಕೇಳಿಕೊಂಡಾಗ ದೇವತೆಗಳು "ಆ ಗುಣ ನಿಧಿಯನವಳ ಮೇಲಿಪುದಾಗದೇಮಗೆ ನಾವವನ ಬೇಗದಿಂ ತಂದು ಕೊಟ್ಟಪೆವಾಕೆಯ ಶಯಾಗೃಹಕೆ" ಎಂದು ಅಸ್ತು ಎನ್ನುತ್ತಾರೆ. ರತ್ನಾಜಿಯ ಮನಸಿನ ತೊಳಲಾಟವನ್ನು ನಂಜುಂಡ ಕವಿಯು ಚಿತ್ರಿಸಿರುವ ರೀತಿಯ ಉತ್ಪ್ರೇಕ್ಷೆಗೂ ಮೀರಿದ್ದಾಗಿದೆ.

ಕುಟಿಲ ದೇವತೆಗಳ ಸಂಚು ಇಲ್ಲಿಂದ ಪ್ರಾರಂಭವಾಗುತ್ತದೆ. ರಾಮನಾಥನು ತನ್ನ ಪರಿವಾರದವರೊಂದಿಗೆ ಚೆಂಡಾಟವನ್ನು ಆಡುತ್ತಿರುವಾಗ ದೇವತೆಗಳ ಶಕ್ತಿಯಿಂದ ಚೆಂಡು ರತ್ನಾಜಿಯ ಉಪ್ಪರಿಗೆಗೆ ಬಂದು ಬೀಳುತ್ತದೆ. ಇದರಿಂದ ರತ್ನಾಜಿಗೆ ರಾಮನನ್ನು ಒಲಿಸಿಕೊಳ್ಳಬಹುದೆಂಬ ಸಂತಸ ಉಂಟಾಗುತ್ತದೆ. ರಾಮನು ಅಳುಕಿನಿಂದ ಚೆಂಡನ್ನು ತರಲು ಕಾಟಣ್ಣನನ್ನು ಕಳಿಹಿಸುತ್ತಾನೆ. ಕಾಟಣ್ಣನು ಹೋದಾಗ ರತ್ನಾಜಿಯು ನಯವಾಗಿ ಮಾತನಾಡಿಸಿ ರಾಮನನ್ನೇ ಕಳುಹಿಸು ಎಂದು

ಹೇಳಿ ಕಳುಹಿಸುತ್ತಾಳೆ. ಅದರಂತೆಯೇ ಕಾಟಣ್ಣನು ರಾಮನಿಗೆ ತಿಳಿಸಿದಾಗ, ರಾಮನೆ ಅಲ್ಲಿಗೆ ಹೋದಾಗ ರತ್ನಾಜಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ಈ ಸಮಯವನ್ನು ಬಿಡಬಾರದೆಂದು ರತ್ನಾಜಿಯು ರಾಮನ ಬಳಿ ಹಿತವಾದ ಮಾತುಗಳನ್ನಾಡುತ್ತಿದ್ದಾಗ, ರಾಮನು ತಾಯಿ ವಾತ್ಸಲ್ಯವೆಂದು ತಿಳಿದರೆ, ರತ್ನಾಜಿಯು ಅಂತರಂಗದಲ್ಲೇ ಕಾಮಾತುರವನ್ನು ಅನುಭವಿಸುತ್ತಿರುತ್ತಾಳೆ. ಕೊನೆಗೂ ಸಹಿಸಲಾರದೆ ರತ್ನಾಜಿಯು ರಾಮನ ಬಳಿ ತನ್ನ ತೊಳಲಾಟವನ್ನು ಹೇಳಿಕೊಂಡಾಗ ರಾಮನಿಗೆ ಆಘಾತ ಉಂಟಾಗುತ್ತದೆ. ಶಿವ ಶಿವ ಎಂದು ಸಂಕಟಪಡುತ್ತಾ 'ನೀನೆ ನನ್ನ ಹೆತ್ತ ತಾಯಿ, ಹರಿಹರ ದೇವಿ ಸಾಕಿದವಳೆಂದು ಭಾವಿಸಿ ಹೀನಕಾರ್ಯವನ್ನು ಬಿಟ್ಟು ಅಪಕೀರ್ತಿಗೆ ಒಳಗಾಗದಿರುವಂತೆ ಇರು" ಎಂದು ಬುದ್ಧಿ ಹೇಳಿದರೂ ರತ್ನಾಜಿಯು ರಾಮನನ್ನು ಒಲಿಸುವ ಪ್ರಯತ್ನದಲ್ಲೇ ಮುಂದುವರೆದಿದ್ದರಿಂದ "ಪಾತಕಿ ತೊಲಗಾಚೆ" ಎಂದು ರಾಮನು ರತ್ನಾಜಿಯಿಂದ ಹೊರನಡೆಯುತ್ತಾನೆ. ಇದರಿಂದ ಕೋಪಗೊಂಡ ರತ್ನಾಜಿಯು ದುಃಖಿಸುತ್ತಿರುವಾಗ ಸಂಗಿಯು ರಾಮನ ಮೇಲೆ ಇನ್ನಷ್ಟು ದ್ವೇಷ ಸಾಧಿಸುತ್ತಾ ರತ್ನಾಜಿಗೆ ರಾಮನ ಮೇಲೆ ಸೇಡು ತೀರಿಸಿಕೊಳ್ಳಲು ಇದು ಒಳ್ಳೆಯ ಅವಕಾಶ ಬಿಡಬೇಡ ಎಂದು ಹೇಳಲು, ರತ್ನಾಜಿಯು ಕಂಪಿಲನು ಬರುವ ವೇಳೆಗೆ ಮೈಮೇಲಿನ ಬಟ್ಟೆ ಹರಿದುಕೊಂಡು, ಉಗುರುಗಳಿಂದ ಗಾಯ ಮಾಡಿಕೊಂಡು, ತಲೆ ಕೆದರಿಕೊಂಡು ಅಳುತ್ತಾ ಕೂತಿರುವ ಹಾಗೆ ನಟಿಸುತ್ತಿದ್ದಾಗ ಕಂಪಿಲನ ಆಗಮನವಾಗಿ, ಏನಿದು ನಿನ್ನ ಅವಸ್ಥೆ ಎಂದಾಗ ರತ್ನಾಜಿಯು ರಾಮನ ಮಾನಭಂಗ ಮಾಡಲು ಬಂದಿದ್ದಾಗ, ಚೆಂಡನ್ನು ಸಾಕ್ಷಿಯಾಗಿ ತೋರಿಸಿ ನಂಬಿಸುತ್ತಾಳೆ. ಇದನ್ನು ಕೇಳಿದ ಕಂಪಿಲನು ರತ್ನಾಜಿಯ ಮೇಲಿದ್ದ ಮೋಹದಿಂದ ಹಿಂದುಮುಂದು ಯೋಚಿಸದೆಯೇ ಮಂತ್ರಿ ಬೈಚಪ್ಪನನ್ನು ಕರೆಯಿಸಿ ರಾಮ ಮತ್ತು ಸಂಗಡಿಗರನ್ನೆಲ್ಲಾ ತಲೆಕಡಿಯುವಂತೆ ಆಜ್ಞಾಪಿಸಿದನು.

ಕಂಪಿಲನ ಆಜ್ಞೆಗೆ ದಿಕ್ಕೆಟ್ಟ ಬೈಚಪ್ಪನು ಕುಮಾರರಾಮನ ಬಳಿ ಹೋಗಿ ನಡೆದ ಸಂಗತಿಯನ್ನು ದುಃಖದಿಂದ ಹೇಳಿದಾಗ, ರಾಮನೇ ಸ್ವತಃ ತಲೆ ತೆಗೆದುಕೊಡುವೆನೆಂದು ಮುಂದಾದಾಗ ಬೈಚಪ್ಪನು ತಡೆದು ರಾಜ್ಯದ ಆಧಾರಸ್ತಂಭವಾಗಿರುವ ನಿನ್ನನ್ನು ಕಳೆದುಕೊಂಡರೆ ಈ ರಾಜ್ಯವನ್ನು ಉಳಿಸಿಕೊಳ್ಳುವುದಾದರು ಹೇಗೆ ಎಂದು ರಾಮನಿಗೆ ತಿಳಿ ಹೇಳುತ್ತಾ ಬೈಚಪ್ಪನು ಉಪಾಯದಿಂದ ಇಂದ್ರಜಾಲವನ್ನು ನೆನೆದು ಧ್ಯಾನಿಸಿದಾಗ, ಒದಗಿರುವ ಸಮಸ್ಯೆಯನ್ನು ಬಗೆಹರಿಸೆಂದು ಪ್ರಾರ್ಥಿಸಿದಾಗ ಇಂದ್ರನು, ರಾಮನು ಸಾಮಾನ್ಯವಾದ ವ್ಯಕ್ತಿಯಲ್ಲ, ಅರ್ಜುನನ ಅವತಾರವೆಂದು ತಿಳಿಸಿ, ತನ್ನ ಧೂತನ ಮೂಲಕ ನೆರವೇರಿಸಿಕೊಡುವೆನೆಂದು ಮಾತು ಕೊಡುತ್ತಾನೆ. ಅದರಂತೆಯೇ ಕುಮಾರರಾಮ, ಆತನ ಪರಿವಾರ ಮತ್ತು ಅವರ ಪತ್ನಿಯರ ಪ್ರತಿಕೃತಿಗಳನ್ನು ಮಾಡಿಸಿ ಎಲ್ಲರೂ ನಂಬುವಂತೆ, ಕುಮಾರರಾಮ ನಿಜವಾಗಿಯೂ ಸತ್ತಿರುವನೆಂದು ತಿಳಿಸುವ ಮೂಲಕ ಎಲ್ಲಾ ಕಾರ್ಯಗಳನ್ನು ಬೈಚಪ್ಪ ಮುಗಿಸಿ, ಇವರೆಲ್ಲರನ್ನೂ ಯಾರಿಗೂ ತಿಳಿಯದಂತೆ ಗುಪ್ತ ಜಾಗದಲ್ಲಿ ಕ್ಷೇಮವಾಗಿ ಇರಿಸಿರುತ್ತಾನೆ. ಹೀಗಾದಾಗ ಸುರತಾಳನಿಗೆ ರಾಮನು ಸತ್ತಿರುವ ವಿಚಾರವು ತಿಳಿದಾಗ ಮಿತಿಮೀರಿದ ಸಂತೋಷವಾಗುತ್ತದೆ. ಕೂಡಲೇ ನೇಮಿಯನ್ನು ಕರೆಯಿಸಿಕೊಂಡು ಕುಮ್ಮಟದ ಮೇಲೆ ದಾಳಿ

ಮಾಡಿ ಸರ್ವನಾಶ ಮಾಡಬೇಕೆಂದು ದೆಹಲಿ ಸುರತಾಳನು ಆಜ್ಞಾಪಿಸುತ್ತಾನೆ. ಇದರಂತೆಯೇ ನೇಮಿಖಾನನ ಸೇನೆ ಕುಮ್ಮಟದುರ್ಗದ ಕಡೆಗೆ ಧಾವಿಸುತ್ತದೆ. ಈ ಸಂಗತಿಯನ್ನು ಕೇಳಿದ ಕಂಪಿಲನು ಮನಸ್ಸಲ್ಲೇ ಕೊರಗುತ್ತಾನೆ. ತನ್ನ ರಾಮನಿದ್ದಿದ್ದರೆ ಈ ಭಯದ ಅವಶ್ಯಕತೆಯೇ ಇರುತ್ತಿರಲಿಲ್ಲ. ಎಂಥಾ ತಪ್ಪು ಮಾಡಿದೆ ಎಂದು ಪಶ್ಚಾತ್ತಾಪದಿಂದ ಬೈಚಪ್ಪನನ್ನೇ ಬೈಯುತ್ತಾನೆ. ಬೈಚಪ್ಪ ಎಲ್ಲರನ್ನೂ ಸಮಾಧಾನ ಪಡಿಸುತ್ತಾ ಸೈನ್ಯವನ್ನು ಸಿದ್ಧತೆಗೊಳಿಸಿ ಯುದ್ಧಕ್ಕೆ ಹೊರಡುತ್ತಾರೆ.

ಎರಡು ಸೇನೆಗಳ ನಡುವೆ ಯುದ್ಧ ಪ್ರಾರಂಭವಾದಾಗ ಸಂದರ್ಭವನ್ನೇ ಕಾಯುತ್ತಿದ್ದ ಬೈಚಪ್ಪ ಒಬ್ಬ ವೇಷಧಾರಿ ವ್ಯಕ್ತಿಯನ್ನು ಕರೆತರುತ್ತಾನೆ. ಘೋರ ಯುದ್ಧ ನಡೆಯುತ್ತಿರುವಾಗ ಕುಮಾರರಾಮ ಮತ್ತು ಅವನ ಸಂಗಡಿಗರೆಲ್ಲರೂ ನೇಮಿಯ ಸೇನೆಯ ಮೇಲೆ ಬಿರುಗಾಳಿಯಂತೆ ಅಪ್ಪಳಿಸಿದಾಗ ದಿಕ್ಕೆಟ್ಟು ನೇಮಿಯ ಸೇನೆ ಓಡಿ ಹೋಗುತ್ತದೆ. ಇದನ್ನು ಕಂಡ ನೇಮಿಯು ಕುಮಾರರಾಮನು ಬದುಕಿರಬೇಕೆಂಬ ಸಂಶಯವು ಬರುತ್ತದೆ. ನಂತರದಲ್ಲಿ ಕುಮ್ಮಟ ಸೇನೆಯು ವಿಜಯವನ್ನು ತಂದಾಗ, ಬೈಚಪ್ಪ ರಾಮನು ಬದುಕಿರುವನೆಂದು, ನಡೆದ ವಿಚಾರವನ್ನೆಲ್ಲಾ ಹೇಳಿದಾಗ ಕಂಪಿಲನಿಗೆ ಅಪಾರ ಸಂತಸವಾಗುತ್ತದೆ. ಬೈಚಪ್ಪನನ್ನು ಕೊಂಡಾಡುತ್ತಾನೆ. ಈ ವಿಚಾರ ಕೇಳಿದಂತೆ ಎಲ್ಲರಿಗೂ ಸಂತಸವಾಗುತ್ತದೆ. ಆದರೆ ರತ್ನಾಜಿಗೆ ಹಿಂದಿನ ಜನ್ಮದ ಜನನದ ಉದ್ದೇಶ ನೆನಪಾಗಿ ತಾನೇ ಅಸುನೀಗುತ್ತಾಳೆ. ನಂತರ ಇದನ್ನು ಕಂಡ ಶಿವ ಪಾರ್ವತಿಯರು ಕೊಂಡಾಡುತ್ತಾರೆ. ಊರ್ವಶಿಯು ಸಹ ರಾಮನಾಥನ ಪರಿಪೂರ್ಣ ಶೀಲಗುಣವನ್ನು ಕೊಂಡಾಡಿ, ಆತನಿಗೆ ಮೋಕ್ಷ ದೊರೆಯುವಂತೆ ಮಾಡಿ ಎಂದು ಕೈಲಾಸದಲ್ಲಿ ಪ್ರಾರ್ಥಿಸುತ್ತಾಳೆ.

ಇತ್ತ ಸೋತು ಹಿಂತಿರುಗಿ ಬಂದ ನೇಮಿಖಾನನ ಸೇನೆಯನ್ನು ಕಂಡ ಸುಲ್ತಾನನು ಭಯಂಕರ ಸಿಟ್ಟಿಗೆದ್ದು, ಸಂಕಟವನ್ನು ಅನುಭವಿಸುತ್ತಾನೆ. ಆದರೆ ಎರಡು ಬಾರಿ ಸುರತಾಳನ ಸೇನೆಯು ಸೋತಿರುವುದು ಅಪಮಾನವೆನಿಸಿ ನೇಮಿಖಾನನನ್ನು ನಿಂದಿಸುತ್ತಾನೆ. ಆಗ ಆ ಸೇನೆಯಲ್ಲಿದ್ದ ಮಾತಂಗಿ ಎಂಬ ಮಹಿಳೆ ಕುಮ್ಮಟದರಸರ ಮೇಲೆ ಯುದ್ಧ ಮಾಡಿ ಅವರನ್ನು ಸೋಲಿಸಿ ನಿಮಗೆ ತಂದೊಪ್ಪಿಸುವೆ ವೀಳೆಯವನ್ನು ಕೊಡು ಎಂದು ಸುರತಾಳನನ್ನು ಮನವೊಲಿಸಿ ಸೇನೆಯನ್ನು ಕರೆದುಕೊಂಡು ಯುದ್ಧಕ್ಕೆ ಹೊರಡುತ್ತಾಳೆ. ಇವರ ಸೇನೆಯು ಅರ್ಭಟಿಸುತ್ತಾ ಚಂದ್ರಗಿರಿ, ಕಲ್ಲಿಕೋಟೆ, ನಲ್ಲೂರು, ಕಡಪ ಹೀಗೆ ಹಲವು ಪ್ರದೇಶಗಳ ಮಾರ್ಗವಾಗಿ ಬಿದಿರೆಯಲ್ಲಿ ಬೀಡುಬಿಡುತ್ತದೆ. ಅಲ್ಲಿಂದ ಎಂಟು ದಿನಗಳ ಕಾಲ ಕುಮ್ಮಟದುರ್ಗಕ್ಕೆ ಮಾತಂಗಿ ಸೇನೆ ಬಂದು ತಲುಪುತ್ತದೆ. ಈ ವಿಚಾರ ಕೇಳಿದ ಕುಮಾರರಾಮ ಕಾಟಣ್ಣರ ನೇತೃತ್ವದಲ್ಲಿ ರಣರಂಗಕ್ಕೆ ಹೊರಟು ಬಂದು ಎರಡೂ ಸೇನೆಗಳ ನಡುವೆ ಯುದ್ಧ ಪ್ರಾರಂಭವಾದಾಗ ಕುಮಾರರಾಮನನ್ನು ಕಂಡು ಬೆರಗಾದ ಮಾತಂಗಿಯು ತಕ್ಷಣವೇ ಯುದ್ಧ ನಿಲ್ಲಿಸಿ, ಸುರತಾಳನ ಮಗಳನ್ನು ಮದುವೆಯಾಗಿ ಸಂಧಾನ ಮಾಡಿಕೊಳ್ಳಬೇಕೆಂದು, ಇದರಿಂದ ಒಳ್ಳೆಯದಾಗುತ್ತದೆಂದು ಹೇಳಿದಾಗ ರಾಮನು ಪರಸ್ತ್ರೀ ಸೋದರನಾಗಿರುವ ನಾನು ವ್ರತಭಂಗ ಮಾಡಲಾರೆ ಎಂದು ತಿರಸ್ಕರಿಸಿ ಮತ್ತೆ ಯುದ್ಧದಲ್ಲಿ ನಿರತನಾಗುತ್ತಾನೆ. ಆದರೆ ಮಾತಂಗಿ

ಮತ್ತೆ ಮತ್ತೆ ಸಂಧಾನಕ್ಕೆ ಮುಂದಾಗುತ್ತಾಳೆ. ಆದರೆ ಇದನ್ನು ಧಿಕ್ಕರಿಸಿ ಪುನಃ ಯುದ್ಧಕ್ಕೆ ಮುಂದಾದಾಗ ಕಾಟಣ್ಣ ಭಾಗಸಂಗಮರು ಭೀಕರವಾಗಿಯೇ ಯುದ್ಧದಲ್ಲಿ ಹೋರಾಡುತ್ತಿದ್ದರೂ ಮಾತಂಗಿಯ ಸೇನೆ ಕೋಟೆಗೆ ಲಗ್ಗೆಯಿಡುತ್ತದೆ. ಈ ಸಮಯದಲ್ಲಿ ರಾಮನ ಪರಿವಾರದವರಾದ ಕಾಳಂಜಿಯ ಕಂಪ, ಅಕ್ಕಸಾಲೆಯ ಚಿಕ್ಕ, ದೇವಿಶೆಟ್ಟಿಯ ಲಿಂಗ ಬಿಲ್ಲುಗ, ಹರಿಗೆಯ ಸಿಂಗ, ಮಾದಿಗರ ಹಂಪ, ಕೊಳ್ಳಿಯ ನಾಗ, ಹೊಲೆಯರ ಹುಳ್ಳ ಇವರೆಲ್ಲರೂ ಮಡಿಯುತ್ತಾರೆ. ಆಗ ಇವರ ಪತ್ನಿಯರೂ ಸತಿಯಾಗುತ್ತಾರೆ. ಈ ವೇಳೆಗೆ ಕುಮಾರರಾಮ ತನಗೂ ಉಳಿಗಾಲವಿಲ್ಲವೆಂದು ತಿಳಿದು ತನ್ನ ಪತ್ನಿಯರಿಗೂ ಸತಿಯಾಗುವಂತೆ ತಿಳಿಸುತ್ತಾನೆ. ನಂತರ ಕಾಟಣ್ಣ, ಸಂಗಮರಿಬ್ಬರೂ ಮಡಿಯುತ್ತಾರೆ. ಕುಮಾರರಾಮನ ಜೊತೆ ಬಾದೂರಖಾನನೂ ಹೋರಾಡಿದರೂ, ಕೊನೆಗೆ ಬಾದೂರನೂ ಸಾಯುತ್ತಾನೆ. ಆಪದ್ಭಾಂದವನಿಗೆ ಕೊನೆಗೂ ನನ್ನಿಂದ ಸಹಾಯ ಮಾಡಲಾಗಲಿಲ್ಲ ಎಂದು ಕೊರಗಿ ಬಾದೂರನು ಪ್ರಾಣ ಬಿಡುತ್ತಾನೆ. ಇದರಿಂದ ರಾಮನು ಮರುಗುತ್ತಾನೆ. ನಂತರ ಮಾತಂಗಿಯೇ ಕುಮಾರರಾಮನ ವಿರುದ್ಧ ಮುನ್ನುಗ್ಗುತ್ತಾಳೆ. ರಾಮನು ಅಲ್ಲಿಯೇ ಪ್ರಾಣ ಬಿಡುತ್ತಾನೆ. ಶಿವನ ಪುಷ್ಪಕವಿಮಾನ ಏರಲು ದೇವತೆಗಳು ಹೂಮಳೆಗೈಯ್ಯುತ್ತಾರೆ. ಮಾತಂಗಿ ರಾಮನ ರುಂಡವನ್ನು ಸುರತಾಳನಿಗೆ ಕಳಿಸಿದಾಗ ಅದನ್ನು ಕಂಡ ಮಗಳು ದುಃಖಿಸುತ್ತಾ ಸಾಯುತ್ತಾಳೆ. ಇದನ್ನು ಕಂಡ ಸುರತಾಳನು ತೀವ್ರ ದುಃಖಿತನಾಗುತ್ತಾನೆ. ತನ್ನ ಮಗಳ ಸಾವಿಗೆ ನಾನೇ ಕಾರಣನಾದೆನಲ್ಲ ಎಂದು ತೀವ್ರ ಸಂಕಟಕ್ಕೊಳಗಾಗಿ, ರಾಮನ ರುಂಡವನ್ನು ಕುಮ್ಮಟದುರ್ಗಕ್ಕೆ ಕಳಿಸಿದಾಗ ಅಲ್ಲಿ ಈ ರುಂಡವು ಲಿಂಗವಾಗಿ ಪ್ರತಿಷ್ಠಾಪನೆಯಾಗುತ್ತದೆ. ನಂತರ ಕೈಲಾಸದಲ್ಲಿ ಕುಮಾರರಾಮನಿಗೆ ಶಿವನು ಗಣಪದವಿಯನ್ನು ನೀಡಿ ಸತ್ಕರಿಸುತ್ತಾನೆಂದು ನಂಜುಂಡ ಕವಿಯು ಕಥೆಯನ್ನು ಪೂರ್ಣಗೊಳಿಸಿದ್ದಾನೆ.

ನಂಜುಂಡ ಕವಿಯು 'ರಾಮನಾಥ ಚರಿತೆ'ಯು ರಸವತ್ತಾಗಿ ಮೈತಳೆದು ರಚನೆಯಾದಂತಹ ಕಾವ್ಯವಾಗಿದೆ. ಇದು ಐತಿಹಾಸಿಕ ಕಾವ್ಯವಾಗಿದ್ದರೂ, ಐತಿಹಾಸಿಕ ವಿಚಾರಗಳಿಗೆ ಕೊರತೆಯುಂಟು ಮಾಡಿದೆ ಎಂದೆನಿಸುತ್ತದೆ. ಈ ಕಾವ್ಯದಲ್ಲಿ ಮುಮ್ಮಡಿಸಿಂಗೆಯನಾಯಕನ ಹೆಸರು ಎಲ್ಲೂ ಸುಳಿಯದೆ ಕಂಪಿಲರಾಯನ ರಾಜ್ಯಪರಿವಾರ, ಏಳಿಗೆ, ಯುದ್ಧಗಳನ್ನು ಕುರಿತಂತೆ ವಿವರಿಸುತ್ತಾ ಕುಮಾರರಾಮನ ಶುಚಿತ್ವ, ಚಾರಿತ್ರ್ಯ, ನಡತೆ, ಸ್ಫುರದ್ರೂಪಿ, ಪರಾಕ್ರಮಗಳನ್ನು ಬಿಂಬಿಸುತ್ತದೆ. ಕಾವ್ಯದಲ್ಲಿ ಕುಮಾರರಾಮನ 'ಪರನಾರಿ ಸೋದರತೆಯ' ತತ್ವವೇ ಮೂಲವಸ್ತುವಾಗಿರುವುದು ಕಂಡುಬರುತ್ತದೆ. ಹಾಗೂ ಜಾತಿ ವ್ಯವಸ್ಥೆ, ಧರ್ಮ, ಸಮಾಜ, ಆರ್ಥಿಕತೆ, ಸೇನಾವ್ಯವಸ್ಥೆ, ಇತರೆ ವ್ಯವಸ್ಥೆಗಳ ಕುರಿತಂತೆ ಸಂದರ್ಭಕ್ಕನುಗುಣವಾಗಿ ಕಟ್ಟುವ ಪ್ರಯತ್ನವನ್ನು ಕವಿಯು ಮಾಡಿದ್ದಾರೆ.

ಕಂಪಿಲನಿಂದ ಪ್ರಾರಂಭವಾಗುವ ಈ ಕಾವ್ಯವು ಕಂಪಿಲನಿಗೆ ಹೆಚ್ಚು ಮಹತ್ವ ಕೊಡದೆ ಪೋಷಕನನ್ನಾಗಿ ಬಳಸಿಕೊಳ್ಳಲಾಗಿದೆ. ಕುಮಾರರಾಮನಿಂದಲೇ ಯುದ್ಧಗಳು ಪ್ರಾರಂಭವಾದವು. ಕಂಪಿಲನ ಶೌರ್ಯ, ಪರಾಕ್ರಮಗಳ ಕುರಿತು ಯಾವ ಯುದ್ಧವನ್ನು ತಿಳಿಸದೇ ಬರೆದಿರುವುದು ಕಾವ್ಯದ ಕೊರತೆ ಎನಿಸುತ್ತದೆ. ಕವಿಯು ಐತಿಹಾಸಿಕ ಕಾವ್ಯವನ್ನು ಕಟ್ಟುವ ಸಂದರ್ಭದಲ್ಲಿ ಜನರಿಗೆ ಯಾವುದು

ಬಳಸಿಕೊಂಡು ಬರೆದರೆ ಇಷ್ಟವಾಗಬಹುದು ಎಂಬುದು ಕವಿ ಚೆನ್ನಾಗಿಯೇ ಅರಿತಿದ್ದರೆಂದು ಅನಿಸುತ್ತದೆ. ಹೀಗಾಗಿ ಪೌರಾಣಿಕ ತುಣುಕುಗಳನ್ನು ಬಳಸಿಕೊಂಡು ಕಥೆಯನ್ನು ಮುಂದುವರೆಸಿಕೊಂಡು ಹೋಗಿರುವುದು ಕವಿಯ ಪ್ರಯತ್ನವಾಗಿದೆ. ಕಾವ್ಯದ ಪ್ರಾರಂಭದಲ್ಲಿ ಕುಮಾರರಾಮನ ಬಾಲ್ಯದ ನಂತರ ಆತನ ಯುದ್ಧಗಳನ್ನು ಕುರಿತು ಸಾಲು ಸಾಲಾಗಿ ವಿವರಿಸಲಾಗಿದೆ. ಆರಂಭದಲ್ಲೇ ರಾಮನು ಹುಳಿಯೇರು ಕಾಳಗದಲ್ಲಿ ಹೊಯ್ಸಳರ ವಿರುದ್ಧ ಯುದ್ಧವಾಡುವ ಪ್ರಸಂಗವನ್ನು ನೈಜತೆಗೆ ಹತ್ತಿರವಾಗುವಂತೆ ಚಿತ್ರಿಸಲಾಗಿದೆ. ಹಾಗೆಯೇ ದಿಲ್ಲಿ ಸುಲ್ತಾನನೊಂದಿಗೆ ಯುದ್ಧವಾಗುವ ಸಂಗತಿಗಳನ್ನು ಮೂರು ಬಾರಿ ಉಲ್ಲೇಖಿಸಲಾಗಿದೆ. ಆದರೆ ಶಾಸನಗಳಲ್ಲಿ ಒಂದು ಬಾರಿ ಮಾತ್ರ ಕವನದ ಉಲ್ಲೇಖವಿದೆ. ಕವಿಯ ಈ ಹೇಳಿಕೆ ಯುದ್ಧಕ್ಕೆ ನೀಡಿರುವ ಮಹತ್ವವನ್ನು ಕುರಿತು ತಿಳಿಸುತ್ತದೆ. ಇಲ್ಲಿ ಹುಳಿಯೇರು ಮಾರನಗೌಡ, ಬಲ್ಲಾಳದೇವ, ನೇಮಿಖಾನ, ಕರಿಪತಿ ಕಪಿಲೇಶ್ವರ, ಪ್ರತಾಪರುದ್ರ, ಜಗತಾಪಿಯರೊಡನೆ ಹೋರಾಟ ನಡೆಸಿರುವುದು, ಇಲ್ಲಿ ಸಾಮಾನ್ಯವಾಗಿದ್ದರೂ ಕೆಲವು ವಿಚಾರಗಳು ಶಾಸನಗಳ ದಾಖಲೆಗಳಿಗೆ ದೂರವೆನಿಸುತ್ತವೆ.

ಈ ಚರಿತೆಯು ಕೆಲವು ಪಾತ್ರಗಳಿಗೆ ಅಲ್ಲಲ್ಲಿ ಸಂದರ್ಭಕ್ಕನುಗುಣವಾಗಿ ಪುಷ್ಟಿ ಕೊಡುತ್ತಾ ಬಂದಿದೆ. ಆದರೆ ಕೆಲವು ಪಾತ್ರಗಳ ಸೃಷ್ಟಿ ಹೇಗಾಯಿತೆಂಬುದರ ಕುರಿತು ಸಂಪೂರ್ಣ ಹಿನ್ನೆಲೆಯಿಲ್ಲದಿರುವುದು ಕೊರತೆಯೆನಿಸುತ್ತದೆ. ಕುಮಾರರಾಮನ ಭ್ರಾತೃಪ್ರೇಮವು ಕಾಟಣ್ಣನ ಮೇಲೆ ಅಪಾರವಾಗಿತ್ತು. ಆದರೆ ಕಾಟಣ್ಣನ ಮೂಲದ ಕುರಿತು ಯಾವುದೇ ಅಂಶಗಳಿಲ್ಲ ಎಂಬುದು ಪ್ರಶ್ನಾರ್ಥಕವಾಗಿದೆ. ಕಾಟಣ್ಣನ ಕುರಿತು ಯಾವುದೇ ವಿಚಾರಗಳಾಗಲೀ, ಪರಿಚಯವಾಗಲೀ ಬೇರೆ ಯಾವುದೇ ಶಾಸನಗಳಾಗಲೀ, ಲಿಖಿತ ದಾಖಲೆಗಳಾಗಲೀ ತಿಳಿಸಿಲ್ಲ. ಇದರಿಂದಾಗಿ ಕಾಟಣ್ಣನ ಮೂಲ ಇಲ್ಲಿ ತುಂಬಾ ಅವಶ್ಯಕತೆಯಿತ್ತು ಎಂದು ಅನಿಸುತ್ತದೆ. ದೇವಿಶೆಟ್ಟಿಲಿಂಗಣ್ಣನನ್ನು ಕುರಿತಂತೆಯೂ ಮೇಲಿನ ವಿಚಾರವು ಅನ್ವಯಿಸುತ್ತದೆ. ಈ ಕಾವ್ಯದಲ್ಲಿ ಕೆಲವು ಪ್ರಮುಖ ಪಾತ್ರಗಳು ತನ್ನ ಸತ್ವತೆಯನ್ನು ಕಳೆದುಕೊಳ್ಳುತ್ತಾ ಬಂದು, ಸಾಂದರ್ಭಿಕ ಪಾತ್ರಗಳೇ ಹೆಚ್ಚು ಮಾನ್ಯತೆಯನ್ನು ಪಡೆದುಕೊಂಡಿವೆ. ಮುಖ್ಯವಾಗಿ ಬೈಚಪ್ಪನ ವ್ಯಕ್ತಿತ್ವ ಅಪರೂಪವಾದಂತಹ ವ್ಯಕ್ತಿತ್ವ, ಶಾಸನಗಳಲ್ಲಿ ಈ ಬೈಚಪ್ಪನ ಕುರಿತು ಯಾವುದೇ ಮಾಹಿತಿಗಳಿಲ್ಲವಾದರೂ ಬೈಚಪ್ಪನಿದ್ದ ಎನ್ನುವ ಅಂಶ ಹಲವು ಆಕರಗಳಿಂದ ತಿಳಿದುಬರುತ್ತದೆ. ಇಲ್ಲಿ ಬೈಚಪ್ಪನ ವ್ಯಕ್ತಿತ್ವ ಪ್ರಾರಂಭದಲ್ಲಿ ಪೋಷಕದಂತಿದ್ದು, ನಂತರದಲ್ಲಿ ಸಂದರ್ಭಾನುಸಾರ, ಸಮಯಾನುಸಾರ ಮಹತ್ವತೆಯನ್ನು ಪಡೆದುಕೊಳ್ಳುತ್ತಾ ಹೋಗಿದೆ. ಅಂದರೆ ಕುಮಾರರಾಮನ ವ್ಯಕ್ತಿತ್ವ ಕುರಿತು ತನ್ನ ತಂದೆಯೇ ಅರಿವಿಲ್ಲದವನಾಗಿ, ಪೂರ್ವಪರ ಆಲೋಚನೆ ಮಾಡದೆ ತನ್ನ ಮಗನನ್ನು ಕೂಪಕ್ಕೆ ತಳ್ಳುವಂತೆ ಆಜ್ಞಾಪಿಸಿದಾಗ, ಬೈಚಪ್ಪನು ಕಂಪಿಲರಾಯ ಕುಮಾರರಾಮನ ತಂದೆಯಾಗಿ ಮಾತ್ರ ಗೋಚರಿಸುತ್ತಾರೆ. ಆದರೆ ಬೈಚಪ್ಪನು ಅದಕ್ಕೂ ಮಿಗಿಲಾದ ಸ್ಥಾನಕ್ಕೆ ಏರಿಸಿರುವುದು ಔಚಿತ್ಯಪೂರ್ಣವೆನಿಸಿದೆ. ಮುಮ್ಮಡಿಯ ಕಾಲದಿಂದಲೂ ಆಪ್ತನಾಗಿದ್ದ ಬೈಚಪ್ಪನು ಸಮಯೋಚಿತ ವ್ಯಕ್ತಿಯಾಗಿದ್ದ. ಯಾವುದು ಒಳಿತು, ಯಾವುದು ಕೆಡುಕು ಎಂಬ ದೂರಾಲೋಚನೆಗಳಿಗೆ ಹೆಚ್ಚು ಮಾನ್ಯತೆಯನ್ನು ನೀಡುತ್ತಿದ್ದ ಎಂಬ ಸಂಗತಿ ವಿಶೇಷವಾಗಿದೆ.

ಒಂದು ಕಡೆ ಕಂಪಿಲನ ಆಜ್ಞೆಯೂ ಮುಖ್ಯವಾಗಿತ್ತು. ಮತ್ತೊಂದು ಕಡೆ ಕುಮಾರರಾಮನ ವ್ಯಕ್ತಿತ್ವದ ಮೇಲಿದ್ದ ಅಪಾರ ನಂಬಿಕೆಯೂ ಮುಖ್ಯವಾಗಿದ್ದಾಗ ಬೈಚಪ್ಪನ ಮಾರ್ಗೋಪಾಯಗಳಿಗೆ ವಿಸ್ತಾರವಾದ ನೆಲೆಗಟ್ಟು ಅದರ ಮೂಲಕ ಯಶಸ್ವಿಯಾಗುವಂತೆ ನೋಡಿಕೊಂಡು ಎರಡೂ ಕಾರ್ಯಗಳನ್ನು ಸರಿದೂಗಿಸುವಂತೆ ನೋಡಿಕೊಳ್ಳುವ ಬೈಚಪ್ಪನ ವ್ಯಕ್ತಿತ್ವ ಅಪರೂಪವಾದದ್ದೆಂದೆ ಹೇಳಬಹುದು. 'ಹುಸಿಯನಾಡಿದರೂ ಹಸನಾಗಿರಬೇಕು' ಎಂಬ ಗಾದೆಯು ಬೈಚಪ್ಪನ ದೂರದರ್ಶಿ ಆಲೋಚನೆಗಳಿಗೂ ಸರಿಗಟ್ಟುವಂತಾಗಿದ್ದಾಗಿದೆ.

ಬೈಚಪ್ಪನ ಬುದ್ಧಿವಂತಿಕೆಯು ಕಂಪಿಲನ ದಡ್ಡತನವನ್ನು ಹೋಗಲಾಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ. ಕಂಪಿಲನು ಶೌರ್ಯ, ಪರಾಕ್ರಮಗಳಲ್ಲಿ ಹೊಯ್ಸಳರನ್ನೇ ಮೀರಿಸುವಂತ ಅಸಾಧ್ಯ ಶಕ್ತಿ ಸಾಮರ್ಥ್ಯವುಳ್ಳವನಾಗಿದ್ದರೂ, ಒಬ್ಬ ಮಂತ್ರಿಯ ಮುಂದೆ, ಒಬ್ಬ ಸ್ತ್ರೀ ಮುಂದೆ ಇವೆಲ್ಲಾ ವ್ಯರ್ಥವೆನಿಸುತ್ತದೆ. ಕಾರಣ ಸ್ತ್ರೀಲೋಲುಪನಾಗಿದ್ದ ಕಂಪಿಲನಿಗೆ ತನ್ನ ಮಗನ ಅಸಾಮಾನ್ಯ ವ್ಯಕ್ತಿತ್ವ ಸೌಮ್ಯ ಗುಣಗಳು, ಪರಾಕ್ರಮಗಳೆಲ್ಲವೂ ಅದೃಶವಾದವು. ಎಲ್ಲೋ ಒಂದು ಕಡೆ ಕಂಪಿಲರಾಯನ ವ್ಯಕ್ತಿತ್ವವು ಈ ವಿಚಾರದಲ್ಲಿ ನಗೆಪಾಡಾಗುತ್ತದೆ. ರಾಜನ ವ್ಯಕ್ತಿತ್ವಕ್ಕೆ, ಆಲೋಚನೆಗೆ ಕಂಪಿಲನು ವಿರುದ್ಧವಾಗಿರುವಂತೆ ಬಿಂಬಿಸಿರುವುದು ಅಲ್ಲಲ್ಲಿ ವ್ಯಕ್ತವಾಗುತ್ತಾ ಹೋಗಿದೆ.

ರತ್ನಾಜಿಯು ಕಂಪಿಲನ ಅತ್ಯಂತ ನೆಚ್ಚಿನ ರಾಣಿಯಾಗಿದ್ದಳು. ಈಕೆಯ ರೂಪ, ಸೌಂದರ್ಯ ದೇವಕನ್ನಿಕೆಯರನ್ನು ಮೀರಿಸುವಂತದ್ದೆಂದೂ, ಆದರೆ ಮಾನಸಿಕವಾಗಿ ಅಷ್ಟೇ ತದ್ವಿರುದ್ಧವಾದ ಕುರೂಪತೆಯನ್ನು ಹೊಂದಿರುವುದು ಬೇಸರದ ಸಂಗತಿಯಾಗಿದೆ.

ಒಂದು ಹೆಣ್ಣಿಗೆ ಸೌಂದರ್ಯ ಎಷ್ಟು ಮುಖ್ಯವೋ, ಆಕೆಯ ಮನದಾಳತೆ, ನೈತಿಕತೆಗಳು, ನಿಲುವುಗಳು ಅಷ್ಟೇ ಮುಖ್ಯವಾಗಿರುತ್ತದೆ. ಕುಮ್ಮಟ ರಾಜ್ಯದ ಅವನತಿಗೆ ಒಂದು ರೀತಿಯಲ್ಲಿ ಹೇಳುವುದಾದರೆ ರತ್ನಾಜಿಯ ದುರ್ವರ್ತನೆಯ ನಿಲುವುಗಳೇ ಕಾರಣ ಎಂದು ಅನಿಸುತ್ತದೆ. ಒಬ್ಬ ಸ್ತ್ರೀ ಸೌಂದರ್ಯದ ಮುಂದೆ ಯಾವುದೇ ಸಂಬಂಧಗಳಿಲ್ಲ, ಯಾವುದೇ ವಾತ್ಸಲ್ಯ ಮಮಕಾರಗಳಿಲ್ಲ ಎಂಬುದನ್ನು ಈ ಕಾವ್ಯವು ಸ್ಪಷ್ಟವಾಗಿ ಬಿಂಬಿಸುತ್ತಾ ಹೋಗಿದೆ.

ಸಹವಾಸದಿಂದ ಸನ್ಯಾಸಿಯೂ ಕೆಡುವುದರಲ್ಲಿ ಸಂದೇಹವೇ ಇಲ್ಲ ಎಂಬ ಮಾತು ರತ್ನಾಜಿ ಮತ್ತು ಅವನ ಸಖಿ ಸಂಗಾಯಿಯರ ಬಾಂಧವ್ಯಕ್ಕೆ ಹೋಲುತ್ತದೆ. ಅಂದರೆ ಒಬ್ಬ ರಾಜನ ಪತ್ನಿ ಇಡೀ ಸಮಾಜಕ್ಕೆ, ಸ್ತ್ರೀ ಕುಲಕ್ಕೆ ಮಾದರಿಯಾಗಿರಬೇಕಾದಂತಹ ವ್ಯಕ್ತಿತ್ವವನ್ನು ಹೊಂದುವುದರ ಬದಲಾಗಿ, ಮೋಹ ಪರವಶಳಾಗಿ, ಸಂಗಾಯಿಯಂತ ಕೆಟ್ಟ ಜನರ ಸಹವಾಸಗಳಿಗೆ ಗೌರವಿಸಿ ತನ್ನ ಮಗನನ್ನು ಮೋಹಿಸುವಂತಹ ಆತ್ಮ ದುರ್ಮಾರ್ಗಗಳಾಗಿ ನಡೆದುಕೊಳ್ಳುವಂತಹ ಈ ಸನ್ನಿವೇಶವನ್ನು ಸ್ತ್ರೀ ಕುಲಕ್ಕೆ ಅಪಮಾನವೆನ್ನಬಹುದೋ, ಅಥವಾ ಸ್ತ್ರೀಯ ಆಂತರಿಕ ಭಾವನೆಗಳನ್ನು ಗೌರವಿಸಬೇಕೋ ತಿಳಿಯದು. ಆದರೆ ಒಂದು ರಾಜ್ಯ ಏಳಿಗೆಯಾದರೂ, ಅವನತಿಯಾದರೂ, ಆರ್ಥಿಕತೆ ಕೊರತೆ ಉಂಟಾದರೂ ಅದರಲ್ಲಿ ಹೆಣ್ಣಿನ ಪಾತ್ರ ಮುಖ್ಯವಾಗಿರುತ್ತದೆ ಎಂಬ ಸಂದೇಶವನ್ನು ಈ ಕಾವ್ಯವು

ಕಟ್ಟಿಕೊಡುತ್ತಾ ಹೋಗಿದೆ. ಯಾಕೆಂದರೆ ಇಲ್ಲಿ ರತ್ನಾಜಿ ಅಷ್ಟೇ ಅಲ್ಲ, ಮಾತಂಗಿಯು ಸುಲ್ತಾನನ ಮಗಳನ್ನು ವಿವಾಹವಾಗುವಂತೆ ಕುಮಾರರಾಮನನ್ನು ಒಲೈಸುವುದು, ಕುಮಾರರಾಮನು 'ಪರಸ್ತ್ರೀ ಸೋದರ'ತೆಯನ್ನು ಪಾಲಿಸುವುದೊಂದೇ ಗುರಿಯಾಗಿದ್ದರಿಂದ ಯಾವ ಹೆಣ್ಣಿಗೂ ಕಿವಿಕೊಡದೆ ಸತ್ಯ, ನಿಷ್ಠೆ, ಧರ್ಮ, ಗುರಿ, ಸೋದರತೆ, ವಾತ್ಸಲ್ಯ, ಗೌರವ, ನಂಬಿಕೆಗಳನ್ನೊಳಗೊಂಡು ಅಪರೂಪದ ವ್ಯಕ್ತಿಯಾಗಿ ಆಳುತ್ತಿದ್ದ ಸ್ಫುರದ್ರೂಪಿ ರಾಜಕುಮಾರನ ರಾಜ್ಯವನ್ನು ತುಳಿಯುವ ಪ್ರಯತ್ನಗಳು ಕೊನೆಗೆ ಅವು ಫಲಿತಗೊಂಡಿದ್ದು ಹೆಣ್ಣಿಂದಲೇ ಎಂಬುದನ್ನು ಅರ್ಥೈಸುತ್ತಾ ಹೋಗಿದೆ.

**ಬಾಲರಾಮನ ಸಾಂಗತ್ಯ**

ಮಹಾಲಿಂಗಸ್ವಾಮಿಯ 'ಬಾಲರಾಮನ ಸಾಂಗತ್ಯ'ವು ಒಂದು ಕನ್ನಡ ದೇಶೀ ಪರಂಪರೆಯ ಕಾವ್ಯವಾಗಿದೆ. ಈ ಕಾವ್ಯವು ಚಾರಿತ್ರಿಕ ಅಂಶಗಳನ್ನು ಒಳಗೊಂಡಂತೆ ಮಧ್ಯಯುಗೀನ ಕರ್ನಾಟಕದ ವಿಚಾರಗಳು, ಸಂಸ್ಕೃತಿ, ಚರಿತ್ರೆಯನ್ನು ಹಾಗೂ ಅಲ್ಲಿನ ವಿಶಿಷ್ಟ ಆಚರಣೆಗಳು, ಕೆಲವು ಸಂಗತಿಗಳು ಅಲ್ಲಿನ ಸಮಾಜ, ಅಲ್ಲಿನ ಜನಪದೀಯತೆಗೆ ಸಾಕ್ಷಿಯಾದಂತಹ ಜೋಗುಳ ಪದಗಳು, ಯಾಲ ಪದಗಳು, ಒರಳಕ್ಕಿ ಪದಗಳೆಂಬ ದೇಶೀ ಮಟ್ಟುಗಳನ್ನು ಸಂದರ್ಭಕ್ಕನಸಾರವಾಗಿ ರಚನೆಯಾಗಿರುವುದು ಕಂಡುಬರುತ್ತದೆ. ಇಲ್ಲಿ ಹಿಂದೂ ಮುಸಲ್ಮಾನರ ಒಡನಾಟ ಮತ್ತೊಂದು ಕಡೆ ಸಂಘರ್ಷಗಳನ್ನು ತಿಳಿಸುತ್ತಾ ಕವಿಯು ಈ ಕಾವ್ಯವನ್ನು ಸಾಹಿತ್ಯಿಕವಾಗಿ ಹೇಳುವ ಬದಲಿಗೆ ಹೆಚ್ಚಾಗಿ ಚಾರಿತ್ರಿಕವಾಗಿಯೇ ಹೇಳುವ ಪ್ರಯತ್ನ ಮಾಡಿದ್ದಾರೆ. ಈ ಕಾವ್ಯವು ಸಾಹಿತ್ಯೇತರ ವಿಚಾರಗಳನ್ನು ಒಳಗೊಂಡಿರುವ ಹಾಗೆ ಅಲ್ಲಲ್ಲಿ ಸಂದರ್ಭಕ್ಕನುಸಾರವಾಗಿ ದ್ವಿರುಕ್ತಿಗಳನ್ನು, ಉಪಮಾನಗಳನ್ನು ಬಳಸಿರುವುದು ವಿಶೇಷವೆನಿಸಿವೆ.

**ಕವಿ ಪರಿಚಯ**

ನಂಜುಂಡ ಕವಿಯೂ ಸೇರಿದಂತೆ ಪ್ರಾಚೀನ ಕವಿಗಳು ತಮ್ಮ ವಿಚಾರ ಕುರಿತು ಎಲ್ಲಿಯೂ ಹೇಳಿಕೊಂಡಿಲ್ಲ. ಅಂತಹ ಕವಿಗಳ ಕೃತಿ ವಿವರಗಳು, ಕಾವ್ಯ ಸೃಷ್ಟಿಸುವ ಸಂದರ್ಭಗಳನ್ನು ಹೇಳಿಕೊಳ್ಳುವಲ್ಲಿ ಉದಾಸೀನತೆಯನ್ನು ತೋರಿರುವುದು ಕಂಡುಬರುತ್ತದೆ. ಈ ಸಾಲುಗಳಲ್ಲಿ ಮಹಾಲಿಂಗಸ್ವಾಮಿಯೂ ಸೇರಿರುವುದು ಸಹಜವಾಗಿದೆ. ಹೀಗಾಗಿ ಈ ಕವಿಯ ವಿವರ, ಕಾಲದ ಬಗ್ಗೆ ಕುರಿತು ನಿಖರ ಮಾಹಿತಿಯನ್ನು ತಿಳಿಯಲು ಸಾಧ್ಯವಿಲ್ಲ. ಮಹಾಲಿಂಗಸ್ವಾಮಿಯು ತಾನು ಹಂಪಿಯವನೆಂದೇ ಹೇಳಿಕೊಂಡಿರುವುದು ಹಾಗೂ ಚರಪತಿಯೆಂದೂ ಕರೆದುಕೊಂಡಿರುವುದು ಕೃತಿಯ ಮೂಲಕ ವೇದ್ಯವಾಗುತ್ತದೆ. ಇದರಿಂದ ಇವರು ಲಿಂಗಾಯತ ಜಂಗಮನಾಗಿರುವುದು ಖಂಡಿತ. ಹಾಗೆಯೇ ಇವರ ಕಾವ್ಯದ ಪ್ರತಿ ಸಂಧಿಯಲ್ಲೂ ಶಿವ–ಪಾರ್ವತಿಯರನ್ನು, ಗಂಗೆಯನ್ನು ನೆನೆದಿರುವುದು ಕಾಣಸಿಗುತ್ತದೆ.

ಶಿವನನ್ನು ಕುರಿತಂತೆ

ಶ್ರೀ ಗುರುವರ ಶಂಭು ಭಾಗೀರಥೀಶನೇ। ನಾಗಭೂಷಣನೆ ನಂದೀಶ।

ಭೋಗಿಭೂಷ ಭರ್ಗಭಾಳಾಷಿ ಸಹಿತನೆ। ಶ್ರೀಗಿರಿ ಮಲ್ಲೇಶ ಕೊಡುಮತಿಯ॥[೧೧]

ಬಾಗೀರಥನನ್ನು ಕುರಿತಂತೆ,

ಶ್ರೀ ಗಿರಿಜೇಶನೆ ಭಾಗೀರಥೀಶನೆ। ಭೋಗಿಭೂಷಣ ಭಾಳನೇತ್ರ

ಆಗಮನಕೊಡೆಯನೆ ಮೂಜಗವ ರಕ್ಷಿಪನೆ। ನಾಗಭೂಷಣ ನಂದೀಶ[೧೨]

ಕವಿ ಮಹಾಲಿಂಗಸ್ವಾಮಿಯು ವೀರಶೈವನೆನ್ನುವುದು, ಶೈವಾರಾಧಕನೆನ್ನುವ ವಿಚಾರವು ಆತನ ರಚಿಸಿರುವ ಪ್ರತಿ ಸಂಧಿಯ ಪ್ರಾರಂಭ, ಅಂತಿಮದಲ್ಲಿ ಶಿವನನ್ನು ಆರಾಧಿಸಿರುವುದರಿಂದ ಖಚಿತವಾಗುತ್ತದೆ. "ಕವಿಯು ಸ್ಮರಿಸಿದ ಕವಿಗಳಲ್ಲೆಲ್ಲಾ ಕನಕದಾಸ ಮತ್ತು ಪುರಂದರದಾಸರೇ ಇತ್ತೀಚಿನವರು. ಇದನ್ನಾಧರಿಸಿಯೇ ಹುಲ್ಲೂರು ಶ್ರೀನಿವಾಸ ಜೋಯಿಸರು ಈತನು ಪುರಂದರದಾಸರ ಈಚೆಗೆ ಅಂದರೆ ೧೬ನೆಯ ಶತಮಾನದ ಅಂತ್ಯದಲ್ಲಿ ಈ ಕೃತಿಯನ್ನು ರಚಿಸಿರಬೇಕೆಂದು ಅಭಿಪ್ರಾಯ ಪಡುತ್ತಾರೆ."[೧೩] ಆದರೆ ವರದರಾಜರಾವ್‌ರವರು ಈ ಹೇಳಿಕೆಯನ್ನು ನಿರಾಕರಿಸುತ್ತಾರೆ. "ಮಹಾಲಿಂಗಸ್ವಾಮಿ, ಪುರಂದರದಾಸ-ಕನಕದಾಸರಿಗಿಂತ ಈಚಿನವರೆಂದು ಒಪ್ಪಬಹುದೇ ಹೊರತು, ಅವನು ೧೬ನೆಯ ಶತಮಾನದ ಅಂತ್ಯದಲ್ಲಿಯೇ ಇರಬೇಕೆಂಬ ನಿಯಮವೇನೂ ಇಲ್ಲವೆನ್ನುತ್ತಾ ಪಾಂಚಾಳಗಂಗನ ಪ್ರಭಾವ ಮಹಾಲಿಂಗಸ್ವಾಮಿ ಮೇಲೆ ಗಾಢವಾಗಿದೆ. ಈತನಲ್ಲಿ ಕಥೆ ಬೆಳೆದಿರುವ ರೀತಿ, ತನ್ನದೇ ಆದ ಅವತಾರ ಸೃಷ್ಟಿ, ಪ್ರಾಸಂಗಿಕವಾಗಿ ಬರುವ ಹಲವಾರು ಉಪಕಥೆಗಳ ಉರ್ದುಮಿಶ್ರಿತವಾದ ಹಾಗೂ ಗ್ರಾಮ್ಯವೆನ್ನಬಹುದಾದ ಅನೇಕ ಭಾಷಾ ಪ್ರಯೋಗಗಳು ಈ ಮೊದಲಾದ ಅಂಶಗಳನ್ನು ಗಮನಿಸಿದಾಗ ಈ ರಚನೆ ಪಾಂಚಾಳಗಂಗನ ಕೃತಿಗಿಂತಲೂ ಕನಿಷ್ಠ ಪಕ್ಷ ಒಂದು ಶತಮಾನವಾದರೂ ಈಚಿನದಾಗಿರಬೇಕು"[೧೪] ಎಂದು ಹೇಳುತ್ತಾರೆ. ಮೇಲಿನ ಹೇಳಿಕೆಗಳನ್ನು ಪರಿಶೀಲಿಸಿದಾಗ ಮಹಾಲಿಂಗಸ್ವಾಮಿಯ ಕಾಲವನ್ನು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಆದರೆ ಪುರಂದರದಾಸ, ಕನಕದಾಸನ ನಂತರದ ಕಾಲ ಈತನದಾಗಿದೆ. ಕಾರಣ ಇವರೆಲ್ಲರನ್ನು ಈತ ಈ ಕಾವ್ಯದಲ್ಲಿ ನೆನೆದಿರುವುದು ಕಂಡುಬರುತ್ತದೆ.

ಕವಿಯು ಶಿವಗಂಗಾದಲ್ಲಿ ನೆಲೆಸಿದ್ದನೆಂದು ತಿಳಿದುಬರುವುದರಿಂದ ಅಲ್ಲಿದ್ದಂತಹ ಮೇಲಣ ಗವಿಮಠ ಸಂಪ್ರದಾಯಕ್ಕೆ ಸೇರಿದವನಾಗಿರಬೇಕು, ಕೆಲವೆಡೆ ರೇಣುಕಾಚಾರ್ಯನನ್ನು ಸ್ಮರಿಸಿರುವುದೂ ತಿಳಿಯುತ್ತದೆ. ಇದುವರೆಗೂ ಈ ಕೃತಿಯ ಪ್ರತಿ ಕೃತಿಗಳೂ ದೊರೆತಿಲ್ಲ. ಈತ ರಚಿಸಿರುವ ಒಂದೇ ಒಂದು ಪ್ರತಿಯು ಮಾತ್ರ ದೊರೆತಿದೆ. ಹೀಗಾಗಿ ಬೇರೆ ಕಾವ್ಯಗಳಂತೆ ಇದು ಪ್ರಸಿದ್ಧಿ ಪಡೆದಿಲ್ಲದೆಯೂ ಇರಬಹುದು.

**ಕಾವ್ಯ ಪರಿಚಯ**

ಕಾವ್ಯ ಪರಂಪರೆಯಲ್ಲಿ ಧಾರ್ಮಿಕ ಪುರುಷನನ್ನು ನಾಯಕನನ್ನಾಗಿಸುವುದರಲ್ಲಿ ಹೊಸತೇನೂ ಇಲ್ಲ. ಇದರ ಸಂಬಂಧಿ ಸಾಕಷ್ಟು ಕಾವ್ಯ, ಕೃತಿಗಳು ಹೊರಬಂದಿವೆ. ಆದರೆ ಒಬ್ಬ ಅರಸನನ್ನು ನಾಯಕನನ್ನಾಗಿಸುವುದು, ನಂತರ ದೇವರನ್ನಾಗಿ ಆರಾಧನೆ ಮಾಡುವುದಿದೆಯಲ್ಲ ಅದು ತುಂಬಾ ವಿರಳ ಸಂಗತಿ. ಆದರೆ ಕುಮಾರರಾಮನ ವಿಚಾರದಲ್ಲಿ ಮಾತ್ರ ಪ್ರಸ್ತುತವಾಗಿಯೂ ನಡೆಯುತ್ತಿರುವುದು ಸೋಜಿಗವಾಗಿದೆ. ಇವರನ್ನು ಕುರಿತು ಸಾಂಸ್ಕೃತಿಕ ಉತ್ಸವಗಳು, ದೇವಾಲಯಗಳ ನಿರ್ಮಾಣ, ಧಾರ್ಮಿಕ ದೇವರಾಗಿ, ಸಾಮಾಜಿಕ ದೇವರಾಗಿ, ಆರ್ಥಿಕ ದೇವರಾಗಿ ವಿವಿಧ ರೂಪಗಳಲ್ಲಿ ಕುಮಾರರಾಮನನ್ನು ಪೂಜಿಸುತ್ತಿರುವುದು ವಿಶೇಷವಾಗಿದೆ. ಈ ಕುರಿತು ರಚನೆಯಾಗಿರುವ ಮಹಾಲಿಂಗಸ್ವಾಮಿಯ 'ಬಾಲರಾಮನ ಸಾಂಗತ್ಯ'ವೂ ಹೌದು. ಈ ಕಾವ್ಯವನ್ನು ಕುರಿತು ವಿವಿಧ ಆಯಾಮಗಳಲ್ಲಿ ರಚಿಸಿರುವುದು ಗಮನಾರ್ಹವಾಗಿದೆ. ಕೇವಲ ಕಥಾನಾಯಕರ ಕುರಿತು ಹೇಳುವುದರ ಜೊತೆಗೆ ಸಾಮಾನ್ಯ ಜನ/ವರ್ಗದವರ ಕಡೆ ಹೆಚ್ಚು ಗಮನ ತೋರಿಸಿದ್ದಾನೆ. ಈ ಕಾವ್ಯವು ಹೆಚ್ಚಿನದಾಗಿ ಆಡುಮಾತಿನ ಶೈಲಿಯಲ್ಲಿಯೇ ಬಿಂಬಿತವಾಗಿದೆ. ಈ ಕಾವ್ಯದಲ್ಲಿ ಉಪಮೆಗಳಿಗೆ ಹೆಚ್ಚು ಒತ್ತನ್ನು ಕೊಡುವ ಮೂಲಕ ಹೊಸ ಹೊಸ ಹೋಲಿಕೆಗಳನ್ನು ನೀಡಿರುವುದು ಈ ಕಾವ್ಯದ ವಿಶೇಷವಾಗಿದೆ. ಕುಮಾರರಾಮನಿಗೆ ಸಂಬಂಧಪಟ್ಟಂತೆ ಹೆಚ್ಚು ಕೃತಿಗಳು ಸಾಹಿತ್ಯ ನೆಲೆಗಟ್ಟಿನಲ್ಲಿ ಹೇಳುವ ಪ್ರಯತ್ನ ಮಾಡಿವೆ. ಆದರೆ ಈ ಕಾವ್ಯವು ಅದರಿಂದ ಹೊರತಾಗಿದ್ದು, ಸಾಹಿತ್ಯೇತರ ಅಂಶಗಳಿಗೆ ಒತ್ತನ್ನು ನೀಡಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಈ ಕೃತಿಯ ಸಂಧಿ ಸಂಖ್ಯೆಗಳಲ್ಲಿ ಕೆಲವು ಭಿನ್ನಾಭಿಪ್ರಾಯಗಳಿದ್ದು, ಅಂತಿಮವಾಗಿ ಅದನ್ನು ಬಗೆಹರಿಸುವ ಪ್ರಯತ್ನವೂ ನಡೆದಿದೆ. ಈ ಕೃತಿಯ ಮೂಲ ಸಂಶೋಧಕರಾದ ಹುಲ್ಲೂರು ಶ್ರೀನಿವಾಸ ಜೋಯಿಸರು ಈ ಕೃತಿಯ ಸಂಧಿಯ ಸಂಖ್ಯೆ ೧೯ ಎಂದು ದಾಖಲಿಸಿದ್ದಾರೆ. ಈ ಅಭಿಪ್ರಾಯವನ್ನು ಡಾ.ವರದರಾಜರಾವ್ ಅವರೂ ಒಪ್ಪಿಕೊಂಡಿರುವರು. ಆದರೆ ಡಾ.ಎಂ.ಎಂ. ಕಲಬುರ್ಗಿ ಅವರು ೧೯ ಎಂಬುದು ಅಶುಭ ಸಂಖ್ಯೆಯಾಗಿದ್ದು, ಇಷ್ಟಕ್ಕೆ ಪೂರ್ಣಗೊಳಿಸುವುದು ಇಷ್ಟವಾಗದಿದ್ದ ಕಾರಣ, ಮಹಾಲಿಂಗಸ್ವಾಮಿಯು ೬ ಮತ್ತು ೭ನೇ ಸಂಧಿಗಳನ್ನು ಸೇರಿಸಿರಬೇಕು ಹೀಗಾಗಿ ೧೯ ಆಗಿರಬಹುದು. ೬ ಮತ್ತು ೭ನೇ ಸಂಧಿಗಳನ್ನು ಬಿಡಿಸಿದಾಗ ೨೦ ಸಂಧಿಗಳು ಎಂದು ದಾಖಲಿಸುವ ಪ್ರಯತ್ನವನ್ನು ಕಲಬುರ್ಗಿಯವರು ಮಾಡಿರುವರು. ಹಾಗೆಯೇ ಈ ಕೃತಿಯು ೪೨೮೩ ಪದ್ಯಗಳನ್ನು ಒಳಗೊಂಡಿದ್ದು, ಪಾರ್ವತಿ, ಗಣೇಶ, ಶಿವ, ಶಾರದೆ, ಗಂಗೆಯರನ್ನು ನೆನೆಯುತ್ತಾ, ಪುರಂದರದಾಸ, ಕನಕದಾಸರನ್ನು, ಕಲ್ಯಾಣದ ಬಸವೇಶ್ವರನನ್ನೂ ನೆನೆಯುವ ಪ್ರಯತ್ನ ಮಾಡಿದ್ದು, ಒಟ್ಟಾರೆ ಹೇಳುವುದಾದರೆ ಕವಿಯು ಸಾಹಿತ್ಯಿಕ ಕ್ಷೇತ್ರವನ್ನು ಹೊರಗಿರಿಸಿ ಸಮನ್ವಯ-ಸಂಘರ್ಷಗಳನ್ನಿಟ್ಟುಕೊಂಡು ಚಾರಿತ್ರಿಕ ಅಂಶಗಳನ್ನು ಸಾಂಸ್ಕೃತಿಕವಾಗಿ ಸಮಾಜದ ಆಚರಣೆಗಳೊಂದಿಗೆ ಹೋಲಿಸಿ ಬಿಂಬಿಸುವ ನಿಟ್ಟಿನಲ್ಲಿ ಕವಿಯು ಮುಂದಾಗಿದ್ದಾರೆ.

**ಕಾವ್ಯದ ವಸ್ತು**

ಮಹಾಲಿಂಗಸ್ವಾಮಿಯ ಈ ಕೃತಿಯ ರಚನೆಯಲ್ಲಿ ಸಮಕಾಲೀನ ಚರಿತ್ರೆ ಮತ್ತು ಸಂಸ್ಕೃತಿ ಬಗೆಗಿನ ಜ್ಞಾನವನ್ನು ತಿಳಿದುಕೊಳ್ಳುವಲ್ಲಿ, ಪ್ರಸ್ತುತ ಸಮಾಜದ ಅರಿವನ್ನು ವಿಸ್ತರಿಸುತ್ತಾ ಹೋಗಿದೆ. ಇಲ್ಲಿ ಕವಿಯು ಚರಿತ್ರೆಗೆ ಹೆಚ್ಚು ಒತ್ತನ್ನು ನೀಡಿರುವುದರಿಂದ ಕದನಗಳ ವಿಚಾರ ತಿಳಿಸುವಲ್ಲಿ ಉದಾರಿಯಾಗಿದ್ದಾನೆ. ಆಪತ್ತು, ಸಾಮರ್ಥ್ಯ, ಶರಣಾಗತ ರಕ್ಷಣೆ ಈ ಮೂರು ಮೌಲ್ಯಗಳೇ ಈ ಕೃತಿಯ ವಸ್ತುವಾಗಿದೆ ಎಂದು ಹೇಳಬಹುದು. ಕದನದ ಘಟನೆಗಳು ಈ ಕೃತಿಯ ವಿಸ್ತಾರತೆಯನ್ನು ಬಿಂಬಿಸುತ್ತವೆ. ಬಹುಮುಖ್ಯವಾಗಿ ಹೇಳುವುದಾದರೆ ಈ ಕೃತಿಯ ಬಿಂದುವೇ ಶರಣಾಗತ ರಕ್ಷಣೆ ಎಂಬ ಮೌಲ್ಯ. ಈ ಮೌಲ್ಯದಿಂದ ಎಂದಿಗೂ ಸಾಧ್ಯವಾಗದ ಧರ್ಮಸಮನ್ವಯವಾಗುವ ಕೆಲವು ಸೂಚನೆಗಳನ್ನು ಈ ಕಾವ್ಯವು ಅಲ್ಲಲ್ಲಿ ಹೊರಹಾಕುವ ಪ್ರಯತ್ನ ಮಾಡಿದೆ.

**ಕಥಾಸಾರಾಂಶ**

ಜಟ್ಟಂಗಿರಾಮೇಶ್ವರ ದುರ್ಗವಾದ ಕುಮ್ಮಟದುರ್ಗವು ವಿಜೃಂಭಿಸುತ್ತಿತ್ತು. ಆ ದುರ್ಗಕ್ಕೆ ಜಟ್ಟಂಗಿರಾಮನೇ ಅಧಿರಾಜನಾಗಿದ್ದನು. ಜಟ್ಟಂಗಿ ರಾಮನೇ ಕುಮಾರರಾಮ ಮತ್ತು ಸುಭದ್ರೆಗೆ ಜನಿಸಿದ ಮಗನಾಗಿದ್ದ. ಒಂದು ದಿನ ಆ ರಾಜನು ಸಭೆಯಲ್ಲಿ ಮಿಂದಿದ್ದಾಗ ಈತನ ಗುರುಗಳಾದ ಪ್ರಭುದೇವರು ಆ ಸಭೆಗೆ ಆಗಮಿಸಿದಾಗ ಅದನ್ನು ಕಂಡ ಅರಸು ಜಟ್ಟಂಗಿರಾಮನು ಆಸನದಿಂದ ಕೆಳಗಿಳಿದು ಬಂದು ಗುರುಗಳಿಗೆ ನಮಸ್ಕರಿಸಿ ಸತ್ಕರಿಸಿದನು. ತನ್ನ ಗುರುಗಳನ್ನು ನವರತ್ನ ಪೀಠದ ಮೇಲೆ ಕುಳ್ಳಿರಿಸಿದ ನಂತರ ಕ್ಷೇಮ ಸಮಾಚಾರದ ಜೊತೆಗೆ ಎನಗೆ ಜೈಮಿನಿ ಭಾರತದ ಕಾಳಗವನ್ನು ಹೇಳಬೇಕೆಂದು ಅರಸನು ತನ್ನ ಗುರುಗಳಿಗೆ ಕೇಳಿಕೊಂಡಾಗ ಗುರುಗಳು "ತನುಜನೆ ಕೇಳಿಮ್ಮ ಜನಕ ಮಾಡಿದ ಕಾರ್ಯ ದಣಿಯಲಾಗುವುದು ಈ ಧರಣಿ ಜೈಮುನಿಯು ರಾಮಣ್ಣ ಸಮುರಕ್ತಿ ಭಾರತಕೆ ಮಿಗಿಲಾಗಿ ಮಾಡಿ ಆಳ್ದಿಹರು" ಎಂದು ಆರಂಭಿಸುತ್ತಾ ಕುಮಾರರಾಮನ ಪೂರ್ವಜರು ಹಾಗೂ ಆತನ ಚರಿತ್ರೆಯನ್ನು ಹೇಳಲು ಮುಂದಾದರು. ವೀರಪುರುಷ ಕಸ್ತೂರಿನಾಯಕನೇ ಕಾಮಗೇತಿ ವಂಶದ ಮೂಲಪುರುಷನಾಗಿದ್ದು, ಇವರ ನಂತರದಲ್ಲಿ ಬರುವ ಮೂರನೇ ವ್ಯಕ್ತಿಯೇ ಮುಮ್ಮಡಿಸಿಂಗನೇ ನಿಮ್ಮ ಮುತ್ತಾತನೆಂದು ವಿವರಿಸುತ್ತಾ ಈತನ ಆಳ್ವಿಕೆಯ ನಂತರ ಕಂಪಿಲರಾಯನು ರಾಜನಾಗಿ ಆಳ್ವಿಕೆ ಮಾಡುತ್ತಿದ್ದಾಗ ಇವರಿಗೆ ಇಬ್ಬರು ಪತ್ನಿಯರಿದ್ದು, ಹರಿಯಮ್ಮ, ಕಮಲಾಜಿ ಎಂಬುವವರು ರಾಣಿಯರಾಗಿದ್ದರು. ಇವರೊಂದಿಗೆ ರಾಮನು ಅಡವಿಯಲ್ಲಿ ಪಯಣಿಸುತ್ತಿರುವಾಗ ಹಂಪಿಯ ವಿರೂಪಾಕ್ಷನಿಗೆ ವಂದಿಸಿ ಮುನ್ನಡೆಯುತ್ತಿದ್ದಾಗ 'ಬಿಲ್ಲುಕಾಟನ ಲಿಂಗ' ಎಂಬ ದೇವಾಲಯ ಸಿಗುತ್ತದೆ. ಅಲ್ಲಿ ಒಂದು ಚಿಕ್ಕ ಮಗುವನ್ನು ಕಂಡು ಮರುಗಿ ಯಾರೆಂದು ಕೇಳಲು, ಈ ಮಗು ಗೊಲ್ಲರಹಟ್ಟಿಯ ಒಡೆಯನ ಶಿಶುವೆಂದು, ಈ ಮಗು ಜನಿಸಿದರೆ ತಂದೆ ತಾಯಿ ಮರಣವಿದೆ ಎಂಬ ಭಯದಿಂದ ಇದನ್ನು ಇಲ್ಲಿ ಬಿಟ್ಟು ಹೋಗಿರುವ ವಿಚಾರ ತಿಳಿದು ಕಂಪಿಲನು ಆ ಮಗುವನ್ನು ತನ್ನ ಅರಮನೆಗೆ ಎತ್ತಿಕೊಂಡು ಬಂದು, ಹರಿಯಾಲದೇವಿಗೆ ಒಪ್ಪಿಸಿ, ಕಾಟನೆಂದು ಹೆಸರಿಟ್ಟನು.

ಹೀಗೊಮ್ಮೆ ಕಂಪಿಲನ ಬಳಿ ದೊಂಬರು ಆಟವಾಡಲು ಬಂದಾಗ, ಅಲ್ಲಿ ದೊಂಬರ ರತ್ನಾಜಿಯ ಸೌಂದರ್ಯವನ್ನು ಕಂಡು ಮನಸೋತ ಕಂಪಿಲನು ಅವಳನ್ನು ವಿವಾಹವಾದನು. ಪುತ್ರಸಂತಾನವಿಲ್ಲದ ಕಂಪಿಲನು ತನ್ನ ರಾಣಿಯರೊಂದಿಗೆ ಜಟ್ಟಂಗಿದುರ್ಗಕ್ಕೆ ಯಾತ್ರೆ ಕೈಗೊಳ್ಳುತ್ತಾನೆ. ಅಲ್ಲಿ ರಾಮೇಶ್ವರನನ್ನು ಭಕ್ತಿಯಿಂದ ಪೂಜಿಸಿದಾಗ ಅಲ್ಲಿ ಪ್ರಸಾದ ಸ್ವೀಕರಿಸಿದ ನಂತರ, ಆ ದಿನ ರಾತ್ರಿ ಕಂಪಿಲನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು "ನಿನಗೊಬ್ಬ ವೀರನು ಜನಿಸುವನೆಂದು ಹೇಳುತ್ತಾ ಕೊನೆಗೆ ಒಂದು ಕಂಟಕವುಂಟು" ಎಂಬ ನುಡಿಗಳನ್ನು ಆಡಿದಂತೆ ಅನಿಸುತ್ತದೆ. ಆ ದಿನವೇ ಹರಿಯಾಲದೇವಿಯು ಗರ್ಭವತಿಯಾಗುತ್ತಾಳೆ. ನಂತರ ಆಕೆಯು "ಶ್ರಾವಣದ ಸ್ಥಿತಿ ಪಂಚ ಗುರುವಾರ ಬೆಳಗಿನ ಜಾವ ಎರಡನೆ ಏಳುಗಳಿಗೆ ಪುನರ್ನವಮಿ ಚಂದ್ರನೂ ಪೂರ್ವದೊಳಿಪ್ಪಂತೆ" ಕಂದನ ಜನನವಾಯಿತು. ಇದರಿಂದಾಗಿ ಹರ್ಷಿತನಾದ ಕಂಪಿಲನು ಹರ್ಷೋದ್ಗಾರವನ್ನು ವ್ಯಕ್ತಪಡಿಸುತ್ತಾ, ಸಭೆಯನ್ನು ಕರೆದು ಆತನ ಗುರುಗಳಾದ "ಯೋಗೀಂದ್ರ ಸಾರಂಗ ಮುನಿಗಳು" ಇವರನ್ನು ಕರೆಯಿಸಿದನು. ಆಗ ಆ ಮುನಿಗಳು ಆ ಮಗುವನ್ನು ಕಂಡು 'ರಾಮಕುಮಾರಯ್ಯ' ಎಂದು ನಾಮಕರಣ ಮಾಡುತ್ತಾರೆ. ಹೀಗೆ ಕಾಲ ಕಳೆಯುತ್ತಿದ್ದಂತೆ ಕುಮಾರರಾಮನಿಗೆ ಐದು ವರ್ಷ ತುಂಬಲು ತಾಯಿ ಹರಿಯಲದೇವಿಯು ವಿದ್ಯಾಭ್ಯಾಸ ಮತ್ತು ಶಸ್ತ್ರಾಭ್ಯಾಸವನ್ನು ಮಾಡಿಸಲು ಏರ್ಪಾಟು ಮಾಡಿದ ನಂತರ ಕಾಟಣ್ಣನ ಜೊತೆಗೆ ಕಾಲ ಕ್ರಮೇಣ ರಾಮನು ಕೂಡಿ ವಿದ್ಯಾಪಾರಂಗತನಾಗಿ ಯುದ್ಧಕ್ಕೆ ಹೊರಡಲು ಸನ್ನದ್ಧರಾದಾಗ, ಕಂಪಿಲನು ಗುತ್ತಿಯ ಕಸ್ತೂರಿ ಚಾಮಯ್ಯ, ಓರಂಗಲ್ಲಿನ ಪ್ರತಾಪರುದ್ರರಾಯ, ಹಳೆಬೀಡಿನ ಬಲ್ಲಾಳ, ದಿಲ್ಲಿಯ ಸುರತಾಳರು ನಮ್ಮ ವೈರಿಗಳೆಂದು ಹೇಳಲು, ಇಬ್ಬರು ಆಶೀರ್ವಾದ ಪಡೆದು ಹೊರಟು ಮೊದಲು ಹದಿನಾರು ಸಾವಿರ ಪಡೆಯ ಸಮೇತನಾಗಿ ರಾಮನು ಕಾಟಣ್ಣನ ಜೊತೆಗೆ ತನ್ನ ಪರಿವಾರದವರಾದ ಭಾವಸಂಗಯ್ಯ, ನೀಲಕಂಠ, ಕಾಮಗೇತಿ ಚಿಕ್ಕನಾಯಕ, ಪೆನುಗೊಂಡೆ ನಾಗ, ಧುರಧೀರ ಮಲ್ಲಯ್ಯರೆಲ್ಲರೂ ಬಲ್ಲಾಳನ ಮೇಲೆ ದಾಳಿ ಮಾಡಲು ಕಡೂರು, ಭೀಮಕೆರೆ ಮೊದಲಾದ ಪ್ರದೇಶಗಳಲ್ಲಿ ಬೀಡುಬಿಡುತ್ತಾ ಬೆಳವಾಡಿ ಕೆರೆಗೆ ಬಂದಾಗ ರಾಮನು ನೇರವಾಗಿ ಯುದ್ಧ ಮಾಡದೆ ಮೊದಲು ಬಲ್ಲಾಳನಿಗೆ ಕಪ್ಪವನ್ನು ಕೊಡಲೆಂದು ಹೇಳಿಕಳಿಸಿದರೆ ಅದನ್ನು ಬಲ್ಲಾಳನು ನಿರಾಕರಿಸಿದನು. ಇದರಿಂದ ಸಿಟ್ಟಿಗೆದ್ದ ರಾಮನು ಸೈನ್ಯ ಸಮೇತ ದಾಳಿ ಮಾಡಿದಾಗ ಎರಡೂ ಪಡೆಗಳಲ್ಲೂ ಸಾವು, ನೋವು ಸಂಭವಿಸುತ್ತದೆ. ಬಲ್ಲಾಳನ ಸೇನೆಯಲ್ಲಿ ಗಂಡುಗೊಡಲಿಯ ಸರ್ಜಾ ಮತ್ತು ಹನುಮಂತರಿಬ್ಬರೂ ಸಾಯುತ್ತಾರೆ. ಇದರಿಂದ ಸೋಲನ್ನು ಕಂಡ ಬಲ್ಲಾಳನು ಮಂತ್ರಿ ಸಲಹೆ ಮೇರೆಗೆ ಸಂಧಾನ ಮಾಡಿಕೊಂಡು ರಾಮನಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಾನೆ. ಹಾಗೆಯೇ ಇತರೆ ನೆರೆಹೊರೆಯ ಪ್ರದೇಶಗಳ ರಾಜರಿಗೆಲ್ಲ ಕಪ್ಪಕಾಣಿಕೆಗಳನ್ನು ಕೊಡುವಂತೆ ಕಾಗದಗಳನ್ನು ಬರೆಯಿಸಿ ಕಳಿಸಿದನು. ಅದರಂತೆ ಅಲ್ಲಿನ ಸ್ಥಳೀಯ ರಾಜರುಗಳೂ ಹೆದರಿ ರಾಮನ ಬಳಿಗೆ ಬಂದು ಹೊನ್ನು, ಉಡುಗೊರೆಗಳನ್ನು ಕೊಟ್ಟರು. ಆದರೆ ಗುತ್ತಿಯ ರಾಜ ಮಾತ್ರ ಕಪ್ಪವನ್ನು ಕೊಡಲಿಲ್ಲ. ಕುಮಾರ ರಾಮನಲ್ಲಿಗೆ ಬರಲೂ ಇಲ್ಲ. ಹೀಗಾಗಿ ರೊಚ್ಚಿಗೆದ್ದ ರಾಮನು ಗುತ್ತಿಯ ಕೋಟೆಯನ್ನು ಸೈನ್ಯ

ಸಮೇತವಾಗಿ ಮುತ್ತಿಗೆ ಹಾಕಿದನು. ರಾಮನ ಸೇನೆಯನ್ನು ಕಂಡು ಅಲ್ಲಿಯೇ ಹೆದರಿದ ಗುತ್ತಿಯ ರಾಜ ಚಾಮಯ್ಯನು ಯುದ್ಧವನ್ನು ಮಾಡದೆ ನಿಲ್ಲಿಸಿ, ಮಂತ್ರಿ ರಂಗರಸನ ಜೊತೆ ಮಾತುಕತೆ ನಡೆಸಿ ರಾಮನಿಗೆ ಕಪ್ಪ ಕೊಡುವುದೇ ಜಾಣತನವೆಂದು ತಿಳಿದು ಕಪ್ಪಕಾಣಿಕೆಗಳೊಡನೆ ರಾಮನಲ್ಲಿಗೆ ಬಂದು ರಾಜಿಯಾಗುತ್ತಾನೆ.

ಕುಮ್ಮಟದುರ್ಗದಲ್ಲಿ ಹೀಗಿರುವಾಗ, ಉತ್ತರದಲ್ಲಿ ದಿಲ್ಲಿಯ ಸುರತಾಳನ ಆಪ್ತನೊಬ್ಬ ಬಾದೂರಖಾನನು ಬಲ್ಲಾಳನ ಸೋಲಿನ ಸುದ್ಧಿ ಕೇಳಿ ಕುಮಾರರಾಮನನ್ನು ಅಭಿನಂದಿಸಿ ಉಡುಗೊರೆಯನ್ನು ರಹಸ್ಯವಾಗಿ ಕಳುಹಿಸುತ್ತಾನೆ. ಈ ವಿಚಾರ ತಿಳಿದು ಸುರತಾಳನು ಬಾದೂರನನ್ನು ಕೊಲ್ಲಲು ಆಜ್ಞೆ ಮಾಡಿದಾಗ ಬಾದೂರನು ಕುಟುಂಬ ಸಮೇತವಾಗಿ ಕುಮ್ಮಟಕ್ಕೆ ಬಂದು ರಕ್ಷಿಸುವಂತೆ ಮೊರೆಯಿಡಿತ್ತಾನೆ. ಬಾದೂರನನ್ನು ಹಿಂಬಾಲಿಸಿ ಬಂದ ನೇಮಿಖಾನನಿಗೆ ರಾಮನು ಸರಿಯಾದ ಉತ್ತರವನ್ನೇ ನೀಡಿ ಕಳಿಸುತ್ತಾನೆ. ಇದರಿಂದ ದಿಕ್ಕು ಕಾಣದೆ ನೇಮಿಖಾನನು 'ಮರಣ ಬಂದಿತು ಎಂದು' ರಾಮನಿಗೆ ಶರಣು ಹೇಳಿ ಸುಲ್ತಾನನ ಬಳಿ ಹೋಗಿ ನಡೆದ ಎಲ್ಲಾ ಸಂಗತಿಗಳನ್ನು ವಿವರಿಸಿದಾಗ ಸುಲ್ತಾನನು ಸಿಡಿಮಿಡಿಗೊಳ್ಳುತ್ತಾನೆ. ಉತ್ತಮ ಸಮಯಾವಕಾಶ ಬರಲಿ ಎಂದು, ಅಲ್ಲಿಯವರೆಗೂ ಕಾಯಬೇಕೆಂದು ಸುಲ್ತಾನನನ್ನು ಸಮಾಧಾನಗೊಳಿಸಿದನು. ಇದೇ ವಿಜಯದೊಂದಿಗೆ ರಾಮನ ಸೇನೆ ಬರಲು ಕಂಪಿಲನು ಸಂತಸಗೊಂಡು, ಮಗನ ಮತ್ತು ಕಾಟಣ್ಣನ ಮದುವೆ ಕುರಿತು ಸಭೆಯನ್ನು ಕರೆದು ಮಂತ್ರಿಯೊಂದಿಗೆ ಚರ್ಚಿಸಿ, ಕಾಟಣ್ಣನಿಗೆ ಇಬ್ಬರು ಕನ್ಯೆಯರನ್ನು ರಾಮನಿಗೆ ಐವರು ಕನ್ಯೆಯರನ್ನು ನೋಡೆಂದು ಹೇಳುತ್ತಾನೆ. ರಾಮನ ಆಜ್ಞೆಯಂತೆ ಬೈಚಪ್ಪನು ಮದುವೆಯ ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡ ನಂತರ ರಾಮನ, ಕಾಟಣ್ಣರ ವಿವಾಹವು ಶಾಸ್ತ್ರದ ಪ್ರಕಾರವಾಗಿ ನೆರವೇರಿತು. ರಾಮನಿಗೆ ವಾಣಿ, ಹಂಪಾಜಿ, ಲಿಂಗರಸಿ, ಮೀರಾಯಿ, ಸುಭದ್ರೆ ಎಂಬ ಐವರು ಮಡದಿಯರಾದರು. ಇದೇ ಸಂತಸದಲ್ಲಿರುವಾಗ ಕಾಟಣ್ಣನು ಕೆಲವು ಕಾಡುಮೃಗಗಳನ್ನು ಬೇಟೆಯಾಡಿ ಕಂಪಿಲನ ಬಳಿಗೆ ತಂದನು. ಅದನ್ನು ಮೆಚ್ಚಿದ ಕಂಪಿಲನು ಕಾಟಣ್ಣನನ್ನು ಕೊಂಡಾಡಿದನು. ಆದರೆ ರಾಮನು ಜರಿದನು. ಹೀಗಾಗಿ ಕಂಪಿಲನು ರಾಮನಿಗೆ 'ನೀನು ಧೀರನಾದರೆ ಪ್ರತಾಪರುದ್ರನ ಬಳಿಯಿರುವ ಬೊಲ್ಲನನ್ನು ಹಿಡಿದು ತಾ' ಎಂದು ಮೂದಲಿಸಿದಾಗ, ರಾಮನು ಒಂದು ತಿಂಗಳೊಳಗಾಗಿಯೇ ಬೊಲ್ಲನನ್ನು ಹಿಡಿದು ತರುವೆನೆಂದು ಶಪಥ ಮಾಡಿ ಕಾಟಣ್ಣ ಮತ್ತು ಬಾದೂರಖಾನನ ಜೊತೆ ಓರಂಗಲ್ಲಿನ ಕಡೆ ಪ್ರಯಾಣ ಬೆಳೆಸಲು ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡನು.

ಓರಂಗಲ್ಲಿನ ಅರಸನಾದ ರುದ್ರರಾಯನ ಬಳಿ ರಾಮನು ಬರುವ ವಿಚಾರ ತಿಳಿದು ರುದ್ರರಾಯನು ತನ್ನ ದಳವಾಯಿಯಾದ ದೇವಸೆಟ್ಟಿಲಿಂಗನನ್ನು ರಾಮನ ಬಳಿಗೆ ಕಳಿಸಿದನು. ಆಗ ದೇವಿಸೆಟ್ಟಿಯು ರಾಮನನ್ನು ಭೇಟಿಯಾಗಿ ಮಾತುಕತೆ ನಡೆಸಿ ಪುನಃ ಹಿಂದಿರುಗಿ ತನ್ನ ಅರಸ ರುದ್ರರಾಯನಲ್ಲಿಗೆ ಹೋಗಿ 'ರಾಮನು ತಮ್ಮನ್ನು ಓಲೈಸಲು ಬಂದಿರುವನೆಂದು' ಹೇಳಿದನು. ಆಗ ರುದ್ರರಾಯನು ರಾಮನನ್ನು ತನ್ನ ರಾಜ್ಯಕ್ಕೆ ಕರೆಸಿಕೊಂಡು ಸತ್ಕಾರ ಮಾಡಿದನು. ತನ್ನ ಹಿರಿಯ ಪುತ್ರನಂತೆ

ನೋಡಿಕೊಳ್ಳುವೆನೆಂದು ಹೇಳಿದನು. ರಾಮನು ತಾನು ಬಿರುದುಗಳನ್ನು ಬಿಟ್ಟು ಬಾಳುವುದಿಲ್ಲ. ಇದಕ್ಕೆ ಸಮ್ಮತಿಸುವುದಾದರೆ ನಾನಿಲ್ಲಿ ಇರುತ್ತೇನೆ ಎಂದು ನುಡಿದು ಹಿಂತಿರುಗುತ್ತಿರುವಾಗ ರಾಮನು 'ಓರಂಗಲ್ಲದವನಿಗೆ ಎದೆಶೂಲ', 'ಮೂರುರಾಯರಗಂಡ', 'ಚಾಡಿಕೇಳರ ಮಿಂಡ' ಹೀಗೆ ಹಲವು ಬಿರುದುಗಳಿಂದ ಹೊಗಳುತ್ತಿರುವಾಗ ರುದ್ರರಾಯನು ಸಿಟ್ಟಿಗೆದ್ದು 'ನೀನು ಬಿರುದುಗಳನ್ನು ಬಿಡುವುದಾದರೆ ನನ್ನ ಆಸ್ಥಾನದಲ್ಲಿರು' ಎಂದು ನುಡಿದನು. ರಾಮನು ಅದೇ ರೀತಿಯಾಗಿ ಬಿರುದುಗಳನ್ನು ಬಿಟ್ಟು ಬಾಳಲಾರೆನೆಂದು ತಿರುಗೇಟು ನೀಡುತ್ತಾನೆ. ಇದಾದ ನಂತರದಲ್ಲಿ ದೇವಿಶೆಟ್ಟಿಲಿಂಗನು ತನ್ನ ಪರಿವಾರದವರನ್ನು, ಸಂಪತ್ತನ್ನು ಗುಟ್ಟಾಗಿ ರಾಮನ ಸ್ಥಳಕ್ಕೆ ಕಳುಹಿಸಿದ ವಿಚಾರವು ರುದ್ರರಾಯನಿಗೆ ತಿಳಿದು ದೇವಿಸೆಟ್ಟಿಯನ್ನು ಹಿಡಿದು ತರುವಂತೆ ಆಜ್ಞೆ ಮಾಡಿದನು. ಇದರಿಂದಾಗಿ ರುದ್ರರಾಯನ ಮಂತ್ರಿಯಾದ ಲಿಂಗರಸನು ತನ್ನ ಸೇನೆಯೊಂದಿಗೆ ದೇವಿಸೆಟ್ಟಿಯ ಮೇಲೆ ದಾಳಿ ಮಾಡಲು ಮುಂದಾದನು. ಕಾಟಣ್ಣ ಮತ್ತು ಸಂಗಯ್ಯರು ಈತನ ಸಹಾಯಕ್ಕೆ ಬರುತ್ತಾರೆ. ಆಗ ಎರಡೂ ಸೇನೆಗಳ ನಡುವೆ ಯುದ್ಧ ನಡೆದ ಪರಿಣಾಮವಾಗಿ ಲಿಂಗರಸನ ಸೇನೆ ಸೋತು ಓಡಿಹೋಗುತ್ತದೆ. ಇದನ್ನು ಕೇಳಿದ ರಾಜ ರುದ್ರರಾಯನ ಎರಡನೇ ಬಾರಿಗೆ ಮತ್ತಷ್ಟು ಸೇನೆಯನ್ನು ಕಳಿಸಿದನು. ಆದರೆ ಆಗ ಲಿಂಗರಸನು ಶರಣಾಗುತ್ತಾನೆ. ಇದರಿಂದಾಗಿ ಮತ್ತೆ ಮೂರನೇ ಬಾರಿಗೆ ತನ್ನ ಪುತ್ರನಾದ ಯಪ್ಪತ್ತರಾಜನನ್ನು ಕಳಿಸಿದಾಗ, ಈತನು ಬೊಲ್ಲನ ಮೇಲೆ ರಣರಂಗಕ್ಕೆ ಕಾಲಿಟ್ಟಾಗ, ಅದನ್ನು ಕಂಡ ರಾಮನು ದಾಳಿ ಮಾಡಲು ಮುಂದಾಗುತ್ತಾನೆ. ಆಗ ರಾಮನ ಜೊತೆ ಕಾಟಣ್ಣ, ಬಾದೂರಖಾನ, ಭಾವಸಂಗಮರೂ ಹೋರಾಡುತ್ತಾರೆ. ಇದರ ಪರಿಣಾಮವಾಗಿ ಯಪ್ಪತ್ತರಾಜನ ಸಮೇತವಾಗಿ ಹಲವು ಸೈನಿಕರು ಸೆರೆಸಿಕ್ಕಿದಾಗ ಅವರಿಂದ ಬೊಲ್ಲನನ್ನು ಬಿಡಿಸಿಕೊಂಡು ಹರ್ಷೋದ್ಗಾರ ವಿಜಯದಿಂದ ಬರುವಾಗ ರುದ್ರರಾಯನು ಸೋತು ಶರಣಾಗಿ ಕಪ್ಪವನ್ನು ನೀಡುತ್ತಾನೆ. ನಂತರ ರಾಮನು ಹಿಂದಿರುಗುವಾಗ ಗುಂಡಬ್ರಹ್ಮಯ್ಯನಿಗೆ ನಮಸ್ಕರಿಸಿ ತನ್ನ ತವರಿಗೆ ಆಗಮಿಸಿದನು. ಇದನ್ನು ಕಂಡ ಕಂಪಿಲನು ಸಂತಸಗೊಂಡನು. ಹೀಗೊಂದು ಕಂಪಿಲನು ಬೇಟೆಗೆ ಹೋದಾಗ ರಾಮನು ಹೊರಡಲು ಸಿದ್ಧನಾದಾಗ ಆತನಿಗೆ ಕೆಲವು ಅಪಶಕುನಗಳು ಕಾಣಿಸಿದಾಗ, ಬೇಟೆಗೆ ಹೋಗುವುದನ್ನು ನಿಲ್ಲಿಸಿ, ತುಂಗಭದ್ರಾ ಹೊಳೆಗೆ ಹೋಗಿ ಅಲ್ಲಿ ವಿರೂಪಾಕ್ಷನ ದರ್ಶನ ಪಡೆದು ಬಂದನು. ನಂತರ ಮರುದಿನ ಬೆಳಗ್ಗೆ ರಾಮನಿಗೆ ಚೆಂಡಾಟವಾಡುವ ಬಯಕೆಯನ್ನು ವ್ಯಕ್ತಪಡಿಸಿ, ತನ್ನ ತಾಯಿ ಹರಿಯಮ್ಮನಿಂದ ಪಡೆದುಕೊಂಡು ತನ್ನ ಪರಿವಾರದವರೊಡನೆ ಸೇರಿ ಆಟವಾಡುತ್ತಿರುತ್ತಾನೆ. ಆಕಸ್ಮಾತಾಗಿ ಆ ಚೆಂಡು ರತ್ನಾಜಿಯ ಉಪ್ಪರಿಗೆಗೆ ಬಂದು ಬೀಳುತ್ತದೆ. ಈ ಅವಕಾಶಕ್ಕಾಗಿಯೇ ಕಾಯುತ್ತಿದ್ದ ರತ್ನಾಜಿಯು ಎಷ್ಟು ಜನ ಬಂದರೂ ಚೆಂಡನ್ನು ಕೊಡಲು ನಿರಾಕರಿಸಿದಾಗ ಕೊನೆಗೆ ರಾಮನೇ ಚಿಕ್ಕಮ್ಮ ರತ್ನಾಜಿಯ ಬಳಿಗೆ ಬಂದಾಗ, ರತ್ನಾಜಿಯು ಚಿಕ್ಕಮ್ಮ ಎಂಬುದನ್ನು ಮರೆತು ರಾಮನನ್ನು ಕಂಡು ಮೋಹಪರವಶಳಾಗುತ್ತಾಳೆ. ಈ ಕಾಮಾತುರದಿಂದಲೇ ರಾಮನ ಮೇಲೆ ಬೀಳಲು ಪ್ರಯತ್ನಿಸಿದಾಗ ಅವಳ ನೀಚ ವರ್ತನೆಯನ್ನು ಖಂಡಿಸಿ ರಾಮನು ಅಲ್ಲಿಂದ ಹೊರನಡೆಯುವನು. ಕೋಪಗೊಂಡ ರತ್ನಾಜಿಯು ಕುಟಿಲತನದಿಂದ ರಾಮನ ಮೇಲೆ

ಅಪಾದನೆಯನ್ನು ಹೊರಿಸಿ ಕಂಪಿಲನು ಬೇಟೆಯಿಂದ ಬಂದ ಮೇಲೆ ರಾಮನ ಮೇಲಿನ ಅಪಾದನೆಗಳ ಸುರಿಮಳೆಯನ್ನು ಹರಿಸಿದಳು. ಇದರಿಂದಾಗಿ ಕೆಂಡಾಮಂಡಲವಾದ ಕಂಪಿಲನು ಚೆಂಡಾಟವಾಡುತ್ತಿದ್ದ ರಾಮ ಮತ್ತು ಅವನ ಪರಿವಾರದವರ ರುಂಡ ತೆಗೆಸಿ ಎಂದು ಮುಂದಾಲೋಚನೆ ಮಾಡದೆ ತನ್ನ ಮಂತ್ರಿ ಬೈಚಪ್ಪನಿಗೆ ಆಜ್ಞೆಯಿತ್ತನು. ಇದನ್ನು ಕೇಳಿದ ಬೈಚಪ್ಪ ತಲ್ಲಣಗೊಂಡು, ಬುದ್ಧಿವಂತ, ಮುಂದಾಲೋಚನಾ ಪರಿಜ್ಞಾನವನ್ನು ಹೊಂದಿದ್ದರಿಂದ ಬೇರೊಂದು ಶಕ್ತಿಯಿಂದ ಅವರನ್ನು ಬಚ್ಚಿಟ್ಟು, ಅವರದೇ ಪ್ರತಿಕೃತಿಗಳನ್ನು ತಂದು ತೋರಿಸಿದನು. ಬೈಚಪ್ಪ ತನ್ನ ಸಮಯ ಪ್ರಜ್ಞೆಯಿಂದ ಎಲ್ಲಾ ಕೆಲಸಗಳನ್ನು ಯಶಸ್ವಿಯಾಗಿಯೇ ಮುಗಿಸಿದನು.

ಕುಮಾರರಾನು ಮಡಿದನೆಂಬ ಸುದ್ಧಿಯು ದಿಲ್ಲಿಯ ಸುರತಾಳನಿಗೆ ಸಂತಸವನ್ನು ತಂದಿತು. ಇನ್ನು ನಮ್ಮನ್ನು ತಡೆಯುವವರಾರಿಲ್ಲ ಎಂದು ನೇಮಿಯ ನೇತೃತ್ವದಲ್ಲಿ ಕುಮ್ಮಟದ ಮೇಲೆ ದಾಳಿ ಮಾಡಲು ತನ್ನ ಅಪಾರ ಸೇನೆಯನ್ನು ಕಳುಹಿಸಿದನು. ಆಗ ಈ ವಿಷಯ ತಿಳಿದ ಕಂಪಿಲನು ಮಗನನ್ನು ನೆನೆದು ಮರುಗಿದಾಗ ನೇಮಿಯ ಸೈನ್ಯವು ದಾಳಿ ಮಾಡಲು ಮುಂದಾಯಿತು. ಈ ಸಂದರ್ಭದಲ್ಲಿ ಬಿರುಗಾಳಿಯಂತೆ ಬಂದ ಕುಮಾರರಾಮನು ದಿಲ್ಲಿಯ ಸೇನೆಯನ್ನು ಹತ್ತಿಕ್ಕಿದನು. ಇದನ್ನು ಕಂಡ ನೇಮಿಯ ಸೇನೆ ದಿಕ್ಕಾಪಾಲಾಗಿ ಓಡಿತು. ಕುಮಾರರಾಮನನ್ನು ನೋಡಿದ ಕಂಪಿಲನಿಗೆ ಎಲ್ಲಿಲ್ಲದ ಹರ್ಷವುಂಟಾಗುತ್ತದೆ. ಅವರ ಪರಿವಾರದವರನ್ನೆಲ್ಲಾ ಕಂಡು ಸಂತಸಗೊಳ್ಳುತ್ತಾನೆ. ಈ ವಿಚಾರ ಕೇಳಿದ ರತ್ನಾಜಿ ಮತ್ತು ಸಂಗಿಯರಿಬ್ಬರೂ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ನಂತರ ರಾಮನಿಗೆ ಪಟ್ಟಾಭಿಷೇಕ ಮಾಡಲಾಗುತ್ತದೆ. ಈ ಸುಸಮಯಕ್ಕೆ ರಾಮನ ರಾಣಿಯಾದ ಸುಭದ್ರ ಆಷಾಡ ಮಾಸದ ಆದಿತ್ಯವಾರದಂದು ಗಂಡುಮಗುವಿಗೆ ಜನ್ಮ ನೀಡುತ್ತಾಳೆ. ಆ ಮಗುವಿಗೆ 'ಜಟ್ಟಂಗಿರಾಮ'ನೆಂದು ನಾಮಕರಣ ಮಾಡಲಾಯಿತು. ಹೀಗಿರುವಾಗ ದಿಲ್ಲಿಯ ಸುರತಾಳನು ಎರಡು ಬಾರಿ ಸೋಲನ್ನು ಒಪ್ಪಿಕೊಳ್ಳದೇ ನೇಮಿಯನ್ನು ದೂಷಿಸಿದಳು. ಹರಳರ ಕುಲದಲ್ಲಿ ಜನಿಸಿದ ಮಾತಂಗಿ ಎಂಬ ಕನ್ಯೆಯು ರಾಮನನ್ನು ನಾನು ಮಣಿಸುವೆನೆಂದು ಅವನ ರುಂಡವನ್ನು ತಾನೇ ತಂದು ತಮ್ಮ ಬಳಿಗೆ ಒಪ್ಪಿಸುವೆನೆಂದು ಶಪಥಗೈದು ತನ್ನ ಸೇನೆಯೊಡನೆ ಕುಮ್ಮಟದುರ್ಗಕ್ಕೆ ಸುಮಾರು ೬ ಲಕ್ಷ ಬೃಹತ್ ಸೇನೆಯೊಂದಿಗೆ ಧಾವಿಸಿದಳು.

ಕುಮ್ಮಟದುರ್ಗದ ಸೇನೆಯು ಕೂಡ ಯುದ್ಧಕ್ಕೆ ಸಿದ್ಧಗೊಂಡು ಬೃಹತ್ ಸೇನೆಯೊಂದಿಗೆ ಬರುತ್ತದೆ. ಎರಡೂ ಸೇನೆಗಳು ಎದುರುಗೊಂಡು ಬಲವಾದ ಹೋರಾಟದಲ್ಲಿ ತೊಡಗಿದರು. ಮಾತಂಗಿ ಸೇನೆಯು ಕಂಗೆಟ್ಟು ಹಿಂದಕ್ಕೆ ಸರಿಯಿತು. ಆದರೆ ಇದರಿಂದ ಖಾನರೆಲ್ಲರೂ ಮಾತಂಗಿಯನ್ನು ದೂಷಿಸಿದರು. ಇದೇ ಸಂದರ್ಭಕ್ಕೆ ಸರಿಯಾಗಿ ಕುಮಾರರಾಮನ ಸೇನೆಯಲ್ಲಿದ್ದ ಕಿಡಿಗೇಡಿಗಳಾದ ತೆಲುಗರು ಮಾತಂಗಿಯನ್ನು ಹಿಂದಕ್ಕೆ ಕರೆಸಿ "ನಿಲ್ಲು ಹೋಗಬೇಡಾ, ಇಂದೇ ನಮ್ಮ ದುರ್ಗವನ್ನು ನಿಮ್ಮ ವಶ ಮಾಡುವೆವು" ಎಂದು ಹೇಳಿ ಮಾತಂಗಿಯನ್ನು ತಡೆದರು. ಇದನ್ನು ಅರಿತ ರಾಮನು ಸಿಟ್ಟಿಗೆದ್ದು ಕುಲಗೇಡಿಗಳಾದ ತೆಲುಗರನ್ನು ಹಿಡಿದು ದುರ್ಗಿಯ ಮುಂದೆ ಕಡಿ ಹಾಕಿದನು.

ಕೂಡಲೇ ರಾಮನು ತನ್ನ ತಂದೆ ಕಂಪಿಲರಾಯನಿಗೆ ಜಟ್ಟಂಗಿರಾಮನಿಗೆ ಪಟ್ಟ ಕಟ್ಟಿ ಸಲಹಬೇಕೆಂದು ಪ್ರಾರ್ಥಿಸಿಕೊಂಡು, ಯುದ್ಧಕ್ಕೆ ವೀರಾವೇಶದಿಂದ ಮುಂದಾಗುತ್ತಾನೆ. ತಾಯಿ, ರಾಣಿಯರನ್ನೆಲ್ಲಾ ಭೇಟಿಯಾಗಿ ಸಂತೈಸಿ, ತನಗೆ ಅಂತ್ಯಕಾಲ ಒದಗಿತೆಂದು, ರಾಣಿಯರಿಗೆ ಅಭಯ ನೀಡಿದನು. ಪ್ರತಿಯಾಗಿ ಅವರೂ ಅಭಯ ನೀಡುತ್ತಾರೆ. ತನ್ನ ತಂದೆ ತಾಯಿಯರನ್ನು ಕರೆಸಿ ಬಾದೂರಖಾನನನ್ನು ರಕ್ಷಿಸುವೆನೆಂದು ಸುಲ್ತಾನನ ವಶಕ್ಕೆ ಬಿಡಬೇಡಿರೆಂದು ಹೇಳಿ ರಣರಂಗಕ್ಕೆ ಮುಂದಾಗಿ ತೆಲುಗರನ್ನು ಕಡಿದ ದೃಶ್ಯವನ್ನು ನೋಡಿ ತುರುಕರು ಬೆದರಿ ಓಡಿಹೋಗುತ್ತಾರೆ. ಆಗ ರಾಮನ ಜೊತೆಗೆ ಸಂಗಯ್ಯ, ಬಸವ, ಬಾದೂರರೆಲ್ಲರು ಬಲವಾಗಿ ನಿಲ್ಲುತ್ತಾರೆ. ಹೀಗಾಗಿ ಎರಡೂ ಸೇನೆಗಳ ನಡುವೆ ಭೀಕರ ಕಾಳಗ ಸಂಭವಿಸುತ್ತದೆ. ಇದೇ ಸಂದರ್ಭದಲ್ಲಿ ಮಾತಂಗಿಯು ಕುಮಾರರಾಮನನ್ನು ತನ್ನನ್ನು ಉದ್ದೇಶಿಸಿ ಸೇರೆಂದು, ಆಗ ನಿನ್ನ ಪ್ರಾಣವನ್ನು ಉಳಿಸುತ್ತೇನೆ ಎಂದು ಹೇಳಿದರೂ ರಾಮನು ಅವಳನ್ನು ತಿರಸ್ಕರಿಸುತ್ತಾನೆ. ಆಗ ಮಾತಂಗಿಯು ಪುನಃ ರಾಮನನ್ನು ಕೇಳಲು ಸಿಟ್ಟಿಗೆದ್ದ ರಾಮನು ಮಾತಂಗಿಯ ಮೇಲೆ ದಾಳಿ ಮಾಡಲು ಮುಂದಾಗಿ, ತಕ್ಷಣವೇ ಸ್ತ್ರೀಯನ್ನು ಕೊಲ್ಲುವುದು ಮಹಾಪಾಪವೆಂದು ಅರಿತು ಸುಮ್ಮನಾದಾಗ ಮಾತಂಗಿಯು ರಾಮನ ಮೇಲೆ ಬಾಣಗಳ ಸುರಿಮಳೆಗೈಯುವಳು. ಇದನ್ನು ಕಂಡ ಕಾಟಣ್ಣನು ಮರುಗುತ್ತಾನೆ. ಆಗ ರಾಮನು ಕಾಟಣ್ಣನಿಗೆ ತಂದೆ ತಾಯಿಗಳಿಗೆ ಸುದ್ದಿ ಮುಟ್ಟಿಸೆನ್ನಲು, ಕಾಟಣ್ಣನು ಒಲ್ಲೆಯೆಂದು, ರಾಮನ ಅವಸ್ಥೆ ಕಂಡು ಮರುಗುತ್ತಾ ರಾಮನು ಹೇಳಿದ ಎಲ್ಲಾ ಕಾರ್ಯಗಳನ್ನು ಪೂರ್ಣಗೊಳಿಸಿದನು. ಕೊನೆಗೆ ರಾಮನ ಮಡದಿಯರು ಸುಭದ್ರೆಯನ್ನು ಬಿಟ್ಟು ಎಲ್ಲರೂ ಖಡ್ಗಕ್ಕೆ ಬಲಿಯಾದರು. ನಂತರ ರಾಮನು ಸೊರಗಿ ಕೋಟೆ ಕಲ್ಲಿನ ಮೇಲೆ ನಡೆಯುತ್ತಾ, ಶಿವನನ್ನು ಧ್ಯಾನಿಸುತ್ತಾ, ತನಗೆ ಪ್ರಾಪ್ತವಾದ ಮರಣವನ್ನು "ದುಃಖವೆಂಬುದು ನೇತ್ರಲೋಚನ ಪೂಜೆ ಹೆಚ್ಚಾಗಿ ಮಾಡಿರಲು ಈ ಮರಣ ಕೊಟ್ಟನಲ್ಲದೆ, ಗುರುವು, ವ್ರತಭ್ರಷ್ಟ ಬರದೆಂದು ನಕ್ಕನು ರಾಮ ನಲಿನಲಿದು" ಎಂದು ರಾಮನು ಸಂತೋಷದಿಂದಲೇ ಜಟ್ಟಂಗಿದೇವನನ್ನು ಸ್ಮರಿಸುತ್ತಾ ಪ್ರಾಣವನ್ನು ಬಿಟ್ಟನು. ಆಗ ಮಾತಂಗಿಯು ರಾಮ ತಲೆಯನ್ನು ಕಡಿದು ಸುಲ್ತಾನನ ಬಳಿ ಕಳಿಸಿದಾಗ ಮಗಳು ಬಾಬಮ್ಮ ದುಃಖಿಸಿದಳು. ನಂತರ ಕಂಪಿಲನು ಆ ರುಂಡವನ್ನು ದುರ್ಗಕ್ಕೆ ತರಿಸಿಕೊಳ್ಳುತ್ತಾನೆ. ಆದರೆ ಮಾತಂಗಿಯು ತನ್ನ ಹಿಂದಿನ ಜನ್ಮರಹಸ್ಯವನ್ನು ಹೇಳುತ್ತಾ "ಕೃತಿಯೊಳ ರೇಣಿಕಿ, ತ್ರೇತಾರದೊಳು ತಾಟಕಿಯು, ದ್ವಾಪರದೊಳು ದ್ರೌಪದಿಯಾಗಿ, ಈ ಹಿಂದೆ ರತ್ನಾಜಿಯಾಗಿದ್ದ ನಾನು ರಾಮನನ್ನು ಕೊಲ್ಲಬೇಕೆಂದು ಪ್ರತಿಜ್ಞೆ ಮಾಡಿಕೊಂಡೆನು" ಎಂದು ಹೇಳುತ್ತಾ ಕೊಂಡಕ್ಕೆ ಹಾರಿ ಸಾಯುತ್ತಾಳೆ. ಇದನ್ನು ಕಂಡ ಹರಿಯಾಲದೇವಿಯು ಕುಮಾರರಾಮನ ರುಂಡವನ್ನು ನೋಡುತ್ತಾ "ಕುಲಕ್ಕೆ ದೇವರಾಗು, ಭಂಜೆಯರಿಗೆ ಸಂತಾನವನ್ನು ಕರುಣಿಸುವಂತನಾಗು, ಬೇಡರೆಲ್ಲರೂ ನಿನ್ನ ಜಾತ್ರೆಯನ್ನು ಮಾಡಬೇಕೆಂದೂ, ಹೀಗೆ ರಾಮನು ದೇವತಾ ಪುರುಷನಾದ ಬಗೆಯನ್ನು ವಿವರಿಸುವಳು. ಕಂಪಿಲರೂ, ಬೈಚಪ್ಪ ಉಳಿದವರೆಲ್ಲರೂ ದೇವತಾ ಪುರುಷನಾದ ರಾಮನಿಗೆ ನಮಸ್ಕರಿಸುವರು. ಈ ಕಾರ್ಯದ ಅಂತ್ಯಕಾಲದಿಂದ ಕುಮ್ಮಟ ರಾಜ್ಯಕ್ಕೆ ಕುಮಾರರಾಮನ ಮಗನಾದ ಜಟ್ಟಂಗಿರಾಮನು ಅರಸನಾಗಿ ಮುಂದುವರೆಯುತ್ತಾನೆ.

ನಂಜುಂಡ ಕವಿಯ 'ರಾಮನಾಥ ಚರಿತೆ' ಮತ್ತು ಪಾಂಚಾಳಗಂಗನ 'ಚೆನ್ನರಾಮನ ಸಾಂಗತ್ಯ'ಕ್ಕಿಂತ 'ಬಾಲರಾಮನ ಸಾಂಗತ್ಯ'ವು ಸರಳಂಯುತವಾದ ಕಾವ್ಯವಾಗಿದ್ದು, ಜನಸಾಮಾನ್ಯರು ಅರ್ಥೈಸಿಕೊಳ್ಳಬಹುದಾದಂತಹ ಕಾವ್ಯಪುಷ್ಟಿಯನ್ನು ಹೊಂದಿದೆ. ಕವಿಯು ಜನಸಾಮಾನ್ಯರಿಗೆ ಅರ್ಥೈಸಲು ಹೋಗಿ ಅಲ್ಲಲ್ಲಿ ಉಪಕಥೆಗಳ ಸರಮಾಲೆಯನ್ನೇ ಎಣೆದು ಕಾವ್ಯಕ್ಕೆ ಸಲ್ಲುವ ಪುಷ್ಠಿತನವನ್ನು ಕುಂಠಿತಗೊಳಿಸಿದ್ದಾನೆ. ಇಲ್ಲಿ ಪುರಾಣದ ಛಾಯೆಯಿದ್ದರೂ ಅತಿಶಯ ಅನ್ನಿಸುತ್ತದೆ. ನಂಜುಂಡ ಮತ್ತು ಗಂಗನ ಎರಡೂ ಕಾವ್ಯಗಳಲ್ಲಿ ಎಲ್ಲೂ ಕಾಣದ ಕೆಲವು ಹೊಸ ಅಂಶಗಳನ್ನು ಕವಿಯು ಈ ಕಾವ್ಯದಲ್ಲಿ ಹುಟ್ಟಿಹಾಕುವ ಪ್ರಯತ್ನ ಮಾಡಿದ್ದಾರೆ. ಅಂದರೆ ಮುಖ್ಯವಾಗಿ ಕುಮಾರರಾಮನ ಪತ್ನಿಯರ ಹೆಸರುಗಳೇ ಇಲ್ಲಿ ಬೇರೆ ಬೇರೆಯಾಗಿವೆ. ಕಾಟಣ್ಣನ ವಿವಾಹವೂ ಹೊಸತೆನಿಸುತ್ತದೆ. ಜೊತೆಗೆ ಕುಮಾರರಾಮ ಮತ್ತು ಪತ್ನಿ ಸುಭದ್ರೆಗೆ ಜನಿಸಿದ ಮಗನೇ 'ಜಟ್ಟಂಗಿರಾಮ' ಎಂಬ ಸಂಗತಿಯು ಪೂರ್ಣ ಹೊಸತೆನಿಸುತ್ತದೆ. ಕವಿಯು ಚರಿತ್ರೆಯ ವ್ಯಕ್ತಿಯನ್ನು ಸಾಹಿತ್ಯೋತ್ತರಗೊಳಿಸಿ ಪುರಾಣ ಪುರುಷನಂತೆ ಬಿಂಬಿಸುವ ಪ್ರಯತ್ನವೇನೋ ಚೆನ್ನಾಗಿದೆ. ಆದರೆ ಇದು ಕವಿಯ ಕಾಲ್ಪನಿಕ, ಭಾವನಾತ್ಮಕ ಅಭಿವ್ಯಕ್ತತೆಯನ್ನು ಸೂಚಿಸುತ್ತದೆ.

ಕವಿಯು ತನ್ನ ಕಾವ್ಯದಲ್ಲಿ ಯುದ್ಧಗಳಿಗೆ ಹೆಚ್ಚು ಮಹತ್ವ ಕೊಟ್ಟಿರುವನೆಂದು ತಿಳಿದು ಬರುತ್ತದೆ. ಆದರೆ ಇಲ್ಲಿ ಕಂಡುಬರುವ ಕೆಲವು ಸನ್ನಿವೇಶಗಳು, ಹೆಸರುಗಳು ಕಾಲ್ಪನಿಕತೆಗೆ ಎಡೆ ಮಾಡಿ ಕೊಟ್ಟಂತಿದೆ. ಕೆಲವು ನೈಜತೆಗೆ ಹತ್ತಿರವಿದ್ದರೂ ಅದನ್ನು ಮರೆಮಾಚುವ ಪ್ರಯತ್ನವನ್ನು ನಡೆಸಿರುವುದು ಅರ್ಥವಾಗುತ್ತದೆ. ರತ್ನಾಜಿಯ ಪಾತ್ರವನ್ನು ಗಮನಿಸಿದಾಗ ಸ್ತ್ರೀ ಕುಲಕ್ಕೆ ಅವಮಾನವೆನಿಸುವಂತಹ ಕೆಲವು ಸನ್ನಿವೇಶಗಳು, ಭಾವಾಂತರಂಗದ ವರ್ತನೆಗಳು ತಿಳಿದುಬರುತ್ತವೆ. ಅಂದರೆ ರಾಮನು ಬಾಲ್ಯದಲ್ಲಿರುವಾಗಲೇ ಆತನ ರೂಪಕ್ಕೆ ಮರುಳಾಗಿ ರಾಮನು ತನ್ನ ಪುತ್ರನೆನ್ನುವುದನ್ನು ಮರೆತು ಮೋಹಪರವಶಳಾಗಿ ಕಾಮಾಂಧಕ್ಕೆ ಬಲಿಯಾಗುವ ಅವಳ ಅಂತರಂಗದ ದುರುದ್ದೇಶವನ್ನು ಹೇಳಲು ಹೊರಟಿರುವುದು ಹೇಯವೆನಿಸುತ್ತದೆ. ಈ ರೀತಿಯಲ್ಲಿ ರತ್ನಾಜಿಯನ್ನು ಕೆಟ್ಟದಾಗಿ ಬಿಂಬಿಸಿ ಇದನ್ನು ಅಳಿಸುವ ಪ್ರಯತ್ನವನ್ನು ಮಾಡಿರುವುದು ಅಲ್ಲಲ್ಲಿ ಪೌರಾಣಿಕ ಬಣ್ಣವನ್ನು ಹಚ್ಚುವ ಮೂಲಕ ರತ್ನಾಜಿಗೆ ಗೌರವ ಸಿಗುವ ಹಾಗೆ ಮಾಡಿರುವುದು ಕವಿಯ ಶ್ರಮ ತುಂಬಾ ಇದೆ ಎನಿಸುತ್ತದೆ.

ಕಾವ್ಯದ ಪ್ರಾರಂಭದಲ್ಲಿಯೇ 'ಜಟ್ಟಂಗಿರಾಮ' ಕುಮಾರರಾಮನ ಮಗನೆಂದು ಬಿಂಬಿಸಿರುವುದು ಸೋಜಿಗವೆನಿಸುತ್ತದೆ. ಇಲ್ಲಿ ತಂದೆಯ ಚರಿತ್ರೆ ಸಾಹಸಗಳನ್ನು ಸ್ವಂತ ಮಗನಿಗೆ ಬೇರೊಬ್ಬ ವ್ಯಕ್ತಿಯು ಹೇಳುವಂತಹದ್ದು. ಕವಿಯ ಮಹಾನ್ ಕಲ್ಪನೆಗೆ ಮೀರಿದ್ದು. ಇಲ್ಲಿ ಕಥೆ ಹೇಳುವ ಗುರುವಾದ ಪ್ರಭುದೇವರು ಯಾರೆಂಬುದು ತಿಳಿದುಬರುವುದಿಲ್ಲ. ಈತನ ಬಗೆಗೆ ಖಚಿತವಾದ ವಿವರಗಳೇನು ಇಲ್ಲ. ಹುಲ್ಲೂರು ಶ್ರೀನಿವಾಸ ಜೋಯಿಸರು ಹೇಳುವಂತೆ "ಈ ಪ್ರಭುದೇವನು ಪ್ರೌಢದೇವರಾಯ ಕಾಲದಲ್ಲಿ ೧೦೧ ವಿರಕ್ತ ಭಕ್ತರ ಗುಂಪಿನ ಕಲ್ಲುಮಠದ ಪ್ರಭುದೇವಾಚಾರ್ಯ ಆಗಿರಬಹುದೆಂಬ ಅಭಿಪ್ರಾಯಪಡುತ್ತಾರೆ."[೧೫] ಆದರೆ ಈ ಹೆಸರು ಉಳಿದ ಎರಡು ಸಾಂಗತ್ಯಗಳಲ್ಲಿ ಕಂಡುಬರುವುದಿಲ್ಲ.

ಕವಿಯು ಸಾಮಾನ್ಯ ಜನರಿಗೆ ಮಹತ್ವಕೊಟ್ಟಿರುವುದೇನೋ ನಿಜ. ಆದರೆ 'ದೊಂಬರು' ಎಂಬ ಜಾತಿಯನ್ನು ಎರಡು ಕಡೆ ಉಲ್ಲೇಖಿಸಿರುವುದನ್ನು ಕಾಣಬಹುದು. ರತ್ನಾಜಿಯನ್ನು ದೊಂಬರ ಮಗಳೆಂದು, ದೆಹಲಿ ಸುಲ್ತಾನನ ಸೇನೆಯಲ್ಲಿದ್ದ ಖಾನರನ್ನು ಕುರಿತು ಅಲ್ಲಿನ ಸ್ತ್ರೀ ಸೇನಾನಿಗಳು ರಾಮನ ತಲೆ ಕಡಿದು ತರುವೆವು ಎಂದು ಶಪಥ ಮಾಡುವ ಸಂದರ್ಭವನ್ನು ಹೇಳಬೇಕಾದಾಗ ದೊಂಬರ ಚೆನ್ನಿಯ ಕಥೆಯನ್ನು ಹೊಂದಾಣಿಕೆ ಮಾಡಿದ್ದಾನೆ. 'ದೊಂಬರ' ಪದವನ್ನು ಎರಡೆರಡು ಬಾರಿ ಬಳಕೆ ಮಾಡಿರುವುದು ಪ್ರಶ್ನೆಗೆ ಎಡೆಮಾಡಿಕೊಟ್ಟಿದೆ. ಹಾಗೆಯೇ ಸಾಂದರ್ಭಿಕವಾಗಿ ಅಲ್ಲಲ್ಲಿ ಹೇಳುವ ಕಥೆಗಳು ಅಂದರೆ ದೊಂಬರ ಚೆನ್ನಿ, ಜಯಸೇನ, ಇಂದ್ರಕುಮಾರಿ, ಮಚ್ಛೇಂದ್ರ, ರೇಣುಕೆಯ ಕಥೆಯನ್ನು ಹೇಳಲು ಹೋಗಿ ಪುರಾಣ ಕವಚವನ್ನು ತೊಡಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕವಿಯು ಕೆಲವು ಸಂದರ್ಭಗಳಲ್ಲಿ ಎಡವಿದ್ದರೂ ಅದನ್ನು ಮತ್ತೊಂದು ಸನ್ನಿವೇಶದಲ್ಲಿ ಸರಿದೂಗಿಸುವ ಪ್ರಯತ್ನವನ್ನು ಮಾಡಿರುವನು. ಧರ್ಮಸಮನ್ವಯತೆಯನ್ನು ಬಿಂಬಿಸುವಲ್ಲಿ ಕವಿಯು ಯಶಸ್ವಿಯಾಗಿದ್ದಾನೆ. ಅಂದರೆ ಹಿಂದೂ ಮುಸ್ಲಿಂ ಬಾಂಧವ್ಯ ಅರಿವಿಲ್ಲದಂತೆಯೇ ಮೂಡಿಸುವ ಚಾತುರ್ಯ ಕವಿಗಿದೆ ಎನಿಸುತ್ತದೆ. ಕುಮಾರರಾಮನ ಶೌರ್ಯವನ್ನು ಮೆಚ್ಚಿ ಬಾದೂರನು ಉಡುಗೊರೆಯನ್ನು ಕಳಿಸುವುದು, ನಂತರ ದಿಲ್ಲಿ ಸುಲ್ತಾನನ ಭಯದಿಂದ ಕುಮಾರರಾಮನ ಆಶ್ರಯ ಪಡೆಯುವುದು, ಕುಮಾರರಾಮನ ಹೃದಯ ವೈಶಾಲ್ಯತೆ ಧರ್ಮಕ್ಕೂ ಮೀರಿದ್ದು, ರಕ್ಷಣೆಗೆ ಯಾವ ಧರ್ಮವೂ ಬೇಕಿಲ್ಲ ಎಂಬುದನ್ನು ಸಂದರ್ಭೋಚಿತವಾಗಿ ಹೇಳುವ ಪ್ರಯತ್ನ ಕವಿಯದ್ದಾಗಿದೆ.

ಬೆನ್ನಬಿದ್ದವರನು ಮುನ್ನ ಕೊಡುವರೆ ಮೂಳ। ಹಲ್ಲ ಕೀಳಿಸಾವರಿಗೆ ತಾಗಂಡ।

ನಮ್ಮಯ್ಯ ಹರಿತಂದೊಮ್ಮೆ ಮರೆಬೀಳೆ ಗುಂಡ। ಬ್ರಹ್ಮಯ್ಯ ಕೊಟ್ಟನೆ ಗಣಪತಿಗೆ॥[೧೬]

ಒಟ್ಟಾರೆ ಹೇಳುವುದಾದರೆ ಮಹಾಲಿಂಗಸ್ವಾಮಿಯ 'ಬಾಲರಾಮನ ಸಾಂಗತ್ಯ' ಕಾವ್ಯವು ಚರಿತ್ರೆಯನ್ನು ಪೌರಾಣಿಕ ಚೌಕಟ್ಟಿನ ಮುಖಾಂತರ ವರ್ಣಿಸುತ್ತಾ ಪುರಾಣಪುರುಷನನ್ನಾಗಿ ಮಾಡಿರುವುದು. ಸಾಹಿತ್ಯೇತರ ಅಂಶಗಳನ್ನು ಬಳಸಿರುವುದು ಗಮನಾರ್ಹವಾಗಿದೆ.

### ಚೆನ್ನರಾಮನ ಸಾಂಗತ್ಯ

ಪಾಂಚಾಳಗಂಗನ 'ಚೆನ್ನರಾಮನ ಸಾಂಗತ್ಯ' ಕೃತಿಯು ಅತ್ಯಂತ ಸರಳ, ಸಂಕ್ಷಿಪ್ತತೆಯನ್ನು ಹೊಂದಿದ ಕಾವ್ಯವಾಗಿದೆ. ಕುಮಾರರಾಮನನ್ನು ಕುರಿತಂತೆ ರಚಿತವಾಗಿ ಮತ್ತೊಂದು ಪ್ರಾಚೀನವಾದ ಕಾವ್ಯ 'ಚೆನ್ನರಾಮನ ಸಾಂಗತ್ಯ'ವಾಗಿದೆ. ಇದು ಘಟನಾ ಪ್ರಧಾನವಾದಂತಹ ಕೃತಿಯಾಗಿದ್ದು, ಕೆಲವು ಪಾತ್ರಗಳ ವ್ಯಕ್ತಿತ್ವವನ್ನು ಬೆಳಸುವ ಕಡೆಗೆ ಈ ಕೃತಿಯು ವಾಲುತ್ತಾ ಹೋಗುತ್ತದೆ. ಹೀಗಾಗಿ ಹೆಚ್ಚು ಜನಪ್ರಿಯತೆಗಳನ್ನು ಗಳಿಸಿದಂತಹ ಕಾವ್ಯವಾಗಿದೆ. ಈತನು ಜನಸಾಮಾನ್ಯರನ್ನು ಗಮನದಲ್ಲಿಟ್ಟುಕೊಂಡೇ ರಚಿಸಿರುವುದರಿಂದ, ಅವರಿಗೂ ಅರ್ಥವಾಗುವಂತೆ ಪದಗಳನ್ನು, ವಾಕ್ಯಗಳನ್ನು ಪೋಣಿಸಿರುವುದು ಕಂಡುಬರುತ್ತದೆ. ಹೀಗಾಗಿ ಈ ಕಾವ್ಯವು ಸಾಮಾನ್ಯವಾಗಿದ್ದರೂ ಹಿಂದಿನ

ಕವಿಗಳಿಗೆ ಇಷ್ಟವಾಗುವ ಅನೇಕ ಭಾವನೆಗಳನ್ನು ಬಿಂಬಿಸುವ ಪ್ರಯತ್ನವನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಈ ಕೃತಿಯು ಎಷ್ಟು ಜನಪ್ರಿಯತೆಯನ್ನು ಪಡೆದುಕೊಂಡಿತ್ತೆಂದರೆ ಕಂಠಪಾಠ ಮಾಡಿ ಮನನ ಮಾಡಿಕೊಂಡು ಹಾಗೆಯೇ ಹೇಳುವಷ್ಟರ ಮಟ್ಟಿಗೆ ಕೆಲವು ಪ್ರದೇಶಗಳಲ್ಲಿ ಕಾಣಬಹುದಾಗಿದೆ. ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ಕೆಲವು ಭಾಗಗಳಲ್ಲಿ ತುಂಬಾ ಹಿರಿಯ ವ್ಯಕ್ತಿಗಳು ಚೆನ್ನರಾಮನ ಸಾಂಗತ್ಯವನ್ನು ಬಾಯಿಪಾಠ ಮಾಡಿ ಇಂದಿಗೂ ಹೇಳುವ ಪರಿಪಾಠವಿದೆ.

"೧೯೧೬ರಲ್ಲಿ ಸಂಡೂರಿನ ನಿವಾಸಿಯಾದ ಮ್ಯಾಸನಾಯಕರ ಕೆಂಚಯ್ಯ ಎಂಬ ವೃದ್ಧನೊಬ್ಬನು ಗಂಗನ ಕಾವ್ಯದ ಕೆಲವು ಭಾಗಗಳನ್ನು ಹೇಳಿದನೆಂದೂ ಪೂರ್ತಿಯಾಗಿ ಹೇಳಲು ಮೂರು ದಿನಗಳಾಗುತ್ತವೆಂದು ಸೂಚಿಸಿದನೆಂದೂ ಡಾ.ಜಿ.ವರದರಾಜರಾವ್ ಅವರು ಹೇಳುತ್ತಾರೆ."

**ಕವಿ ಪರಿಚಯ**

ಜನಸಾಮಾನ್ಯರು ಹೇಳುವಂತೆ ಅರ್ಥಗರ್ಭಿತವಾಗಿರುವ 'ಚೆನ್ನರಾಮನ ಸಾಂಗತ್ಯ'ದ ಕರ್ತೃ ಪಾಂಚಾಳಗಂಗ. ಈತನ ಮೂಲದ ಬಗ್ಗೆ ಎಲ್ಲಿಯೂ ಹೇಳಿಕೊಂಡಿಲ್ಲವಾದರೂ ಅಲ್ಲಲ್ಲಿ ತಗಡೂರಿನ ವಿನಾಯಕನನ್ನು ಹೊಗಳಿರುವ ಪದ್ಯಗಳಿದ್ದು, ಅದರಂತೆಯೇ ಗರಳಪುರದ ನಂಜುಂಡನ ಬಗ್ಗೆ ಹೇಳಿರುವುದರಿಂದ ಯಾವ ಪ್ರದೇಶಕ್ಕೆ ಸೇರಿದವನಾಗಿರಬಹುದು ಎಂಬುದನ್ನು ಕಂಡುಹಿಡಿಯಲು ಸ್ವಲ್ಪ ಅನುಕೂಲವಾಗುತ್ತದೆ. ಅಂದರೆ 'ತಗಡೂರು' ಎಂಬ ಪ್ರದೇಶವು ಮೈಸೂರು ಜಿಲ್ಲೆಗೆ ಸೇರಿರುವ ಪ್ರದೇಶವಾಗಿರುವುದರಿಂದ ಈತನು ಮೂಲತಃ ಅಲ್ಲಿಯವನೇ ಇರಬೇಕು, ಅಥವಾ ಆ ಊರಿನ ಪರಿಚಯವಂತೂ ಇದ್ದೇ ಇರುತ್ತದೆ. ಈತನು ಹೆಚ್ಚು ಬಾರಿ ಶಿವನನ್ನು ಸ್ತುತಿಸಿರುವುದರಿಂದ ಶಿವನ ಆರಾಧಕನೇ ಆಗಿರಬೇಕು. ಈತನ ಕಾವ್ಯದ ರಚನೆಯನ್ನು ಗಮನಿಸಿದಾಗ ಒಬ್ಬ ಕವಿಯ ಸ್ತುತಿಗಿಂತ ಮತ್ತೊಬ್ಬ ಕವಿಯ ಸ್ತುತಿಯು ಭಿನ್ನವಾಗುತ್ತಾ ಹೋಗಿದೆ. ಈತನು ತನ್ನ ಕಾವ್ಯದಲ್ಲಿ ಹಲವು ಪೂರ್ವ ಕವಿಗಳನ್ನು ನೆನೆದಿರುವುದು ಆರ್. ನರಸಿಂಹಾಚಾರ್ಯರ ಸಂಪುಟದಿಂದ ತಿಳಿದುಬರುತ್ತದೆ. ಅಂದರೆ "ಪ್ರಾಚೀನ ಕವಿಗಳಾದ ಭಾಗುರಿ, ಅಗ್ಗಳ, ಹಲಾಯುಧ, ರಾಘವ, ವಾಲ್ಮೀಕಿ, ನಾಗವರ್ಮರನ್ನು ಸ್ಮರಿಸಿರುವುದಾಗಿ ಸೂಚಿಸಿದ್ದಾರೆ." ೧೫–೩೭೯ ಈ ಕವಿಯು ಪ್ರಾಚೀನದಲ್ಲಿ ಕಾವ್ಯ ಪರಂಪರೆಯನ್ನೇ ಸೃಷ್ಟಿಸಿದ್ದನೇನೋ ಎಂಬ ಸಂಶಯವೂ ಮೂಡುತ್ತದೆ. ಕಾರಣ "ಈತನಿಗೆ 'ಕನ್ನಡ ಕವಿಜಾಣ' ಎಂಬ ಉಕ್ತಿಯು ಪ್ರಚಾರದಲ್ಲಿತ್ತೆಂದು ತೋರುತ್ತದೆ."[೧೭] ಇದಲ್ಲದೆ ಈತನಿಗೆ ಮತ್ತೊಂದು ಉಕ್ತಿಯೂ ಇದ್ದಂತೆ ತೋರುತ್ತದೆ. ಡಾ.ಜಿ.ವರದರಾಜರಾವ್ ಅವರ ಸಾಂಗತ್ಯಗಳಲ್ಲಿ ಸೂಚಿಸಿರುವಂತೆ "ಭುಜಂಗನ ಭೃತ್ಯ ಗಂಗಯ್ಯ ಸಂಪನ್ನ ಪೇಳಿದನೀ ಕೃತಿಯ"[೧೮]ಲೆಂದು ಈ ಸಾಲು ಈತನ ಕೆಲವು ಪ್ರತಿಗಳಲ್ಲಿ ಕಂಡುಬರುತ್ತದೆ. ಕವಿಯ ಕಾಲಕ್ಕೆ ಸಂಬಂಧಿಸಿದಂತೆ ಖಚಿತ ವಿವರಗಳು ದೊರೆಯುವುದಿಲ್ಲ. ಹೀಗಾಗಿ ಕೆಲವು ಆಧಾರಗಳನ್ನಿಟ್ಟುಕೊಂಡು ಅಂತಿಮವಾಗಿ ಚರಿತ್ರಾಕಾರರು ಹಾಗೂ ಕೆಲವು ಕವಿಗಳು ಹೇಳುವಂತೆ ಈತನ ಕಾಲ ಕ್ರಿ.ಶ. ೧೬೫೦ ಎಂದು ಹೇಳುತ್ತಾರೆ. ಆದರೆ ಡಾ.ಜಿ.ವರದರಾಜರಾವ್ ಅವರ ಪ್ರಕಾರ ಅವರ ಬಳಿ

ದೊರೆತಿರುವ ಪಾಂಚಾಳನ ಕೃತಿಯ ಒಂದು ಪ್ರತಿಯು ಇದ್ದು, ಅದರ ಕಾಲ ಕ್ರಿ.ಶ. ೧೬೯೮ ಎಂದು ದಾಖಲಾಗಿದೆ. ಈ ಪ್ರತಿಯಲ್ಲಿ ರತ್ನಾಜಿಯ ಪ್ರಸಂಗ ಮಾತ್ರ ಅಡಕವಾಗಿದೆ. ಮತ್ತು ಅದು ಗಂಗನ ಪ್ರತಿಗಳಲ್ಲೆಲ್ಲಾ ತೀರಾ ಪ್ರಾಚೀನವಾದದ್ದೆಂದು ತಿಳಿಸುತ್ತಾರೆ.[೧೯]

**ಕಾವ್ಯ ಪರಿಚಯ**

ಕವಿ ಪಾಂಚಾಳಗಂಗನು ತನ್ನ ಕೃತಿಯಲ್ಲಿ ಎಷ್ಟು ಸಂಧಿಗಳಿಂದ ರಚಿಸಿರುವನೆಂಬುದನ್ನು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಏಕೆಂದರೆ ಪಾಂಚಾಳಗಂಗನ 'ಚೆನ್ನರಾಮನ ಸಾಂಗತ್ಯ' ಕೃತಿಗೆ ಸಂಬಂಧಿಸಿದಂತೆ ಸುಮಾರು ೭ ಪ್ರತಿಗಳು ದೊರೆತಿದ್ದು, ಒಂದೊಂದು ರೀತಿಯ ಕರ್ತೃವಿನ ಹೆಸರಲ್ಲಿ ಒಂದೊಂದು ಪ್ರತಿಯು ದೊರೆತಿರುವುದು ಗೊಂದಲಕ್ಕೀಡು ಮಾಡಿದೆ. ಅಷ್ಟಲ್ಲದೆ ಪ್ರತಿಯೊಂದು ಪ್ರತಿಗಳಿಗೂ ಭಿನ್ನತೆಗಳಿವೆ. ಸಂಧಿಗಳು, ಪದ್ಯಗಳ ಸಂಖ್ಯೆಯಲ್ಲಿ ಏರಿಳಿತಗಳಿವೆ. ಹಾಗೆಯೇ ಈ ಎಲ್ಲಾ ಪ್ರತಿಗಳು ದೊರೆತಿರುವುದರಿಂದ ಆ ಪ್ರತಿಗಳಲ್ಲಿ ನಮೂದಾಗಿರುವಂತೆ ಕರ್ತೃವಿಗೆ ಸಂಬಂಧಿಸಿದಂತೆ ಹಲವು ಹೆಸರುಗಳು ಕಂಡುಬರುತ್ತವೆ. 'ಪಾಂಚಾಳಗಂಗ', 'ಕವಿಜಾಣ', 'ನಾಗಸಂಗಯ್ಯ', 'ಭುಜಂಗೇಶ ಪುತ್ರ ಗಂಗಯ್ಯ' ಎಂಬುದಾಗಿ ಬರೆದಿದ್ದು, ಇವೆಲ್ಲವೂ ಒಬ್ಬ ವ್ಯಕ್ತಿಯ ಹೆಸರೆಂದು ಅನಿಸುತ್ತವೆ.

ಪಾಂಚಾಳಗಂಗನ ಈ ಕೃತಿಯಲ್ಲಿ ಒಂದೊಂದು ಪ್ರತಿಗೂ ಸಂಧಿಗಳು ೪ ಪದ್ಯಗಳ ಸಂಖ್ಯೆಗಳಲ್ಲಿ ಭಿನ್ನತೆಗಳಿವೆ. ಒಟ್ಟಾರೆ ಹೇಳುವುದಾದರೆ ಸಂಧಿಯಲ್ಲಿ ೪ನೇ ಸಂಧಿಯಿಂದ ಸುಮಾರು ೩೭ ಸಂಧಿಗಳಿರುವ ಪ್ರತಿಗಳಿವೆ. ಹಾಗೆಯೇ ಪದ್ಯಗಳಲ್ಲಿ ೧೯೦ ಪದ್ಯಗಳಿಂದ ಸುಮಾರು ೫೩೧೭ ಪದ್ಯಗಳವರೆಗೆ ರಚಿತವಾಗಿರುವ ಸುಮಾರು ೭ ಪ್ರತಿಗಳು ದೊರೆತಿವೆ. ಕೆಲವು ಪ್ರತಿಗಳು ಅಲ್ಪ ಮಾಹಿತಿಗಳು, ಇನ್ನೂ ಕೆಲವು ಅಪೂರ್ಣ ಮಾಹಿತಿಗಳನ್ನು ಒಳಗೊಂಡಿರುವುದು ತಿಳಿದುಬರುತ್ತದೆ. ಮೇಲಿನ ಎಲ್ಲಾ ಅಂಶಗಳು ಕಾವ್ಯದ ೨೬ ಪ್ರತಿಗಳಲ್ಲಿ ೭ ಪ್ರತಿಗಳಿಗೆ ಸಂಬಂಧಿಸಿವೆ. ಅಂದರೆ "ಕಾವ್ಯದ ೨೬ ಪ್ರತಿಗಳಲ್ಲಿ ೭ ಪ್ರತಿಗಳನ್ನು ತಮ್ಮ ಪ್ರಬಂಧಕ್ಕೆ ಬಳಸಿಕೊಂಡಿದ್ದಾರೆ."[೨೦] "ಹುಲ್ಲೂರು ಶ್ರೀನಿವಾಸ ಜೋಯಿಸರು ಕನ್ನಡದಲ್ಲಿ ಒಟ್ಟಿಗೆ ಆರು ಜನ ಕವಿಗಳು ಕುಮಾರರಾಮನ ಸಾಂಗತ್ಯಗಳನ್ನು ರಚಿಸಿರುವರೆಂದು ಅಭಿಪ್ರಾಯಿಸಿದ್ದಾರೆ."[೨೧]

ಒಟ್ಟಾರೆ ಹೇಳುವುದಾದರೆ ಈ ಕಾವ್ಯವು ಎರಡೂ ಸಾಂಗತ್ಯಗಳಿಗಿಂತ ಎಲ್ಲದರಲ್ಲೂ ಭಿನ್ನತೆಯನ್ನು ಹೊಂದಿದೆ. ಅಂದರೆ ಎರಡೂ ಸಾಂಗತ್ಯಗಳಿಗಿಂತ ಸರಳವಾಗಿದ್ದು, ಹೆಚ್ಚು ಜನಪ್ರಿಯಗೊಂಡು ಸುಮಾರು ೨೬ ಪ್ರತಿಗಳು ಹೊರಹೊಮ್ಮಿವೆ ಎಂದು ಹೇಳಬಹುದು.

**ಕಾವ್ಯದ ವಸ್ತು**

ಪಾಂಚಾಳಗಂಗನ 'ಚೆನ್ನರಾಮನ ಸಾಂಗತ್ಯ' ಕೃತಿಯು ಸಾಮಾನ್ಯ ಜನರನ್ನು ಗಮನದಲ್ಲಿಟ್ಟುಕೊಂಡು ರಚನೆಯಾಗಿದೆ. ಈತನ ಕಾವ್ಯವು ಘಟನಾ ಪ್ರಧಾನವಾಗಿದ್ದು, ವರ್ಣಿಸುವುದು, ಉತ್ಪ್ರೇಕ್ಷೆ ಮಾಡಿರುವುದು ತುಂಬಾ ವಿರಳ ಎಂದೆನಿಸುತ್ತದೆ. ಸಾಮಾನ್ಯರು ಕಂಠಪಾಠ ಮಾಡಿ

ಹೇಳುವಷ್ಟು ಸುಲಲಿತವಾಗಿದ್ದ ಈ ಕಾವ್ಯವು ಧಾರ್ಮಿಕ ನಂಬಿಕೆಗಳು, ಸಾಂಪ್ರದಾಯಿಕ ಚೌಕಟ್ಟಿನ ಒಳಗೆ ಪಾತ್ರಗಳನ್ನು ಹೆಣೆದಿರುವುದು ಕಾವ್ಯದ ಶ್ರೇಷ್ಠತೆಯನ್ನು ಬಿಂಬಿಸುತ್ತದೆ. ಈ ಕಾವ್ಯದ ವಸ್ತುವನ್ನಾಗಿ ಬಳಸಿಕೊಂಡಿರುವುದು ಘಟನೆಗಳನ್ನು ಮಾತ್ರ, ಇಲ್ಲಿ ಹೆಚ್ಚು ವರ್ಣನೆಗೆ ಅವಕಾಶ ಕೊಡದೆ ಸಂದರ್ಭೋಚಿತವಾಗಿ ಘಟನೆಗಳನ್ನು ಪೋಣಿಸಿರುವುದು ಕಾವ್ಯಕ್ಕೆ ಪುಷ್ಟಿ ನೀಡಿದಂತಿವೆ.

**ಕಥಾ ಸಾರಾಂಶ**

ದೇವಗಿರಿ ಸೇವುಣರ ಅರಸನಾಗಿದ್ದ ರಾಮದೇವರಾಯನು ದಕ್ಷಿಣ ಭಾಗದಲ್ಲಿ ಪ್ರಭಾವಿಯಾಗಿ ಆಳ್ವಿಕೆ ನಡೆಸುತ್ತಿದ್ದನು. ಇದೇ ಸಮಯದಲ್ಲಿ ಮುಮ್ಮಡಿ ಸಿಂಗನು ತನ್ನ ಸಹೋದರ/ದಾಯಾದಿಗಳ ಜೊತೆ ಹೊಂದಾಣಿಕೆಯಿಲ್ಲದೆ ಕಾದಾಡಿಕೊಂಡು ದಕ್ಷಿಣಕ್ಕೆ ಬಂದು ರಾಮದೇವರಾಯನ ಆಶ್ರಯ ಪಡೆದುಕೊಳ್ಳುತ್ತಾನೆ. ಈ ವೇಳೆ ಸರಿಯಾಗಿ ರಾಮದೇವರಾಯನ ಏಳಿಗೆಯನ್ನು ಕಂಡು ಸಹಿಸಲಾಗದ ದಿಲ್ಲಿ ಸುಲ್ತಾನನು ಸೇವುಣರ ಮೇಲೆ ದಾಳಿ ಮಾಡಿ ರಾಮದೇವರಾಯನನ್ನು ಸೋಲಿಸಿ ಆತನೂ ಸೇರಿದಂತೆ ಸುಮಾರು ಜನ ಸೈನಿಕರನ್ನು ಸೆರೆಹಿಡಿದ ವಿಚಾರ ಸಿಂಗನಿಗೆ ತಿಳಿಯುತ್ತಿದ್ದಂತೆ ಅಲ್ಲಿಂದ ಮಲೆಪಂಕ್ತಿ ದೇಶಕ್ಕೆ ಬಂದು ನೆಲೆಗೊಳ್ಳುತ್ತಾನೆ. ಅಲ್ಲಿ ರಾಯದುರ್ಗದ ಅರಸನ ಆಶ್ರಯವನ್ನು ಪಡೆಯುತ್ತಾನೆ. ಈ ಅರಸನ ಮರಣದ ನಂತರ ಈತನ ಸೋದರಳಿಯ 'ಮಲ್ಲ' ಎಂಬುವವನು ಉತ್ತರಾಧಿಕಾರಿಯಾಗುತ್ತಾನೆ. ಆದರೆ ಇದೇ ಸಂದರ್ಭವನ್ನು ಬಳಸಿಕೊಂಡ ಸಿಂಗನು 'ಮಲ್ಲ'ನನ್ನು ವಜಿಸಿ ತಾನು ಅರಸನಾಗಿ ರಾಜ್ಯಭಾರ ಮಾಡುತ್ತಾನೆ. ಆಗ ಅಲ್ಲಿಯ ಬೈಚಪ್ಪ ಎಂಬುವವನು ಶೆಟ್ಟಿಯ ಮಗನಾಗಿದ್ದ, ಈತನನ್ನೇ ತನ್ನ ಮಂತ್ರಿಯನ್ನಾಗಿಸಿಕೊಂಡ. ನಂತರದಲ್ಲಿ ಮುಮ್ಮಡಿಸಿಂಗ ದಂಪತಿಗಳಿಗೆ ಕಂಪಲಿಯ ಸೋಮೇಶ್ವರನ ವರಪ್ರಸಾದದಿಂದ ಪುತ್ರ ಭಾಗ್ಯ ಸಿಗುತ್ತದೆ. ಹೀಗಾಗಿ 'ಕಂಪಿಲರಾಯ' ಎಂದೇ ನಾಮಕರಣ ಮಾಡಲಾಗುತ್ತದೆ. ಕಾಲಾಕ್ರಮೇಣ ಕಂಪಿಲನಿಗೆ ಪಟ್ಟಾಭಿಷೇಕ ಮಾಡಿದ ಮೇಲೆ ಹರಿಹರದೇವಿ ಮತ್ತು ರತ್ನಾಜಿಯರನ್ನು ಕೊಟ್ಟು ವಿವಾಹ ಮಾಡಲಾಯಿತು. ಆದರೆ ಹರಿಯಾಲದೇವಿಗೆ ಪುತ್ರ ಸಂತಾನದ ಕೊರತೆಯಿತ್ತು. ಇದೇ ಸಂದರ್ಭದಲ್ಲಿ ಬಡದಂಪತಿಗಳಿಂದ ಮಗುವನ್ನು ಪಡೆದು ಅದಕ್ಕೆ 'ಕಾಟಣ್ಣ' ಎಂದು ಹೆಸರಿಟ್ಟು ಮಗನಂತೆ ಸಲಹುತ್ತಿದ್ದರು. ಕಾಲಾನಂತರ ಕಂಪಿಲ ದಂಪತಿಗಳು ಜಟ್ಟಂಗಿದುರ್ಗಕ್ಕೆ ಹೋಗಿ ಜಟ್ಟಿಂಗರಾಮೇಶ್ವರನ ದರ್ಶನ ಮಾಡಿಕೊಂಡು ಬಂದ ತರುವಾಯ ಹರಿಯಲಮ್ಮ ಗರ್ಭವತಿಯಾಗಿ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಆತನಿಗೆ 'ಕುಮಾರರಾಮ' ಎಂದೇ ನಾಮಕರಣ ಮಾಡಲಾಗುತ್ತದೆ. ಇದರಿಂದಾಗಿ ಎಲ್ಲರಿಗೂ ಮಹಾ ಸಂತೋಷವಾಗುತ್ತದೆ. ಇದೇ ಸಂತಸದಿಂದ ಕಂಪಿಲನು ಬೇಟೆಯಾಡಲು ಹೋದಾಗ, ಅಲ್ಲಿ ಒಂದು ವಿಶೇಷವಾದ ದೃಶ್ಯವನ್ನು ನೋಡಿದನು. ಅಂದರೆ ಮೊಲಗಳೇ ಬೇಟೆ ನಾಯಿಗಳ ಮೇಲೆ ತಿರುಗಿ ಬೀಳುತ್ತಿದ್ದುದನ್ನು ಕಂಡು ಅಚ್ಚರಿಗೊಂಡ ಕಂಪಿಲನು ಈ ಭೂಮಿ ಅಸಾಮಾನ್ಯ ಶಕ್ತಿಯನ್ನು ಹೊಂದಿದೆ ಎಂದು ಅರಿತು ಅಲ್ಲಿ ಒಂದು ದುರ್ಗವನ್ನು ಕಟ್ಟಿಸಿ ಅದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಳ್ಳುತ್ತಾನೆ. ಅದೇ "ಹೊಸಮಲೆದುರ್ಗ" ಆಗಿದೆ. ಕಾಲಾನಂತರ ಕಂಪಿಲನು ಹಾನಗಲ್ಲು, ನಿಡಗಲ್ಲು, ಮುದಗಲ್ಲು, ಆದವಾನಿ, ತೊರಗಲ್ಲು, ಬಾದಾಮಿ ಹೀಗೆ

ಹಲವು ಪ್ರದೇಶಗಳ ಮೇಲೆ ಧಾಳಿ ಮಾಡಿ ಅವುಗಳನ್ನು ತನ್ನ ಅಧೀನಕ್ಕೆ ತೆಗೆದುಕೊಂಡನು. ಇವರೆಲ್ಲರ ಜೊತೆ ಚಂದ್ರಗುತ್ತಿಯು ವಶವಾಗಿ ಕಪ್ಪಗಳನ್ನು ಸಲ್ಲಿಸಲು ಮುಂದಾದವು. ಆದರೆ ಗುತ್ತಿಯ ಜಗತಾಪಿರಾಯನಿಗೆ ಮಾತ್ರ ಕಪ್ಪ ಕೊಡಲು ಕಂಪಿಲನು ಸಿದ್ಧವಿರಲಿಲ್ಲ. ಹೀಗಿದ್ದ ಸಮಯದಲ್ಲಿ ಜಗತಾಪಿಯನ್ನು ಅವಮಾನಿಸಿದಾಗ, ರಾಮನ ಶೌರ್ಯ, ಹೋರಾಟವನ್ನು ಕಂಡು ಬೆರಗಾಗಿ ತನ್ನ ಮಗಳಾದ ರಾಮಲೆಯನ್ನು ರಾಮನಿಗೆ ಕೊಟ್ಟು ವಿವಾಹ ಮಾಡುತ್ತಾನೆ. ಹೀಗೆ ರಾಮನ ಸಾಹಸ ಹಾಗೂ ವ್ಯಕ್ತಿತ್ವ ಕುರಿತು ಉತ್ತರದ ಕಡೆಗೆ ತಲುಪುತ್ತಾ ಹೋದವು.

ಹೀಗೊಂದು ದಿನ ದಿಲ್ಲಿ ಸುಲ್ತಾನನಿಗೆ ರಾಮನ ಬಗ್ಗೆ ಹಲವು ಸಂಗತಿಗಳು ತಿಳಿದಾಗ ಅವನ ಮಗಳು ಬಾಬಮ್ಮ ರಾಮನನ್ನು ವಿವಾಹವಾಗಬೇಕೆಂಬ ಆಸೆಯನ್ನು ತಂದೆಗೆ ವ್ಯಕ್ತಪಡಿಸುತ್ತಾಳೆ. ಹೀಗಾಗಿ ರಾಮನನ್ನು ತನ್ನ ಅಧೀನ ಮಾಡಿಕೊಳ್ಳಲಿಕ್ಕೋಸ್ಕರ ತನ್ನ ಪಾದಗಳನ್ನು ಪಲ್ಲಕ್ಕಿಯಲ್ಲಿರಿಸಿಕೊಂಡು ಹೋಗಿ ದಕ್ಷಿಣದಲ್ಲಿನ ರಾಜರುಗಳು ಈ ಪಾದಗಳಿಗೆ ನಮಸ್ಕರಿಸಿ ಕಪ್ಪಗಳನ್ನು ನೀಡಬೇಕು ಎಂದು ಹೇಳಿ ಕಳಿಸುತ್ತಾನೆ. ಪಾದುಕೆಗಳಿಗೆ ಗೌರವ ತೋರಿಸಿ ದಕ್ಷಿಣದ ಹಲವು ರಾಜರುಗಳು ಕಪ್ಪಗಳನ್ನು, ಹೊನ್ನನ್ನು ಕಾಣಿಕೆಯಾಗಿ ನೀಡುತ್ತಾರೆ. ಅದೇ ರೀತಿ ವಜೀರನು ಕಂಪಿಲನ ಆಸ್ಥಾನಕ್ಕೆ ಬಂದಾಗ ಕುಮಾರರಾಮನು ದಿಲ್ಲಿಗೆ ಬರಬೇಕೆಂದೂ, ಈ ಪಾದುಕೆಗಳಿಗೆ ಗೌರವ ತೋರಿಸಿ ಕಪ್ಪ ನೀಡಬೇಕೆಂದೂ ಹೇಳಿದಾಗ ರಾಮನು ಪಲ್ಲಕ್ಕಿಯನ್ನು ಕೆಳಗಿಳಿಸಿ ಪಾದುಕೆಗಳನ್ನು ತಾನೇ ಮೆಟ್ಟಿ ನಿಂತು, 'ಇವು ನಮ್ಮ ಅಣ್ಣನಿಗೊಂದು ಜೊತೆ ಬೇಕು ತಂದು ಕೊಡು' ಎಂದು ಅಪಹಾಸ್ಯ ಮಾಡಿದನು. ಇದರಿಂದ ಅವಮಾನಕ್ಕೊಳಗಾಗಿ ವಜೀರನು ನಡೆದ ವಿಚಾರವನ್ನು ಸುಲ್ತಾನನಿಗೆ ಹೇಳಿದಾಗ ಸಿಟ್ಟಿಗೆದ್ದ ಸುಲ್ತಾನನು ಯುದ್ಧ ಮಾಡಲು ಆ ಸಂದರ್ಭಕ್ಕಾಗಿಯೇ ಕಾಯುತ್ತಿದ್ದನು. ಇದೇ ಸಂದರ್ಭದಲ್ಲಿ ಗುತ್ತಿಯ ಜಗತಾಪಿಯು ತನ್ನ ಅಳಿಯನಿಗಾಗಿ ಕುದುರೆಗಳನ್ನು ಬಳುವಳಿಯಾಗಿ ಕೊಟ್ಟನು. ಇದನ್ನು ಕಂಡ ಕಂಪಿಲನು ಕುಮಾರರಾಮನಿಗೆ "ನೀನು ಸಮರ್ಥನಾಗಿದ್ದರೆ ಓರಂಗಲ್ಲಿನ ಪ್ರತಾಪರುದ್ರದೇವನನ್ನು ಸೋಲಿಸಿ 'ಬೊಲ್ಲ' ಎಂಬ ಕುದುರೆಯನ್ನು ಗೆದ್ದುತಾ" ಎಂದು ಹೇಳಿದಾಗ ರಾಮನು ತಂದೆಗೆ ಶಪಥ ಮಾಡಿ ತನ್ನ ಪರಿವಾರದೊಂದಿಗೆ ಓರಂಗಲ್ಲಿಗೆ ಪ್ರಯಾಣ ಬೆಳೆಸಿದ. ಮಾರ್ಗ ಮಧ್ಯದಲ್ಲಿ ಗುಂಡಬ್ರಹ್ಮಯ್ಯನ ದೇವಾಲಯಕ್ಕೆ ಬಂದು ದರ್ಶನ ಪಡೆದು "ಬೊಲ್ಲನನ್ನು ಗೆದ್ದರೆ 'ಶೂಲದ ಹಬ್ಬ' ಮಾಡಿಸುವುದಾಗಿ ಹರಕೆ ಹೊತ್ತನು. ನಂತರ ಓರಂಗಲ್ಲಿನ ಮೇಲೆ ದಾಳಿ ಮಾಡಲು ಮುಂದಾದಾಗ ಅಲ್ಲಿನ 'ದೇವಿಶೆಟ್ಟಿಲಿಂಗನು ರಾಮನಿಗೆ ಪರವಾಗಿ ನಿಂತನು. ಆಗ ರಾಮನು ಓರಂಗಲ್ಲಿನ ಪ್ರತಾಪರುದ್ರನ ಮೇಲೆ ದಾಳಿ ಮಾಡಿ ನಂತರ ಯಪ್ಪತ್ತರಾಜನನ್ನು ಸೋಲಿಸಿ 'ಬೊಲ್ಲ'ನನ್ನು ಜೊತೆ ಕರೆತಂದನು. ಇದರಿಂದ ಸಂತಸಗೊಂಡ ಕಂಪಿಲನು ಬೊಲನನ್ನೇರಿ ಬರುವ ಕುಮಾರರಾಮನನ್ನು ಸಂತಸದಿಂದ ಬರಮಾಡಿಕೊಂಡನು. ಈ ವಿಚಾರ ತಿಳಿದ ಹುಳಿಯೂರಿನ ಮಾರಬೂಪಾಲನು ಕಂಪಿಲನ ಮೇಲೆ ದಾಳಿ ಮಾಡುವ ಸಂಚನ್ನು ಹೊಂದಿದನು. ಈ ವಿಚಾರ ತಿಳಿದ ರಾಮನು ತನ್ನ ಸೇನೆಯೊಂದಿಗೆ ಹುಳಿಯೂರಿನ ಮೇಲೆ ದಾಳಿ ಮಾಡಿ ಮಾರಭೂಪಾಲನನ್ನು

ಸೋಲಿಸಿದನು. ಇದರಿಂದ ಶರಣಾದ ಮಾರಭೂಪಾಲನು ರಾಮನೊಂದಿಗೆ ರಾಜಿ ಮಾಡಿಕೊಂಡು ಹೊನ್ನನ್ನು, ಗಿಳಿಯನ್ನು, ಐದು ಪ್ರದೇಶಗಳನ್ನು ಕೊಟ್ಟು ಗೌರವಿಸಿದನು.

ಹೀಗಿರುವಾಗ ಒಂದು ದಿನ ಬಾದೂರಖಾನನು ದಿಲ್ಲಿ ಸುಲ್ತಾನನ ವಿರುದ್ಧ ದಂಗೆಯೆದ್ದು, ಪ್ರಾಣಭಯದಿಂದ ದಕ್ಷಿಣಕ್ಕೆ ಓಡಿಬಂದು ಕಂಪಿಲನ ಆಶ್ರಯವನ್ನು ಕೋರಿದಾಗ ಕುಮಾರರಾಮನು ಬಾದೂರನಿಗೆ ರಕ್ಷಣೆ ನೀಡಿದನು. ಇದರಿಂದಾಗಿ ಸಿಟ್ಟಿಗೆದ್ದ ದಿಲ್ಲಿ ಸುಲ್ತಾನನು ಬಾದೂರನನ್ನು ಹಿಡಿಯಲು ಕುಮ್ಮಟಕ್ಕೆ ಸೈನ್ಯವನ್ನು ಕಳಿಸಿದನು. ತನ್ನ ಬೃಹತ್ ಸೇನೆಯೊಂದಿಗೆ ಕುಮ್ಮಟದ ಮೇಲೆ ದಾಳಿ ಮಾಡಿದಾಗ, ರಾಮನು ಬೊಲ್ಲನನ್ನೇರಿ ಬಂದು ಮಿಂಚಿನ ವೇಗದಂತೆ ಹೋರಾಡಿ ನೇಮಿಯ ಸೇನೆಯನ್ನು ಅಲ್ಲಿಂದ ಅಟ್ಟಿಸಿದನು. ಇದರಿಂದಾಗಿ ಮತ್ತಷ್ಟು ಕೋಪಗೊಂಡು ದಿಲ್ಲಿ ಸುಲ್ತಾನನು ಯೋಚನೆಯಲ್ಲಿರುವಾಗ ಓರಂಗಲ್ಲಿನ ರುದ್ರ ಮತ್ತು ಮುಂಗುಲಿರಾಯನಿಗೆ ಪತ್ರ ಬರೆದ ಬಲ್ಲಾಳನು ರಾಮನ ಮೇಲೆ ದಂಡೆತ್ತಿ ಹೋಗಬೇಕೆಂದು ನಿಶ್ಚಯಿಸಿದಾಗ ಎಲ್ಲರೂ ಒಂದೆಡೆ ಸೇರಿ ಹಾನಗಲ್ಲಿಗೆ ಬಂದು ಬೀಡು ಬಿಟ್ಟು ಚರ್ಚೆಯಲ್ಲಿದ್ದಾಗ ಈ ವಿಚಾರ ತಿಳಿದು ರಾಮನ ಪರಿವಾರವೂ ಜಾಗೃತವಾಯಿತು. ನಂತರದಲ್ಲಿ ಬಲ್ಲಾಳನ ದೊಡ್ಡ ದಂಡು ಕಂಪಿಲನ ರಾಜ್ಯದ ಮೇಲೆ ಮುತ್ತಿಗೆ ಹಾಕಿತು. ತಕ್ಷಣವೇ ರಾಮನು ಹಿರಿಯರ ಆಶೀರ್ವಾದದೊಂದಿಗೆ ಸೇನೆಯೊಡನೆ ಬಂದು ಪ್ರತಿ ದಾಳಿ ಮಾಡಿದನು. ಉಗ್ರವಾಗಿಯೇ ಹೋರಾಟ ಮಾಡಿ ಬಲ್ಲಾಳನ ಸೇನೆಯನ್ನು ಸೋಲಿಸಿ ಅಲ್ಲಿಂದ ಅಟ್ಟಿಸಿದನು. ನಂತರ ರಾಮನಿಗೆ ಕಪ್ಪ ಕಾಣಿಕೆ ಸಲ್ಲಿಸುತ್ತಾರೆ. ಹೀಗೆ ಒಂದಾದ ಮೇಲೆ ಒಂದರಂತೆ ಗೆದ್ದು ಬಂದ ಕುಮಾರರಾಮನು ಗುಂಡಬ್ರಹ್ಮನಿಗೆ ಹರಕೆ ಹೊತ್ತಿದ್ದ 'ಶೂಲದ ಹಬ್ಬ'ವನ್ನು ಆಚರಿಸಲು ಮುಂದಾದನು. ಈ ಹಬ್ಬದಲ್ಲಿಯೇ ರತ್ನಾಜಿ ಕುಮಾರರಾಮನನ್ನು ಕಂಡು ಮೋಹಪರವಶಳಾಗುತ್ತಾಳೆ. ಹೀಗೆ ಒಂದು ದಿನ ರಾಮನು ತನ್ನ ಪರಿವಾರದೊಡನೆ ಮುತ್ತಿನ ಚೆಂಡಾಟವಾಡಲು ರತ್ನಾಜಿಯು ಉಪ್ಪರಿಗೆಯಿಂದ ರಾಮನನ್ನೇ ವೀಕ್ಷಿಸುತ್ತಿರಲು, ಅಂತರಂಗದಲ್ಲೇ ವಿರಹಯಾತನೆಯನ್ನು ಅನುಭವಿಸುತ್ತಿದ್ದಳು. ಹೀಗಿರುವಾಗ ಆಕಸ್ಮಿತವಾಗಿ ರಾಮನು ಆಟವಾಡುತ್ತಿದ್ದ ಚೆಂಡು ರತ್ನಾಜಿಯ ಉಪ್ಪರಿಗೆಯ ಮೇಲೆ ಬಂದು ಬಿದ್ದಿತು. ಚೆಂಡನ್ನು ತರಲು ಗೆಳೆಯರ ಯತ್ನ ವಿಫಲವಾದಾಗ, ರಾಮನೇ ಚೆಂಡನ್ನು ತರಲು ಹೋಗುತ್ತಾನೆ. ಇದಕ್ಕಾಗಿಯೇ ಕಾಯುತ್ತಿದ್ದ ರತ್ನಾಜಿ ಕಾಮಾತುರಳಾಗಿ ರಾಮನನ್ನು ಆಲಂಗಿಸಲು ಹೋದಾಗ ಕೋಪಗೊಂಡ ರಾಮನು ನಿಂದಿಸುತ್ತಾ ಹೊರ ನಡೆದನು. ಆಗ ರತ್ನಾಜಿ ರಾಮನ ಮೇಲೆ ಸೇಡು ತೀರಿಸಿಕೊಳ್ಳುವುದಾಗಿ ಪ್ರತಿಜ್ಞೆ ಮಾಡಿ ಕಂಪಿಲನು ಬೇಟೆಯಿಂದ ಬಂದ ಮೇಲೆ ರತ್ನಾಜಿಯನ್ನು ಕಂಡು ತಬ್ಬಿಬ್ಬಾದನು. ಆಗ ರತ್ನಾಜಿಯು ಇಲ್ಲಸಲ್ಲದ ಆಪಾದನೆಗಳನ್ನು ರಾಮನ ಮೇಲೆ ಹಾಕಿದಾಗ ಸಿಡಿಮಿಡಿಗೊಂಡ ಕಂಪಿಲನು ಹಿಂದುಮುಂದು ಯೋಚಿಸದೆಯೇ ತನ್ನ ಮಂತ್ರಿ ಬೈಚಪ್ಪನನ್ನು ಕರೆಯಿಸಿ ರಾಮ ಮತ್ತು ಆತನ ಪರಿವಾರದವರ ತಲೆ ಕತ್ತರಿಸಿ ಎಂದು ಹೇಳಿದನು. ಬುದ್ಧಿವಂತನಾದ ಬೈಚಪ್ಪನು ರಾಮನ ಬಗ್ಗೆ ಅರಿತಿದ್ದನು. ಹೀಗಾಗಿ ರಾಮನ ಬದಲಿಗೆ ಕಳ್ಳರಾಮನ ತಲೆ ಕಡಿದು ತಂದು

ರಾಜನ ಮುಂದಿಟ್ಟನು. ಹಾಗೆಯೇ ರಾಣಿಯರ ಸಹಗಮನವನ್ನು ಕಪಟದಿಂದ ಮಾಡಿ ಎಲ್ಲರನ್ನು ನಂಬಿಸಿ, ನಂತರ ಅವರನ್ನು ನೆಲಮಾಳಿಗೆಯಲ್ಲಿ ಬಚ್ಚಿಟ್ಟನು.

ರಾಮನು ಸತ್ತಿರುವನೆಂದು ಇಡೀ ಲೋಕವೇ ನಂಬಿತ್ತು. ಆದರೆ ಬೈಚಪ್ಪನ ಚತುರತೆ ಎಲ್ಲರನ್ನು ಮೆಚ್ಚಿಸುವಂತಹದ್ದು. ಹೀಗೆ ರಾಮನು ಸತ್ತಿರುವ ಸಂಗತಿ ದಿಲ್ಲಿ ಸುಲ್ತಾನನಿಗೆ ತಿಳಿಯಲು ಸಂತಸಗೊಂಡು ನೇಮಿಯ ಸೇನೆಯನ್ನು ಕುಮ್ಮಟಕ್ಕೆ ಮುತ್ತಿಗೆ ಹಾಕಲು ಕಳಿಸಿದಾಗ, ಕಂಪಿಲನ ಸೇನೆಯೂ ವೀರಾವೇಶದಿಂದಲೇ ಹೋರಾಡುತ್ತದೆ. ಆದರೆ ನೇಮಿಯ ಸೇನೆಯು ಟಗರು ಮತ್ತು ಹುಂಜಗಳ ಕಾಳಗಗಳನ್ನು ಏರ್ಪಡಿಸಿ ಶಕುನ ನೋಡಿದಾಗ ನೇಮಿ ಸೇನೆಗೆ ಅಪಶಕುನವಾಯಿತು. ಇದರಿಂದ ಜಗ್ಗದೆ ನೇಮಿಯ ಸೇನೆಯು ನುಗ್ಗಿತು. ಕಂಪಿಲನ ಸೇನೆಯು ಹೋರಾಡುತ್ತಿರುವಾಗ, ಇನ್ನೇನು ಕೊನೆಯ ಹಂತದಲ್ಲಿ ನೇಮಿಯ ಸೇನೆ ವಿಜಯವನ್ನು ಹೊಂದಬೇಕಿತ್ತು. ಅಷ್ಟರಲ್ಲಿಯೇ ಬೈಚಪ್ಪನು ಒಬ್ಬ ರಾವುತನನ್ನು ಕರೆತಂದಾಗ ಮಿಂಚಿನಂತೆ ಬಂದು ಅಸಂಖ್ಯಾತ ಸೇನೆಯನ್ನು ಸದೆಬಡಿದನು. ಕೊನೆಗೆ ಈ ಸೇನೆಯನ್ನು ಗಡಿಯಾಚೆವರೆಗೂ ಅಟ್ಟಿಸಿಕೊಂಡು ಹೋದ ಮೇಲೆ ಇವನು ಬೇರೆ ಯಾರೂ ಅಲ್ಲ 'ಕುಮಾರರಾಮ'ನೇ ಎಂದಾಗ ಮಗನನ್ನು ಕಂಡ ತಕ್ಷಣವೇ ಕಂಪಿಲನಿಗೆ ಪರಮಾನಂದವಾಯಿತು. ಕಂಪಿಲನಿಗೆ ಕಣ್ತುಂಬಿ ಬಂದವು. ಇದರಿಂದ ಎಲ್ಲರಿಗೂ ಹರ್ಷವಾಯಿತು. ಈ ವಿಚಾರ ತಿಳಿದ ರತ್ನಾಜಿಯು ಆತ್ಮಹತ್ಯೆಯನ್ನು ಮಾಡಿಕೊಂಡಳು. ಇವಳಂತೆ ಸಂಗಿಯೂ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಹೀಗೆ ರಾಮನಿಗೆ ನಿರಂತರ ಜಯಗಳು ಲಭಿಸುತ್ತಾ ಹೋದವು. ಮತ್ತೊಂದು ಕಡೆ ಸುಲ್ತಾನನು ಎರಡು ಬಾರಿ ಸೋತು ಕಂಗಾಲಾದನು. ಹೀಗೆ ಸುಲ್ತಾನನು ನೇಮಿಯ ಮೇಲೆ ದೂಷಿಸುತ್ತಿರುವಾಗ ಅದೇ ಸೇನೆಯಲ್ಲಿದ್ದ ಮಾದಗಿತ್ತಿಯಾದ ಮಾತಂಗಿ ಎಂಬಾಕೆ 'ರಾಮನನ್ನು ಗೆದ್ದು ಬರುವುದಾಗಿ' ಹೇಳಿದಳು. ಸುಲ್ತಾನನು ಸ್ತ್ರೀಯಿಂದ ಇದು ಸಾಧ್ಯವೇ ಎಂದುಕೊಳ್ಳುತ್ತಾ, ಒಂದು ಕಡೆ ಮಗಳ ಪ್ರೇಮವನ್ನು, ಇನ್ನೊಂದು ಕಡೆ ತನಗೆ ಎರಡು ಬಾರಿ ಅವಮಾನವಾಗಿರುವುದನ್ನು ನೆನೆದು ಸುಲ್ತಾನನು ಒಪ್ಪಿದನು. ಮಾತಂಗಿಯ ಸೇನೆ ಬೃಹತ್ತಾಗಿಯೇ ಹೊರಟು ಬಂದಿತು. ರಾಮನು ತಂದೆ ತಾಯಿಯರ ಆಶೀರ್ವಾದ ಪಡೆದು ಕಾಟಣ್ಣ ಮತ್ತು ಪರಿವಾರದವರ ಜೊತೆಗೆ ಯುದ್ಧಕ್ಕೆ ಮೊದಲಾದಾಗ ರಾಮನ ಸೇನೆಯು ಜಯವನ್ನು ತಂದುಕೊಂಡಿತು. ಇದರಿಂದಾಗಿ ಮಾತಂಗಿಯ ಸೇನೆ ಹಿಂತಿರುಗುತ್ತಿದ್ದಾಗ ರಾಮನ ಸೇನೆಯಲ್ಲಿದ್ದ ತೆಲುಗರು ಮಾತಂಗಿಗೆ ಸಹಾಯ ಮಾಡುವುದಾಗಿ ಬೆಂಬಲಿಸಿದರು. ಇದರಿಂದಾಗಿ ಮಾತಂಗಿಯು ಪುನಃ ಸೇನೆಯ ಜೊತೆಗೆ ಕುಮಾರರಾಮನ ಮೇಲೆ ದಾಳಿ ಮಾಡಲು ಮುಂದಾದಳು. ಆದರೆ ರಾಮನು ಒಬ್ಬ ಸ್ತ್ರೀ ಜೊತೆ ಹೋರಾಡುವುದು ತರವಲ್ಲವೆಂದು ತಿಳಿದು ಹಿಂದೆ ಸರಿದನು. ಇದೇ ಸಮಯವನ್ನು ಕಾಯುತ್ತಿದ್ದ ಮಾತಂಗಿಯು ರಾಮನ ಮೇಲೆ ನಿರಂತರವಾಗಿ ಬಾಣ ಪ್ರಯೋಗ ಮಾಡಿದಳು. ರಾಮನು ಕೊನೆಯವರೆಗೂ ಹೋರಾಡಿ ಕಾಟಣ್ಣನಿಗೆ ತಂದೆ, ತಾಯಿ, ಮಡದಿಯರನ್ನು ಶತ್ರುಗಳ ಪಾಲಾಗದಂತೆ ಸಹಗಮನ

ಮಾಡುವಂತೆ ಹೇಳಿ ಕಳಿಸಿದನು. ಕಾಟಣ್ಣನು ರಾಮನ ಸ್ಥಿತಿಯನ್ನು ಹೇಳಿ ಹಿಂತಿರುಗಬೇಕಾದರೆ ಆತನೂ ಮಡಿದನು. ರಾಮನ ಪರಿವಾರದವರೂ ಪ್ರಾಣ ತೊರೆದರು. ಆಗ ಮಾತಂಗಿಯು ರಾಮನ ತಲೆಯನ್ನು ಕತ್ತರಿಸಿ ರುಂಡವನ್ನು ಸುಲ್ತಾನನ ಬಳಿ ಕಳಿಸಿದಳು. ಆಗ ಬಾಬಾಮ್ಮ ಚಿತೆಯೇರಲು ಮುಂದಾದಾಗ ಸುಲ್ತಾನನು ಸಂತೈಸುತ್ತಾನೆ. ನಂತರದಲ್ಲಿ ಸುಲ್ತಾನನ ನಾಡಿನಲ್ಲಿ ಅಲ್ಲಲ್ಲಿ ಅಪಶಕುನಗಳು, ಭಯೋತ್ಪಾದನೆಗಳುಂಟಾಗುತ್ತವೆ.ಅನ್ಯರ ಸಲಹೆಯ ಮೇರೆಗೆ ಆ ರುಂಡವನ್ನು ರೂಪದೇವಯ್ಯ ಎಂಬಾತನು ಕುಮ್ಮಟದಿಂದ ಬಂದು, ಊರಿಗೆ ಕೊಂಡೊಯ್ದು ಅದನ್ನು ಕಾಶಿಗೆ ಕಳಿಸುತ್ತಾನೆ. ನಂತರ ಅದು ಲಿಂಗಾಕೃತಿಯಾಯಿತು.

ಪಾಂಚಾಳಗಂಗನ ಕೃತಿಯಾದ 'ಚೆನ್ನರಾಮನ ಸಾಂಗತ್ಯ'ವು ಜನಸಾಮಾನ್ಯರಿಗೆ ಪೂರಕವಾಗಿರುವ ಸರಳವಾದ ಶೈಲಿಯಲ್ಲಿ ರಚನೆಯಾಗಿದೆ. ಈ ಕಾವ್ಯವು ಸಾಹಿತ್ಯೇತರವಾಗಿದ್ದು, ಯಾವುದೇ ಉತ್ಪ್ರೇಕ್ಷೆಗಳಿಗೆ ಎಡೆಕೊಡದೆ, ವರ್ಣನೆಗಳಿಗೆ ಅವಕಾಶವಿಲ್ಲದಂತೆ ಸ್ಫುಟವಾಗಿ ಹೇಳಲು ಮುಂದಾಗಿರುವುದು, ಕವಿಯ ಜಾಣತನವಾಗಿದೆ. ಜನಸಾಮಾನ್ಯರಿಗಾಗಿಯೇ ಸರಳ ಭಾಷೆಯಲ್ಲಿ ರಚಿಸಬೇಕು ಎಂಬ ಉದ್ದೇಶವಿತ್ತು ಎಂದೆನಿಸುತ್ತದೆ. ಪುರಾಣ ಕವಚವನ್ನು ತೊಡಿಸುವ ಗೋಜಿಗೆ ಕವಿಯು ಹೋಗಲ್ಲ ಎಂಬುದು ಇಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಕವಿಯು ಸಾಂಪ್ರದಾಯಿಕ ಮೌಲ್ಯಗಳಿಗೆ, ಕೆಲವು ಧಾರ್ಮಿಕ ನಂಬಿಕೆಗಳಿಗೆ ಗೌರವ ಸೂಚಿಸುತ್ತಾನೆ ಎನ್ನುವುದು ಕೆಲವು ಘಟನೆಗಳನ್ನು ಒತ್ತಾಗಿ ಹೇಳಿರುವುದನ್ನು ನೋಡಿದರೆ ಅರ್ಥವಾಗುತ್ತದೆ. ಕುಮಾರರಾಮನು 'ಬೊಲ್ಲ'ನನ್ನು ಗೆದ್ದು ತರಬೇಕೆಂಬ ಹಠ ತೊಟ್ಟಾಗ ಗುಂಡಬ್ರಹ್ಮಯ್ಯನಿಗೆ ಬೊಲ್ಲನನ್ನು ಗೆದ್ದರೆ 'ಶೂಲದ ಹಬ್ಬ' ಮಾಡಿಸುವುದಾಗಿ ಹರಕೆ ಹೊರುತ್ತಾನೆ. ಅಂದರೆ ಇಲ್ಲಿ ನಂಬಿಕೆಗೆ ಪ್ರಾಶಸ್ತ್ಯ ಕೊಡುವಂತಹ ಸಂದರ್ಭ ಕಾಣಿಸುತ್ತದೆ. ಹಾಗೆಯೇ ರಾಮನು ಸತ್ತಿದ್ದಾನೆ ಎಂಬ ಸುಳ್ಳು ಸುದ್ದಿ ತಿಳಿದು ನೇಮಿಯ ಸೇನೆಯು ದಿಲ್ಲಿಯಿಂದ ಬಂದ ಮಾರ್ಗ ಮಧ್ಯದಲ್ಲಿ ಟಗರು ಮತ್ತು ಹುಂಜಗಳ ಕಾಳಗಗಳನ್ನು ಏರ್ಪಡಿಸಿ ಶಕುನ ನೋಡುತ್ತಾರೆ. ಅದು ಅಪಶಕುನವೆಂದೇ ತೋರಿಸುತ್ತದೆ. ಇದು ಸಮಾಜದ ನಂಬಿಕೆಗಳ ಸಂಕೋಲೆಯನ್ನು ತೋರಿಸುತ್ತದೆ. ನಂಬಿಕೆ, ಶಕುನಗಳು, ದೈವಭಕ್ತಿಗಳು ಈ ಕಾವ್ಯದ ಮೂಲಕ ಆಗಿನ ಸಮಾಜವನ್ನು ಹಲವು ಮುಖಗಳಲ್ಲಿ ಬಿಂಬಿಸುತ್ತಾ ಹೋಗುತ್ತದೆ. ಒಳಿತು ಕೆಡುಕುಗಳು ಜನಸಾಮಾನ್ಯರಷ್ಟೇ ಅಲ್ಲ, ರಾಜಮನೆತನದವರನ್ನು ಬಿಡುವುದಿಲ್ಲ ಎನ್ನಲು ಸಾಕ್ಷಿಯಾಗಿ ಹರಿಯಾಲದೇವಿಯನ್ನು ರಾಮನು ಮುತ್ತಿನ ಚೆಂಡನ್ನು ಕೇಳಲು, ಅದು ಕೆಡಕಾಗುವುದೆಂದು, ರಾಮನಿಂದ ಪೂಜೆ ಮಾಡಿಸಿ ಹೊರತೆಗೆಯುತ್ತಾಳೆ. ಈ ತರಹದ ನಂಬಿಕೆಗಳು ಸಮಾಜವನ್ನು ಸುತ್ತುವರಿಯುವುದರ ಜೊತೆ ಜೊತೆಗೆ ಸತ್ಯವನ್ನು ಹೇಳುತ್ತವೆ.

ಈ ಕಾವ್ಯದಲ್ಲಿ ಕಂಡ ಹಾಗೆ ಮಾತಂಗಿಯನ್ನು 'ಮಾದಿಗಿತ್ತಿ' ಎಂದಿರುವುದು ವಿಶೇಷವಾಗಿದೆ. ಮತ್ತು ಹೊಸದಾಗಿ ಕೇಳಿ ಬರುತ್ತದೆ. ಇದಕ್ಕೆ ಯಾವುದೇ ಪುರಾಣಕವಚವನ್ನು ತೊಡಿಸಿಲ್ಲ. ಇಲ್ಲಿನ ಜಾತಿಯ ಎಳೆಯನ್ನು ಸೂಕ್ಷ್ಮವಾಗಿ ಹರಿಯಬಿಟ್ಟಿದ್ದಾನೆ. ಇಲ್ಲಿ ಮೆಚ್ಚಲೇಬೇಕಾದ ಇನ್ನೊಂದು ವಿಚಾರವೆಂದರೆ ಲಿಖಿತ ದಾಖಲೆಗಳಿಗೆ, ಕೈಫಿಯತ್ತುಗಳಿಗೆ, ಜನಪದ ಕಥೆಗಳಿಗೆ ಸಾಕ್ಷಿಯಾದಂತೆ

ಕೃತಿಯು ರಚನೆಯಾಗಿರುವುದು ಗಮನಾರ್ಹವಾಗಿದೆ. ಯುದ್ಧಗಳನ್ನು ಕುರಿತು ಕವಿಯು ಸ್ಫುಟವಾಗಿಯೇ ತಿಳಿಸುವ ಪ್ರಯತ್ನ ಮಾಡಿದ್ದರೂ, ಹೆಚ್ಚು ವರ್ಣನಾತ್ಮಕತೆಗೆ ಅವಕಾಶ ನೀಡಿಲ್ಲ. ಕುಮಾರರಾಮನಿಗೆ ಆತನ ವ್ಯಕ್ತಿತ್ವ, ಸಾಹಸ, ಪರಾಕ್ರಮಗಳಿಗೆ ಒತ್ತನ್ನು ನೀಡಿರುವುದು ಗಮನಕ್ಕೆ ಬರುತ್ತದೆ. ಇಲ್ಲಿ ದಿಲ್ಲಿ ಸುಲ್ತಾನನ ಮಗಳ ಹೆಸರು 'ಬಾಬಮ್ಮ' ಎಂದಿರುವುದು, ಗುತ್ತಿಯ ಜಗತಾಪಿಯ ಮಗಳು 'ರಾಮಲದೇವಿ' ಎಂದೂ, 'ಬೊಲ್ಲ'ನು ರಾಮನ ವಶವಾಗಲು ಹಿನ್ನೆಲೆ ಕಾರಣಗಳು ಇವೆಲ್ಲವೂ ಈ ಕಥೆಯ ಹೊಸತನವನ್ನು ಬಿಂಬಿಸುತ್ತವೆ. ಈ ಕೃತಿಯಲ್ಲಿ ಜನಸಾಮಾನ್ಯನಿಗೂ ವಿಶೇಷ ಸ್ಥಾನ ನೀಡಿರುವುದು ಕವಿಯ ವೈಶಾಲ್ಯತೆಯನ್ನು ತೋರಿಸುತ್ತದೆ. ಅಂದರೆ ಕುಮಾರರಾಮನ ತಲೆಯ ಬದಲು ಈತನ ಸ್ನೇಹಿತನಾಗಿದ್ದ 'ಕಳ್ಳರಾಮನು' ಏನೂ ಯೋಚಿಸದೆ ತನ್ನ ತಲೆಯನ್ನು ಕಡಿದು ಕೊಡುವುದು ಸಾಮಾನ್ಯನ/ಬಡವನ ದೊಡ್ಡತನಕ್ಕೆ ಸಾಕ್ಷಿಯಾದಂತಿದೆ. ಕಾವ್ಯದಲ್ಲಿ ಅಲ್ಲಲ್ಲಿ ಸಂದರ್ಭೋಚಿತವಾಗಿ ಅಪಹಾಸ್ಯ ಮಾಡುವುದು, ಗಾದೆ ಮಾತುಗಳು, ಪ್ರತಿಜ್ಞೆ, ಶಪಥಗಳಿಗೆ ಪ್ರಾಮುಖ್ಯತೆ ನೀಡಿರುವುದು ಕಥೆಗೆ ಪುಷ್ಠಿ ನೀಡಿದೆ. ಲಿಖಿತವಾಗಿಯೇ ವ್ಯಕ್ತಿಗಳ ಭಾವನೆಗಳನ್ನು ಸ್ತ್ರೀಯರ ಮನೋಭಿಲಾಷೆಗಳು, ಮನದಾಳದ ಭಾವನೆಗಳನ್ನು ಚಿತ್ತಾಕರ್ಷಕವಾಗಿ ಮೂಡಿಬಂದಿವೆ.

ಒಟ್ಟಾರೆ ಹೇಳುವುದಾದರೆ ಕವಿಯು ಕುಮಾರರಾಮನನ್ನು ಕುರಿತು ಹೆಚ್ಚಾಗಿ ವರ್ಣಿಸುವ ಶ್ರಮ ತೆಗೆದುಕೊಂಡಿಲ್ಲ. ಘಟನೆಗಳಿಗೆ ಪ್ರಾಮುಖ್ಯತೆ ಕೊಡುವ ಮೂಲಕ ಸ್ಪಷ್ಟತೆಯನ್ನು ನೀಡಿರುವುದು ಅರ್ಥವಾಗುತ್ತದೆ.

ಇಲ್ಲಿಯವರೆಗೆ ಚರ್ಚಿಸಿರುವ ಮೂರು ಕೃತಿಗಳಿಗೆ ಸಂಬಂಧಿಸಿದಂತೆ ಮೂವರು ಕವಿಗಳಾದ ನಂಜುಂಡ, ಮಹಾಲಿಂಗಸ್ವಾಮಿ ಮತ್ತು ಪಾಂಚಾಳಗಂಗರು ವಿಭಿನ್ನ ರೀತಿಯಲ್ಲಿ, ಪುರಾತನ ಕವಿಗಳ ಭಾವನೆಗಳನ್ನು ಅಳವಡಿಸಿಕೊಳ್ಳುತ್ತಾ ತಮ್ಮದೇ ಆದ ಕಥಾಸಾಹಿತ್ಯ ನಿರೂಪಣೆ ಮಾಡಿದ್ದಾರೆ. ಈ ಮೂರು ಕಾವ್ಯಗಳ ಪ್ರತಿಗಳ ಸಂಖ್ಯೆ, ಪದ್ಯಗಳ ಸಂಖ್ಯೆಯಲ್ಲಿ ವ್ಯತ್ಯಾಸಗಳಿದ್ದರೂ ಕೆಲವು ಘಟನೆಗಳಲ್ಲಿ ಹೋಲಿಕೆಗಳು, ವ್ಯತ್ಯಾಸಗಳು, ಹೊಸ ವಿಚಾರಗಳು ಕಂಡುಬಂದಿವೆ.

**ಆಧುನಿಕ ಕನ್ನಡ ಸಾಹಿತ್ಯ**

ಸಂಸ್ಕೃತ ಸಾಹಿತ್ಯದಿಂದ ಬಿಡುಗಡೆ ಹೊಂದುವ ಸಲುವಾಗಿ ಹುಟ್ಟಿಕೊಂಡಂತಹ ಸಾಹಿತ್ಯ ರಚನೆ ಆಧುನಿಕ ಕನ್ನಡ ಸಾಹಿತ್ಯವಾಗಿದೆ. ಆಧುನಿಕ ಕನ್ನಡ ಸಾಹಿತ್ಯವು ಹೊಸ ಆವಿಷ್ಕಾರ, ಹೊಸ ಚಿಂತನೆ ಮತ್ತು ಹೊಸ ಆಲೋಚನಾ ಕ್ರಮಗಳನ್ನು ಬದಲಾಗುತ್ತಿರುವ ಬದುಕಿನ ಜೊತೆಗೆ ಬದಲಾಗುತ್ತಿರುವ ದೃಷ್ಟಿಕೋನವನ್ನು ತನ್ನೊಡಲಲ್ಲಿ ಇಟ್ಟುಕೊಂಡು ರೂಪತಾಳಿದೆ. ಭಿನ್ನ ಭಿನ್ನ ಆಲೋಚನಾ ಕ್ರಮದಂತೆ ಅದು ಮಂಡಿಸುವ ರೂಪಗಳು ಸಹ ಬದಲಾದವು. ಹಾಗಾಗಿಯೇ ಹಲವಾರು ಸಾಹಿತ್ಯ ಪ್ರಕಾರಗಳು ಕೂಡಾ ಹುಟ್ಟಿಕೊಂಡವು. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಧ್ಯಕಾಲೀನ ಸಮಾಜ, ಸಂಸ್ಕೃತಿ, ಕಥಾವಸ್ತುಗಳನ್ನಿಟ್ಟುಕೊಂಡು ರಚನೆಯಾಗಿರುವ ಸಾಹಿತ್ಯ ಪ್ರಕಾರಗಳನ್ನು ಅಳವಡಿಸಿಕೊಳ್ಳಲಾಗಿದೆ.

೧. ನಾಟಕಗಳು

೨. ಕಾದಂಬರಿಗಳು

೩. ಕಥೆಗಳು

೪. ಇತರೆ ಕೃತಿಗಳು

**೧. ನಾಟಕಗಳು**

'ನಾಟಕ'ವು ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಒಂದಾಗಿದ್ದರೂ, ಇದು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಅಲ್ಲಲ್ಲಿ ಬಳಕೆಯಾಗಿದ್ದರೂ, ಪ್ರತ್ಯೇಕ ಪ್ರಕಾರವಾಗಿ ಕಂಡುಬಂದಿದ್ದು, ಆಧುನಿಕ ಕನ್ನಡ ಸಾಹಿತ್ಯದಲ್ಲಿ ಎಂದು ಹೇಳಬಹುದು. ನಿಜವಾಗಿಯೂ ನಾಟಕ ಪ್ರಕಾರವು ಹುಟ್ಟಿಕೊಂಡಿದ್ದು, ೧೯ನೇ ಶತಮಾನದ ಉತ್ತರಾರ್ಧದಲ್ಲಿ ಎಂಬುದು ಸತ್ಯ. ನಂತರ ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಇದು ಹುಟ್ಟಿ ಬೆಳೆಯತೊಡಗಿತು. ನಾಟಕ ಪ್ರಕಾರವು ಪ್ರಾರಂಭದಲ್ಲಿ ಬಿ.ಎಂ.ಶ್ರೀ, ಟಿ.ಪಿ. ಕೈಲಾಸಂ, ಪರ್ವತವಾಣಿ, ಶ್ರೀರಂಗ, ರಾಜರತ್ನಂ, ಸಂಸ, ಜಿ.ಬಿ. ಜೋಶಿ, ಕಂಬಾರ, ದ.ರಾ. ಬೇಂದ್ರೆ, ಮಾಸ್ತಿ, ಕುವೆಂಪು ಹಾಗೂ ಕಾರಂತರಿಂದ ರಚನೆಯಾಗಿ ಬೆಳೆಯತೊಡಗಿತು. ಇದಕ್ಕೆ ಮುಖ್ಯ ಪ್ರೇರಣೆ ಆಧುನಿಕ ಶಿಕ್ಷಣ ಪದ್ಧತಿ. ಹೀಗೆ ಕುಮಾರರಾಮನನ್ನು ಕಥಾವಸ್ತುವನ್ನಾಗಿಸಿಕೊಂಡು ನಾಟಕಗಳು ರಚನೆಯಾಗುತ್ತಾ ಬಂದವು. ಪ್ರಮುಖವಾಗಿ 'ಕುಮ್ಮಟ ವಲ್ಲಭ', 'ರತ್ನಾಜಿ', 'ಪರದಾರ ಸೋದರ ಮತ್ತು ಕಡುಗಲಿರಾಮ' ಹಾಗೂ 'ಗಂಡುಗಲಿ ಕುಮಾರರಾಮ' ಸೇರಿದಂತೆ ಹಲವು ನಾಟಕಗಳು ರಚನೆಯಾಗುತ್ತಾ ಬಂದಿವೆ. ನಾಟಕ ರಚನಾಕಾರರಲ್ಲಿ 'ವಸುದೇವ ಭೂಪಾಲಂ', 'ವೀರಣ್ಣ ರಾಜೂರ', 'ಎಸ್. ಉಮಾಪತಿ', 'ಹುಯಿಲಗೋಳ ನಾರಾಯಣರು', 'ಟಿ.ಎಸ್. ಕರಿಬಸಯ್ಯ ಹಾಗೂ 'ವಾದಿರಾಜ ಕನಕಗಿರಿ'ಯವರು ಪ್ರಮುಖರಾಗಿದ್ದಾರೆ.

**ರತ್ನಾಜಿ – ವೀರಣ್ಣ ರಾಜೂರ**

ಈ ನಾಟಕವು ಐತಿಹಾಸಿಕ ಹಿನ್ನೆಲೆಯುಳ್ಳ ಒಂದು ರೇಡಿಯೋ ನಾಟಕವಾಗಿದೆ. ಕುಮಾರರಾಮನಿಗೆ ಸಂಬಂಧಿಸಿದ ಹಲವು ನಾಟಕಗಳು ಪುರುಷ ಪಾತ್ರಗಳಿಗೆ ಪ್ರಾಧಾನ್ಯತೆ ನೀಡಿದ್ದರೆ, ರಾಜೂರರವರ ಈ ನಾಟಕವು ಮಹಿಳಾ ಪಾತ್ರಕ್ಕೆ ಮನ್ನಣೆ ನೀಡುವ ಮೂಲಕ ರಚಿಸಲಾಗಿದೆ. ರತ್ನಾಜಿ ಪಾತ್ರದ ಮೂಲಕ ಇಡೀ ಕಥಾಹಂದರ ಬೆಳೆಯುತ್ತದೆ. ಇಲ್ಲಿ ಕುಮಾರರಾಮನ ಶೌರ್ಯತನ, ವಿದ್ಯೆ, ರೂಪ, ಗುಣ ಪರಾಕ್ರಮಗಳನ್ನು ವೈಭವೀಕರಿಸಲಾಗಿದೆ. ರತ್ನಾಜಿಯ ಪಾತ್ರಕ್ಕೆ ಚ್ಯುತಿಬಾರದಂತೆ ಕುಮಾರರಾಮನಿಗೆ ಗೌರವ ತರುವ ಸನ್ನಿವೇಶವನ್ನು ಈ ನಾಟಕ ಕೃತಿಯಲ್ಲಿ ಸೃಷ್ಟಿಸಲಾಗಿದೆ. ನಾಟಕದ ಪ್ರಾರಂಭಕ್ಕೆ ಮುನ್ನ ಕುಮ್ಮಟದುರ್ಗದ ಸಮಗ್ರ ಚಿತ್ರಣವನ್ನು ಚಿತ್ರಿಸಲಾಗಿದೆ. ಇದು ನಾಟಕದ ಬೆಳವಣಿಗೆಗೆ ತಳಹದಿಯಾಗಿದೆ.

ಈ ನಾಟಕವನ್ನು ಪ್ರಾರಂಭದಲ್ಲಿ ಪ್ರೇಮಯುದ್ಧವನ್ನು ತೋರಿಸಿ ಕೊನೆಗೆ ರಾಜ್ಯವನ್ನು ರಕ್ಷಣೆ ಮಾಡುವ ಯುದ್ಧದಲ್ಲಿ ಕೊನೆಗೊಳಿಸಲಾಗಿದೆ. ಈ ನಾಟಕವು ಸ್ತ್ರೀಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟಿದ್ದರೂ ಪ್ರಧಾನವಾಗಿ ಎದ್ದುಕಾಣುವುದು ರಾಮನ ಪಾತ್ರವಾಗಿದೆ. ರತ್ನಾಜಿಯ ಅಂತರಂಗದ ತಳಮಳವನ್ನು ತೋರಿಸುವ ಮೂಲಕ ರತ್ನಾಜಿಯೇ ಇಲ್ಲಿ ಕೇಂದ್ರಬಿಂದು ಎಂದು ಕಂಡರೂ ನಾಟಕದ ಆಶಯವನ್ನು ಗಮನಿಸಿದರೆ ಕುಮಾರರಾಮನ ಶೌರ್ಯ, ತ್ಯಾಗ, ಉತ್ತಮ ಗುಣಗಳೇ ಹೆಚ್ಚಾಗಿ ಕಂಡುಬಂದಿದೆ. ಈ ನಾಟಕದಲ್ಲಿ ರತ್ನಾಜಿಯ ಮನೋವಿಕಾರಗಳನ್ನು ಬಿಂಬಿಸುವ ಮೂಲಕ ರತ್ನಾಜಿಯ ಆತ್ಮಶಕ್ತಿಗೆ ಪೆಟ್ಟುಕೊಟ್ಟಂತೆ ಕಂಡುಬಂದಿದೆ. ರಾಜೂರರವರು ಕವಿ ನಂಜುಂಡನ ಜಾಡನ್ನೇ ಹಿಡಿದು ಕೆಲವು ಮಾರ್ಪಾಡುಗಳನ್ನು ಮಾಡಿರುವುದು ತಿಳಿದುಬರುತ್ತದೆ. ರಾಜೂರರವರು ನಾಟಕದಲ್ಲಿ ಚರಿತ್ರೆಯ ಆಯಾಮಗಳನ್ನು ತೋರಿಸಲು ಪ್ರಯತ್ನಿಸಿದ್ದಾರೆ. ನಾಟಕದಲ್ಲಿ 'ಸಂಗಾಯಿ' ಪಾತ್ರದ ಮೂಲಕ 'ಅಮ್ಮಾ ಹಿರಿಯ ರಾಯರ ಕಿರಿಯ ರಾಣಿಯವರ' ಎಂಬ ಸಂಭಾಷಣೆಯನ್ನು ಕೇಳಿದಾಗ ಕಂಪಿಲನ ರಾಣಿ 'ರತ್ನಾಜಿ' ಎಂದು ಅರ್ಥವಾಗುತ್ತದೆ.

ರತ್ನಾಜಿ ನಾಟಕದ ಪ್ರತಿಯೊಂದು ಅಂಕಣಕ್ಕೆ 'ಅಲೆ' ಎಂದು ಹೆಸರಿಸಿ ಹೊಸ ಮೆರುಗನ್ನು ನೀಡಿದ್ದಾರೆ. ಸಂಗಾಯಿಯು ರತ್ನಾಜಿಗೆ ಹೀಗೆ ಪರಿಚಯಿಸುತ್ತ "ಕೇಳಿ ರಾಣಿಯವರೇ, ಅಲ್ಲಿ ನೋಡಿ ಮುಂದೆ ಹೊರಟಿರುವವರು ರಾಯದುರ್ಗದ ರಾಮದೇವರು. ಅವರ ಹಿಂದಿನವರು ಉದಯಗಿರಿಯ ಸಂಗಮ ದೇವರು, ಅವರ ಪಕ್ಕದಲ್ಲಿರುವವರು ಪೆನುಗೊಂಡೆಯ ಪಾಪರಾಜರು, ಮಧ್ಯದಲ್ಲಿರುವವರು ಆದವಾನಿಯ ಭಾವಸಂಗಮರು" ಎಂದು ಹೇಳುತ್ತಾಳೆ. ಈ ಸಂಭಾಷಣೆಯ ಶೈಲಿ, ಸ್ಥಳ ಚರಿತ್ರೆಯನ್ನು ಸೂಚಿಸುವಂತಿದೆ. ಹಾಗೆಯೇ ಕುಮ್ಮಟದುರ್ಗದ ಸಮಕಾಲೀನ ರಾಜ್ಯಗಳನ್ನು ಕುರಿತು ಮಾಹಿತಿ ಒದಗಿಸುವಂತಿದೆ. ರಾಜೂರ ಅವರು ಈ ನಾಟಕವನ್ನು ಚಾರಿತ್ರಿಕ ಅಂಶಗಳನ್ನೇ ಮನದಲ್ಲಿಟ್ಟುಕೊಂಡು ಹೆಣೆದಂತಹ ಹಲವು ಚಾರಿತ್ರಿಕ ಘಟನೆಗಳು, ತಿರುವುಗಳು ಬಂದೊದಗುವುದನ್ನು ಕಾಣಬಹುದು.

**ಕುಮ್ಮಟ ವಲ್ಲಭ-ವಸುದೇವ ಭೂಪಾಲಂ**

ಈ ನಾಟಕದಲ್ಲಿ ಲೇಖಕರು ಜಾತಿಯನ್ನು ಲೆಕ್ಕಿಸದೆ ಪ್ರೇಮದ ಸ್ವರೂಪ ದುರಂತದಲ್ಲಿ ಕೊನೆಯಾಗುವುದನ್ನು ಚಿತ್ರಿಸಿದ್ದಾರೆ. ಇದು ಸಂವಾದ ಶೈಲಿಯಲ್ಲಿದ್ದು, ಸಂಭಾಷಣೆಯ ಮೂಲಕ ವ್ಯಕ್ತಿ ಚಿತ್ರಗಳನ್ನು ಮೂಡಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿ ವಸ್ತುನಿಷ್ಠತೆಯಿದ್ದು, ಒಂದು ಕಡೆಯಿಂದ ಪೌರಾಣಿಕತೆ, ಇನ್ನೊಂದು ಕಡೆಯಿಂದ ಚರಿತ್ರೆಯ ಮೂಲಗಳಿಂದ ಈ ನಾಟಕವು ಮೌಲ್ಯತೆಯನ್ನು ಪಡೆದುಕೊಂಡಿದೆ. ವಸುದೇವರವರು ಬುದ್ಧಿವಂತಿಕೆಯಿಂದ ಪಾತ್ರಗಳ ಮೂಲಕ ಧರ್ಮ, ಸಮಾನತೆಯನ್ನು ಗಟ್ಟಿಗೊಳಿಸಿದ್ದಾರೆ. ಧರ್ಮಾತೀತ ಸಮಾಜವಾಗಬೇಕು ಎಂಬುದು ಈ ನಾಟಕದ ಆಶಯವಾಗಿದೆ. ಒಂದು ಕಡೆ ಹಿಂದೂ ಧರ್ಮ, ಮತ್ತೊಂದು ಕಡೆ ಇಸ್ಲಾಂ ಧರ್ಮಗಳೆರಡೂ ಸಂಘರ್ಷಕ್ಕಿಳಿದು, ಇವುಗಳನ್ನು ಸಂಯೋಜಿಸುವ ಕಾರ್ಯ ಮೂಡಿಬಂದಿದೆ.

ಈ ನಾಟಕವು ೫ ಅಂಕಗಳನ್ನು ಒಳಗೊಂಡಿದ್ದು ಒಂದನೇ ಅಂಕದಲ್ಲಿ ದಿಲ್ಲಿಯಲ್ಲಿ ಕುಮ್ಮಟದುರ್ಗದ ನಾಯಕರ ಪಾತ್ರಗಳ ಪೌರುಷವನ್ನು ಎತ್ತಿ ತೋರಿಸಲಾಗಿದೆ. ಹಾಗೂ ದೆಹಲಿ ಸುಲ್ತಾನರು ಗಮನಿಸದೆ ಇರುವ ಅಂಶಗಳನ್ನು ಈ ಭಾಗವು ಕಟ್ಟಿಕೊಡುತ್ತದೆ.

ಎರಡನೇ ಅಂಕದಲ್ಲಿ ಕುಮ್ಮಟದುರ್ಗವನ್ನು ಸ್ವತಂತ್ರ ರಾಜ್ಯದಂತೆ ಬಿಂಬಿಸಿದ್ದು, ಕಂಪಿಲರಾಯನನ್ನು ಪಡುವಣ ದಿಕ್ಕಿಗೆ ಹೋಲಿಸಿ, ಕುಮಾರರಾಮನನ್ನು ಮೂಡಣ ದಿಕ್ಕಿಗೆ ಹೋಲಿಸಲಾಗಿದೆ. ಮೊದಲನೇ ಅಂಕವು ಮಹಿಳೆಗೆ ಪ್ರಾಧಾನ್ಯತೆ ನೀಡಿದ್ದರೆ, ಎರಡನೇ ಅಂಕವು ಪುರುಷ ಪಾತ್ರಗಳಿಗೆ ಪ್ರಾಧಾನ್ಯತೆ ನೀಡಿದೆ. ಪ್ರಮುಖವಾಗಿ ಕುಮಾರರಾಮನು ಅನ್ಯ ಧರ್ಮಕ್ಕೆ ಗೌರವ, ಮಾನ್ಯತೆ ನೀಡಿರುವ ರೀತಿಯಲ್ಲಿ ಚಿತ್ರಿತವಾಗಿರುವುದು ಈ ಅಂಕದಲ್ಲಿ ಕಂಡುಬಂದಿದೆ.

ಮೂರನೇ ಅಂಕದಲ್ಲಿ ಒಬ್ಬ ಮಹಿಳೆ ಸಮಾಜದಿಂದ ಬರುವ ನಿರ್ಬಂಧಗಳನ್ನು ಎದುರಿಸುವ ನಿಟ್ಟಿನಲ್ಲಿ ಬಿಂಬಿಸಲಾಗಿದೆ. ಕುಮ್ಮಟರಾಜ್ಯದ ಅಂತಃಕಲಹವನ್ನು ಬಿಂಬಿಸುವ ಪ್ರಯತ್ನ ಮಾಡಲಾಗಿದೆ. ಕೆಲವು ಸಂಗತಿಗಳಿಗೆ ತಿರುವು ಕೊಡುವ ಮೂಲಕ ಈ ಅಂಕವನ್ನು ಮುಕ್ತಾಯಗೊಳಿಸಲಾಗಿದೆ.

ನಾಲ್ಕನೇ ಅಂಕದಲ್ಲಿ ಕುಮಾರರಾಮನ ಶತ್ರುಗಳ ಅಪನಂಬಿಕೆ ಎದ್ದು ಕಾಣುತ್ತದೆ. ಅದರ ಜೊತೆ ಜೊತೆಗೆ ಕುಮ್ಮಟದುರ್ಗದ ವಿಜಯೋತ್ಸವದ ಆಚರಣೆಯನ್ನು ಬಿಂಬಿಸಲಾಗಿದೆ.

ಕೊನೆಯದಾಗಿ ಐದನೇ ಅಂಕವು ಕುಮಾರರಾಮ ಮೋಸದಿಂದ ಸತ್ತು ಹೋಗುವ ಸಂಗತಿಯನ್ನು ಚಿತ್ರಿಸಲಾಗಿದೆ. ಅಂದರೆ ಮಾತಂಗಿ ಮತ್ತು ರಾಮನ ನಡುವೆ ಯುದ್ಧ ನಡೆಯುವಾಗ ರಾಮನು 'ಸ್ತ್ರೀಯನ್ನು ಕೊಲ್ಲುವುದು ಕ್ಷತ್ರಿಯ ಧರ್ಮಕ್ಕೆ ವಿರೋಧ' ಎಂದು ಸುಮ್ಮನಾಗುತ್ತಾನೆ. ಇದು ರಾಮನ ಸಾಂದರ್ಭಿಕವಾದ ಧರ್ಮನಿಷ್ಠೆಯನ್ನು ಸೂಚಿಸುತ್ತದೆ[೨೨]. ಕೆಲವೊಂದು ಕಡೆ ಧರ್ಮ, ಜಾತಿ, ಸ್ತ್ರೀಲೋಲತೆ, ಹಿಂದುತ್ವ ಯಾವುದೂ ಮುಖ್ಯವಲ್ಲ. ರಾಮನು ಮಾನವೀಯ ಮೌಲ್ಯಗಳಿಗೆ ಮಾತ್ರ ಗೌರವ ಸೂಚಿಸುವನೆಂಬ ಸಂದೇಶವನ್ನು ನೀಡುತ್ತದೆ. ರಾಮನು ಬಹುಸಂಸ್ಕೃತಿಯ ನೆಲೆಯಲ್ಲಿ ಮಾತಾಡುವ ಹಾಗೂ ಧರ್ಮ, ಜಾತಿಯನ್ನು ಪ್ರತ್ಯೇಕಿಸಿ ನೋಡದೆ ಕೇವಲ ಮೌಲ್ಯಗಳಿಗಾಗಿ ಜೀವಿಸಿರುವಂತೆ ಬಿಂಬಿಸಲಾಗಿದೆ. "ಶುದ್ಧ ವಿದೇಶಿ ಹೆಣ್ಣನ್ನು ಭುಂಜಿಸುವುದು ಲೇಸು! ಕಸಿ ಮಾಡಿದುದು ಹೊಸ ಬಗೆಯಾದರೂ, ಅತ್ತ ಬಾರದೆ ಇತ್ತ ಇಲ್ಲದೆ ಹೋದ ವಿಶ್ವಾಮಿತ್ರ ಸೃಷ್ಟಿಯಾಗುವುದು, ಶುದ್ಧ ಹಿಂದೂ ರಕ್ತದಲ್ಲೊಂದು ಪೂಜ್ಯತೆಯಿದ್ದರೆ, ಶುದ್ಧ ಮುಸಲ್ಮಾನ್ ರಕ್ತದಲ್ಲೂ ಒಂದು ರೀತಿಯ ಭವ್ಯತೆಯಿದ್ದಿತು. ಈ ಕಲಬೆರಕೆಯಾದ ರಕ್ತದೊಡನೆ ನನ್ನ ನೆತ್ತರೂ ಸೇರಿದರೆ ಇಮ್ಮಡಿ ಕುಲಹೀನತೆಯಾಗುವುದು, ಮಹಾನಂದ ತೊಘಲಕ್‌ನನ್ನು ಕೂಡಿದಾಗಲೇ ಜಾತಿಭ್ರಷ್ಟಳಾಗಿರಲು ಸುದಿತಿಗೆಂತಹ ಹಿಂದೂತ್ವ? ಕೊಚ್ಚೆ ನೀರಿನಲ್ಲಿ ಮುಳುಗಿದ ಆಳು ಕೊಳಕಾಗಿರಲು ಅವನ ಉಡುಪು ಇನ್ನೂ ಬೀಳದಿರುವುದೆ! ಕೋಟೆಯ ಗೋಡೆಯಿಂದ ಕಂದಕದಲ್ಲಿ ಹಾರಿದವನ ಮೂಳೆಯೇ ಮುರಿದಿರಲು ಮೈ ಮುಂಚಿನಂತೆಯೇ ಇರುವುದೆ? ಬಲ್ಲದವನಿಗೆ ಒಲವುದೋರುವುದರಿಂದ ಆಗುವುದೇನು! ಒಂದು ಬಾರಿಯೆಂದೆ 'ಒಲ್ಲೆ'ನೆಂಬುದು ಅನ್ನದಿರುವ ನೂರು ಬಾರಿಗಾಗಿ ನಿಂತಿದೆ.

ನೂರೊಂದು ಸೊನ್ನೆಗಳು ಅವುಗಲ ಹಿಂದೆ 'ಒಂದು' ಎಂಬ ಅಂಕೆಯಾದರೂ ನಿಲ್ಲದಿದ್ದಲ್ಲಿ ವ್ಯರ್ಥವಾಗುವಂತೆ, ನೀನು ನೂರಾರು ಬಾರಿ ಬೇಡಿದರೂ ನನ್ನ ಅಸಮ್ಮತಿಯನ್ನು ಸೂಚಿಸಿದ ಮೇಲೆ ನಾನು ಹಿಂದೆ ಅಂಕೆಯಾಗಿ ನಿಲ್ಲುವುದಿಲ್ಲವೆಂದು ನಿರ್ಧರಿಸಿ ನಿನ್ನ ಮಾತನ್ನೆಲ್ಲ ಶೂನ್ಯಲೋಕಕ್ಕೆ ಸೇರಿಸಿದಂತಾಯ್ತು[೨೩]." ಕುಮಾರರಾಮನ ಈ ಮಾತುಗಳು ಧರ್ಮ ನಿರಪೇಕ್ಷ ನಿಲುವುಗಳನ್ನು ತೋರಿಸುತ್ತವೆ. ಒಟ್ಟಾರೆ ಹೇಳುವುದಾದರೆ ನಂಜುಂಡ ಕವಿಯ 'ರಾಮನಾಥ ಚರಿತೆ'ಯನ್ನು ಪ್ರಧಾನವಾಗಿರಿಸಿಕೊಂಡು ಮೌಖಿಕ ಸಂಪ್ರದಾಯಗಳನ್ನು ಆಧಾರವಾಗಿಟ್ಟುಕೊಂಡು ಕೆಲವು ಕಲ್ಪನೆಗಳ ಮೂಲಕ ಪ್ರಸ್ತುತ ನಾಟಕವು ಚಿತ್ರಿತವಾಗಿದೆ.

**ಪರದಾರ ಸೋದರ ಮತ್ತು ಕಡುಗಲಿ ಕುಮಾರರಾಮ– ಎಸ್. ಉಮಾಪತಿ**

ಈ ಎರಡೂ ನಾಟಕಗಳನ್ನು ಕುಮಾರರಾಮನ ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು ರಚಿಸುವ ಪ್ರಯತ್ನ ನಾಟಕಕಾರರದ್ದಾಗಿದೆ. ಮೊದಲನೆ ನಾಟಕವು ಕುಮಾರರಾಮನ ಶೌಚ ಗುಣವನ್ನು ಬಿಂಬಿಸಿದರೆ, ಎರಡನೆಯ ನಾಟಕವು ಕುಮಾರರಾಮನ ಶೌರ್ಯ, ಪರಾಕ್ರಮಗಳನ್ನು ಸೂಚಿಸುತ್ತದೆ. ಈ ಎರಡೂ ನಾಟಕಗಳಲ್ಲಿ ಶಿಷ್ಟ ಸಮಾಜಕ್ಕೆ ಬೇಕಾಗುವಂತಹ ರೀತಿ–ನೀತಿಗಳಿಗೆ ನಡೆದುಕೊಳ್ಳುವಂತೆ ಕುಮಾರರಾಮನ ಪಾತ್ರವನ್ನು ಚಿತ್ರಿಸಲಾಗಿದೆ. ಹಾಗೂ ರತ್ನಾಜಿ ಪಾತ್ರಕ್ಕೆ ವಿರುದ್ಧ ನಡತೆಯನ್ನು ಬಿಂಬಿಸಲಾಗಿದೆ. 'ಪರದಾರ ಸೋದರ' ನಾಟಕವು ಏಳು ದೃಶ್ಯಗಳನ್ನು ಒಳಗೊಂಡಿದ್ದು, 'ಕಡುಗಲಿ ಕುಮಾರರಾಮ' ನಾಟಕವು ಒಂಭತ್ತು ದೃಶ್ಯಗಳಿಂದ ಕೂಡಿದ್ದು ವಿಭಿನ್ನ ರೀತಿಯ ಒಳಸುಳಿವುಗಳನ್ನು ಕಟ್ಟಿಕೊಡುತ್ತದೆ. 'ಪರದಾರ ಸೋದರ' ನಾಟಕವು ಹಿಂದೂ ಪಾತ್ರಗಳಿಗೆ ಗೌರವ ಒದಗಿಸಿದರೆ, 'ಕಡುಗಲಿ ಕುಮಾರರಾಮ' ಇಸ್ಲಾಂ ಧರ್ಮದ ಪಾತ್ರಗಳಿಗೂ ಅವಕಾಶ ನೀಡಿದೆ. ಈ ಎರಡೂ ನಾಟಕಗಳನ್ನು ವಿಶ್ಲೇಷಿಸಿದಾಗ ಲೇಖಕರ ವಾದವು ಚರಿತ್ರೆಯ ಎಳೆಗಳನ್ನು ಬಿಚ್ಚಿಟ್ಟಿದ್ದಾರೆ.

**ಗಂಡುಗಲಿ ಕುಮಾರರಾಮ–ವಾದಿರಾಜ ಕನಕಗಿರಿ**

ವಾದಿರಾಜರು ರಚಿಸಿರುವ ನಾಟಕವು ಇತರೆ ನಾಟಕ ಕೃತಿಗಳಿಗಿಂತ ಭಿನ್ನವಾಗಿದೆ. ಇಲ್ಲಿ ಕಥಾವಸ್ತುವು ಒಂದೇ ಆಗಿದ್ದರೂ, ಚರಿತ್ರೆಯನ್ನು ಭಿನ್ನ ವಿಭಿನ್ನವಾಗಿ ನೋಡಬಹುದು. ಅಂದರೆ ರಾಜಧಾನಿ ವಿಷಯಕ್ಕೆ ಬಂದಾಗ ಕೆಲವರು ಕಂಪಿಲನ ರಾಜಧಾನಿ ಕುಮ್ಮಟದುರ್ಗ ಎಂದು ಇನ್ನೂ ಕೆಲವರು ಹೊಸಮಲೆದುರ್ಗ ಎಂತಲೂ ಗ್ರಹಿಸಿದ್ದಾರೆ. ಆದರೆ ವಾದಿರಾಜರು ಆನೆಗೊಂದಿಯನ್ನು ರಾಜಧಾನಿ ಎಂದಿರುವುದು ವಿಶೇಷವಾಗಿದೆ. ಇದು ಚಾರಿತ್ರಿಕ ನಾಟಕವಾದರೂ ಆಧುನಿಕ ಪರಿಕಲ್ಪನೆಗಳ ಮೂಲಕ ಕಥೆಯನ್ನು ಕಟ್ಟುತ್ತಾ ಹೋಗಿದೆ. ಸುಮಾರು ೧೯ ಪಾತ್ರಗಳನ್ನು ಹೊಂದಿದ್ದು, ೨೨ ದೃಶ್ಯಗಳನ್ನೊಳಗೊಂಡ ಚಾರಿತ್ರಿಕ ವಸ್ತುವಾಗಿ ಆಧುನಿಕತೆಯ ಪ್ರತಿಬಿಂಬವಾಗಿ ಹೊರಹೊಮ್ಮಿದೆ.

**ಕುಮಾರರಾಮ–ಚದುರಂಗ**

ಚದುರಂಗರ 'ಕುಮಾರರಾಮ' ನಾಟಕವು ಒಂದು ರಂಗಕೃತಿಯಾಗಿಯೂ, ಸಾಹಿತ್ಯಿಕ ಕೃತಿಯಾಗಿಯೂ ಹೊರಬಂದಿದೆ. ಕವಿಯು ನಂಜುಂಡರ ಕಾವ್ಯಕ್ಕೆ ಬದ್ಧರಾದಂತೆ ಕಾಣುತ್ತದೆ. ಹೀಗಾಗಿ ಘಟನಾಪೂರಕವಾದ ನಾಟಕವನ್ನು ರಚಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಇಲ್ಲಿ ಹೊಸ ಪಾತ್ರಗಳಾಗಲೀ, ಹೊಸ ದೃಶ್ಯಗಳಿಗಾಗಲೀ ಯಾವುದೇ ಒತ್ತನ್ನು ನೀಡಿಲ್ಲ. ಆದರೆ ಕೆಲವು ದೃಶ್ಯಗಳನ್ನು ನಾಟಕೀಯ ಕಲ್ಪನೆಗಳಿಂದ ಸಿನಿಮೀಯ ದೃಶ್ಯಗಳಿಗೆ ಕೊಂಡೊಯ್ದಿರುವುದು ಕಂಡುಬರುತ್ತದೆ. ಇಲ್ಲಿ ಮುಖಚರ್ಯೆಯ ಕಲ್ಪನೆ ನಾಟಕದ ಚೌಕಟ್ಟಿನಲ್ಲಿ ಅತ್ಯಂತ ಪರಿಣಾಮಕಾರಿಯಾಗಿದೆ.

ಒಟ್ಟಾರೆ ಹೇಳುವುದಾದರೆ ಚರಿತ್ರೆಯ ಎಳೆಗಳನ್ನಿಟ್ಟುಕೊಂಡು ವಿಭಿನ್ನ ನೆಲೆಯಲ್ಲಿ ಕುಮಾರರಾಮನ ವ್ಯಕ್ತಿತ್ವ, ಆದರ್ಶಗಳನ್ನು ಕಟ್ಟಿಕೊಡುವಲ್ಲಿ ನಾಟಕಗಳು ಪ್ರಮುಖ ಪಾತ್ರವಹಿಸಿವೆ. ಕುಮಾರರಾಮನನ್ನು ಚರಿತ್ರೆಯ ವಸ್ತುವನ್ನಾಗಿರಿಸಿಕೊಂಡು ಹಲವಾರು ನಾಟಕ ಕೃತಿಗಳು ರಚನೆಯಾಗಿದ್ದು ಕೆಲವು ಪ್ರಕಟಗೊಂಡಿದ್ದು, ಇನ್ನೂ ಕೆಲವು ಅಪ್ರಕಟಿತ ಕೃತಿಗಳಾಗಿಯೇ ಮರೆಮಾಚಿವೆ. ಆದರೆ ಕುಮ್ಮಟದುರ್ಗದ ಸ್ಥಳೀಯ ಬರಹಗಾರರಿಂದ ಇಲ್ಲಿಯವರೆಗೂ ಯಾವುದೇ ಕೃತಿಗಳನ್ನು ಲಭ್ಯವಾಗದೇ ಇರುವುದು ಶೋಚನೀಯವಾಗಿದೆ.

**೨. ಕಾದಂಬರಿಗಳು**

ಆಧುನಿಕ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಒಂದಾದ 'ಕಾದಂಬರಿ ಪ್ರಕಾರವು ಹತ್ತೊಂಬತ್ತನೇ ಶತಮಾನದ' ಅಂತ್ಯದಲ್ಲಿ ಮನರಂಜನೆಯ ಮಾಧ್ಯಮವಾಗಿ ಕಾಣಿಸಿಕೊಂಡಿತು. ಒಂದು ರೀತಿಯಲ್ಲಿ ಹೇಳುವುದಾದರೆ ಅನುವಾದಗಳ ಪ್ರತಿಬಿಂಬವೇ ಈ ಕಾದಂಬರಿಗಳಾಗಿವೆ ಎನ್ನಬಹುದು. 'ಕಾದಂಬರಿ' ಎಂಬ ಪದವು ಆಂಗ್ಲ ಭಾಷೆಯ 'ನಾವೆಲ್' ಎಂಬ ಪದಕ್ಕೆ ಪರ್ಯಾಯವಾಗಿ ಬಂದಿದ್ದು, ಮೊದಲ ಬಾರಿಗೆ 'ಕಾದಂಬರಿ' ಎಂದು ಬಳಸಿರುವವರು ಲಕ್ಷ್ಮಣ ಭೀಮರಾವ್ ಗದಗಕರ ಇವರು ೧೮೯೨ರಲ್ಲಿ 'ಸೂರ್ಯಕಾಂತ' ಎಂಬ ಕೃತಿಯನ್ನು ರಚಿಸಿದ್ದು, ನಂತರ ಅದನ್ನು 'ಕನ್ನಡ ಹೊಸ ಕಾದಂಬರಿ' ಎಂದು ಬದಲಿಸಿ 'ಕಾದಂಬರಿ' ಪದವನ್ನು ಪರಿಚಯಿಸಿದರು. ಕಲ್ಪಿತ ಕಥೆಗಳನ್ನು ಕಾದಂಬರಿಯಾಗಿ ರಚಿಸುವ ಮೊದಲು, ಐತಿಹಾಸಿಕ ವಿಚಾರಗಳನ್ನು ವಸ್ತುವಾಗಿರಿಸಿಕೊಂಡು ರಚಿತವಾದಂತಹ ಕಾದಂಬರಿಗಳೇ ಮೊದಲು ಬೆಳಕಿಗೆ ಬಂದವು. ಐತಿಹಾಸಿಕ ಕಾದಂಬರಿ ಎಂದರೆ 'ಕೆಂಪು ನಾರಾಯಣನ ಮುದ್ರಾಮಂಜೂಷ' ಮೊದಲ ಬಾರಿಗೆ ಕನ್ನಡದಲ್ಲಿ ಕಾದಂಬರಿಗಳು ಕ್ರಿ.ಶ. ೧೮೯೯ರಲ್ಲಿ ಪ್ರಚಾರಕ್ಕೆ ಬಂದವು. ಇವು ರಾಷ್ಟ್ರೀಯ ಭಾವನೆಗಳನ್ನು ಹೆಚ್ಚಿಸುವ, ಪ್ರಾದೇಶಿಕ ಭಾಷೆಗಳಿಗೆ ಒತ್ತು ಕೊಡುವ, ಜೀವನದ ಆಗುಹೋಗುಗಳು, ವ್ಯಕ್ತಿ ಬದುಕಿನ ಸವಾಲುಗಳು, ಸಮಸ್ಯೆಗಳನ್ನು ಕುರಿತು ಮಾಧ್ಯಮಗಳಾಗಿ ಬಿಂಬಿತವಾಗಿರುವುದು ಗಮನಾರ್ಹವಾಗಿದೆ.

ಐತಿಹಾಸಿಕ ವಿಚಾರಗಳನ್ನು ಕುರಿತು ರಚನೆಯಾದ ಕಾದಂಬರಿಗಳು ಹಲವಾರು ಇವೆ. ಮಾಸ್ತಿಯವರ 'ಚಿಕ್ಕವೀರರಾಜೇಂದ್ರ', ತ.ರಾ.ಸು. ಅವರ 'ದುರ್ಗಾಸ್ತಮಾನ' ಕಾದಂಬರಿಗಳು

ಪ್ರಮುಖವಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕುಮಾರರಾಮನನ್ನು ಕುರಿತಂತೆ 'ಕುಮಾರರಾಮ', 'ಕನ್ನಡಿಗರ ಕಾಳರಾತ್ರಿ' ಹಾಗೂ ರುದ್ರಮೂರ್ತಿಶಾಸ್ತ್ರಿ ಅವರ 'ಕುಮಾರರಾಮ' ಎಂಬ ಮೂರು ಕಾದಂಬರಿಗಳು ವಿಶೇಷವಾಗಿವೆ.

**ಕುಮಾರರಾಮ-ರುದ್ರಮೂರ್ತಿಶಾಸ್ತ್ರಿ**

ಕುಮಾರರಾಮನನ್ನು ಕುರಿತು ಪ್ರಚಲಿತದಲ್ಲಿ ಕಾಣುತ್ತಿರುವ ಜನಪದ ಮತ್ತು ಶಿಷ್ಟ ಸಾಹಿತ್ಯದ ನೆರವಿನಿಂದ ಲೇಖಕರ ಈ ಕಾದಂಬರಿಯನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾರೆ. ಈ ಕಾದಂಬರಿಯಲ್ಲಿ ಹೊಸ ಪಾತ್ರಗಳನ್ನು ಸೃಷ್ಟಿಸಿರುವುದು ಕಂಡುಬಂದಿದೆ. ನಿರೂಪಣೆಯನ್ನು ನೇರವಾಗಿ ನೀಡುವ ಮೂಲಕ ಹೆಚ್ಚು ಪಾತ್ರಗಳು ಹಿಂದೂ ಧರ್ಮವನ್ನು ಎತ್ತಿ ತೋರಿಸುವ ಪ್ರಯತ್ನ ಮಾಡಿದೆ. ಖಾನ್ ಮತ್ತು ಮಾತಂಗಿಯ ಮಾತುಗಳಲ್ಲಿ 'ಹಿಂದೂವ', 'ಹಿಂದೂವರ' ಎಂಬ ಮಾತುಗಳು ಪ್ರಸ್ತಾಪವಾಗಿರುವುದು ಕಂಡುಬಂದಿದೆ. ಉದಾಹರಣೆಗೆ 'ಹಿಂದುವ ರಾಮ ಹೊಕ್ಕ ಲಿಕ್ಕಿದ ನಮ್ಮ ಬಲವ' ಎಂದು ಮಾತಂಗಿ ಹೇಳುತ್ತಾಳೆ. ಈ ವಾಕ್ಯವನ್ನು ಗಮನಿಸಿದಾಗ ರಾಮನನ್ನು 'ಹಿಂದೂ' ಎಂದು ಗುರುತಿಸಿರುವುದು ಸ್ಪಷ್ಟವಾಗಿದೆ. ಈ ಕಾದಂಬರಿಯು ಪೌರಾಣಿಕ ಕವಚವನ್ನು ತೊಡಿಸದೆ ಆಧುನಿಕ ಪ್ರಕಾರದಲ್ಲಿ ಚಾರಿತ್ರಿಕ ಸತ್ಯಗಳನ್ನು ಕಟ್ಟಿಕೊಡುವ ಪ್ರಯತ್ನ ನಡೆದಿದೆ.

ಈ ಕಾದಂಬರಿಯು ಮತಧರ್ಮಗಳನ್ನು ದೃಷ್ಟಿಕೋನದಲ್ಲಿರಿಸಿಕೊಂಡು ರಚನೆಯಾಗಿರುವುದು ಕಂಡುಬಂದಿದೆ. ಕಾಟಣ್ಣನ ಈ ವಾಕ್ಯವನ್ನು ಗಮನಿಸಿದಾಗ, ಅವನ ಪಾತ್ರವು ಕನ್ನಡಿಗರ ಬಗ್ಗೆ ಇರುವ ಅಭಿಮಾನವನ್ನು ತೋರಿಸುತ್ತದೆ. "ವಿದೇಶದ ಶತ್ರುವಿಗೆ ತಲೆಬಾಗಿ ಕನ್ನಡಿಗರನ್ನು ಅಪಮಾನಗೊಳಿಸಿದ ಅವನಿಗೆ ಬುದ್ಧಿ ಕಲಿಸಿ, ಕನ್ನಡಿಗರ ಗೌರವವನ್ನು ಉಳಿಸುವ ಕರ್ತವ್ಯ ನಮ್ಮದು. ಈ ವಾಕ್ಯವು ಲೇಖಕರು ಕಾದಂಬರಿಯನ್ನು ಕನ್ನಡಪರ ದೃಷ್ಟಿಕೋನಕ್ಕೆ ಉದಾಹರಣೆಯಾಗಿ ಚಿತ್ರಿಸಿದ್ದಾರೆ. ಈ ಕಾದಂಬರಿಯಲ್ಲಿ ಕುಮಾರರಾಮನ ಕಥೆಯನ್ನು ವಸ್ತುವಾಗಿರಿಸಿಕೊಂಡು ರಾಜ್ಯದ ಅಧಿಕಾರ ಮತ್ತು ಮನುಷ್ಯನ ಒಳಗಿನ ಸಂಬಂಧವನ್ನು ತೋರಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿ ಕುಮಾರರಾಮನಿಗಷ್ಟೇ ಅಲ್ಲದೆ, ಎಲ್ಲಾ ಪಾತ್ರಗಳಿಗೂ ಪ್ರಮುಖ ಸ್ಥಾನವನ್ನು ನೀಡಲಾಗಿದೆ.

ಈ ಕಾದಂಬರಿಯಲ್ಲಿ ಹರಿಯಾಲದೇವಿ ಕಂಪಿಲರಾಯನ ಹಿರಿಯ ರಾಣಿಯಾಗಿದ್ದರೂ ಅಸಹಾಯಕತೆಯ ಪ್ರತಿರೂಪವಾಗಿ ಚಿತ್ರಿತಳಾಗಿದ್ದಾಳೆ. ಚೆನ್ನರಾಮನ ಪಾತ್ರವನ್ನು ಹೊಸದಾಗಿ ಸೃಷ್ಟಿಸಿರುವುದು ಕುತೂಹಲದ ಸಂಗತಿಯಾಗಿದೆ. ಇಲ್ಲಿ ಕುಮಾರರಾಮನ ಬೇಟೆಯ ಪ್ರಸಂಗವನ್ನು ವಿಸ್ತಾರವಾಗಿ ಚಿತ್ರಿಸಲಾಗಿದೆ. ಒಟ್ಟಾರೆ ಹೇಳುವುದಾದರೆ ಈ ಕಾದಂಬರಿಯು ನೇರವಾಗಿ, ಸರಳವಾಗಿ ನಿರೂಪಣೆ ಹೊಂದಿರುವ ಕಾದಂಬರಿಯಾಗಿದೆ. ಇಲ್ಲಿ ನೇರ ನಿರೂಪಣೆಗಳನ್ನು ಕಾಣಬಹುದು. ಕಾಟಣ್ಣನಿಗೆ ಆತನ ರಾಜ್ಯದ ಬಗ್ಗೆ ಇದ್ದ ಅಭಿಮಾನವನ್ನು ಇಲ್ಲಿ ಚೆನ್ನಾಗಿ ತೋರಿಸಲಾಗಿದೆ. "ವಿದೇಶದ ಶತ್ರುವಿಗೆ ತಲೆಬಾಗಿ ಕನ್ನಡಿಗರನ್ನು ಅಪಮಾನಗೊಳಿಸಿದ ಅವನಿಗೆ ಬುದ್ಧಿ ಕಲಿಸಿ"[೨೪]

ಎಂಬ ಮಾತು ಕಾಟಣ್ಣನ ಭಾಷಾಭಿಮಾನವನ್ನು ತೋರಿಸುತ್ತದೆ. ಇಲ್ಲಿ ಚಿನ್ನವ್ವ ಎಂಬ ಸ್ತ್ರೀ ಪಾತ್ರವು ಹೊಸದಾಗಿದ್ದು, ಕತೆಗೆ ಹೊಸತನ ಕೊಡುವ ಉದ್ದೇಶವಿದ್ದಂತಿದೆ.

**ಕನ್ನಡಿಗರ ಕಾಳರಾತ್ರಿ-ಕೊರಟಿ ಶ್ರೀನಿವಾಸರಾವ್**

ಕೊರಟಿ ಶ್ರೀನಿವಾಸರಾವ್‌ರವರ 'ಕನ್ನಡಿಗರ ಕಾಳರಾತ್ರಿ' ಎನ್ನುವ ಕಾದಂಬರಿಯು ಕುಮ್ಮಟದುರ್ಗ ಅರಸರ ಇತಿಹಾಸವನ್ನು ತಿಳಿಸುತ್ತದೆ. ಈ ಕಾದಂಬರಿಯು ಕುಮ್ಮಟದ ಮೊದಲ ಅರಸನಾದ ಮುಮ್ಮಡಿಸಿಂಗೆಯನಾಯಕನು ರಾಜ್ಯವನ್ನು ಕಟ್ಟಲು ಅನುಸರಿಸಿದ ಅನೇಕ ಅಂಶಗಳನ್ನು ತಿಳಿಸುವುದರಿಂದ ಈ ಕಾದಂಬರಿಯು ಆರಂಭವಾಗುತ್ತದೆ.

ಕನ್ನಡಿಗರ ಕಾಳರಾತ್ರಿ ಕಾದಂಬರಿಯು ಮೂರು ಭಾಗಗಳನ್ನು ಒಳಗೊಂಡಿದೆ.

ಮೊದಲನೆಯ ಭಾಗದಲ್ಲಿ ಮುಮ್ಮಡಿಸಿಂಗೆಯನಾಯಕನು ಸೇವುಣರ ಹೊಯ್ಸಳರ ಮಧ್ಯೆ ಪದೇ ಪದೇ ಯುದ್ಧ ನಡೆಸಿದ್ದರ ಪರಿಣಾಮವಾಗಿ ಮುಮ್ಮಡಿಸಿಂಗೆಯನ ಸಾವು ಸಂಭವಿಸುವ ಅಂಶವು ಈ ಕಾದಂಬರಿಯಲ್ಲಿ ಪ್ರತಿಬಿಂಬಿತವಾಗಿದೆ. ಈ ಯುದ್ಧದಲ್ಲಿ ವೀರಮರಣವನ್ನಪ್ಪಿದ ಮುಮ್ಮಡಿಸಿಂಗೆಯನಾಯಕನ ಮಗನಾದ ಕಂಪಿಲರಾಯ ಅಂತ್ಯಕ್ರಿಯೆ ನೆರವೇರಿಸುವುದನ್ನು ಗೊತ್ತುಪಡಿಸುತ್ತದೆ. ನಂತರ ಕುಮ್ಮಟದುರ್ಗದ ರಾಜ್ಯದ ಸಿಂಹಾಸನ ಮಂತ್ರಿ ಬೈಚಪ್ಪನ ಎದುರಲ್ಲಿ ಕಂಪಿಲರಾಯನಿಗೆ ಪಟ್ಟಾಭಿಷೇಕವಾಗುವ ಅಂಶ ಈ ಮೊದಲನೆಯ ಭಾಗದಲ್ಲಿ ಚಿತ್ರಿಸಲಾಗಿದೆ.

ಎರಡನೆಯ ಭಾಗದಲ್ಲಿ ಮುಮ್ಮಡಿಸಿಂಗೆಯನಾಯಕನು ಯುದ್ಧ ಎದುರಿಸುವ ಪ್ರಸಂಗ ಆತನ ಸಾವಿನ ನಂತರ ತನ್ನ ಪರಿವಾರದವರು ಯಾವ ರೀತಿ ಶೋಕವನ್ನು ವ್ಯಕ್ತಪಡಿಸಿದರು ಎನ್ನುವ ಸನ್ನಿವೇಶವನ್ನು ತಿಳಿಸಲಾಗಿದೆ. ನಂತರ ಕಂಪಿಲರಾಯನ ಮದುವೆಯ ಬಗ್ಗೆ ಅವನ ತಾಯಿಯಾದ ಮಂಚಾಲದೇವಿಯ ಅಂತಃಕರಣದ ಹಿತನುಡಿಗಳು ಹಾಗೂ ಕಂಪಿಲನ ಮದುವೆಯನ್ನು ನಿರಾಕರಿಸುವ ಅಂಶ ಮತ್ತು ತಾಯಿಯ ಮದುವೆಯ ಬಗ್ಗೆ ಸಾಧಕ-ಬಾಧಕಗಳನ್ನು ಸಮರ್ಥಿಸುವ ಅನೇಕ ಅಂಶಗಳನ್ನು ತಿಳಿಸಲಾಗಿದೆ.

ಕಂಪಿಲರಾಯನಿಗೆ ಕೌಟುಂಬಿಕದ ಜೊತೆ ವಿವಾಹದ ಸನ್ನಿವೇಶಗಳು ನಂತರ ಕುಮಾರರಾಮನ ಬಾಲ್ಯದ ಕ್ಷಣಗಳನ್ನು ತಿಳಿಸಲಾಗಿದೆ. ಅನಂತರ ಕಾಟಣ್ಣನ ಪರಿಚಯವನ್ನು ಎರಡನೆಯ ಭಾಗದಲ್ಲಿ ತಿಳಿಸಲಾಗಿದೆ. ಕಾಟಣ್ಣನ ಜನನದ ಅನೇಕ ಕುತೂಹಲಕರವಾದ ಅಂಶಗಳನ್ನು ಈ ಭಾಗದಲ್ಲಿ ನಿರೂಪಿಸಲಾಗಿದೆ.

ಮೂರನೆಯ ಭಾಗದಲ್ಲಿ ಮುಮ್ಮಡಿಸಿಂಗೆಯನಾಯಕನ ಮರಣದ ನಂತರ ಕಂಪಿಲರಾಯನ ಪಟ್ಟಾಭಿಷೇಕವಾಗುವುದು. ರಾಜಧಾನಿಯ ಸ್ಥಳಾಂತರವನ್ನು ಮಾಡಲು ಪ್ರಸ್ತಾಪ ಮಾಡುವುದು ಪುರೋಹಿತರು ಕಂಪಿಲರಾಯ ಮತ್ತು ಕುಮಾರರಾಮ ಅರಮನೆಯನ್ನು ತೊರೆಯುವಂತೆ ಸಲಹೆ ನೀಡುವುದು, ಹೊಸ ಅರಮನೆಯ ನಿರ್ಮಾಣ ಮಾಡುವುದು, ಒಟ್ಟಾರೆಯಾಗಿ ಕುಮ್ಮಟದುರ್ಗಕ್ಕೆ ಆಗಾಗ ಒದಗಿಬರುತ್ತಿದ್ದ ಆಪತ್ತುಗಳನ್ನು ತಿಳಿಸುತ್ತವೆ. ಕಂಪಿಲರಾಯ ಮತ್ತು ರತ್ನಾಜಿಯರ ವಿವಾಹವು

ಈ ಭಾಗದಲ್ಲಿ ತಿಳಿಸಲಾಗಿದೆ. ಕಂಪಿಲರಾಯನ ತಾಯಿಯಾದ ಮಂಚಾಲದೇವಿ ಕುಮ್ಮಟದುರ್ಗದ ಸಾಮ್ರಾಜ್ಯದ ಬಗ್ಗೆ ಇರಿಸಿಕೊಂಡಿರುವ ಅನೇಕ ಕಳಕಳಿ ಅಂಶಗಳನ್ನು ಈ ಭಾಗದಲ್ಲಿ ಚಿತ್ರಿಸಲಾಗಿದೆ.

ಈ ಕಾದಂಬರಿಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ನೋಡಿದಾಗ ವಿಜಯನಗರಪೂರ್ವದ ಅರಸರಾದ ಕುಮ್ಮಟದುರ್ಗ ನಾಯಕರು ತನ್ನ ಸಾಮ್ರಾಜ್ಯವನ್ನು ಕಟ್ಟುವಾಗ ಅನೇಕ ಯುದ್ಧಗಳನ್ನು ತಿಳಿಯುವುದರ ಮೂಲಕ ತನ್ನ ರಾಜ್ಯದ ಅಂತ್ಯವನ್ನು ಶತ್ರು ರಾಜರ ಕುತಂತ್ರ ಆಕ್ರಮಣದಿಂದ ಕುಮ್ಮಟದುರ್ಗದ ನಾಯಕರ ಪಾಲಿಗೆ ಹೇಗೆ ಕಾಳರಾತ್ರಿಯಾಗಿ ಪರಿಣಮಿಸಿತು ಮತ್ತು ಕನ್ನಡಿಗರ ಮೇಲೆ ಕರಾಳರಾತ್ರಿ ಆವರಿಸಿಕೊಳ್ಳುವ ಅಂಶಗಳನ್ನು ಓದುಗರ ಮನಃಕಲುಕುವಂತಹ ಹೃದಯ ವಿದ್ರಾವಕ ಘಟನೆಯನ್ನು ಇಲ್ಲಿ ನೋಡಬಹುದು.

**ಕುಮಾರರಾಮ-ಕೊರಟಿ ಶ್ರೀನಿವಾಸರಾವ್**

ಈ ಕಾದಂಬರಿಯು ವಿಜಯನಗರ ಸ್ಥಾಪನೆಯ ಪೂರ್ವದ ಇತಿಹಾಸಕ್ಕೆ ಪೂರಕವಾದ ಸಂಗತಿಗಳನ್ನು ಒಳಗೊಂಡಿದೆ. ಕುಮಾರರಾಮನನ್ನು ಕೇಂದ್ರಬಿಂದುವಾಗಿರಿಸಿಕೊಂಡು ರಚನೆಯಾದ ಕಾದಂಬರಿಯಾಗಿದೆ. ಇಲ್ಲಿ ಮೊಹಮದ್ ಬಿನ್ ತುಘಲಕ್‌ನ ಸಾಕು ಮಗಳಾದ ಬಾಬಮ್ಮಳ ಸನ್ನಿವೇಶವನ್ನು ಧರ್ಮ ಸಮನ್ವಯದ ಗುರುತಾಗಿ ತೋರಿಸಿದ್ದಾರೆ. ಮಾತಂಗಿಯು ನನಗೆ ಎಲ್ಲಾ ಧರ್ಮಗಳು ಶ್ರೇಷ್ಠವೇ ಹಾಗೂ ಅವುಗಳ ಬಗ್ಗೆ ಗೌರವವಿದೆ ಎಂಬ ಮಾತು ಧರ್ಮ ಸಮನ್ವಯತೆಯನ್ನು ತೋರಿಸುತ್ತದೆ. ಮಾತಂಗಿಯು ಹಿಂದೂ ಆಗಿ ಹುಟ್ಟಿ, ಮುಸಲ್ಮಾನಳಾಗಿ ಬೆಳೆದು, ತಾನು ಧರ್ಮ ಸಂಕಟದಲ್ಲಿ ಸಿಲುಕಿಕೊಳ್ಳುವ ಸನ್ನಿವೇಶವನ್ನು ತೋರಿಸಲಾಗಿದೆ. ಕಾದಂಬರಿಯು ಹತ್ತೊಂಬತ್ತು ಅಧ್ಯಾಯಗಳನ್ನು ಒಳಗೊಂಡಿದ್ದು, ಕೊನೆಯ ಭಾಗದಲ್ಲಿ ಕೊರವಂಜಿಯ ಪಾತ್ರವನ್ನು ತೋರಿಸಿದ್ದು, ಮಾತಂಗಿಯ ಸಾವು ಬಾಬಮ್ಮಳ ಮನಸ್ಸಿನ ತುಮುಲಗಳ ಬಗ್ಗೆ ಮನ ಮುಟ್ಟುವಂತೆ ಬಿಂಬಿಸಲಾಗಿದೆ.

ಒಟ್ಟಾರೆಯಾಗಿ ಈ ಕೃತಿಯಲ್ಲಿ ಧರ್ಮಾಭಿಮಾನ, ಭಾಷಾಭಿಮಾನ, ಸ್ತ್ರೀಯ ಅಸಹಾಯಕತೆ, ವಿಭಿನ್ನ ಜಾತಿಯಿಂದ ಒಗ್ಗೂಡುವಿಕೆ, ಚನ್ನರಾಮನ ಪ್ರಾಣತ್ಯಾಗ ಇವೆಲ್ಲವೂ ಮನುಷ್ಯ, ಮನುಷ್ಯರ ನಡುವಿನ ಅಂತರಂಗವನ್ನು ತೆರೆದಿಡುತ್ತದೆ.

ಓದುಗರ ಮನಸ್ಸನ್ನು ಪರಿಣಾಮಕಾರಿಯಾಗಿ ಪ್ರಕ್ರಿಯೆಗೊಳಪಡಿಸುವ ಸಾಮರ್ಥ್ಯ ಕಾದಂಬರಿಗಳಿಗಿದೆ. ಐತಿಹಾಸಿಕ ಕಾದಂಬರಿಗಳ ರಚನೆಯು ಚಾರಿತ್ರಿಕ ಪ್ರಜ್ಞೆಯನ್ನು ಮೂಡಿಸುತ್ತವೆ. ತಾರ್ಕಿಕ ಆಲೋಚನೆಗಳನ್ನು ಹೊರ ಹಾಕುವಲ್ಲಿ ಪ್ರಮುಖ ಪಾತ್ರವಹಿಸಿವೆ. ಚಾರಿತ್ರಿಕ ವ್ಯಕ್ತಿಗಳ ಜೀವನ ಘಟನೆಗಳು, ನೋವುಗಳು, ಅಸಹಾಯಕತೆಗಳು, ಉದಾರತೆ, ಶುಚಿತ್ವ, ವ್ಯಕ್ತಿತ್ವ, ನಡೆನುಡಿಗಳು ಪ್ರಸ್ತುತ ಸಮಾಜದ ಮೇಲೆ ಉತ್ತಮ ರೀತಿಯಲ್ಲಿ ಪ್ರಭಾವ ಬೀರಿರುವುದರಲ್ಲಿ ಅನುಮಾನವೇ ಇಲ್ಲ. ಇದು ಕುಮಾರರಾಮನ ಚರಿತ್ರೆಗೆ ಸೂಕ್ತವಾಗಿ ಅನ್ವಯವಾಗುತ್ತದೆ. ಕಾದಂಬರಿಗಳು ರಾಜ್ಯಾಭಿಮಾನ, ಧರ್ಮಾಭಿಮಾನ, ಭಾಷಾಭಿಮಾನಗಳನ್ನು ಕೆರಳಿಸುತ್ತವೆ. ಹೀಗಾಗಿಯೇ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಗುಣಮಟ್ಟದ ಸ್ಥಾನಮಾನಗಳನ್ನು ಕಾದಂಭರಿಗಳು ಗಳಿಸಿಕೊಂಡಿವೆ.

## ೩. ಕಥನ ಗೀತೆಗಳು

ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಕಥನ ಗೀತೆಗಳು ಕುಮಾರರಾಮನನ್ನು ಕುರಿತಂತೆ ವಿವಿಧ ಪ್ರಕಾರಗಳಲ್ಲಿ ಮೂಡಿಬಂದಿವೆ. ಕುಮಾರರಾಮನನ್ನು ವಸ್ತುವಾಗಿರಿಸಿಕೊಂಡು ವಿವಿಧ ಸಾಹಿತ್ಯ ಬಗೆಗಳಲ್ಲಿನ ಲಾವಣಿಗಳು, ಕಥನ ಗೀತೆಗಳು, ಕಥೆಗಳು, ಕಾವ್ಯವಾಗಿ ರೂಪಗೊಂಡಿವೆ. ಕಥೆಗಳು, ಲಾವಣಿಗಳು, ತಂಬೂರಿ ಸಂಪ್ರದಾಯಗಳು, ಕುಮಾರರಾಮನ ದುಂದುಮೆ ಜಗ್ಗಲಿಗೆಯ ಹಾಡುಗಳ ವಿವಿಧ ಪ್ರಕಾರಗಳಲ್ಲಿ ಕುಮಾರರಾಮನು ಸಮಾಜಕ್ಕೆ ಆದರ್ಶ ವ್ಯಕ್ತಿಯಾಗಿ ಬಿಂಬಿತನಾಗಿದ್ದಾನೆ. ಈತನನ್ನು ಕುರಿತು ಬುಡ್ಗ ಜನಾಂಗದವರು, ಬಾಲನಾಗಮ್ಮ ಸಂಪ್ರದಾಯದವರು, ಬುರ್ರಕಥೆಗಳು, ಹಾಗೂ ಗೊಂದಲಿಗರು ಇಂತಹ ಗತಿಗಳ ಮೂಲಕ ಕುಮಾರರಾಮನ ಆದರ್ಶ ಗುಣಗಳನ್ನು ಜೀವಂತವಾಗಿರಿಸಿದ್ದಾರೆ. ಚಿತ್ರದುರ್ಗ, ರಾಯಚೂರು, ಶಿವಮೊಗ್ಗ, ಬಳ್ಳಾರಿ, ತುಮಕೂರು, ಹಾವೇರಿ, ಉತ್ತರಕನ್ನಡ, ಸೇರಿದಂತೆ ಹಲವು ಭಾಗಗಳಲ್ಲಿ ಕುಮಾರರಾಮನನ್ನು ಕುರಿತು ಕಥನ ಗೀತೆಗಳು ಮೂಡಿಬಂದಿವೆ.

ಕನ್ನಡದಲ್ಲಿ ಕುಮಾರರಾಮನ ಕುರಿತಾದ ಗೀತೆಗಳನ್ನು ಮೊದಲು ಸಂಗ್ರಹಿಸಿದವರು. ಬಿ.ಎಸ್.ಗದ್ದಗಿಮಠ[೨೫]

| | | |
|---|---|---|
| ಗದ್ದಗಿಮಠ | – | ಕುಮಾರರಾಮನ ದುಂದುಮೆ |
| ಅಂಬಳಿಕೆ ಹಿರಿಯಣ್ಣ | – | ಚೆನ್ನಿಗರಾಮ ಕಾಟಂಗರಾಮ |
| ವಿ.ಜೆ.ನಾಯಕ | – | ಹರಿಕಾಂತರ ಸಂಸ್ಕೃತಿ |
| ಜಯಪ್ರಕಾಶ ಮಾವಿನಕಳಿ | – | ತಂಪಿನ ರಾಜನ ಪದಗಳು |
| ಕ.ರಾ.ಕೃಷ್ಣಸ್ವಾಮಿ | – | ಧೀರಕುಮಾರರಾಮ |
| ಜಿ.ಶು.ಪರಮಶಿವಯ್ಯ | – | ಚನ್ನಿಗರಾಮ |
| ಡಿ.ಲಿಂಗಯ್ಯ | – | ಚೆನ್ನಿಗರಾಮ |
| ವಿ.ಗ.ನಾಯಕ | – | ಹಂಪಲರಾಜನ ಪದಗಳು |

ಇಂತಹ ಕಥನ ಗೀತೆಗಳು ಕುಮಾರರಾಮ ಮತ್ತು ಆತನ ಸಮುದಾಯದ ಆಶಯಗಳನ್ನು ಹೊತ್ತುಕೊಂಡಿವೆ. ಹಾಗೆಯೇ ಈ ಸಮುದಾಯದ ಅಂತರಂಗದಲ್ಲಿ ಅನಾವರಣಗೊಳ್ಳುವಂತೆ ಮಾಡಿವೆ.

ಇತ್ತೀಚೆಗೆ ಸಂಗ್ರಹಿಸಿದ ಕಥನ ಗೀತೆಗಳು ಕುಮಾರರಾಮ ಮತ್ತು ಆತನ ಚೆಂಡಿನಾಟ ಕುರಿತಂತೆ ರಚನೆಯಾಗಿವೆ. ಅಂದರೆ ಈ ಕಥನ ಗೀತೆಗಳು ಯಾವುದಾದರೂ ಒಂದು ಕಥಾವಸ್ತುವನ್ನಿಟ್ಟುಕೊಂಡು ಅದಕ್ಕೆ ಸಂಬಂಧಪಟ್ಟಂತೆ ಗೀತೆಯನ್ನು ರಚಿಸುವುದು ವಾಡಿಕೆಯಾಗಿದೆ. ಮೌಖಿಕವಾಗಿ ಸಂಗರಹಿಸಿರುವ ಇಂತಹ ಕಥನಗೀತೆಗಳು ಕುಮಾರರಾಮ, ಹರಿಯಾಲದೇವಿ, ಕಂಪಿಲರಾಯ, ರತ್ನಾಜಿ, ಮಾತಂಗಿ, ಯುದ್ದಗಳು, ಚೆಂಡಿನಾಟ, ಬೊಲ್ಲನ ಗೆದ್ದ ಯುದ್ದ, ಸುಲ್ತಾನರ ದಾಳಿಗಳು ಇತ್ಯಾದಿ ವಿಚಾರಗಳನ್ನು ಪ್ರತ್ಯೇಕ ಮಾಡಿ ಅಲ್ಲಲ್ಲಿ ಕಥನ ಗೀತೆಗಳು ರಚನೆಯಾಗುತ್ತಾ ಹೋಗಿವೆ.

ನೀರಾಕ ಹಾಡಕ ಅಂಬಿಗರ ಮಗನ ಅಲ್ಲಿ
ಕೊಂಡ ಕೊಂಡುತನಯವ ಹೊಳೆಯ ಝುಂಡ
ಗೋಪಾಲರಾಮ
ಅನಂದೇ ಗೋಪಾಲರಾಮ

ಕುಂತತ ಹರಿಯಲಪ್ಪ ಚಂಡ ಎಸೆದಳ
ಅಂಬಿಯ ಚಂದನ ಹೋಗಿದ್ದಳ
ಗೋಪಾಲರಾಮ
ಅನಂದೇ ಗೋಪಾಲರಾಮ

ಈ ಗೀತೆಗಳ ಸಾರಾಂಶವನ್ನು ನೋಡಿದಾಗ ಪ್ರಸ್ತುತ ಸಮಾಜವು ಕುಮಾರರಾಮನನ್ನು ಮನೆಯ ಮಗನಂತೆ ಕಾಣುವುದು ಕುಮಾರರಾಮನ ನೀರಾಟ, ಚೆಂಡಿನಾಟಗಳು ಇದನ್ನು ಕಂಡು ಹರುಷಗೊಳ್ಳುವ ತಾಯಿ ಹರಿಯಮ್ಮಳಿಗಾಗುವ ಸಂತಸ ಇವೆಲ್ಲವನ್ನೂ ಸಂದರ್ಭಕ್ಕನುಗುಣವಾಗಿ ಹಾಡುವುದನ್ನು ಕಾಣುತ್ತೇವೆ. ಪ್ರಸ್ತುತ ಸಮಾಜದಲ್ಲಿ ಕುಮಾರರಾಮನನ್ನು ಆರಾಧಿಸುವ ನೆಲೆಗಳಲ್ಲಿ ಸಂತೋಷ ಸಡಗರಗಳಿದ್ದಾಗ ನಾಮಕರಣ, ವಿವಾಹ ಮಹೋತ್ಸವ, ಜಾತ್ರಾ ಉತ್ಸವಗಳು ಹೀಗೆ ವಿವಿಧ ಸಂದರ್ಭಗಳಲ್ಲಿ ಬಗೆ ಬಗೆಯ ಸಾಂದರ್ಭಿಕ ಗೀತೆಗಳನ್ನು ಹಾಡುವುದನ್ನು ಕಾಣಬಹುದು.

ಯಾವುದೇ ಕಥೆಗಳಾಗಲಿ ಹಾಡುಗಳ ರೂಪದಲ್ಲಿ ಹೊರಹೊಮ್ಮಿದರೆ ಅಂತಹ ಗೀತೆಗಳನ್ನು ಕಥನಗೀತೆಗಳು ಎಂದು ಕರೆಯಲಾಗುತ್ತದೆ. ಸಾಮಾನ್ಯವಾಗಿ ಮಹಾನ್ ಪುರುಷರ ಜೀವನ ಕಥೆ ವ್ಯಥೆಗಳನ್ನು ಹೇಳುವಲ್ಲಿ ಮಹತ್ತರ ಪಾತ್ರವಹಿಸಿವೆ. ಇಲ್ಲಿ ಸತಿ ಹೋದ ಗೀತೆಗಳು, ವೀರರ ಹಾಡುಗಳು, ಹೆಣ್ಣಿನ ಮನಸ್ಸಿನ ತೊಯ್ದಾಟಗಳು, ಸ್ತ್ರೀಯರ ಬಲಿದಾನ ಹಾಡುಗಳು ಇತ್ಯಾದಿ ರೂಪಗಳಲ್ಲಿ ಕಥೆಗಳನ್ನ ಹಾಡಿನ ಮೂಲಕ ವಾದ್ಯಗಳ ಜೊತೆಯಲ್ಲಿ ಹಾಡುವುದು, ಹಾಗೆಯೇ ವಾದ್ಯಗಳಿಲ್ಲದೆಯೂ ಹಾಡುವುದು ಪ್ರಚಲಿತದಲ್ಲಿದೆ.

ಕಂಪಲಿ ರಾಯಗ ಹಂಪಿ ವಿರುಪನ ಶಾಪ
ದಂಪತಿಗೆ ಬಂತೊ ವನವಾಸೊ।ಕಂಪಿಲಿಯು
ಸಿಂಪಾಗಿ ಸಡಿದು ಹಾಳಾತೊ॥

ಕೊಂಕಣದ ಮಾತಂಗಿ ಬಿಂಕ ಮಾದರ ಹುಡುಗಿ
ಕೊಂಕ ಗುಣ ಹೆಣ್ಣು ತುರುಕರಿಗೆ । ಮನಸೋತ
ವುಂಕಿ ಹಾಕ್ಯಾಲೋ ಕಂಪಲಿಗೊ॥

ರಾಮರಾಯನು ಬಿದ, ನಾಮ ನಿರ್ನಾಮಾತೊ
ಧೂಮ ಧೂಮಾತೊ ಕಂಪಲಿಯೇ ।ನಾರೇರ
ಹೇಮಕೊಂಡಾತೊ ಕಿಚ್ಚಾತೊ॥[೨೬]

ಕುಮ್ಮಟದುರ್ಗದರಸರ ಚರಿತ್ರೆಯನ್ನು ಕುರಿತಂತೆ ಕಂಪಲಿ ಎಂಬ ಕಥನ ಗೀತೆಯು

ಕೃಷ್ಣಮೂರ್ತಿ ಹನೂರು ಅವರ ಸಂಪಾದನೆಯಲ್ಲಿ ಹೊರಬಂದಿದೆ. ಅಂದರೆ ಕಂಪಲಿಯು ಕುಮ್ಮಟದುರ್ಗದರಸರ ಆಳ್ವಿಕೆಯಲ್ಲಿತ್ತು. ಇದರ ಅರಸರ ಏಳಿಗೆಯನ್ನು ಕಂಡು ಸಹಿಸಲಾಗದ ಮುಸ್ಲಿಂರು ಕಂಪಲಿಯ ಅರಸರ ಮೇಲೆ ಕಣ್ಣಿಟ್ಟರು. ಅಂದರೆ ಬಹುಶಃ ಹಂಪಿಯ ವಿರೂಪಾಕ್ಷನ ಶಾಪ ಕಂಪಿಲ ಹರಿಯಮ್ಮರ ಮೇಲೆ ಆಗಿರಬೇಕು. ಹೀಗಾಗಿಯೇ ಕಂಪಿಲರಾಯ ಮತ್ತು ಕುಮಾರರಾಮರು ತಮ್ಮ ರಾಜ್ಯವನ್ನು ಕಳೆದುಕೊಂಡರೇನೊ ಎಂಬ ಭಾವನೆಯನ್ನು ಕಥನಕಾರರು ಗುರ್ತಿಸಿರಬೇಕು. ಒಂದು ಹೆಣ್ಣಿನಿಂದ ಕಂಪಿಲರಾಜ್ಯ ಹಾಳಾಯಿತು. ಆಕೆಯ ಮನೋಭಿಲಾಷೆಗಳಿಗೆ ಕುಮಾರರಾಮನ ಆದರ್ಶಗಳು ವಿರುದ್ಧವಾಗಿರುವುದೇ ಇವರ ಸೋಲಿಗೆ ಕಾರಣ ಎಂಬ ಹಲವು ಸಂಗತಿಗಳನ್ನು ಈ ಗೀತೆಗಳು ವ್ಯಕ್ತಪಡಿಸುತ್ತವೆ. ಇಲ್ಲಿ ರಾಜ್ಯ ಸಂಪತ್ತಿಗಿಂತ ತನ್ನ ಆದರ್ಶ ವ್ಯಕ್ತಿತ್ವ ಶೀಲಸಂಪನ್ನತೆಯ ಗುಣಗಳೇ ಮುಖ್ಯ ಎಂಬ ಸಂದೇಶವನ್ನು ನೀಡುತ್ತವೆ.

ಹಿರಿಯರಸಿ ಹರಿಯಾಲಿ, ಕಿರಿಯರಸಿ ರತ್ನಾಲಿ
ಅರಸ ಕಂಪಿಲರಾಯನಿಗೆ । ಕೊಮರಾಮ
ಅರಸಮಗನಾದ ಹೆಸರಾತು॥ –[೨೭]

ಚೆಂಡ ಬೀಳುತ ನೋಡಿ ಚೆಂಡಿ ರತ್ನಾಲಿಮುಚ್ಚಿ
ಲಂಡಾಗಿ ಚಂಡ ಕೊಡಲಿಲ್ಲ । ರಾಮನಿಗೆ
ಚಂಡತರಲಾಕ ಕಲಿಸ್ಯಾರ ॥

ತಾಯೆ ತಂದೆಯ ಸತಿಯೆ. ನಾಯಿ ಮಾಡುವ ಕೆಲಸ
ಮಾಯೆ ನಿನಗ್ಯಾಕ ನನಮ್ಯಾಲೆ। ಹಡೆದವ್ವ
ಹೇಯ ಇಲ್ಲೇನ ನಿನಗೇಟ ॥ – [೨೮]

ನಮಿಸಿದೆನು ಕೇಳದಲೆ ಕೊಮರಾಮ ಕೈಹಿಡಿದ
ಧುಮಕೀಯ ಮಾಡಿ ಕಾಮಿಸಿದ । ರಕ್ಕಸನ
ಗಮನಿಸ್ಥ ಕರೆಸಿ ತಲೆ ಹೊಡಿಸು ॥ – [೨೯]

ಈ ಗೀತೆಯು ಕುಮಾರರಾಮನ ಕಥೆಯನ್ನು ಒಳಗೊಂಡಿದ್ದು, ಇದು ಕರ್ನಾಟಕದ ಕಂದ [ಕುಮಾರರಾಮ] ಎಂಬ ಕಥನ ಗೀತೆಯಾಗಿದ್ದು, ಕೃಷ್ಣಮೂರ್ತಿ ಹನೂರು ಅವರು ಸಂಗ್ರಹಿಸಿದ ಕೃತಿಯಲ್ಲಿ ದಾಖಲಾಗಿದೆ. ಈ ಗೀತೆಯು ಕುಮ್ಮಟದರಸರ ಪರಿಚಯವನ್ನು ಮಾಡಿಕೊಡುತ್ತ ಕುಮಾರರಾಮನ ಆದಿ, ಅಂತ್ಯವನ್ನು ಒಬ್ಬ ಸ್ತ್ರೀಯಿಂದ ಕಂಡನು ಎಂಬ ಸಂದೇಶವನ್ನು ನೀಡುತ್ತದೆ. ಇಲ್ಲಿ ಕುಮಾರರಾಮನ ಶೀಲಸಂಪನ್ನ ಗುಣಗಳು ರತ್ನಾಜಿಗೆ ಸಹಿಸಲಾಗಲಿಲ್ಲ. ಅವಳಿಗೆ ವ್ಯಕ್ತಿತ್ವಕ್ಕಿಂತ ಮನೋಭಿಲಾಷೆಗಳು ತುಂಬಾ ಮುಖ್ಯವಾಗಿದ್ದವು ಎಂದೆನಿಸುತ್ತವೆ. ಕುಮಾರರಾಮನ ಶೌಚ ಗುಣಗಳು ಈತನನ್ನು ಜಯಿಸಿದವು ಎಂಬುದು ಗಮನರ್ಹವಾಗಿದೆ. ಕಂಪಿಲರಾಯನಿಗೆ ತನ್ನ ಸತಿಯ ಮೇಲಿರುವ ಒಲವು, ನಂಬಿಕೆ ತನ್ನ ಪುತ್ರನ ಮೇಲೆ ಇರಲಿಲ್ಲ ಎಂಬುದನ್ನು ಈ ಗೀತೆಯು ಗಟ್ಟಿಗೊಳಿಸುತ್ತದೆ.

ಹೀಗೆ ಈ ಕಥನ ಗೀತೆಗಳ ಮೂಲಕ ಕುಮ್ಮಟದ ದುರ್ಗದರಸರ ಆಡಳಿತ ಅರಸರ ಇತಿಹಾಸ ಸಾಂಸ್ಕೃತಿಕ ವಿಷಯಗಳ ಕುರಿತು ಜೊತೆ ಪಶುಪಾಲನೆ, ಸಮಾಜ ಆರ್ಥಿಕ ಪದ್ಧತಿಯ ವಿಧಾನಗಳನ್ನು ಮತ್ತು ಸಾಮಾಜಿಕ ಪದ್ಧತಿಗಳಾದ ಹರಕೆ ಪದ್ಧತಿ, ಚಳುವಳಿ ಪದ್ಧತಿ, ಜಾತಿ ಪದ್ಧತಿ ಹಾಗೂ ಧರ್ಮವನ್ನು ವಿವರವಾಗಿ ಈ ಕಥನ ಗೀತೆಗಳ ಮೂಲಕ ವ್ಯಕ್ತವಾಗಿದೆ.

**ಇತರ ಕೃತಿಗಳು:-**

೧. ನಾಗರ ಮರಿ – ಪಿ.ಬಿ.ದೇಸಾಯಿ

೨. ಕುಮ್ಮಟದುರ್ಗದ ಕುಮಾರರಾಮ – ಡಾ.ಚೆನ್ನಕ್ಕ ಪಾವಟೆ

೩. ಕರ್ನಾಟಕ ವೀರರತ್ನಾ – ಆಲೂರು ವೆಂಕಟರಾಯ

೪. ರಣಧೀರ ರಾಮನಾಥ – ವೈ.ಹ.ರಾಮಶರ್ಮ

೫. ಕುಮ್ಮಟ ಕೇಸರಿ – ವರದರಾಜರಾವ್

೬. ಸರದಾರ ಸೋದರ – ಬಿ.ಎಂ.ತಲಗಡ್ಡೆ

ಕುಮಾರರಾಮನಿಗೆ ಸಂದಿರುವ ಬಿರುದುಗಳ ಹಾಗೆ ಮೇಲಿನ ಎಲ್ಲಾ ಕೃತಿಗಳು ಕುಮಾರರಾಮನಲ್ಲಿದ್ದ ಗುಣಗಳನ್ನು ಕೇಂದ್ರೀಕರಿಸಿದಂತೆ ಕಂಡುಬರುತ್ತವೆ. ಈತನ ಧೈರ್ಯ, ಶೌರ್ಯ, ಧೀಮಂತ ವ್ಯಕ್ತಿತ್ವ, ಯುದ್ಧೋತ್ಸಾಹಗಳು, ಸಮಾಜದ ಮೇಲಿದ್ದ ಈತನ ಕಾಳಜಿ, ಆಪತ್ಕಾಲದಲ್ಲಿ ರಕ್ಷಣೆ ನೀಡುವ ಮೇಲಿನ ಎಲ್ಲ ಅಂಶಗಳು ಕುಮಾರರಾಮನ ಅಂತರಂಗವನ್ನು ತೆರೆದಿಡುತ್ತವೆ.

**ಮೌಖಿಕ ಸಾಹಿತ್ಯ**

ಪುರಾತನ ಕಾಲದಿಂದಲೂ ಮಾನವ ತನ್ನ ಭಾವನೆಗಳನ್ನು ಹಾಡಿನ ಮೂಲಕ, ಲಾವಣಿಗಳ ಮೂಲಕ, ಮಾತಿನ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಸೋಲು-ಗೆಲುವು, ನಲಿವು, ದುಃಖ ದುಮ್ಮಾನಗಳನ್ನು ಅಭಿವ್ಯಕ್ತಿಸಿದ ರೂಪವೇ ಮೌಖಿಕ ಸಾಹಿತ್ಯವಾಗಿದೆ. ಇದು ಒಂದು ಒಗಟಿನಿಂದ ಹಿಡಿದು ಸಾವಿರಾರು ಸಾಲುಗಳುಳ್ಳ ಮಹದೇಶ್ವರ, ಮಂಟೇಸ್ವಾಮಿ ಜನಪದ ಕಾವ್ಯಗಳಷ್ಟು ವಿಸ್ತಾರತೆಯನ್ನು ಪಡೆದಿದೆ. ಬರವಣಿಗೆಯ ರೂಪಕ್ಕೆ ಇಳಿಯದೇ ಬರೀ ಜನರ ಬಾಯಿ ಮಾತಲ್ಲೇ ಉಳಿದಿರುವ ಕಾವ್ಯಕ್ಕೆ ಮೌಖಿಕ ಕಾವ್ಯ ಪರಂಪರೆ ಎಂದು ಗುರುತಿಸುತ್ತೇವೆ. ಇದು ತಲೆಮಾರಿನಿಂದ ತಲೆಮಾರಿಗೆ ಜನರ ಬಾಯಿಂದ ಬಾಯಿಗೆ ಹರಿದು ಬಂದು ಬಹು ವಿಸ್ತಾರವಾದ ಭೂಮಿಕೆಯನ್ನು ಒಳಗೊಂಡು ಜನಮಾನಸದಲ್ಲಿ ಅಚ್ಚಳಿಯದೆ ಉಳಿದಿದೆ. ಇಂತಹ ಸಾಹಿತ್ಯಕ್ಕೆ ಕುಮಾರರಾಮ ಸಾಕ್ಷಿಯಾಗಿದ್ದಾನೆ. ಬಹುಶಃ ಮೌಖಿಕ ಸಾಹಿತ್ಯವು ಕುಮಾರರಾಮನಿಗಾಗಿಯೇ ಹುಟ್ಟಿಕೊಂಡಿವೆ ಎಂದರೆ ತಪ್ಪಾಗಲಾರದು. ಕಾರಣ ಮೌಖಿಕ ಸಾಹಿತ್ಯ ರೂಪಗಳಾದ ಲಾವಣಿಗಳು, ಜನಪದ ಗೀತೆಗಳು, ಕೋಲಾಟ ಪದಗಳು, ಹಂತಿ ಪದಗಳು, ಹಾಡುಗಳು, ಯಕ್ಷಗಾನ ಇತ್ಯಾದಿ ಪ್ರಕಾರಗಳು ಕರ್ನಾಟಕದಾದ್ಯಂತ ಕುಮಾರರಾಮನ ಹೆಸರಿನಲ್ಲಿ ರಚನೆಯಾಗಿರುವುದು ವಿಶೇಷವಾಗಿ ಕಂಡುಬರುತ್ತಿದೆ. ಒಬ್ಬ ಚಾರಿತ್ರಿಕ ವ್ಯಕ್ತಿಯಾಗಿ ಸಾಹಿತ್ಯಗಳಲ್ಲಿ ಬೆರೆತುಹೋಗಿರಲು ಕಾರಣ ಆತನ ಆದರ್ಶ ವ್ಯಕ್ತಿತ್ವ ನಡೆ ನುಡಿಗಳು ಪ್ರಸ್ತುತ ಸಮಾಜಕ್ಕೂ ತಿಲಕವಿಟ್ಟಂತೆ ಉಳಿದುಕೊಂಡಿವೆ.

**ಜನಪದ ಸಾಹಿತ್ಯ**

ಜನಪದ ಎನ್ನುವುದು ಮಾನವ ಜನಾಂಗಕ್ಕೆ ಅಗಾಧವಾದ ಜ್ಞಾನದ ಸಂಪತ್ತು ಇದ್ದಂತೆ. ಇದು ಸಮಾಜದ ಜನರ ಜೀವನದ ಆಗು ಹೋಗುಗಳು, ಕಷ್ಟ ನಷ್ಟಗಳು, ಸುಖ ದುಃಖಗಳು, ಆಚಾರ-ವಿಚಾರ, ಆಲೋಚನೆಗಳನ್ನು, ಒಟ್ಟಾರೆ ಜೀವನದ ಎಲ್ಲಾ ಹಂತಗಳನ್ನು ಬಿಚ್ಚಿಡುವ ಮಾತಿನ ಸಾಹಿತ್ಯವೇ ಆಗಿದೆ. ಇದನ್ನು ಶಾಬ್ದಿಕ ಅಭಿವ್ಯಕ್ತಿ ಎಂದೇ ಕರೆಯಲಾಗುತ್ತದೆ. ಜನಪದ ಸಾಹಿತ್ಯ ಪ್ರಕಾರಗಳಾದ ಯಕ್ಷಗಾನ, ಕೋಲಾಟ ಪದಗಳು, ಬಯಲಾಟಗಳು, ಲಾವಣಿಗಳು ಇತ್ಯಾದಿ ಇವೆಲ್ಲವೂ ಹಂತಹಂತವಾಗಿ ವಿಕಾಸವಾಗುತ್ತಾ ಜನಪದರಲ್ಲಿ ಬೆರೆತುಹೋಗಿವೆ. ಜನಪದ ಸಾಹಿತ್ಯವು ಹುಟ್ಟುವಾಗ ಒಬ್ಬರಿಂದ ಹುಟ್ಟಿ ಅದು ಬೆಳೆಯುವಾಗ ಬಾಯಿಂದ ಬಾಯಿಗೆ ಹರಿದಾಡುತ್ತಾ ತನ್ನ ವ್ಯಾಪ್ತಿಯನ್ನೇ ವಿಸ್ತರಿಸುತ್ತಾ ಹೋಗುತ್ತದೆ. ಇಂತಹ ಸಾಹಿತ್ಯದಲ್ಲಿ ಬೆರೆತುಹೋಗಿರುವ ಮೇರು ವ್ಯಕ್ತಿ ಕುಮಾರರಾಮ. ಈತ ಚಾರಿತ್ರಿಕ ವ್ಯಕ್ತಿಯಾಗಿದ್ದರೂ ಸಾಂಸ್ಕೃತಿಕ ವ್ಯಕ್ತಿಯಾಗಿ ಬೆಳೆದು, ವ್ಯಕ್ತಿತ್ವದಿಂದ ಜನಪದರಲ್ಲಿ ಬಾಯಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದ್ದಾನೆ.

ಕುಮಾರರಾಮ ಅಪ್ರತಿಮ ಶೂರ, ಪರನಾರಿ ಸೋದರತೆಗೆ ತಿಲಕವಿಟ್ಟಂತೆ ಜನಪದರ ಬಾಯಲ್ಲಿ ರಾರಾಜಿಸುತ್ತಿದ್ದು. ಕರ್ನಾಟಕದಾದ್ಯಂತ ಹಲವು ಭಾಗಗಳಲ್ಲಿ ಕುಮಾರರಾಮನನ್ನು ಕುರಿತಂತೆ ಜಾತ್ರಾ ಉತ್ಸವಗಳು ನಡೆಯುತ್ತಿದ್ದು, ಇದಕ್ಕೆ ಪೂರಕವಾಗಿ ರಾಯಚೂರು, ಕೊಪ್ಪಳ, ಧಾರವಾಡ, ಬಳ್ಳಾರಿ, ಗದಗ ಭಾಗಗಳಲ್ಲಿ ಪ್ರಸ್ತುತದಲ್ಲೂ ಜನಪದರು ಹಳ್ಳಿ ಸೊಗಡಿನಲ್ಲಿ ಹಾಡುತ್ತಿರುವುದು ವಿಶೇಷವಾಗಿದೆ.

**ಲಾವಣಿಗಳು**

ಲಾವಣಿಯನ್ನು ಸೂಚಿಸುವ ಇಂಗ್ಲೀಷ್ ಪದವಾದ balled ವಿವಿಧ ಅರ್ಥಗಳನ್ನು ಹೊಂದಿರುವಂತದ್ದು, ಲಾವಣಿ ಎಂದು ಕರೆಯಬೇಕಾದರೆ ಹಾಡು ಜನಪದರ ಸಾಂಪ್ರದಾಯಿಕ ಜೀವನವನ್ನು ಹೊಂದಿರಬೇಕು. ಅದು ಪ್ರಧಾನವಾಗಿ ಜನತೆಯೂ ಸ್ಮರಣೆಗಳಲ್ಲಿ ಜೀವಂತವಾಗಿರಬೇಕು ಮತ್ತು ಗಾಯಕನಿಂದ ಗಾಯಕನಿಗೆ ವಾಚಿಕವಾಗಿ ಬಂದಿರುವಂತದ್ದು. ಸಂಪ್ರದಾಯದ್ದು, ವಾಚಕ ಗಾಯಕರಿಂದ ಬಂದ ಗೀತೆಗಳಲ್ಲಿ ಹೇಳಿದ ಕಥೆಗಳನ್ನು ಲಾವಣಿಗಳೆಂದು ಕರೆಯಬಹುದು. ಈ ಪದವು ಲ್ಯಾಟಿನ್‌ನ ballare ಎಂಬ ಪದದಿಂದ ಬಂದಿದ್ದು, ಇದರ ಅರ್ಥ The Dance ಎಂದು ನೃತ್ಯಗೀತೆಯೊಡನೆ balled ಇತಿಹಾಸವನ್ನು ತೊಡಕಾಗಿಸಲು ಇದು ಕಾರಣವಾಯಿತು[೩೦]. ಲ್ಯಾಟಿನ್‌ನ ನಿಷ್ಪತ್ತಿಯುಳ್ಳ balled ಪದವನ್ನು ಕೆಲವು ಸಾರಿ ನೃತ್ಯದೊಡನೆ ಹಾಡಲಾಗುವ ಲಾವಣಿಗಳೊಂದಿಗೆ ಸೂಚಿಸುವುದುಂಟು. ಜನಪದ ಲಾವಣಿಗಳನ್ನು ಹಾಡಿನ ಕಥೆ ಎಂದು ಸಹ ಕರೆಯುತ್ತಾರೆ.

ಲಾವಣಿಗಳು ಜನಪದರ ಜೀವನಕ್ಕೆ ಸಂಬಂಧಿಸಿದವು. ಅವು ತಮ್ಮ ಹಿಂದಿನ ದೀರ್ಘವಾದ ಪರಂಪರೆಯನ್ನು ಹೊಂದಿದ್ದು, ಪರಂಪರೆಯು ಪ್ರಜ್ಞಾವಂತ ಸಂಸ್ಕೃತಿಯಿಂದ ರಚನೆಯಾಗಿದೆ.

ಲಾವಣಿಗಳಲ್ಲಿ ಬಳಕೆಯಾಗುವ ಕಥಾ ಪುರುಷರೆಲ್ಲರೂ ಸಾಮಾನ್ಯ ಮನುಷ್ಯರಾಗಿರುವುದಿಲ್ಲ. ಅವರು ಅತೀ ಸಾಹಸಿಗರು ಸಾಂಸ್ಕೃತಿಕ ವೀರರು, ಅದ್ಭುತಗಳನ್ನು ಸೃಷ್ಟಿಸುವಂತಹ ಪವಾಡ ಪುರುಷರಾಗಿರುತ್ತಾರೆ. ಈ ಎಲ್ಲಾ ಚಾರಿತ್ರಿಕ ಕಾವ್ಯಗಳಲ್ಲಿನ ವೀರರು ಮಾತ್ರ ಸಾಮಾನ್ಯ ಮನುಷ್ಯರಿಗೆ ಹತ್ತಿರವಾಗುತ್ತಾರೆ. ಇವರ ಜೀವನ ಅಂಶಗಳನ್ನೇ ಕಥನ ಗೀತೆಗಳಾಗಿ ಕಟ್ಟಿ ಲಾವಣಿಗಳ ರೂಪದಲ್ಲಿ ಹಾಡುತ್ತಾರೆ.

ಐತಿಹಾಸಿಕವಾಗಿ ಲಾವಣಿಗಳು ಹುಟ್ಟಿಕೊಂಡಿರುವುದು ಸಹಜವಾಗಿಯೇ ಇದೆ. ಆದರೆ ಇವು ಸಮಗ್ರವಾಗಿ ರೂಪುಗೊಂಡಿಲ್ಲ ಎನ್ನುವುದೇ ಲೋಪವಾಗಿದೆ. ಆದರೂ ಕುಮಾರರಾಮನನ್ನು ಕುರಿತಂತೆ ಲಾವಣಿಗಳು ಕರ್ನಾಟಕದಾದ್ಯಂತ ನಾನಾ ಭಾಗಗಳಲ್ಲಿ ಪ್ರಚಲಿತದಲ್ಲಿವೆ. ಬಹುಶಃ ಲಾವಣಿಗಳಿಂದ ಉತ್ತುಂಗಕ್ಕೆ ಏರಿರುವ ಕನ್ನಡದ ಏಕೈಕ ವೀರ ಕುಮಾರರಾಮ ಒಬ್ಬನೆ ಇರಬಹುದು. ಅಂದರೆ ಅಷ್ಟರ ಮಟ್ಟಿಗೆ ಲಾವಣಿಗಳು ರಚನೆಯಾಗುತ್ತಾ ಬಂದಿವೆ. ಸಮಗ್ರವಾಗಿ ಇಲ್ಲವೆನ್ನುವುದೇ ಒಂದು ಕೊರತೆಯಾಗಿದೆ. ಇಂತಹ ಲಾವಣಿಗಳ ಗುಂಪಿಗೆ ಕಂಪಿಲರಾಯ ಮತ್ತು ರತ್ನಾಜಿಯ ಕಥೆಯು ಸೇರಿದ್ದು, ಅದು ಈ ಕೆಳಗಿನಂತಿದೆ.

ಕೇಳಿ ಕೇಳಿಯಿ ಮಹಾಜನಗಳೇ
ಲಾಲಿಸುವೆ ಒಂದು ಲಾವಣಿಯ
ಕೊಪ್ಪಳ ಜಿಲ್ಲೆಯ ಕುಮ್ಮಟದುರ್ಗದ
ಗಂಡುಗಲಿಯ ಕಥೆಯೊಂದು
ಆನೆಗೊಂದಿಯ ಕಂಪಲಿರಾಯ ರಾಜನ
ಮಗನಾಗಿ ಜನಿಸಿದ ಈ ವೀರನಾ
ಈ ಸುರ

ಈ ಲಾವಣಿಯು ಪ್ರಾರಂಭದಲ್ಲಿ ಪರಿಚಯಿಸುವ ರೀತಿಯು ವಿಸ್ತಾರವಾಗಿದೆ. ಇಲ್ಲಿ ಕುಮ್ಮಟದುರ್ಗವನ್ನು ಪರಿಚಯಿಸಿದ್ದು, ಕಂಪಲಿರಾಯನ ಮಗ ಗಂಡುಗಲಿ ಕುಮಾರರಾಮನ ಕಥೆಯನ್ನು ಕೇಳಿ ಎಂದು ಹಾಡುವ ಶೈಲಿಯು ಎಂಥವರಲ್ಲೂ ಆಸಕ್ತಿಯನ್ನು ಹುಟ್ಟಿಸುತ್ತದೆ. ಕುಮ್ಮಟದುರ್ಗವು ಕೊಪ್ಪಳ ಜಿಲ್ಲೆಯಲ್ಲಿ ಕಂಡುಬರುತ್ತದೆ. ಈ ದುರ್ಗಕ್ಕೆ ಕಂಪಲಿರಾಯ ಅರಸನಾಗಿದ್ದು, ಈತನ ಮಗ ಕುಮಾರರಾಮ ಎಂದೂ, ಈತನಿಗೆ ಗಂಡುಗಲಿ ಎಂಬ ಬಿರುದಿತ್ತು ಎನ್ನುವ ವಿಚಾರವನ್ನು ತುಂಬಾ ಸೊಗಸಾಗಿ ಹಾಡಿರುವುದು ಇಡೀ ರಾಜ್ಯದ ಪರಿಚಯವನ್ನು ಮಾಡಿಕೊಡುವ ಕ್ರಿಯಾತ್ಮಕತೆಯು ಈ ಲಾವಣಿಗಳದ್ದಾಗಿರುತ್ತದೆ. ಈತನ ಶೌರ್ಯ, ಪರಾಕ್ರಮಗಳ ಜೊತೆಗೆ ಸುತ್ತಮುತ್ತಲಿನ ರಾಜ್ಯಗಳನ್ನು ಹಿಮ್ಮೆಟ್ಟಿಸಿರುವುದನ್ನು ಸೂಚಿಸುತ್ತದೆ. ಲಾವಣಿಯ ಒಂದು ವಾಕ್ಯವು ವಿವಿಧ ಅರ್ಥಗಳನ್ನು ಕಲ್ಪಿಸುವ ಚಾಕಚಾಕ್ಯತೆ ಈ ಲಾವಣಿಗಳಿಗಿದೆ.

ಹೇ..... ಆಂಧ್ರ ಪ್ರದೇಶದ ಓರೆಯಾಂಗಲಿನ
ಪ್ರತಾಪರುದ್ರನ ಮೇಲೆ ಯುದ್ದ ಸಾರಿದನ್ನು
ಅವನ ಮಗನ ಎಪ್ಪತ್ತಿರಾಜನ
ಸೆರೆಯಿಡುದು ತಂದನ್ನು

ಕಂಪಿಲರಾಯನ ಮಗನಾದ ಕುಮಾರರಾಮ ಶೌರ್ಯ ಪರಾಕ್ರಮಗಳ ವರ್ಣನೆಯನ್ನು ಓರುಗಲ್ಲಿನ ಯುದ್ಧದ ಮುಖಾಂತರ ಮಾಡಲಾಗಿದೆ. ಕರ್ನಾಟಕದ ಚಿಕ್ಕ ಮನೆತನದ ಅರಸನು ಹೊರ ರಾಜ್ಯವಾದ ಆಂಧ್ರಪ್ರದೇಶದ ವಾರಂಗಲ್‌ನ ಕಾಕತೀಯ ದೊರೆ ಪ್ರತಾಪರುದ್ರನು ಯುದ್ಧ ಸಾರುವುದೇ ಒಂದು ಮಹತ್ವದ ವಿಷಯವಾಗಿದೆ. ಕಾರಣ ವಾರಂಗಲ್‌ನ ಕಾಕತೀಯರು ಸಮಕಾಲೀನ ಅರಸರುಗಳಲ್ಲಿ ಪ್ರಭಾವೀ ಅರಸರಾಗಿದ್ದರು. ಇಂತಹ ರಾಜ್ಯದ ಮೇಲೆ ಕುಮಾರರಾಮ ಯುದ್ಧ ಹೂಡುತ್ತಾನೆ. ಆತನ ಮಗನ ಎಪ್ಪತ್ತು ರಾಜನೊಂದಿಗೆ ಹೋರಾಡಿ ಸೋಲಿಸಿ ತನ್ನ ಸೆರೆಯಾಳಾಗಿ ಮಾಡಿಕೊಳ್ಳುವ ಸಂಗತಿಯು ತಿಳಿದುಬರುತ್ತದೆ. ಆದರೆ ಈ ಲಾವಣಿಯು ಅಸಮಗ್ರವಾಗಿದೆ. ಕಾರಣ ಕುಮ್ಮಟದ ಅರಸರು ಪ್ರತಾಪರುದ್ರನ ಮೇಲೆ ಯುದ್ಧ ಮಾಡಲು ಕಾರಣವೇನು? ಆತನ ಮಗ ಎಪ್ಪತ್ತು ರಾಜನನ್ನು ಸೆರೆಯಾಳಾಗಿರಿಸಿಕೊಂಡದ್ದು ಯಾವ ಕಾರಣಕ್ಕಾಗಿ ಎಂಬ ನಾನಾ ಪ್ರಶ್ನೆಗಳು ಮೂಡಿಬರುತ್ತವೆ. ಹೀಗಾಗಿ ಇಂತಹ ಲಾವಣಿಗಳು ಅಸಮಗ್ರ ಎನಿಸುತ್ತವೆ.

ಹೇ..... ಕುಮ್ಮಟ ದುರ್ಗದಲ್ಲಿ ಅರಮನೆಯಲ್ಲಿ
ಡೊಂಬರ ಆಟ ನಡೆದಿತ್ತು
ಅರವತ್ತು ಹರಿಯಾದ ಕಂಪಲಿರಾಯನ
ಡೊಂಬರ ಹುಡಿಗಿ ರತ್ನಾಜಿಯನ್ನು
ಮೊಹಿಸಿದನ್ನು....

ಈ ಲಾವಣಿ ಹಾಡು ಕುಮ್ಮಟದರಸರು ಸಾಂಸ್ಕೃತಿಕ ವೀರರು ಎನ್ನುವ ಸಂದೇಶ ಕೊಡುತ್ತದೆ. ಅಂದರೆ ಅರಸರು ತಮ್ಮ ರಾಜ್ಯದಲ್ಲಿ ಸಾಂಸ್ಕೃತಿಕ ಕಲಾ ಪ್ರದರ್ಶನಗಳನ್ನು ಮಾಡಲು ಅವಕಾಶ ನೀಡಿದ್ದರು. ಹಾಗೆಯೇ ವಿವಿಧ ಜಾತಿ ವರ್ಗಗಳು ಸ್ವತಂತ್ರವಾಗಿ ತಮ್ಮ ವೃತ್ತಿಗಳನ್ನು ಅನುಸರಿಸಲು ಅವಕಾಶ ನೀಡಿದ್ದರು ಎಂದು ತಿಳಿಯಬಹುದು. ಕಂಪಿಲರಾಯನಿಗೆ ಅರವತ್ತು ವರ್ಷ ವಯಸ್ಸಾಗಿತ್ತು. ಈ ಸಂದರ್ಭದಲ್ಲಿ ರತ್ನಾಜಿ ಎಂಬ ಡೊಂಬರ ಹುಡುಗಿಯನ್ನು ಮೋಹಿಸಿದುದರ ಸಂಗತಿಯನ್ನು ಕುರಿತು ಹೇಳುತ್ತದೆ. ಆದರೆ ಇದರ ಮುಂದಿನ ಬದಲಾವಣೆಗಳು ಮಾತ್ರ ತಿಳಿದುಬರುವುದಿಲ್ಲ. ಹೀಗಾಗಿ ಇದೊಂದು ಅಸಮಗ್ರ ಲಾವಣಿ ಎಂದೇ ಪರಿಗಣಿಸಬೇಕಾಗುತ್ತದೆ. ಹೀಗೆ ಲಾವಣಿಗಳು ಸಾಹಿತ್ಯ ಪ್ರಕಾರಗಳಲ್ಲಿ ಉತ್ತಮವಾದಂತಹ ಸ್ಥಾನಮಾನಗಳನ್ನೇ ಪಡೆದುಕೊಂಡಿವೆ.

**ಯಕ್ಷಗಾನ**

ಯಕ್ಷಗಾನ ಎಂಬುದು ಒಂದು ಸಾಂಪ್ರದಾಯಿಕ ರಂಗಭೂಮಿಯ ರೂಪಕವಾಗಿದೆ. ನೃತ್ಯ ಸಂಗೀತ, ಸಂಭಾಷಣೆ, ವೇಷಭೂಷಣ ಪ್ರಸಾಧನ ಮತ್ತು ವೇದಿಕೆ, ತಂತ್ರಗಳನ್ನು ಒಳಗೊಂಡ

ಒಂದು ವಿಶಿಷ್ಟ ಶೈಲಿಯಾಗಿದೆ. ಯಕ್ಷಗಾನವು 'ವೈಷ್ಣವ ಭಕ್ತಿ ಚಳುವಳಿ' ಎಂಬ ಶೈಲಿ ಮುಖ್ಯವಾಗಿ ಕರ್ನಾಟಕದ ಹಲವು ಭಾಗಗಳಲ್ಲಿ ವಿವಿಧ ರೂಪಗಳಲ್ಲಿ ಕಂಡುಬರುತ್ತದೆ.

ಯಕ್ಷಗಾನವು ಕರ್ನಾಟಕ ಸಂಗೀತ ಮತ್ತು ಭಾರತದ ಹಿಂದೂಸ್ತಾನಿ ಸಂಗೀತದಿಂದ ಪ್ರತ್ಯೇಕವಾದ ಸಂಪ್ರದಾಯವನ್ನು ಹೊಂದಿದೆ. ಯಕ್ಷಗಾನದ ಪ್ರದರ್ಶನವು ವಿಶಿಷ್ಟವಾಗಿ ಉಡುಪುಗಳು, ತಲೆ ಗೆ ಬಳಸುವ ಅಲಂಕಾರಿಕ ವಸ್ತುಗಳು ಮತ್ತು ಮುಖದ ಬಣ್ಣಗಳನ್ನು ಪಾತ್ರಕ್ಕೆ ತಕ್ಕಂತೆ ಧರಿಸುತ್ತಾರೆ. ಯಕ್ಷಗಾನದ ಕುರಿತು ಮೊದಲ ಲಿಖಿತ ಸಾಕ್ಷ್ಯವು ಬಳ್ಳಾರಿ ಜಿಲ್ಲೆಯ ಸೋಮಸಮುದ್ರದ ಕುರುಗೋಡಿನ ಲಕ್ಷ್ಮೀನಾರಾಯಣ ದೇವಸ್ಥಾನದ ಶಾಸನದಲ್ಲಿ ಕಂಡುಬರುತ್ತದೆ. ಯಕ್ಷಗಾನವು ಪ್ರಮುಖವಾಗಿ ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಶಿವಮೊಗ್ಗ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಯಕ್ಷಗಾನವು ಪೌರಾಣಿಕ ಮತ್ತು ಐತಿಹಾಸಿಕ ವಸ್ತುಗಳ ಪರಿಸರ ನಿರ್ಮಾಣಕ್ಕೆ ಯಕ್ಷಗಾನ ಮಾಧ್ಯಮ ಬಹುತೇಕ ಸಹಕಾರಿಯಾಗಿರುವಂತಹದ್ದು. ಆ ಕಾರಣಕ್ಕಾಗಿಯೇ ಯಕ್ಷಗಾನ ಪ್ರಸಂಗದಲ್ಲಿ ಕುಮಾರರಾಮನ ಕಥಾವಸ್ತು ಸಮಕಾಲೀನ ಪ್ರೇಕ್ಷಕರಲ್ಲಿ ಗಣನೀಯವಾದ ಪ್ರಭಾವವೊಂದನ್ನು ಕಲ್ಪಿಸಲು ಸಾಧ್ಯವಾಗಿದೆ.

ಮಧುಕರ ಕುಮಾರ ಬೋಳೂರ ಅವರ 'ಗಂಡುಗಲಿ ಕುಮಾರರಾಮ' ಯಕ್ಷಗಾನದ ಕಥಾ ನಿರೂಪಣೆ ಬಳ್ಳಾರಿಯ ಪಾಳೆಗಾರರ ಚರಿತ್ರೆಗೆ ಸಂಬಂಧಿಸಿದ ದಾಖಲೆಗಳನ್ನು ಭಾಷಾ ಪ್ರಯೋಗವನ್ನು ಯಕ್ಷಗಾನದ ಶೈಲಿಯಲ್ಲಿ ಮೂಡಿಬಂದಿದೆ.

ಬಳ್ಳಾರಿ ಮತ್ತು ಚಿತ್ರದುರ್ಗ ಪರಿಸರದಲ್ಲಿ ಜನಪ್ರಿಯವಾಗಿರುವ ಯಕ್ಷಗಾನ ಪ್ರಸಂಗಗಳಲ್ಲಿ ಕುಮಾರರಾಮನ ಕಥೆಯ ಸ್ಥೂಲ ಪರಿಚಯ ಹೀಗಿದೆ. ಶಿವನು ಕೈಲಾಸದಲ್ಲಿರುವಾಗ ಮಾನವ ರುಂಡವೊಂದು ಅವನ ಕೊರಳನ್ನು ಬಂದು ಸೇರುತ್ತದೆ. ಆ ರುಂಡ ಯಾರದೆಂದು ಪಾರ್ವತಿಯು ವಿಚಾರಿಸಲು ಶಿವನು ಕುಮಾರರಾಮನ ಕಥೆಯನ್ನು ಆಕೆಗೆ ಹೇಳುತ್ತಾನೆ.[೩೧]

ಈ ಭಾಗಗಳಲ್ಲಿ ಸಾಮಾನ್ಯವಾಗಿ ಆದಿ ಕರ್ನಾಟಕರು ಆಡುತ್ತಾರೆಂದು ತಿಳಿದುಬರುತ್ತದೆ.[೩೨] ಕುಮಾರರಾಮನ ನಾಟಕ, ಕುಮಾರರಾಮನ ಕಥೆ ಇತ್ಯಾದಿ ಇವು ಕುಮಾರರಾಮನ ವೀರತನ, ಶೃಂಗಾರ ಒಳಗೊಂಡಂತೆ, ಭಕ್ತಿ ಪ್ರಧಾನ ಶೈಲಿಯಾಗಿ ಕಂಡುಬಂದಿವೆ. ಹೀಗಾಗಿ ಕುಮಾರರಾಮನು ಮೌಖಿಕವಾಗಿ ಸಾಹಿತ್ಯದ ರೂಪದಲ್ಲಿ ಜನರ ದೈವವಾಗಿ ಬೆಳೆದಿರುವುದು ಕಂಡುಬರುತ್ತದೆ.

**ಬುರ್ರಕಥಾ**

ಜನಪದ ಪರಂಪರೆ ನೆಲಮೂಲ ಸಂಸ್ಕೃತಿಯ ತಾಯಿ ಬೇರಾಗಿದ್ದು, ಮಾನವನ ಮೂಲದಲ್ಲಿ ಹುಟ್ಟಿಕೊಂಡ ಆಚರಣೆ, ಉಡುಗೆ, ತೊಡುಗೆ, ಸಂಪ್ರದಾಯ ಒಟ್ಟಾರೆ ಅವನ ಜೀವನಕ್ರಮ ಅವನು ಕಟ್ಟಿಕೊಂಡ ಬದುಕಿನ ಮೌಲ್ಯ ತನ್ನ ಅಭಿವ್ಯಕ್ತಿಗೆ ರೂಪಕವಾಗಿ ಜನ್ಮ ತಾಳಿದ್ದೆ ನೃತ್ಯ, ಕಾವ್ಯ. ಹೀಗೆ ಜನಪದರ ಜೀವನವನ್ನು ಗ್ರಹಿಸಲು ಈ ನೃತ್ಯ ಮತ್ತು ಕಾವ್ಯ ಪ್ರಮುಖ ಪಾತ್ರ ವಹಿಸುತ್ತದೆ. ಜನಪದ ನೃತ್ಯದಲ್ಲಿ ಕೋಲಾಟ, ಡೊಳ್ಳು ಕುಣಿತ ಮೊದಲಾದವು ಕಂಡುಬಂದರೆ ಜನಪದ

ಕಾವ್ಯಗಳಲ್ಲಿ ಸೋಬಾನೆ ಪದ, ಗೀಗಿ ಪದ, ಲಾವಣಿಗಳು, ದಾಸರ ಪದ, ಚೌಡಿಕೆ ಪದ ಹಾಗೆಯೇ ಬಳ್ಳಾರಿ ಪರಿಸರದಲ್ಲಿ ಬುಡ್ಗ ಜಂಗಮರು ಹಾಡುವ ಬುರ‍್ರ ಕಥಾ ಪ್ರಕಾರ ಹೀಗೆ ಹಲವು ಕಾವ್ಯ ಪ್ರಕಾರಗಳನ್ನು ನೋಡಬಹುದು.

ಬುರ‍್ರ ಕಥಾ ಪ್ರಕಾರವು ಕಾವ್ಯ ಮತ್ತು ನಾಟಕಗಳ ಸಮ್ಮಿಶ್ರದಂತೆ ಕಂಡುಬರುತ್ತದೆ. ಹಾಡು ಮಧ್ಯ ಮಧ್ಯ ಸಂಭಾಷಣೆ, ಹೀಗೆ ನಿರಂತರವಾಗಿ ಸಾಗುವ ಈ ಕಾವ್ಯಗಳಿಗೆ ಬುಡ್ಗಾ ಎನ್ನುವ ತಂಬೂರಿ, ಗಗ್ಗರಿ ಮತ್ತು ಬುರ‍್ರ ಎನ್ನುವ ಚರ್ಮವಾದ್ಯವನ್ನು ಬಳಸುತ್ತಾರೆ. ಬಹುಶಃ ಬುರ‍್ರಾ ಎನ್ನುವ ಚರ್ಮವಾದ್ಯವನ್ನು ಪ್ರಮುಖವಾಗಿ ಬಳಸುವುದರಿಂದ ಈ ಕಾವ್ಯ ಪ್ರಕಾರಕ್ಕೆ ಬುರ‍್ರಕಥಾ ಪ್ರಕಾರ ಎಂದು ಹೆಸರು ಬಂದಿರಬಹುದು.

ನೀಲಗಾರರು ಮಂಟೇಸ್ವಾಮಿ ಕಾವ್ಯವನ್ನು ಹಾಡುವಂತೆ ಬುಡ್ಗಾ ಜಂಗಮ ಜನಾಂಗವು ಬುರ‍್ರ ಕಥಾ ಪ್ರಕಾರವನ್ನು ಸೃಷ್ಟಿಸಿಕೊಂಡು ಪೋಷಿಸಿಕೊಂಡು ಬಂದಿದೆ. ಬುಡ್ಗ ಜನಾಂಗವು ಮೂಲತಃ ಆಂಧ್ರದವರಾಗಿದ್ದು, ಕರ್ನಾಟಕದ ಗಡಿಗಳಲ್ಲೂ ಕಂಡುಬರುವ ಪರಿಶಿಷ್ಟ ಅಲೆಮಾರಿ ಸಮುದಾಯವಾಗಿದೆ. ಕರ್ನಾಟಕದಾದ್ಯಂತ ಸುಮಾರು ಒಂದು ಲಕ್ಷದಷ್ಟು ಜನಸಂಖ್ಯೆಯನ್ನುಳ್ಳ ಈ ಸಮುದಾಯವು ಆಂಧ್ರ, ಕರ್ನಾಟಕ ಮಧ್ಯದ ಅವಿನಾಭಾವ ಸಂಬಂಧದಂತೆ ಗೋಚರಿಸುತ್ತದೆ. ಬುಡ್ಗ ಜಂಗಮರು ಮಾತೃಪ್ರಧಾನ ಮಾತೃ ಮೂಲ ಸಂಸ್ಕೃತಿಗೆ ಒಳಗಾದವರು. ಮಾತೃಮಯ ಸಂಸ್ಕೃತಿಯ ಬೇರುಗಳು ಈ ಜನಾಂಗದಲ್ಲಿ ಕಂಡುಬರುತ್ತದೆ. ಬುರ‍್ರ ಕಥೆ ಹಾಡುಗಾರಿಕೆ ಈ ಸಮುದಾಯಕ್ಕೆ ಮಾತ್ರ ಮೀಸಲಾದ ಜನಪದ ಕಾವ್ಯ ಪ್ರಕಾರವಾಗಿದೆ. ಬುರ‍್ರಕಥೆಯ ಹಾಡುಗಾರಿಕೆ ಪುರುಷ ಮತ್ತು ಸ್ತ್ರೀ ಇಬ್ಬರಲ್ಲಿಯೂ ಬಳಕೆಯಲ್ಲಿದೆ. ಬುರ‍್ರ ಕಥೆ ಹಾಡುವುದನ್ನು ಒಂದು ಧಾರ್ಮಿಕ ವಿಧಿಯಾಚರಣೆ ಎಂದು ಭಾವಿಸಲಾಗುತ್ತದೆ. ಬುರ‍್ರ ಕಥೆ ಹಾಡುವವರನ್ನು ವ್ಯವಸ್ಥೆಯಲ್ಲಿ ತುಂಬಾ ನಿಕೃಷ್ಟವಾಗಿ ನೋಡಿದರೂ ಹಾಡುಗಾರಿಕೆ ಸಂದರ್ಭದಲ್ಲಿ ವಿಶೇಷ ಗೌರವ ದೊರೆಯುತ್ತದೆ. ಮಳೆ ಬಾರದಿದ್ದರೆ, ಊರಿಗೆ ಅಥವಾ ತಮ್ಮ ಮನೆಗೆ ಒಳ್ಳೆಯದಾಗಬೇಕೆಂದು ಭಾವಿಸುವವರು ಬುರ‍್ರಕಥೆಯನ್ನು ಹಾಡಿಸುತ್ತಾರೆ. ಬುರ‍್ರ ಕಥೆ ಪ್ರದರ್ಶನಗೊಳ್ಳುವ ಕ್ರಮ ಈ ರೀತಿ ಇದೆ. ೧. ಹರಕೆಯ ಬುರ‍್ರಕಥೆ ೨. ಆಮಂತ್ರಣ ಬುರ‍್ರ ಕಥೆ ೩. ಬಯಲು ಬುರ‍್ರ ಕಥೆ. ಬುರ‍್ರ ಕಥೆಯನ್ನು ಹಾಡಿಸಿ ಅವರಿಗೆ ಬಟ್ಟೆ, ಆಕಳು ಇಲ್ಲವೆ ದವಸ ಧಾನ್ಯಗಳನ್ನು ಕಾಣಿಕೆಯಾಗಿ ಕೊಡುತ್ತಾರೆ.

ಸಾಮಾನ್ಯವಾಗಿ ಬುರ‍್ರ ಕಥೆ ಹಾಡುಗಾರಿಕೆ ಎಲ್ಲಾ ಜನಪದ ಹಾಡುಗಾರಿಕೆಗಳಂತೆಯೆ ಹಾತ್ರಿಯ ವೇಳೆ ಜರುಗುತ್ತದೆ. ಮೊದಲಿಗೆ ಕಳಸ ಪೂಜೆ ಮಾಡುತ್ತಾರೆ. ಮತ್ತು ದೇವಾನು ದೇವತೆಗಳನ್ನು ಸ್ತುತಿಸುವ ಹಾಡುಗಳನ್ನು ಹಾಡುತ್ತಾರೆ. ನಂತರ ಕಥೆಯ ಹಾಡುಗಾರಿಕೆಗೆ ತೊಡಗುತ್ತಾರೆ. ಬುರ‍್ರ ಕಥೆಯ ಹಾಡುಗಾರಿಕೆ ಎಂದರೆ ಅಭಿನಯ, ಸಂಭಾಷಣೆ ಮತ್ತು ಹಾಡುಗಾರಿಕೆ. ಬುಡ್ಗ ಎನ್ನುವ ವಾದ್ಯ, ತಂಬೂರಿ, ಗಗ್ಗರಿಗಳನ್ನು ಬಳಸಿ ಹಾಡುವ ಇವರು ಸಾಮಾನ್ಯವಾಗಿ ಇಬ್ಬರು ಅಥವಾ ಮೂವರು ಸೇರಿ ಹಾಡುತ್ತಾರೆ. ಮುಖ್ಯ ಹಾಡುಗಾರ ಕಥೆಯನ್ನು ಹಾಡಿದಂತೆ ಹಿಮ್ಮೇಳದವರು

ಡುಮ್ಮಿ ಬಾರಿಸುತ್ತಾ 'ತಂದಾನ ತಂದಾನ, ತಾನ ತಾನ ತಂದಾನೆ' ಎಂದು ಹಾಡುತ್ತಾರೆ. ಮುಖ್ಯ ಹಾಡುಗಾರ್ತಿ ಸಂಭಾಷಣೆ ಹೇಳಬೇಕಾದರೆ ಹೌದು, ಹಾಂ, ಆಹಾಂ, ಮುಂತಾದ ಉದ್ಗಾರಗಳನ್ನು ಹಿಮ್ಮೇಳದವರು ಮಾಡುತ್ತಾರೆ. ಕಥೆ ಯಾವುದೇ ಇದ್ದರೂ ಹಾಡುವ ಶೈಲಿ ಪ್ರಾರ್ಥನೆ ಮುಂತಾದವುಗಳು ಮೇಳದಿಂದ ಮೇಳಕ್ಕೆ ಅಲ್ಪ ಸ್ವಲ್ಪ ಭಿನ್ನತೆಯನ್ನು ಹೊಂದಿರುತ್ತದೆ.

ಬುರ್ರ ಕಥೆಯ ಕಲಾವಿದರು ತಮ್ಮ ಹಾಡುಗಾರಿಕೆ ಮೂಲಕ ಒಂದು ವಿಶಿಷ್ಟ ಸನ್ನಿವೇಶವನ್ನೇ ಸೃಷ್ಟಿ ಮಾಡಿಬಿಡುತ್ತಾರೆ. ಸಾಮಾನ್ಯವಾಗಿ ಬಳ್ಳಾರಿ ಪ್ರಾಂತ್ಯದಲ್ಲಿರುವ ಬುಡ್ಗ ಜಂಗಮರು ಬಾಲ ನಾಗಮ್ಮ, ಕುಮಾರರಾಮ, ಕೃಷ್ಣಗೊಲ್ಲರ ಕಾವ್ಯ, ಎಲ್ಲಮ್ಮನ ಕಥೆ, ಬಲಿಚಕ್ರವರ್ತಿಯ ಕಥೆ, ಬಬ್ಬಲಿ ನಾಗಿರೆಡ್ಡಿ ಕಥೆ, ಮಾರ್ವಾಡಿ ಶೇಠಿ ಕಥೆ, ಆದವಾನಿ ಲಕ್ಷ್ಮಮ್ಮನ ಕಥೆ, ಗುಡೇಕಲ್ ಭೀಮಲಿಂಗನ ಕಥೆ ಮುಂತಾದ ಕಾವ್ಯಗಳನ್ನು ಹಾಡುತ್ತಾರೆ. ಸ್ಥಳೀಯ ಸಾಂಸ್ಕೃತಿಕ ವೀರರ ಕಥನಗಳು, ಪವಾಡ ಪುರುಷರ, ಬೈರಾಗಿಗಳ, ಸಾಧಕರ ಮಹಿಮೆಗಳನ್ನು ಅವರ ಜೀವನ ಪ್ರೀತಿಯ ವಿಶೇಷಗಳೆನಿಸಿದ ಮದ್ಯ, ಮಾಂಸ, ಭಂಗಿ ಸೇವನೆಯಂತಹ ನಿರಾಕರಿಸಲಾಗದ ವಿಚಾರಗಳ ದೀರ್ಘ ಕಥನಗಳು ನಮ್ಮಲ್ಲಿವೆ. ಈ ಕಥನಗಳೆ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯನ್ನು ಇತಿಹಾಸವನ್ನು ನಿರೂಪಿಸಬಲ್ಲಂಥ ಶಕ್ತಿ ಪಡೆದವುಗಳು.

ಬಳ್ಳಾರಿ ಜಿಲ್ಲೆಯ ಒಬ್ಬ ಸಾಮಾನ್ಯ ಐತಿಹಾಸಿಕ ವ್ಯಕ್ತಿಯಾದ ಕುಮಾರರಾಮನನ್ನು ನಮ್ಮ ಜನಪದರು ಸಾಂಸ್ಕೃತಿಕ ವ್ಯಕ್ತಿಯಾಗಿ ಪರಿಗಣಿಸುತ್ತಾರೆ. ವಿಜಯನಗರ ಪೂರ್ವದ ಒಬ್ಬ ಸಾಮಾನ್ಯ ರಾಜನನ್ನು ಅವನ ಸಚ್ಚಾರಿತ್ರ್ಯಕ್ಕಾಗಿಯೇ ಆತನನ್ನು ಒಬ್ಬ ಪೌರಾಣಿಕ ವ್ಯಕ್ತಿಯಾಗಿ ಜನಪದರು ಆರಾಧಿಸುತ್ತಾರೆ. ಈ ಬುಡ್ಗಾ ಜಂಗಮರು ಕೂಡ ಕುಮಾರರಾಮನ ಕಾವ್ಯವನ್ನು ಬುರ್ರ ಕಥಾ ರೂಪದಲ್ಲಿ ಹಾಡುತ್ತಾರೆ.

**ಕೋಲಾಟ ಪದಗಳು**

ಕೋಲಾಟ ಪದಗಳು ಗ್ರಾಮೀಣ ಭಾಗಗಳಲ್ಲಿ ಮೌಖಿಕವಾಗಿ ಅಭಿವ್ಯಕ್ತಿಗೊಳ್ಳುವ ಕಲೆಗಳಾಗಿವೆ. ಬಹಳ ಹಿಂದಿನಿಂದಲೂ ಈ ಕೋಲಾಟ ಪದಗಳು ರೂಢಿಯಲ್ಲಿವೆ. ಇಂತಹ ಹಾಡುಗಳನ್ನು ಕುಣಿಯುತ್ತಾ, ಜಾತ್ರೆಗಳು, ಹಬ್ಬ ಹರಿದಿನಗಳು, ಇತರೆ ಧಾರ್ಮಿಕ ಉತ್ಸವಗಳ ಸಂದರ್ಭಗಳಲ್ಲಿ ಹಾಡುತ್ತಾ ಕುಣಿಯುವುದು ಇತ್ತೀಚಿನ ದಿನಗಳಲ್ಲೂ ಹೆಚ್ಚಾಗಿ ಗ್ರಾಮೀಣ ಭಾಗಗಳಲ್ಲಿ ಕಾಣುತ್ತೇವೆ. ಇಂತಹ ಕೋಲಿನ ಹಾಡುಗಳನ್ನು ಕುಮಾರರಾಮನ ಹೆಸರಿನಲ್ಲೂ ಕಾಣುವುದು ಗಮನಾರ್ಹವಾಗಿದೆ. ಸಾಹಿತ್ಯ ಪ್ರಕಾರಗಳ ಪ್ರತಿಯೊಂದು ಭಾಗಗಳಲ್ಲೂ ಕುಮಾರರಾಮ ಬೆರೆತುಹೋಗಿದ್ದಾನೆ. ಕುಮಾರರಾಮನನ್ನು ಕುರಿತಂತೆ ಇತ್ತೀಚೆಗೆ ಸಂಗ್ರಹಿಸಿರುವ ಕೋಲಿನ ಪದಗಳು ಹೀಗಿವೆ.

ಕುಮ್ಮಟದುರ್ಗದ ಅರಸರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸೇರಿ ಹೋಗಿದ್ದು, ಶ್ರೇಷ್ಠ ಸಾಹಿತ್ಯ ರೂಪಾಂತರಗಳಿಗೆ ಸಾಕ್ಷಿಯಾಗಿದ್ದಾರೆ. ಕುಮಾರರಾಮ ಜನಪದ ವೀರನಾಗಿ ಗುರ್ತಿಸಿ ಕೊಂಡಿರುವುದರಿಂದಲೇ ಮಧ್ಯಕಾಲೀನ ಕನ್ನಡ ಸಾಹಿತ್ಯ ಚರಿತ್ರೆಯು ಬಹುವಿಸ್ತಾರಗೊಂಡಿದೆ

ಎಂದರೆ ತಪ್ಪಾಗಲಾರದು. ಪ್ರಸ್ತುತ ಅಧ್ಯಾಯದಲ್ಲಿ ಚರ್ಚೆ ಮಾಡಿರುವಂತೆ ಕುಮಾರರಾಮನನ್ನು ಕುರಿತಂತೆ ಜನಪದ ಸಾಹಿತ್ಯದ ಪ್ರಕಾರಗಳಾದ ಲಾವಣಿಗಳು, ಯಕ್ಷಗಾನಗಳು, ಕೋಲಾಟ ಪದಗಳು ಕರ್ನಾಟಕದಾದ್ಯಂತ ರಚನೆಯಾಗುತ್ತಲೇ ಇವೆ. ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ, ವಿಭಿನ್ನ ಜನಾಂಗಗಳ ಜನಮನದಲ್ಲಿ ಆರಾಧ್ಯ ದೈವನಾಗಿ ನೆಲೆಸಿರುವುದನ್ನು ಪ್ರಸ್ತುತದಲ್ಲಿ ಕಾಣುತ್ತಿದ್ದೇವೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಕುಮಾರರಾಮ ಅಪಾರವಾದ ಕೊಡುಗೆ ನೀಡಿದ್ದಾನೆ. ಕಾರಣ ಕುಮಾರರಾಮ ಚಾರಿತ್ರಿಕ ವ್ಯಕ್ತಿಯಾಗಿ ಒಬ್ಬ ರಾಜನಾಗಿದ್ದರೂ ಅಲ್ಲಿನ ಸಮಾಜಕ್ಕೆ ಪೂರಕವಾಗಿ ನಡೆದುಕೊಳ್ಳುವಂತಹ ವಿಶೇಷ ವ್ಯಕ್ತಿತ್ವ ಈತನಲ್ಲಿತ್ತು. ಪರಸ್ತ್ರೀಯರನ್ನು ಗೌರವಿಸುವುದು, ಗುರುಹಿರಿಯರಿಗೆ ನಮ್ರತೆಯಿಂದ ನಡೆದುಕೊಳ್ಳುವುದು, ಸೈನಿಕರನ್ನು ಮಕ್ಕಳಂತೆ, ಸ್ನೇಹಿತರಂತೆ ಕಾಣುವುದು ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಪ್ರಜೆಗಳಿಗಾಗಿ ಬಗೆಹರಿಸುವ ಆದರ್ಶ ವ್ಯಕ್ತಿತ್ವ ಈತನಲ್ಲಿತ್ತು. ಈತನ ಸಮಕಾಲೀನ ಅರಸರಾಗಲೀ ಅಥವಾ ಪೂರ್ವದ ಅರಸರಾಗಲೀ ಕುಮಾರರಾಮನನ್ನು ಹೋಲಿಸುವಷ್ಟು ಆದರ್ಶ ವ್ಯಕ್ತಿಗಳಾಗಿರಲಿಲ್ಲ ಎನ್ನುವುದು ಸತ್ಯವೇ ಸರಿ. ಪ್ರಸ್ತುತ ಸಮಾಜಕ್ಕೆ ಈತನ ಎಲ್ಲಾ ನಡವಳಿಕೆಗಳು ತುಂಬಾ ಜರೂರು ಎನಿಸಿವೆ.

ಹೀಗಾಗಿಯೇ ಮೌಖಿಕ ಸಾಹಿತ್ಯಗಳಲ್ಲಿ, ಲಿಖಿತ ಸಾಹಿತ್ಯಗಳಲ್ಲಿ ಭಾಗವಾಗಿದ್ದಾನೆ. ಸಾಂಗತ್ಯ ಕೃತಿಗಳು, ಕಾದಂಬರಿಗಳು, ನಾಟಕಗಳು, ಹಲವು ಕೃತಿಗಳು, ಕಾವ್ಯಗಳು ಸೇರಿದಂತೆ ಲಾವಣಿಗಳು, ಕೋಲಾಟ ಪದಗಳು, ಬುರ್ರಕಥೆಗಳನ್ನು ಹಾಡುವಂತಹ ಪರಿಪಾಠವೇ ಬೆಳೆದಿದೆ. ಹೀಗಾಗಿ ಇನ್ನೂ ಹೆಚ್ಚು ಸಾಹಿತ್ಯ ಕೃತಿಗಳು ಕುಮಾರರಾಮನನ್ನು ಕುರಿತಂತೆ ಬೆಳಕು ಚೆಲ್ಲಬೇಕಾಗಿದೆ.

ಕುಮ್ಮಟದುರ್ಗದ ಇತಿಹಾಸ ತಿಳಿಯಲು ಸಾಹಿತ್ಯವು ಪ್ರಮುಖ ಪಾತ್ರ ವಹಿಸಿದೆ. ಅದರಲ್ಲಿ ಕುಮಾರರಾಮನ ವೀರತ್ವ, ಆದರ್ಶ ಸಾಹಸಗಳು ಕನ್ನಡದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಶಾಶ್ವತವಾಗಿ ಉಳಿಯುವಂತೆ ಮಾಡಿದೆ. ಆತನಲ್ಲಿದ್ದ ಧರ್ಮಶ್ರದ್ಧೆ ಮತ್ತು ಪರಾಕ್ರಮಗಳೇ ಕನ್ನಡ ಸಾಹಿತ್ಯದಲ್ಲಿ ಕುಮಾರರಾಮನ ಬಗೆಗೆ ಅನೇಕ ಸಾಹಿತ್ಯ ಕೃತಿಗಳು ರಚನೆಯಾಗಿವೆ.[೩೩]

ಕುಮಾರರಾಮನ ಜೀವನ ವ್ಯಕ್ತಿತ್ವ, ಶುಚಿತ್ವಗಳಿಂದ ಕೂಡಿದ್ದು ಜನಮನ್ನಣೆಗೆ ಪಾತ್ರವಾಗಿದೆ. ಕುಮ್ಮಟದುರ್ಗದ ಅವನತಿಯಾದಾಗಿನಿಂದಲೂ ಈತನ ಆದರ್ಶಗಳು ಪರಾಕ್ರಮ ನಮ್ಮಲ್ಲಿ ಜನತೆಯ ಆರಾಧ್ಯ ಮೌಲ್ಯಗಳಾಗಿವೆ. ಕರ್ನಾಟಕದಲ್ಲಿ ಅನೇಕ ಸಮುದಾಯಗಳಲ್ಲಿ ಈತನು ಆರಾಧ್ಯ ದೈವನಾಗಿ ಪರಿಣಮಿಸಿದ್ದಾನೆ. ಇದರಿಂದ ಕನ್ನಡ ಸಾಹಿತ್ಯದಲ್ಲಿ ಲಿಖಿತ ಸಾಹಿತ್ಯ, ಮೌಖಿಕ ಸಾಹಿತ್ಯದಲ್ಲಿ ಅನೇಕ ಕೃತಿಗಳ ಹುಟ್ಟಿಗೆ ಕಾರಣವಾಗಿದೆ.[೩೪] ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ನಂಜುಂಡನ ರಾಮನಾಥ ಚರಿತ್ರೆ, ಮಹಾಲಿಂಗಸ್ವಾಮಿಯ ಬಾಲರಾಮನ ಸಾಂಗತ್ಯ, ಪಾಂಚಾಳಗಂಗನ ಚೆನ್ನರಾಮನ ಸಾಂಗತ್ಯ ಕೃತಿಗಳಲ್ಲಿ ಕುಮಾರರಾಮನ ಆದರ್ಶ ಜೀವನ, ಸಾಹಸ ಮೌಲ್ಯಗಳನ್ನು ಸಾಹಿತ್ಯ ಕೃತಿಗಳಲ್ಲಿ ತಿಳಿಸಲಾಗಿದೆ. ನಂತರ ಜನಪದ ಸಾಹಿತ್ಯದಲ್ಲಿ ನಂಬಿಕೆ, ಆದರ್ಶ, ಸಂಪ್ರದಾಯ, ಗೀತೆಗಳು, ಕಥನಗೀತೆಗಳು, ಜನಪದ ಕಾವ್ಯಗಳಲ್ಲಿ ಹುಟ್ಟಿಕೊಂಡಿವೆ. ಈ ಜನಪದ ಸಾಹಿತ್ಯದಲ್ಲಿ

ಜನಪದರ ಆಚರಣೆಗಳಾದ ನಂಬಿಕೆ, ಸಹೋದರತ್ವ, ಪರಾಕ್ರಮ, ಬಲಿದಾನ ಇಂತಹ ಉದಾತ್ತ ಜೀವನದ ಮಹತ್ವವನ್ನು ಪ್ರಸ್ತುತ ಅಧ್ಯಯನದಲ್ಲಿ ತಿಳಿಸಲು ಪ್ರಯತ್ನಿಸಲಾಗಿದೆ.[೩೫]

ಕೃಷಿ ಮತ್ತು ಕೈಕಸುಬು ಸಂಸ್ಕೃತಿಯ ಭಾಗವಾಗಿದ್ದ ಶಾಕ್ತ ದೈವಗಳು ಇವರ ಕಾಲದಲ್ಲಿ ಕಂಡುಬರುತ್ತವೆ. ಒಂದೊಮ್ಮೆ ಸ್ಥಳೀಯ ಪ್ರಭುತ್ವಕ್ಕೆ ಬೇಕಾದಾಗ ಅದನ್ನು ದೇವತೆಯಾಗಿಸುವ ಕಾರ್ಯವು ನಡೆಯುತ್ತದೆ. ಶಾಕ್ತ ದೇವತೆಗಳಿಗೂ ಸ್ಥಳೀಯ ದೈವಗಳಿಗೂ ಪ್ರಭುತ್ವದ ಜತೆಗಿನ ತರತಮ ಸಂಬಂಧವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.[೩೬]

## ಕೊನೆ ಟಿಪ್ಪಣಿಗಳು

೧. ನರಸಿಂಹಾಚಾರ್ಯ ಆರ್. ಕರ್ನಾಟಕ ಕವಿಚರಿತೆ, ಸಂ.೨, ಪು. ೧೪೯

೨. ವರದರಾಜರಾವ್. ಜಿ, ಕುಮಾರರಾಮನ ಸಾಂಗತ್ಯಗಳು, ಪು. ೨

೩. ಮುಗಳಿ ರಂ.ಶ್ರೀ, ಕನ್ನಡ ಸಾಹಿತ್ಯ ಚರಿತ್ರೆ, ಪು. ೨೧೩

೪. ನಂಜುಂಡ ಕವಿಯ ರಾಮನಾಥ ಚರಿತೆ: ಸಾಂಸ್ಕೃತಿಕ ಅಧ್ಯಯನ, ಡಾ.ಎನ್. ತಳವಾರ, ಅಭಿರುಚಿ ಪ್ರಕಾಶನ, ಮೈಸೂರು, ೨೦೦೨, ಪು. ೮

೫. ಅದೇ, ಪು. ೯

೬. ಅದೇ, ಪು. ೧೦

೭. ಅದೇ, ಪು. ೧೨

೮. ಅದೇ, ಪು. ೧೩

೯. ಅದೇ, ಪು. ೧೫

೧೦. ಅದೇ, ಪು. ೧೭

೧೧. ಬಾಲರಾಮನ ಸಾಂಗತ್ಯ, ಡಾ.ಎಂ.ಎಂ.ಕಲಬುರ್ಗಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪು. ೨೪

೧೨. ಅದೇ, ಪು. ೨೦೪

೧೩. ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ (ಸಂ) ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು ಸಂ.೨, ಪು. ೧೦೧

೧೪. ವರದರಾಜರಾವ್ ಜಿ., ಕುಮಾರರಾಮನ ಸಾಂಗತ್ಯಗಳು, ಪು. ೨೬

೧೫. ಹುಲ್ಲೂರು ಶ್ರೀನಿವಾಸ ಜೋಯಿಸರು, ಶರಣ ಸಾಹಿತ್ಯ ಸಂಪುಟ, ಪು. ೧೦೧

೧೬. ಬಾಲರಾಮನ ಸಾಂಗತ್ಯ ಡಾ.ಎಂ.ಎಂ.ಕಲಬುರ್ಗಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪು. ೧೨೩

೧೭.ವರದರಾಜರಾವ್ ಜಿ., ಕುಮಾರರಾಮನ ಸಾಂಗತ್ಯಗಳು, ಪು. ೨೩

೧೮. ಅದೇ, ಪು. ೨೩

೧೯. ಅದೇ, ಪು. ೨೫

೨೦. ಅದೇ ಪು. ೯೧

೨೧. ಹುಲ್ಲೂರು ಶ್ರೀನಿವಾಸ ಜೋಯಿಸ ಗಂಡುಗಲಿ ಕುಮಾರರಾಮ ಹಿನ್ನುಡಿ, ಪು. ೧೨೪

೨೨. ಶ್ರೀಕಂಠ ಕೂಡಿಗೆ, ೧೯೯೪, ಪು. ೪೫

೨೩. ಅದೇ ಪು.೫೪೪

೨೪. ರುದ್ರಮೂರ್ತಿಶಾಸ್ತ್ರಿ, ೨೦೦೬, ಪು. ೧೬೬

೨೫. ಮಹಾದೇವ ನಾಯಕ (ಸಂ), ೧೯೬೨, ಪು. ೧೯೦

೨೬. ರಾಗೌ, ೧೯೭೮, ಪು. ೨೫

೨೭. ಕೃಷ್ಣಮೂರ್ತಿ ಹನೂರು, ೨೦೦೬, ಪು. ೧

೨೮. ಅದೇ, ಪು. ೨

೨೯. ಅದೇ, ಪು. ೩

೩೦. ಅದೇ, ಪು. ೪

೩೧. ಮಲ್ಲಾಪುರ ಬಿ.ವಿ., ಜಾನಪದ ಮತ್ತು ಸಮೂಹ ಮಾಧ್ಯಮ (ಲೇ), ಪು. ೪೬೯

೩೨. ಹುಲ್ಲೂರು ಶ್ರೀನಿವಾಸ ಜೋಯಿಸರು, ಗಂಡುಗಲಿ ಕುಮಾರರಾಮ, ಪು. ೧೨೪

೩೩. ನೋಡಿ: ಪ್ರಕಾಶ ಹುಣಸಿಗಿ, ಗಂಗಾವತಿ ತಾಲ್ಲೂಕು ದರ್ಶನ, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೭, ಪು. ೧೫.

೩೪. ನೋಡಿ: ಯೋಗೀಶ್ವರಪ್ಪ .ಡಿ.ಎನ್., ಕನ್ನಡ ಕಾವ್ಯಗಳಲ್ಲಿ ಚಾರಿತ್ರಿಕ ಅಂಶಗಳು, ೨೦೧೬ ಪು. ೭೯, ೯೫ ಮತ್ತು ೧೧೮ – ೧೨೩ ರಲ್ಲಿ ನಂಜುಂಡ ಕವಿಯ ರಾಮನಾಥ ಚರಿತೆಯಲ್ಲಿ ಚಾರಿತ್ರಿಕ ಅಂಶಗಳು, ಕುಮಾರರಾಮನ ಸಾಂಗತ್ಯಗಳು ಎಂಬ ಲೇಖನಗಳು ಉಪಯುಕ್ತವಾಗಿವೆ.

೩೫. ನೋಡಿ: ಶಿವರಾಮು: ಕನ್ನಡದ ಕಡುಗಲಿಗಳು, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೧೦, ಪು. ೨೪ ರಿಂದ ೪೯ ರವರೆಗೆ, ಗಂಡುಗಲಿ ಕುಮಾರರಾಮನ ಬಗ್ಗೆ ಲೇಖನವಿದೆ.

೩೬. ಹರ್ಲಾಪುರ ಬಿ : ಕೈಫಿಯತ್ತುಗಳಲ್ಲಿ ಕುಮಾರರಾಮ, ೧೯೯೯, ಮಹರ್ಷಿ ವಾಲ್ಮೀಕಿ ಪ್ರಕಶನ, ಹರ್ಲಾಪುರ ಇವರು ಸಾಂಸ್ಕೃತಿಕ ಚರಿತೆಯನ್ನು ಅನಾವರಣಗೊಳಿಸಿರುತ್ತಾರೆ.



# ಅಧ್ಯಾಯ : ಏಳು

# ಕುಮ್ಮಟದುರ್ಗದ ನಾಯಕರ ಕಾಲದ ಕಲೆ, ವಾಸ್ತುಶಿಲ್ಪ ಹಾಗೂ ಶಾಸನಗಳು

## ಅಧ್ಯಾಯ: ಏಳು

# ಕುಮ್ಮಟದುರ್ಗದ ನಾಯಕರ ಕಾಲದ ಕಲೆ, ವಾಸ್ತುಶಿಲ್ಪ ಹಾಗೂ ಶಾಸನಗಳು

### ೭.೧. ಕಲೆ ಮತ್ತು ವಾಸ್ತುಶಿಲ್ಪ

ಕನ್ನಡ ನಾಡು ಕಲೆ ಮತ್ತು ವಾಸ್ತುಶಿಲ್ಪಗಳ ತವರೂರು ಎನ್ನುವುದರಲ್ಲಿ ಸಂದೇಹವೇ ಇಲ್ಲ. ಪ್ರಾಚೀನ ಕಾಲದಿಂದಲೂ ಕನ್ನಡ ನಾಡಿನ ದೇವಾಲಯಗಳಲ್ಲಿ, ಕೆಲವು ಸ್ಮಾರಕಗಳಲ್ಲಿ ಕಲೆ, ವಾಸ್ತುಶಿಲ್ಪದ ಕೊರತೆಯೇ ಇಲ್ಲದಂತೆ ಕಟ್ಟಿಸಿರುವುದು ನಮ್ಮ ಕಣ್ಮುಂದೆ ಸಾಕ್ಷಿಯಾಗಿವೆ. ಸ್ಮಾರಕಗಳು ಎಂದರೆ ಕೇವಲ ದೇವಾಲಯ ಅಷ್ಟೇ ಅಲ್ಲ, ಶಿಲ್ಪಗಳು, ವೀರಗಲ್ಲುಗಳು, ಕೆಲವು ಕಟ್ಟಡಗಳು, ಮಂಟಪಗಳು, ನಿಷದಿಕಲ್ಲುಗಳು, ಗುಂಡುಕಲ್ಲುಗಳು, ಮಹಾಸತಿಕಲ್ಲುಗಳು ಇವೆಲ್ಲವನ್ನು ಒಟ್ಟಾಗಿ ಸ್ಮಾರಕಗಳ ಗುಂಪಿಗೆ ಸೇರಿಸಬಹುದು. ಸ್ಮಾರಕಗಳನ್ನು ಕೇವಲ ದೇವರಿಗಾಗಿ, ದೇವರ ಪೂಜೆಗಾಗಿ ಸೀಮಿತಗೊಳಿಸಿಲ್ಲ. ವೀರರ ನೆನಪಿಗಾಗಿ, ಹೋರಾಡಿ ಮಡಿದವರ ನೆನಪಿಗಾಗಿ, ಗಂಡನಿಗಾಗಿ ಸತಿಯಾದ ನೆನಪಿಗಾಗಿ, ಹಾಗೆಯೇ ಆಗಿನ ಸಮಾಜದಲ್ಲಿ ಬಳಕೆ ಮಾಡುತ್ತಿದ್ದ ಕೆಲವೊಂದು ಕಲ್ಲಿನಿಂದ ರಚನೆಯಾದ ವಸ್ತುಗಳನ್ನು ಸಹ ಸ್ಮಾರಕಗಳ ಗುಂಪಿಗೆ ಸೇರಿಸಬಹುದು. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಸ್ಮಾರಕಗಳನ್ನು ಹಲವು ಬಗೆಗಳಾಗಿ ವಿಂಗಡಿಸಬಹುದು.

**ದೇವಾಲಯಗಳು**

ಪ್ರಸ್ತುತ ಅಧ್ಯಯನದಲ್ಲಿ ಕುಮಾರರಾಮನಿಗೆ ಸಂಬಂಧಿಸಿದ ಸ್ಮಾರಕಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಕನ್ನಡ ನಾಡಿನಲ್ಲಿ ಸ್ಮಾರಕಗಳಿಗೆ ಪ್ರಮುಖ ಆದ್ಯತೆ ದೊರೆತಿದೆಯೆಂದರೆ ಬಹುಶಃ ಕುಮಾರರಾಮನಂತಹ ವೀರಕಲಿಗಳ ತ್ಯಾಗ ಬಲಿದಾನದಿಂದ ಎನ್ನಬಹುದು. ಕುಮಾರರಾಮನ ವ್ಯಕ್ತಿತ್ವ, ಪರನಾರಿ ಸೋದರತೆ, ಅನ್ಯರನ್ನು ಗೌರವಿಸುವುದು, ಕಷ್ಟ ಎಂದು ಬಂದವರಿಗೆ ಜೀವದ ಹಂಗನ್ನು ತೊರೆದು ರಕ್ಷಿಸುವುದು, ದೇಶಾಭಿಮಾನ ಇವೆಲ್ಲದರ ಆಧಾರದ ಮೇಲೆಯೇ ಅಷ್ಟೊಂದು ಸ್ಮಾರಕಗಳು ನಮ್ಮ ಕಣ್ಮುಂದಿವೆ. ಅಂದರೆ ಕುಮಾರರಾಮ ವ್ಯಕ್ತಿತ್ವ, ವೀರತನದ ಪ್ರಭಾವ ಮತ್ತು ಪ್ರೇರಣೆ ಜನಸಾಮಾನ್ಯರ ಮೇಲೆ ಎಷ್ಟರಮಟ್ಟಿಗೆ ಬೀರಿತ್ತು ಎಂಬುದನ್ನು ಸ್ಮಾರಕಗಳಿಂದ ಅರಿಯಬಹುದಾಗಿದೆ. ಮುಖ್ಯವಾಗಿ ವೀರರು ಮಡಿದಾಗ, ಅವರ ಸ್ಮಾರಕಗಳನ್ನು ನಿಲ್ಲಿಸುವ

ರೀತಿಯಲ್ಲೇ ವೀರಗಲ್ಲುಗಳನ್ನು ನಿಲ್ಲಿಸಿ ಪೂಜೆ ಕೈಗೊಳ್ಳುವ ಆಚಾರ ಹಿಂದೆ ಇತ್ತು. ಹೀಗಾಗಿ ಯುದ್ಧದಲ್ಲಿ ಮರಣವನ್ನಪ್ಪಿದ ವೀರನ ಸ್ಮರಣೆಗಾಗಿ ನಿರ್ಮಾಣವಾದ ಸ್ಮಾರಕಗಳನ್ನು ಕುರಿತಂತೆ ಮಾತ್ರ ಪ್ರಸ್ತುತ ಅಧ್ಯಯನ ಒಳಗೊಂಡಿದೆ.

ಸ್ಮಾರಕಗಳ ವಿಭಾಗಗಳಲ್ಲಿ ಈಗಾಗಲೇ ವೀರಗಲ್ಲುಗಳ ಕುರಿತು ಚರ್ಚಿಸಲಾಗಿದೆ. ಪ್ರಸ್ತುತ ವಿಷಯವು ದೇವಾಲಯಗಳನ್ನು ಕುರಿತಂತೆ ತಿಳಿಸಿಕೊಡುವಲ್ಲಿ ಮುಂದುವರೆಯುತ್ತದೆ. ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಮುಖ್ಯವಾಗಿ ದೇವಾಲಯಗಳಿಗೆ ಪ್ರತಿಮೆ, ಶಿಲ್ಪಗಳಿಗೆ ಆಧ್ಯತೆ ನೀಡಬೇಕಾಗುತ್ತದೆ. ಹೀಗಾಗಿ ವಾಸ್ತುಶಿಲ್ಪದಲ್ಲಿ ದೇವಾಲಯಗಳ ಕುರಿತು ಚರ್ಚೆ ನಡೆಯಬೇಕಿದೆ. ಕುಮಾರರಾಮ ಎಂದರೆ ಸಾಕು ಕರ್ನಾಟಕದಾದ್ಯಂತ ಹೆಚ್ಚು ಪ್ರದೇಶಗಳಲ್ಲಿ ದೈವಾಂಶ ಸಂಭೂತನನ್ನಾಗಿಯೇ ಸ್ಮರಿಸುತ್ತಾರೆ. ಹಾಗೂ ಭಕ್ತಿಯಿಂದ ಆರಾಧಿಸುವ ಮೂಲಕ ಜಾತ್ರೆ, ಉತ್ಸವಗಳೇ ಆತನ ವ್ಯಕ್ತಿತ್ವ, ಶೌರ್ಯತನದ ಪ್ರತಾಪಗಳನ್ನು ತೋರಿಸುತ್ತಾರೆ. ಹೀಗಾಗಿಯೇ ಕುಮಾರರಾಮನ ಪ್ರತ್ಯೇಕವಾದ ದೇವಾಲಯಗಳು ಕರ್ನಾಟಕದ ಹಲವು ಭಾಗಗಳಲ್ಲಿ ರಚನೆಗೊಂಡಿವೆ. ಇದುವರೆಗೂ ಒಟ್ಟು ಸುಮಾರು ೧೨ ದೇವಾಲಯಗಳು ದೊರಕಿದ್ದು, ಕೆಲವು ವಿಜಯನಗರ ಕಾಲದಲ್ಲಿ ನಿರ್ಮಿತವಾಗಿದ್ದು, ಇನ್ನೂ ಕೆಲವು ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ. ಕುಮಾರರಾಮನ ದೇವಾಲಯಗಳನ್ನು ಅಧ್ಯಯನ ಅನುಕೂಲಕ್ಕಾಗಿ ಮುಖ್ಯವಾಗಿ ೨ ಭಾಗಗಳನ್ನಾಗಿ ವಿಂಗಡಿಸಲಾಗಿದೆ.

೧. ವಾಸ್ತುಶೈಲಿ ದೇವಾಲಯಗಳು

೨. ಇತರೆ ದೇವಾಲಯಗಳು

**ವಾಸ್ತುಶೈಲಿ ದೇವಾಲಯಗಳು**

ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಕುಮಾರರಾಮನನ್ನು ಆರಾಧಿಸಲಾಗುತ್ತದೆ. ಈತನಿಗೆ ಸಂಬಂಧಿಸಿದಂತೆ ಸುಂದರವಾದ ವಾಸ್ತುಶೈಲಿಯನ್ನು ಒಳಗೊಂಡಿರುವ ೬ ದೇವಾಲಯಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ.

೧. ಕುಮಾರಸ್ವಾಮಿ ದೇವಾಲಯ – ತುಮಕೂರು ಜಿಲ್ಲೆ

೨. ಕುಮಾರರಾಮ – ಮಹಾಸತಿಯರ ದೇವಾಲಯ – ಉತ್ತರಕನ್ನಡ ಜಿಲ್ಲೆ

೩. ಜಟ್ಟಂಗಿರಾಮೇಶ್ವರ ದೇವಾಲಯ – ಕೊಪ್ಪಳ ಜಿಲ್ಲೆ

೪. ರಾಮಸ್ವಾಮಿ ದೇವಾಲಯ – ಬಳ್ಳಾರಿ ಜಿಲ್ಲೆ

೫. ರಾಮಸ್ವಾಮಿ ದೇವಾಲಯ – ಬಳ್ಳಾರಿ ಜಿಲ್ಲೆ

೬. ರಣಧೀರ ರಾಮನಾಥ ದೇವಾಲಯ – ಉತ್ತರ ಕನ್ನಡ ಜಿಲ್ಲೆ

## ೧. ಕುಮಾರಸ್ವಾಮಿ ದೇವಾಲಯ – ದೊಡ್ಡಪಾಲನಹಳ್ಳಿ (ತುಮಕೂರು ಜಿಲ್ಲೆ)

ಕುಮಾರಸ್ವಾಮಿ ದೇವಾಲಯವು ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿಗೆ ಸೇರಿದ ದೊಡ್ಡಪಾಲನಹಳ್ಳಿಯಲ್ಲಿ ಕಂಡುಬರುತ್ತದೆ. ಈ ದೇವಾಲಯವು ಶಿಥಿಲಗೊಂಡಿದ್ದರಿಂದ ಗ್ರಾಮಸ್ಥರ ಕೋರಿಕೆಯ ಮೇರೆಗೆ ಪುರಾತತ್ವ ಇಲಾಖೆಯು ಕ್ರಿ.ಶ. ೧೯೯೭ರಲ್ಲೇ ಸರ್ಕಾರದ ವಶಕ್ಕೆ ತೆಗೆದುಕೊಂಡು ಕ್ರಿ.ಶ. ೧೯೯೯ರಲ್ಲಿ ಪುನರ್‌ನವೀಕರಣಗೊಳಿಸಿತು. ಆದರೆ ಇದರ ನಿರ್ಮಾಣದ ಕುರಿತು ನಿಖರವಾದ ಮಾಹಿತಿಯಿಲ್ಲ. ಈ ದೇವಾಲಯವನ್ನು ವಾಸ್ತುಶೈಲಿಯನ್ನನುಸರಿಸಿಯೇ ನಿರ್ಮಿಸಲಾಗಿದೆ. ದಿನನಿತ್ಯ ಪೂಜೆ ಕೈಂಕರ್ಯಗಳು ನಡೆಯುತ್ತವೆ.

**ನಿರ್ಮಾಣ ಕಾಲ:** ಈ ದೇವಾಲಯವು ಪ್ರಾರಂಭದಲ್ಲಿ ಸುಮಾರು ೧೬–೧೭ನೇ ಶತಮಾನದಲ್ಲಿಯೇ ನಿರ್ಮಾಣವಾಗಿರುವುದು ಸ್ಥಳೀಯರಿಂದ ತಿಳಿದುಬರುತ್ತದೆ. ನಂತರ ಕಾಲ ಕ್ರಮೇಣ ಇದು ಹಾಳಾಗಿದ್ದರಿಂದ ಪುನಃ ಕ್ರಿ.ಶ. ೧೯೯೭ರಲ್ಲಿ ಜೀರ್ಣೋದ್ಧಾರಕ್ಕೆ ಕೈಹಾಕಿ ಕ್ರಿ.ಶ. ೧೯೯೯ರಲ್ಲಿ ಪುರಾತತ್ವ ಇಲಾಖೆ ಪುನರ್‌ನವೀಕರಣಗೊಳಿಸಿತು.

**ಗರ್ಭಗುಡಿ:** ಈ ದೇವಾಲಯ ಗರ್ಭಗುಡಿಯು ವಿಶಾಲವಾಗಿದ್ದು ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣೆ ಪತವಿದೆ. ಗರ್ಭಗುಡಿಯೊಳಗೆ ವೀರನು ಬಿಲ್ಲು ಹಿಡಿದಿರುವ ಶಿಲ್ಪವಿದೆ. ಈ ವೀರನು ಮಂಡಿಯೂರಿ ಎಡಗೈಯಲ್ಲಿ ಬಿಲ್ಲನ್ನು, ಬಲಗೈಯಲ್ಲಿ ಬಾಣವನ್ನು ಹಿಡಿದುಕೊಂಡಿದ್ದಾನೆ. ಸೊಂಟದಲ್ಲಿ ಕತ್ತಿಯೂ ಇದೆ. ಇದರ ಎತ್ತರ ೨ ಅಡಿ ಇದೆ. ಅಗಲ ೧ ಅಡಿ ಇದೆ. ಈ ಮೂರ್ತಿಯ ಹಿಂಬದಿಯಲ್ಲಿ ಬಲಗಡೆ ಹರಿಯಾಲದೇವಿಯ ವಿಗ್ರಹ ಹಾಗೂ ಕೆಲವು ಪಂಚಲೋಹದ ವಿಗ್ರಹಗಳಿವೆ. ಎಡಗಡೆ ಕಂಪಿಲರಾಯನ ಪಂಚಲೋಹದ ವಿಗ್ರಹವಿದೆ. ಮೂಲ ಮೂರ್ತಿಯ ಎದುರಲ್ಲಿ ಮತ್ತೊಂದು ಪಂಚಲೋಹದ ಉತ್ಸವಮೂರ್ತಿಯಿದ್ದು, ಸುಮಾರು ೨.೫ ಅಡಿ ಉದ್ದ ಹಾಗೂ ೨ ಅಡಿ ಎತ್ತರವಿದೆ.

**ಅಂತರಂಗ:** ಗರ್ಭಗುಡಿ, ಸುಕನಾಸಿ ನಂತರದ ಭಾಗವೇ ಅಂತರಂಗ. ಇಲ್ಲಿ ಗರ್ಭಗುಡಿಗೆ ಎದುರಾಗಿ ಮಧ್ಯದಲ್ಲಿ ಒಂದು 'ಗಾಳಿಕಂಬ' ಎಂದು ಕರೆಯುವ ಒಂದು ಕಂಬವಿದೆ. ದೆವ್ವ, ಭೂತಗಳಿಗೆ ಬಲಿಯಾದವರು ಈ ಕಂಬದಿಂದ ಪರಿಹರಿಸಿಕೊಳ್ಳುತ್ತಾರೆ. ಹಾಗೆಯೇ ಈ ಅಂತರದಲ್ಲಿ ಒಟ್ಟು ೧೫ ಅಂಕಣಗಳಿದ್ದು, ೧೨ ಕಂಬಗಳಿವೆ. ಎರಡು ಮೂಲೆಗಳಿಗೆ ಹೊಂದಿಕೊಂಡಂತೆ ಕಂಬಗಳಿವೆ. ಎಡ ಭಾಗದಲ್ಲಿ ಮೂರು ಕಂಬಗಳು, ಬಲಭಾಗದಲ್ಲಿ ಮೂರು ಕಂಬಗಳು ಇವೆ. ಇವುಗಳ ಜೊತೆಗೆ ರಾಮನ ಪರಿವಾರದವರ ಗುಂಡುಕಲ್ಲಿನ ಸ್ಮಾರಕಗಳು ಕಾಣಸಿಗುತ್ತವೆ.

**ರಂಗಮಂಟಪ:** ದೇವಾಲಯದ ಅಂತರಂಗದ ನಂತರದ ಭಾಗವೇ ರಂಗಮಂಟಪ ಅಥವಾ ಮಹಾಮಂಟಪ ಅಥವಾ ಹಜಾರ ಎಂದೆಲ್ಲಾ ಕರೆಯುತ್ತಾರೆ. ಇದು ದೇವಾಲಯದ ನಡುಭಾಗದಲ್ಲಿದೆ. ಇಲ್ಲಿ ಒಟ್ಟು ಹತ್ತು ಅಂಕಣಗಳನ್ನು ಕಾಣುತ್ತೇವೆ. ಅಂದರೆ ನಾಲ್ಕು ಮೂಲೆಗಳಿಗೆ ನಾಲ್ಕು ಕಂಬಗಳು, ಮಧ್ಯಕ್ಕೆ ೪ ಕಂಬಗಳು ಹಾಗೂ ಗೋಡೆಯ ಕಂಬಗಳು ೮ ಇರುವುದು ಕಂಡುಬರುತ್ತದೆ.

ಇಲ್ಲಿ ಯಾವುದೇ ಚಿತ್ರಗಳಾಗಲೀ, ಶಿಲ್ಪಗಳ ಕೆತ್ತನೆಗಳಾಗಲೀ ಇಲ್ಲ. ಆದರೆ ಬಾಗಿಲಿಗೆ ಹೊಂದಿಕೊಂಡಂತೆ ದ್ವಾರಪಾಲಕರ ಶಿಲ್ಪಗಳಿವೆ.

**ಹೊರಾಂಗಣ:** ದೇವಾಲಯದ ಮುಖಮಂಟಪವನ್ನು ಹೊರಾಂಗಣ ಎನ್ನಬಹುದು. ದೇವಾಲಯಕ್ಕೆ ಗರ್ಭಗುಡಿ, ಕಳಸ ಹೇಗೆ ಶೋಭೆ ತರುತ್ತದೋ, ಮುಖ್ಯ ದ್ವಾರವೂ ಅಷ್ಟೇ ಪ್ರಧಾನವಾದುದು. ಇಲ್ಲಿ ಮುಖ್ಯ ದ್ವಾರವನ್ನು ಗ್ರಾನೈಟ್ ಶಿಲೆಯಿಂದ ಮಾಡಲಾಗಿದೆ. ಕೆಲವು ದೇವಾಲಯಗಳಲ್ಲಿದ್ದಂತೆ ಇಲ್ಲಿಯೂ ದ್ವಾರಪಾಲಕರ ಶಿಲ್ಪಗಳು ಕಂಡುಬಂದಿವೆ. ಹಾಗೆಯೇ ದೇವಾಲಯ ಮುಂಭಾಗದಲ್ಲಿಯೂ ಕಂಬಗಳಿದ್ದು, ನಾಲ್ಕು ಮೂಲೆಗಳಿಗೆ ನಾಲ್ಕು ಕಂಬಗಳಿದ್ದು, ಗೋಡೆಗಳಿಗೆ ಹೊಂದಿಕೊಂಡಂತೆ ನಾಲ್ಕು ಕಂಬಗಳಿಂದ ನಿರ್ಮಿಸಲಾಗಿದೆ. ಆದರೆ ಇಲ್ಲಿ ಬೇರೆ ಯಾವುದೇ ರೀತಿಯ ಚಿತ್ರಕಲೆಗಳನ್ನು ಕಾಣಲು ಸಾಧ್ಯವಿಲ್ಲ.

**ಹೊರನೋಟ:** ಯಾವುದೇ ಒಂದು ದೇವಾಲಯಕ್ಕೆ ಗೋಪುರವು ತುಂಬಾ ಪ್ರಮುಖವೆನಿಸುತ್ತದೆ. ಈ ದೇವಾಲಯದ ಗೋಪುರವು ವಿಶೇಷವಾಗಿದೆ. ಕಾರಣ ಕುಮಾರರಾಮನ ಮೂರ್ತಿಯನ್ನು ಕೂಡಿಸಿ ಅದರ ಹಿಂಭಾಗದಲ್ಲಿ ಮೂರ್ತಿಗೆ ಹೊಂದಿಕೊಂಡಂತೆ ಗೋಪುರವನ್ನು ಕಟ್ಟಲಾಗಿದೆ. ಈ ದೇವಾಲಯಕ್ಕೆ ಹೆಬ್ಬಾಗಿಲು ಸುಮಾರು ೪೦ ಮೀ. ದೂರದಲ್ಲಿ ಕಾಣುತ್ತದೆ. ಇದರ ಬಾಗಿಲು ಪೂರ್ವಕ್ಕೆ ಮುಖ ಮಾಡಿದೆ. ದೇವಾಲಯವನ್ನು ಸಿಮೆಂಟಿನ ಗಾರೆ ಮತ್ತು ಬಿಳಿ ಕಲ್ಲಿನಿಂದ ಕಟ್ಟಲಾಗಿದ್ದು, ಗೋಪುರವನ್ನು ಮಾತ್ರ ಸಿಮೆಂಟ್, ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಲಾಗಿದೆ.

ಕುಮಾರರಾಮನ ಸ್ಮರಣೆಗಾಗಿ ದೇವಾಲಯವನ್ನು ಕಟ್ಟಿಸಿ ಪೂಜಿಸುತ್ತಿರುವುದು ಕಂಡುಬರುತ್ತದೆ. ವಿಶೇಷವೆಂದರೆ ಈ ಗ್ರಾಮದ ಸುತ್ತಮುತ್ತಲಲ್ಲಿ ಈತನ ಹೆಸರಿನಲ್ಲೇ ಹಲವು ಸಂಘ ಸಂಸ್ಥೆಗಳನ್ನು ಅದೇ ರೀತಿಯಾಗಿ ಜಕ್ಕೇನಹಳ್ಳಿ ಎಂಬ ಗ್ರಾಮದಲ್ಲಿ ಕುಮಾರರಾಮನ ಹೆಸರಿನಲ್ಲಿ ಒಂದು ಶಾಲೆಯಿದೆ.

ಇದು ಕುಮಾರರಾಮನ ದೇವಾಲಯಗಳಲ್ಲಿಯೇ ಅತ್ಯಂತ ದೊಡ್ಡದಾಗಿರುವುದು ವಿಶೇಷವೇನಲ್ಲ. ಆದರೆ ಕುಮಾರರಾಮನನ್ನು ಶೈಕ್ಷಣಿಕ ವಲಯದ ಕ್ಷೇತ್ರಗಳಲ್ಲಿ ಆರಾಧಿಸುವುದನ್ನು ಕಾಣಲು ಈ ದೇವಾಲಯವು ಉತ್ತಮ ಉದಾಹರಣೆಯಾಗಿದೆ. ಶೈಕ್ಷಣಿಕ ಚಿಂತನೆಗಳಿಗೆ ಮತ್ತು ಶೈಕ್ಷಣಿಕ ಏಳಿಗೆಗೆ ಕುಮಾರರಾಮ ಉತ್ತೇಜನ ನೀಡಿರಬಹುದು. ಏಕೆಂದರೆ ಒಂದು ಶಾಲೆಗೆ ಈತನ ಹೆಸರನ್ನು ಇಟ್ಟಿರುವುದು ಕುಮಾರರಾಮನು ಬಹುಶಃ ಶೈಕ್ಷಣಿಕ ವಲಯಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿದ್ದನೇನೋ ಅನಿಸುತ್ತದೆ. ಈ ಗುಡಿಯಲ್ಲಿ ಕಂಪಿಲರಾಯನ ಪಂಚಲೋಹದ ವಿಗ್ರಹವನ್ನು ನೋಡಿದಾಗ ಲೋಹ ತಯಾರಿಕೆಯ ಉದ್ದಿಮೆಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಿರಬಹುದು ಎಂದು ಅನಿಸುತ್ತದೆ.

**೨. ಕುಮಾರರಾಮ – ಮಹಾಸತಿಯರ ದೇವಾಲಯ – ಅನಿಲಗೋಡು (ಉತ್ತರ ಕನ್ನಡ ಜಿಲ್ಲೆ)**

ಕುಮಾರರಾಮನ ಪತ್ನಿಯರು ಇರುವ ಏಕೈಕ ದೇವಾಲಯವಾಗಿರುವ ಇದು ಶರಾವತಿ

ನದಿಯ ದಂಡೆಯಲ್ಲಿದೆ. ಇಲ್ಲಿ ಮಹಾಸತಿಯರ ಆರಾಧನೆಯನ್ನು ಸ್ಥಳೀಯರು ಮಾಡುತ್ತಾರೆ. ರಾಮನಾಥ ಚರಿತೆಯಲ್ಲಿ ಹೇಳಿರುವಂತೆ ಕುಮಾರರಾಮನ ಪತ್ನಿಯರು ಸತಿಯರಾದ ವಿಚಾರಕ್ಕೆ ಇಲ್ಲಿನ ಶಿಲ್ಪವು ಸಾಕ್ಷೀಕರಿಸುತ್ತದೆ.

**ನಿರ್ಮಾಣ ಕಾಲ:** ಕುಮಾರರಾಮ ಆಧುನಿಕ ಕಾಲದಲ್ಲಿ ದೇವತಾಪುರಾಷನಾಗಿ ಇಂದಿಗೂ ಪೂಜೆಗೊಳ್ಳುತ್ತಿರುವುದನ್ನು ಇಂದಿನ ದೇವಾಲಯಗಳಲ್ಲಿ ಕಾಣಬಹುದು. ಇದು ಉತ್ತರಕನ್ನಡ ಜಿಲ್ಲೆಯ ಹೊನ್ನಾವರ ತಾಲ್ಲೂಕಿಗೆ ಸೇರಿದ ಅನಿಲಗೋಡು ಎಂಬ ಗ್ರಾಮದಲ್ಲಿನ ದೇವಾಲಯವನ್ನು ಸು. ೧೯ನೇ ಶತಮಾನದಲ್ಲಿ ನಿರ್ಮಿಸಲಾಗಿದೆ.

**ಗರ್ಭಗುಡಿ:** ಈ ದೇವಾಲಯಕ್ಕೆ ಗರ್ಭಗುಡಿಯೇ ಮುಖ್ಯವಾದ ಮಂಟಪವಾಗಿದೆ. ಇಲ್ಲಿ ಕುಮಾರರಾಮನ ಯಾವುದೇ ಮೂರ್ತಿ ಇಲ್ಲ. ಬದಲಿಗೆ ಕುಮಾರರಾಮನ ತಲೆ ಎನ್ನಲಾದ ಕಲ್ಲುಗುಂಡು ಇದ್ದು, ಇದರ ಪಕ್ಕದಲ್ಲಿ ಒಂದು ಕತ್ತಿ, ಒಂದು ಛತ್ರಿ, ಒಂದು ಬಾವುಟವಿದೆ. ಇಲ್ಲಿ ಮುಖ್ಯವಾದ ಮೂರ್ತಿಯೆಂದರೆ ಮಹಾಸತಿಯರದ್ದು. ಸುಮಾರು ೩ ಅಡಿ ಎತ್ತರದ ಕಟ್ಟೆಗೆಯಿಂದ ಮಾಡಿದ ೪ ಸ್ತ್ರೀಮೂರ್ತಿಗಳಿದ್ದು, ಹೊನ್ನಸತಿ, ನಾಗಸತಿ, ಮಾಳಸತಿ ಮತ್ತು ಕೆಂಡಮಹಾಸತಿಗಳ ಮೂರ್ತಿಗಳು ಎಂದು ಅಲ್ಲಿನ ಸ್ಥಳೀಯರು ಹೇಳುತ್ತಾರೆ. ಈ ಮೂರ್ತಿಗಳಿಗೆ ಇಲ್ಲಿ ಮಹಾಪೂಜೆ ನಡೆಯುತ್ತದೆ. ಈ ದೇವಾಲಯಕ್ಕೆ ೬ ಎಕರೆ ಜಮೀನನ್ನು ಉಂಬಳಿಯಾಗಿ ನೀಡಲಾಗಿದೆ ಎಂದು ಸ್ಥಳೀಯರು ಹೇಳುವರು. ಈ ದೇವಾಲಯವು ಇತ್ತೀಚೆಗೆ ನಿರ್ಮಿಸಿದ್ದರೂ ಅಲ್ಲಿನ ಕುಮಾರರಾಮನ ಮೂರ್ತಿಯ ಜೊತೆಗಿರುವ ಸ್ತ್ರೀ ಮೂರ್ತಿಗಳು, ಅವರು ಸತಿಗಳಾದರು ಎಂಬ ವಿಚಾರವನ್ನು ಹೊರಹಾಕುತ್ತದೆ. ಅಂದರೆ ಕುಮಾರರಾಮನ ಸತಿಯರೇ ಇವರೆಂದು ಅಲ್ಲಿನ ಸ್ಥಳೀಯರು ಹೇಳುವರು. ಇದನ್ನು ಗಮನಿಸಿದಾಗ ಆ ಸಮಾಜದಲ್ಲಿ ಸತಿಪದ್ಧತಿ ಇತ್ತೆಂಬುದು ವೇದ್ಯವಾಗುತ್ತದೆ. ಅಂದರೆ ಸತಿಪದ್ಧತಿ ಕೇವಲ ಸಾಮಾನ್ಯರಿಗಷ್ಟೇ ಅಲ್ಲದೆ ರಾಜಮನೆತನದ ಸ್ತ್ರೀಯರಿಗೂ ತಪ್ಪಿರಲಿಲ್ಲ ಎಂದೆನಿಸುತ್ತದೆ. ಸಮಾಜದ ಆಚಾರ, ಸಂಪ್ರದಾಯ, ನಂಬಿಕೆಗಳಿಗೆ ಜನರು ಬದ್ಧರಾಗಿದ್ದರೆಂದು ಅನಿವಾರ್ಯ ಪರಿಸ್ಥಿತಿಗಳು ಬಂದರೂ ಸಂಪ್ರದಾಯಗಳನ್ನು ಬಿಡುವಂತಿರಲಿಲ್ಲ. ಇಂತಹ ಸಮಾಜ, ಸಂಸ್ಕೃತಿಯಲ್ಲಿನ ಸ್ತ್ರೀಗೆ ಕೆಲವು ಕ್ಷೇತ್ರಗಳಲ್ಲಿ ಸ್ಥಾನಮಾನಗಳಿದ್ದರೂ ಕೆಲವೊಂದು ಅಂದರೆ ಸತಿಪದ್ಧತಿಯಂತಹ ಆಚರಣೆಗಳನ್ನು ಬಿಡುವಂತಿರಲಿಲ್ಲ. ಇಂತಹ ಅನಿವಾರ್ಯ ಪರಿಸ್ಥಿತಿಗಳಿಂದಾಗಿ ಆಗಿನ ಸಮಾಜದಲ್ಲಿ ಸ್ತ್ರೀಯರಿಗಿದ್ದಂತಹ ಸ್ಥಾನಮಾನಗಳು ಕೆಳಮಟ್ಟದಲ್ಲಿಯೇ ಇದ್ದವೆಂದು ಅರ್ಥವಾಗುತ್ತದೆ.

**೩. ಜಟ್ಟಂಗಿರಾಮೇಶ್ವರ ದೇವಾಲಯ – ಕುಮ್ಮಟದುರ್ಗ (ಕೊಪ್ಪಳ ಜಿಲ್ಲೆ)**

ಈ ದೇವಾಲಯವು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿಗೆ ಸೇರಿರುವ ಕುಮಾರರಾಮನ ನಾಡಾದ ಕುಮ್ಮಟದುರ್ಗದ ಬೆಟ್ಟದಲ್ಲಿದೆ. ಇಲ್ಲಿ ಕುಮಾರರಾಮನ ಪರಿವಾರದವರ ರುಂಡಗಳು ಅಂದರೆ ಕಲ್ಲಿನ ಗುಂಡುಕಲ್ಲುಗಳು ಇವೆ. ಹೀಗಾಗಿ ಇವುಗಳ ಆಧಾರದ ಮೇಲೆ ಈ ದೇವಾಲಯ ಕುಮಾರರಾಮನದ್ದೇ ಎಂಬುದು ಸ್ಪಷ್ಟವಾಗುತ್ತದೆ. ಈ ದೇವಾಲಯವು ಒಂದು ಬಂಡೆಯ ರಕ್ಷಣೆ

ಪಡೆದಿರುವುದರಿಂದ ಇದುವರೆಗೂ ಯಾವುದೇ ಹಾನಿಯುಂಟಾಗಿಲ್ಲ. ಈ ದೇವಾಲಯವು ಚಿಕ್ಕದಾಗಿದ್ದರೂ ಸುರಕ್ಷಿತವಾಗಿದೆ.

**ನಿರ್ಮಾಣ ಕಾಲ:** ಈ ದೇವಾಲಯದ ನಿರ್ಮಾಣ ಕುರಿತಂತೆ ಯಾವುದೇ ಸ್ಪಷ್ಟ ವಿವರಗಳು ದೊರೆಯುವುದಿಲವಾದರೂ ದೇವಾಲಯದೊಳಗಿನ ಕಂಬಗಳ ಮೇಲಿನ ಕೆಲವೊಂದು ಚಿತ್ರಗಳನ್ನು ಅವುಗಳು ವಿಜಯನಗರದ ಕಾಲಕ್ಕೆ ಸೇರಿರುವಂತಹವು. ಹಾಗೆಯೇ ಕಂಬಗಳ ಮೇಲೆ ವಿಜಯನಗರ ಸಾಮ್ರಾಜ್ಯದ ಲಾಂಛನದ ಚಿತ್ರಗಳನ್ನು ಕೆತ್ತನೆ ಮಾಡಿರುವುದರಿಂದ ಸುಮಾರು ೧೪-೧೫ನೇ ಶತಮಾನದಲ್ಲಿ ಈ ದೇವಾಲಯವನ್ನು ನಿರ್ಮಿಸಿರುವ ಸಾಧ್ಯತೆಯಿದೆ.

**ಗರ್ಭಗುಡಿ:** ಈ ದೇವಾಲಯದ ಗರ್ಭಗುಡಿಯೊಳಗೆ ಸುಮಾರು ೧೨ ಗುಂಡುಕಲ್ಲುಗಳಿದ್ದು, ಈ ಕಲ್ಲುಗಳನ್ನು ಸುಮಾರು ೨ ಅಡಿ ಎತ್ತರದ ಪೀಠದ ಮೇಲೆ ಇರಿಸಲಾಗಿದೆ. ವಾರಕ್ಕೊಮ್ಮೆ ಇಲ್ಲಿ ಪೂಜಾ ಕಾರ್ಯ ನಡೆಯುತ್ತದೆ. ಆದರೆ ಜಾತ್ರೆಯ ಸಂದರ್ಭಗಳಲ್ಲಿ ಸುಮಾರು ೪ ದಿನ ವಿಶೇಷವಾಗಿ ಪೂಜಾ ಕೈಂಕರ್ಯಗಳನ್ನು ಕೈಗೊಳ್ಳುತ್ತಾರೆ.

**ರಂಗಮಂಟಪ:** ಗರ್ಭಗುಡಿಯ ನಂತರದಲ್ಲಿ ಬರುವುದೇ ಈ ರಂಗಮಂಟಪ. ಇದರ ಮಧ್ಯಭಾಗದಲ್ಲಿ ಸುತ್ತಲೂ ನಾಲ್ಕು ಕಂಬಗಳಿದ್ದು, ಮಧ್ಯ ಖಾಲಿ ಜಾಗವಿದೆ. ಈ ಕಂಬಗಳ ಮೇಲೆ ನಾನಾ ರೀತಿಯ ವಸ್ತುಗಳ, ಪ್ರಾಣಿಗಳ, ನೃತ್ಯಗಾರ್ತಿಯರ ಚಿತ್ರಗಳಿದ್ದು, ಕುದುರೆ ಮೇಲೆ ಕೂತಿರುವವನ ಚಿತ್ರ, ಬೇಟೆಯಾಡುತ್ತಿರುವ ಚಿತ್ರಗಳು, ಕೆಲವು ಉಬ್ಬುಶಿಲ್ಪಗಳನ್ನು ಕಾಣಬಹುದು. ಚಂದ್ರನ ಚಿತ್ರ, ಮೀನಿನ ಚಿತ್ರ, ಚಕ್ರ, ಶಂಖುವಿನ ಚಿತ್ರಗಳು ಮೂಡಿಬಂದಿವೆ.

ಈ ರಂಗಮಂಟಪಕ್ಕೆ ಮೂರು ಕಡೆ ಬಾಗಿಲುಗಳಿದ್ದು, ಇವೇ ದೇವಾಲಯದ ಹೆಬ್ಬಾಗಿಲು ಕೂಡಾ ಆಗಿವೆ. ಪೂರ್ವ, ಪಶ್ಚಿಮ ಮತ್ತು ಉತ್ತರಕ್ಕೆ ಅಭಿಮುಖವಾಗಿ ಬಾಗಿಲಿದ್ದು, ಎರಡೂ ಬದಿಯಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಉತ್ತರದ ಬಾಗಿಲನ್ನು ರತ್ನಾಜಿಯ ಬಾಗಿಲು, ಪೂರ್ವದ ಬಾಗಿಲನ್ನು ದಿಲ್ಲಿ ಬಾಗಿಲು, ಪಶ್ಚಿಮದ ಬಾಗಿಲನ್ನು ಹುಲಗಿ ಬಾಗಿಲೆಂದು ಸ್ಥಳೀಯರು ಹೇಳುತ್ತಾರೆ. ಉತ್ತರ ದಿಕ್ಕಿಗಿರುವ ಬಾಗಿಲಾದ ರತ್ನಾಜಿ ಬಾಗಿಲಲ್ಲಿ ದೇವಾಲಯದ ಒಳಗೆ ಹೋಗಬೇಕಾದರೆ ಹೊಸ್ತಿಲಲ್ಲಿ ಕೆಳಗಡೆ ಒಂದು ಮಹಿಳೆಯ ನಗ್ನ ಚಿತ್ರವಿದ್ದು ನಮಸ್ಕರಿಸುತ್ತಿರುವ ಭಂಗಿಯಲ್ಲಿದೆ. ಇದರ ಕುರಿತು ಅಲ್ಲಿನ ಸ್ಥಳೀಯರು ಆ ಚಿತ್ರ ರತ್ನಾಜಿಯದ್ದೇ, ರತ್ನಾಜಿಯ ಪಾಪ, ಕರ್ಮಗಳಿಗಾಗಿ ಅವಳಿಗೆ ಈ ಶಿಕ್ಷೆ, ಆಕೆಯನ್ನು ತುಳಿದುಕೊಂಡೇ ಕುಮಾರರಾಮನ ಗುಡಿಯೊಳಗೆ ಹೋಗಬೇಕು ಎಂಬುದು ಅಲ್ಲಿನವರ ಹೇಳಿಕೆಯಾಗಿದೆ.

**ಹೊರನೋಟ:** ಈ ದೇವಾಲಯದ ಮೂರು ಬಾಗಿಲುಗಳಲ್ಲಿ ಪಶ್ಚಿಮ ದಿಕ್ಕಿಗಿರುವ ಬಾಗಿಲಿನ ಗೋಡೆಯಲ್ಲಿ ಕುದುರೆಯ ಚಿತ್ರವಿರುವುದರಿಂದ ಅದರ ಬೊಲ್ಲನೆಂದು ಹೇಳುತ್ತಾರೆ. ಹಾಗೆಯೇ ಅದೇ ಬಾಗಿಲಿನ ಮುಂದೆ ಎರಡು ವೀರಗಲ್ಲುಗಳಿವೆ. ಆದರೆ ಯಾವುದೇ ಶಾಸನಗಳಿಲ್ಲ. ಒಂದು

ಕಲ್ಲಿನಲ್ಲಿ ಕುದುರೆಯ ಚಿತ್ರವಿದೆ. ಹೀಗಾಗಿ ಇದೂ ಬೊಲ್ಲನೆಂದೇ ಸ್ಥಳೀಯರು ಅಭಿಪ್ರಾಯಿಸುವರು. ದೇವಾಲಯಕ್ಕೆ ಹೊಂದಿಕೊಂಡಂತೆ ಹೆಬ್ಬಂಡೆ ಇದ್ದು, ಇದು ದೇವಾಲಯಕ್ಕೆ ರಕ್ಷಣೆ ಒದಗಿಸುತ್ತದೆ.

ಈ ದೇವಾಲಯದಲ್ಲಿ ಜಾತ್ರೆಯ ಸಂದರ್ಭದಲ್ಲಿ ಅಲ್ಲಿನ ಸುತ್ತಮುತ್ತಲ ಊರಿನವರೆಲ್ಲಾ ಸೇರಿ ಸುಮಾರು ಕಟ್ಟಿಗೆಯಿಂದ ಮಾಡಿದ ೧೦ ರುಂಡಗಳನ್ನು ಇರಿಸಿ ಪೂಜೆ ಸಲ್ಲಿಸುತ್ತಾರೆ. ಇನ್ನೊಂದು ವಿಶೇಷವೆಂದರೆ ಎಲ್ಲಾ ಜಾತಿಯವರು ಸೇರಿಕೊಂಡು ಹಬ್ಬ ಆಚರಿಸುತ್ತಾರೆ.

ಕುಮ್ಮಟದುರ್ಗದ ಗುಡ್ಡದಲ್ಲಿರುವ ಈ ದೇವಾಲಯವು ಅದರೊಳಗಿನ ಚಿತ್ರಗಳು, ಭಂಗಿಗಳು ಕೆಲವು ಸಂಗತಿಗಳನ್ನು ಹೊರಹಾಕುತ್ತವೆ. ಇದರ ಉತ್ತರ ದಿಕ್ಕಿಗಿರುವ ಬಾಗಿಲನ್ನು ಅಲ್ಲಿನ ಸ್ಥಳೀಯರು 'ರತ್ನಾಜಿಯ ಬಾಗಿಲು' ಎಂದು ಕರೆಯುವ ವಾಡಿಕೆಯುಂಟು. ಸ್ಥಳೀಯರು ಹೇಳುವ ಪ್ರಕಾರ ಈ ಬಾಗಿಲಿನ ಹೊಸ್ತಿಲಲ್ಲಿ ನಗ್ನ ಸ್ತ್ರೀಯ ಚಿತ್ರವನ್ನು ರತ್ನಾಜಿಯದ್ದೇ ಎಂದು. ಅವಳು ಮಾಡಿದ ಪಾಪ ಕರ್ಮಗಳಿಗೆ ಆ ಶಿಕ್ಷೆ ಅನುಭವಿಸಿದ್ದಾಳೆ. ಅಂದರೆ ಅವಳನ್ನು ತುಳಿದುಕೊಂಡೇ ರಾಮನ ಗುಡಿಯೊಳಗೆ ಹೋಗಬೇಕು ಅನ್ನುತ್ತಾರೆ. ಅಂದರೆ ಅಲ್ಲಿನ ಸಮಾಜ, ಸತ್ಯನಿಷ್ಠೆಗೆ ಹೆಚ್ಚು ಗೌರವಿಸುತ್ತಿದ್ದರು. ಪಾಪ ಮಾಡಿದವರು ಶಿಕ್ಷೆ ಅನುಭವಿಸಲೇಬೇಕು ಎಂಬ ಪಾಪ, ಕರ್ಮಫಲಗಳನ್ನು ನಂಬುತ್ತಿದ್ದರೆಂದು ಇದರಿಂದ ಖಚಿತವಾಗುತ್ತದೆ. ಶಿಕ್ಷೆಗೆ, ನ್ಯಾಯದ ಕಣ್ಣಿಗೆ, ಸತ್ಯದ ಕಣ್ಣಿಗೆ ಪುರುಷ ಬೇರೆಯಲ್ಲ, ಸ್ತ್ರೀ ಬೇರೆಯಲ್ಲ ಹಾಗೂ ಬಡವ ಬೇರೆ ಅಲ್ಲ, ಶ್ರೀಮಂತ ಬೇರೆ ಅಲ್ಲ ಎಂಬ ಸಂದೇಶವನ್ನು ಕೊಡುತ್ತದೆ.

**೪. ರಾಮಸ್ವಾಮಿ ದೇವಾಲಯ – ಮೆಟ್ರಿಕಿ (ಬಳ್ಳಾರಿ ಜಿಲ್ಲೆ)**

ಈ ದೇವಾಲಯವು ಗರ್ಭಗುಡಿ, ಅದರ ಸುತ್ತಲೂ ಆವರಣ, ಹೊರಾಂಗಣಗಳನ್ನು ಹೊಂದಿದ್ದು, ವಿಸ್ತಾರದಲ್ಲಿ ದೊಡ್ಡ ದೇವಾಲಯವಾಗಿದ್ದರೂ, ವಾಸ್ತುಶಿಲ್ಪದಲ್ಲಿ ಕೊರತೆಯನ್ನು ಹೊಂದಿದೆ. ಹೀಗಾಗಿ ಬೇರೆ ದೇವಾಲಯಗಳಿಗಿಂತ ತುಂಬಾ ದೊಡ್ಡದಾಗಿದ್ದರೂ ಅಷ್ಟೊಂದು ಪ್ರಾಮುಖ್ಯತೆಯನ್ನು ಪಡೆದುಕೊಂಡಿಲ್ಲ. ಈ ದೇವಾಲಯವು ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಮೆಟ್ರಿಕಿ ಗ್ರಾಮದಲ್ಲಿದೆ.

**ನಿರ್ಮಾಣ ಕಾಲ:** ಈ ದೇವಾಲಯದ ನಿರ್ಮಾಣವನ್ನು ಕುರಿತು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಕಾರಣ ಯಾವುದೇ ದಾಖಲೆಗಳಿಲ್ಲ. ದೇವಾಲಯದ ವಿವಿಧ ಭಾಗಗಳನ್ನು, ಅಲ್ಲಿನ ಚಿತ್ರಗಳು ಹಾಗೂ ಕೆಲವು ಲಕ್ಷಣಗಳ ಆಧಾರದ ಮೇಲೆ ಸುಮಾರು ೧೬ನೇ ಶತಮಾನದಲ್ಲಿ ಆಗಿರಬಹುದೆಂದು ಹೇಳಬಹುದು.

**ಗರ್ಭಗುಡಿ:** ಗರ್ಭಗುಡಿಯು ಚಚ್ಚೌಕಾರವಾಗಿದ್ದು, ನಾಲ್ಕು ಮೂಲೆಗಳಿಗೆ ನಾಲ್ಕು ಕಂಬಗಳಿವೆ. ಇದರೊಳಗೆ ಕುಮಾರರಾಮನ ರುಂಡ ಎನ್ನುವ ಅರಗಿನ ಗುಂಡು ಇದೆ. ಇದರ ಜೊತೆಗೆ ಚಂಡು ಇತರೆ ವಸ್ತುಗಳಿವೆ. ಆದರೆ ಇವೆಲ್ಲ ಒಂದು ಪೆಟ್ಟಿಗೆಯೊಳಗೆ ಭದ್ರವಾಗಿವೆ. ಇವುಗಳ ಭದ್ರತೆಗಾಗಿ

ಕಲ್ಲು, ಗಾರೆಯನ್ನು ಬಳಸಿ ಗೋಡೆಗಳನ್ನು ಕಟ್ಟಲಾಗಿದ್ದು, ಮೇಲ್ಛಾವಣಿಯನ್ನು ಹುಲ್ಲಿನ ಚಪ್ಪರದಿಂದ ಹಾಕಲಾಗಿದೆ. ಈ ದೇವಾಲಯದಲ್ಲಿರುವ ರುಂಡ ಮತ್ತು ಕೆಲವು ವಸ್ತುಗಳನ್ನು ವಿಶೇಷ ಸಂದರ್ಭಗಳಲ್ಲಿ ಮಾತ್ರ ಹೊರತೆಗೆಯಲಾಗುತ್ತದೆ. ಹಾಗೆಯೇ ಈ ದೇವಾಲಯವನ್ನು ಕುಮಾರರಾಮನದ್ದೇ ಎನ್ನಲು ಕಾರಣವೇನೆಂದರೆ ಗರ್ಭಗುಡಿಯಲ್ಲಿ ೩ ಅಡಿ ಉದ್ದದ ಒಂದು ಕುದುರೆಯ ಆಕೃತಿಯಿದೆ. ಇದನ್ನು ಅಲ್ಲಿನ ಸ್ಥಳೀಯರು 'ಬೊಲ್ಲ'ನೆಂದೇ ಕರೆಯುತ್ತಾರೆ. ಹೀಗಾಗಿ ಈ ದೃಷ್ಟಿಯಿಂದ ಇದು ಕುಮಾರರಾಮನ ಗುಡಿಯೇ ಆಗಿದೆ.

**ಆವರಣ:** ಆವರಣವು ಗರ್ಭಗುಡಿಯ ಸುತ್ತಲೂ ಇದೆ. ಅಂದರೆ ಅಲ್ಲಿ ಪ್ರದಕ್ಷಿಣೆಯೂ ಹಾಕಬಹುದು. ಹಾಗೆಯೇ ವಿಶೇಷ ದಿನಗಳಲ್ಲಿ ಪ್ರಸಾದವನ್ನು ತಯಾರಿಸಲಿಕ್ಕಾಗಿಯೇ ಆವರಣದಲ್ಲಿ ಕೋಣೆಗಳಿವೆ.

**ಹೊರಾಂಗಣ:** ದೇವಾಲಯದ ಹೊರಾಂಗಣ ಸುಮಾರು ೩ ಅಂಕಣಗಳಿಂದ ಕೂಡಿದ್ದು, ಇದರ ಮುಖ್ಯ ಪ್ರವೇಶದ್ವಾರವನ್ನು ಗ್ರಾನೈಟ್ ಕಲ್ಲಿನಿಂದ ಮಾಡಲಾಗಿದೆ. ಇದರ ಮುಂದಗಡೆ ನಾಲ್ಕು ಕಂಬಗಳಿರುವುದು ಕಂಡುಬರುತ್ತದೆ. ಪ್ರವೇಶದ್ವಾರದ ಎರಡೂ ಬದಿಗಳಲ್ಲಿ ಎರಡು ಕಟ್ಟೆಗಳಿವೆ.

**ಹೊರನೋಟ:** ದೇವಾಲಯದ ಹೊರಭಾಗವನ್ನು ಗಾರೆಯಿಂದ ಕಟ್ಟಲ್ಪಟ್ಟ ಗೋಡೆಗಳಿವೆ. ದೇವಾಲಯದ ಪ್ರವೇಶದ್ವಾರವು ಪಶ್ಚಿಮದಿಕ್ಕಿಗೆ ಅಭಿಮುಖವಾಗಿದೆ. ಈ ದೇವಾಲಯವು ವಾಸ್ತುಶಿಲ್ಪದಲ್ಲಿ ಕೊರತೆಯನ್ನು ಕಂಡಿದ್ದರೂ ಸ್ಥಳೀಯರ ಗಮನ ಸೆಳೆದಿದೆ. ಈ ದೇವಾಲಯದಲ್ಲಿ ಪ್ರತಿ ದಿನ ಪೂಜೆ ನಡೆಯದಿದ್ದರೂ, ಆಗಾಗ ಅಂದರೆ ಪ್ರತಿ ಭಾನುವಾರಕ್ಕೊಮ್ಮೆ ಪೂಜೆ ನಡೆಯುತ್ತದೆ. ಆದರೆ ಜಾತ್ರಾ ವಿಶೇಷ ಸಂದರ್ಭಗಳಲ್ಲಿ ಪೆಟ್ಟಿಗೆಯ ವಸ್ತುಗಳನ್ನಿಟ್ಟು, ವಿಜೃಂಭಣೆಯಿಂದ, ಭಕ್ತಿಯಿಂದ ಪೂಜೆ ನೆರವೇರಿಸುತ್ತಾರೆ. ಸುಮಾರು ೨೦ ಎಕರೆಯಷ್ಟು ಭೂಮಿ ಈ ದೇವಾಲಯಕ್ಕೆ ಉಂಬಳಿ ದೊರೆತಿದೆ ಎನ್ನುವ ವಿಚಾರ ಸ್ಥಳೀಯರಿಂದ ತಿಳಿದುಬರುತ್ತದೆ.

ಗ್ರಾಮದ ಹತ್ತಿರದಲ್ಲೇ ಮತ್ತೊಂದು ದೇವಾಲಯವಿದೆ. ಈ ಗುಡಿಯು ಕುಮಾರರಾಮನ ಗುಡಿಯಿಂದ ಮುಂದಕ್ಕೆ ಹೋದರೆ ಸುಮಾರು ೨ ಕಿ.ಮೀ. ಅಂತರದಲ್ಲಿ ಕಾಣುತ್ತದೆ. ಅಲ್ಲಿನ ಸ್ಥಳೀಯರು 'ತಂದೆ ತಾಯಿ ಗುಡಿ' ಎಂದು ಕರೆಯುತ್ತಾರೆ. ತಂದೆ ತಾಯಿ ಗುಡಿ ಎಂದರೆ ಕುಮಾರರಾಮನ ತಂದೆ ಕಂಪಿಲರಾಯ, ತಾಯಿ ಹರಿಯಾಲದೇವಿಯ ಗುಡಿ ಎಂದು ಹೇಳಬಹುದು. ಈ ಗುಡಿಯು ನೋಡಲು ಚಿಕ್ಕದಾಗಿದ್ದರೂ ಗರ್ಭಗುಡಿಯನ್ನು ಹೊಂದಿದೆ. ಅದರೊಳಗೆ ಮೂರು ಶಿಲ್ಪಗಳಿವೆ. ಒಂದು ಶಿಲ್ಪವು ಸ್ತ್ರೀಯದ್ದು, ಇನ್ನೆರಡು ಶಿಲ್ಪಗಳು ಪುರುಷರದ್ದು, ಪುರುಷ ಮೂರ್ತಿಗಳು ಯಾರು ಎಂಬುದು ಖಚಿತವಾಗಿ ತಿಳಿಯಲು ಸಾಧ್ಯವಿಲ್ಲ. ಅಲ್ಲಿನ ಸ್ಥಳೀಯರು ಹೇಳುವ ಪ್ರಕಾರ ಒಂದು ಕಂಪಿಲ ಮತ್ತೊಂದು ಕುಮಾರರಾಮ, ಇವೆರಡರ ನಡುವೆ ಹರಿಯಾಲದೇವಿಯ ಸ್ತ್ರೀ ಮೂರ್ತಿ ಎಂಬುದು ಹೇಳಿಕೆಯಾಗಿದೆ. ಇದರ ನಂತರದಲ್ಲಿ ಮುಂಭಾಗವು ೩ ಅಂಕಣಗಳಿಂದ ಕೂಡಿದ್ದು, ಎರಡು ಕಂಬಗಳಿವೆ. ಇದರ ಮುಂದೆ ಮತ್ತೆ ಎರಡು ಶಿಲ್ಪಗಳಿವೆ. ಈ ದೇವಾಲಯದ

ಗೋಡೆಗಳು ಭದ್ರವಾಗಿಯೇ ಇವೆ. ಇದೂ ಸಹ ಸುಮಾರು ೧೬ನೇ ಶತಮಾನದಲ್ಲಿಯೇ ನಿರ್ಮಾಣವಾಗಿರಬೇಕು.

**೫. ರಾಮಸ್ವಾಮಿ ದೇವಾಲಯ – ರಾಮಘಡ (ಬಳ್ಳಾರಿ ಜಿಲ್ಲೆ)**

ಈ ರಾಮಸ್ವಾಮಿ ದೇವಾಲಯವು ತುಂಬಾ ಪ್ರಾಚೀನವಾದ ದೇವಾಲಯವಾಗಿದೆ. ಇದು ಹೊಸಮಲೆದುರ್ಗದಲ್ಲಿ ಅಂದರೆ ಬೆಟ್ಟದ ಮೇಲೆ ಸುಮಾರು ೩೨೨೦ ಮೀ. ಎತ್ತರದ ಪ್ರದೇಶದಲ್ಲಿ ನಿರ್ಮಾಣವಾಗಿದೆ. ಈ ಹೊಸಮಲೆದುರ್ಗವನ್ನು ಕಂಪಿಲರಾಯನೇ ಕಟ್ಟಿಸಿದ್ದಾನೆ ಎನ್ನುವುದು ಕೆಲವರ ಅಭಿಪ್ರಾಯ. ಇದನ್ನು ರಾಮನ ಮಲೆ, ರಾಮಘಡ ಎಂತಲೂ ಈಗ ಕರೆಯುತ್ತಾರೆ. ಈ ದೇವಾಲಯವನ್ನು ನಿರ್ಮಿಸಿರುವುದು ಕುಮಾರರಾಮನ ಭಕ್ತೆಯಾಗಿದ್ದ ಗೋಪಾಯಿ ಎಂಬುದು ಶಾಸನಗಳಿಂದ ಖಚಿತವಾಗಿದೆ.

**ನಿರ್ಮಾಣ ಕಾಲ:** ಈ ದೇವಾಲಯದ ಗೋಡೆಯ ಮೇಲಿರುವ ಶಾಸನದ ಪ್ರಕಾರ ನಿರ್ಮಾಣದ ಕಾಲ ತಿಳಿಯುತ್ತದೆ. ಕುಮಾರರಾಮನ ಸಂಬಂಧಿಯಾದ ಗೋಪಾಯಿಯು, ಆಕೆಯ ತಮ್ಮ ರಾಮಣ್ಣ ಸೇರಿ ಕ್ರಿ.ಶ. ೧೫೨೮ರಲ್ಲಿ ದೇವಾಲಯವನ್ನು ಕಟ್ಟಿಸಿರುವುದು ತಿಳಿದುಬರುತ್ತದೆ. ನಂತರದ ದಿನಗಳಲ್ಲಿ ಇದು ಜೀರ್ಣೋದ್ಧಾರ ಮಾಡಲಾಗಿದೆ.

**ಗರ್ಭಗುಡಿ:** ಈ ದೇವಾಲಯದ ಗರ್ಭಗುಡಿಯಲ್ಲಿ ಒಂದು ಶಿವಲಿಂಗವಿದೆ. ಇದು ಕುಮಾರರಾಮನ ರುಂಡವೇ ಶಿವಲಿಂಗವಾಗಿದೆ ಎನ್ನುವುದು ಸ್ಥಳೀಯರ ಅಭಿಪ್ರಾಯ. ಕಾವ್ಯಗಳೂ ಸಹ ಇದನ್ನೇ ಹೇಳುತ್ತವೆ. ಈ ಲಿಂಗವು ಸುಮಾರು ೨ ಅಡಿ ಎತ್ತರವಿದೆ. ಇದರ ಹಿಂದುಗಡೆ ಚನ್ನಕೇಶವನ ವಿಗ್ರಹವಿದೆ.

**ರಂಗಮಂಟಪ:** ಈ ಮಂಟಪದಲ್ಲಿ ವಿಶೇಷವಾಗಿ ಹೇಳುವಂತಹದ್ದು ಏನೂ ಇಲ್ಲ. ಸುಮಾರು ೪ ಕಂಬಗಳಿವೆ. ಅಲ್ಲಿ ಬೇರೆ ಯಾವುದೇ ಶಿಲ್ಪಗಳಿಲ್ಲ. ಚಿತ್ರಗಳೂ ಸಹ ಇಲ್ಲ. ಈ ದೇವಾಲಯದ ಮುಖಮಂಟಪವು ಪೂರ್ವಕ್ಕೆ ಮುಖಮಾಡಿದೆ.

**ಹೊರಾಂಗಣ:** ಈ ದೇವಾಲಯದ ಹೊರಾಂಗಣವು ಗೋಪುರಗಳಿಂದ ತುಂಬಿದೆ. ಇದರ ಗೋಡೆಗಳನ್ನು ಗಾರೆಯಿಂದ ೪ ಚಿಕ್ಕ ಕಲ್ಲುಗಳಿಂದ ಕಟ್ಟಲಾಗಿದೆ. ಈ ಹೊರಾಂಗಣದ ಮುಂದೆ ಹಲವು ಶಿಲ್ಪಗಳಿವೆ. ಅದರಲ್ಲಿ ಪ್ರಮುಖವಾಗಿ ಒಂದು ಕಡಿವಾಣ ಹಾಕಿರುವ ಕುದುರೆ ಮತ್ತು ಅದರ ಎದುರುಗಡೆ ಒಬ್ಬ ವ್ಯಕ್ತಿಯ ದೃಶ್ಯವಿದೆ. ಇದನ್ನು ಅಲ್ಲಿನ ಸ್ಥಳೀಯರು ಕುಮಾರರಾಮ ಮತ್ತು ಬೊಲ್ಲನೆಂದು ಕರೆಯುತ್ತಾರೆ. ಇನ್ನು ಕೆಲವು ಮೂರ್ತಿಗಳೆಂದರೆ ಒಂದು ಬಸವಣ್ಣನ ಮೂರ್ತಿ, ಇನ್ನೊಂದು ತ್ರಿಶೂಲ ಹಿಡಿದಿರುವ ಈಶ್ವರನ ಮೂರ್ತಿ ಇನ್ನೊಂದು ಜಿನಮೂರ್ತಿಗಳಿರುವುದು ಕಂಡುಬಂದಿದೆ. ಈ ದೇವಾಲಯದಲ್ಲಿ ಪ್ರತಿ ಸೋಮವಾರದಂದು ಮಾತ್ರ ಪೂಜೆ ಕಾರ್ಯ ನಡೆಯುತ್ತದೆ. ವಿಶೇಷ ದಿನಗಳಲ್ಲಿ ನೈವೇದ್ಯ ಪೂಜೆಗಳು ನಡೆಯುತ್ತವೆ.

ಗೋಪಾಯಿ ಎಂಬ ಭಕ್ತೆ ಈ ದೇವಾಲಯವನ್ನು ಕಟ್ಟಿಸಿರುವುದು ಕಂಡುಬರಬಹುದು. ಬಹುಶಃ ವಿಜಯನಗರ ಅರಸ ಶ್ರೀಕೃಷ್ಣದೇವರಾಯನ ಕಾಲದಲ್ಲಿ ನಿರ್ಮಿಸಿರಬೇಕು. ಏಕೆಂದರೆ ಕ್ರಿ.ಶ. ೧೫೨೮ ಕೃಷ್ಣದೇವರಾಯನ ಆಳ್ವಿಕೆಯ ಕಾಲವಾಗಿತ್ತು. ಈ ಕಾಲಾವಧಿಯಲ್ಲಿ ಸ್ತ್ರೀಯರಿಗೆ ಉತ್ತಮ ಸ್ಥಾನಮಾನವಿತ್ತು. ಈ ಕಾಲಕ್ಕಾಗಲೇ ಕುಮಾರರಾಮ ದೇವರಾಗಿದ್ದ ಎಂಬ ಮಾಹಿತಿಗೆ ಪೂರಕವಾಗಿ ಶಾಸನಗಳು ದೊರೆತಿವೆ. ಒಬ್ಬ ಹೆಣ್ಣುಮಗಳಿಂದ ದೇವಾಲಯವನ್ನು ನಿರ್ಮಿಸಿಕೊಂಡಿರುವ ಕುಮಾರರಾಮ ಸ್ತ್ರೀಯರಲ್ಲಿ ಇಟ್ಟ ಗೌರವದ ವ್ಯಕ್ತಿತ್ವ ಅಪರೂಪದ್ದೆಂದೆನಿಸುತ್ತದೆ. ಸ್ತ್ರೀಯರನ್ನು ಸಹೋದರಿಯರಂತೆ ಸಲುಹುತ್ತಿದ್ದ ಅಲ್ಲಿನ ಸ್ಥಳೀಯರಿಗೆ ಮಾನವ ದೇವನಾಗಿದ್ದಂತೆ ಕಾಣುತ್ತದೆ.

**೬. ರಣಧೀರ ರಾಮನಾಥ ದೇವಾಲಯ – ಮಾಡಗೇರಿ (ಉತ್ತರ ಕನ್ನಡ ಜಿಲ್ಲೆ)**

ಈ ದೇವಾಲಯವು ಶಿಥಿಲಗೊಂಡಿದ್ದರಿಂದ ಸ್ಥಳೀಯರು ಹಣವನ್ನು ಕಲೆಹಾಕಿ ಕ್ರಿ.ಶ. ೧೯೯೯ರಲ್ಲಿ ಜೀರ್ಣೋದ್ಧಾರ ಮಾಡಿದ್ದಾರೆ. ಇದರ ಮುಂದೆ ಕುಮಾರರಾಮನ ಪತ್ನಿಯರು ಸತಿಯರಾದಾಗ ಇವರ ಚಿಕ್ಕ ಚಿಕ್ಕ ಪ್ರತ್ಯೇಕ ಗುಡಿಗಳು ನಿರ್ಮಾಣವಾಗಿವೆ. ಮಹಾಸತಿಯರಿರುವ ಎರಡನೇ ದೇವಾಲಯ ಇದಾಗಿದೆ.

**ನಿರ್ಮಾಣ ಕಾಲ:** ಈ ದೇವಾಲಯವು ಅಷ್ಟೇನು ಪ್ರಾಚೀನತೆಗೆ ಒಳಪಟ್ಟಿಲ್ಲ. ಇದರ ತಳವಿನ್ಯಾಸ, ಲಕ್ಷಣಗಳನ್ನು ಗಮನಿಸಿದರೆ, ಸುಮಾರು ೧೭-೧೮ನೇ ಶತಮಾನದಲ್ಲಿ ನಿರ್ಮಾಣವಾಗಿರಬೇಕು ಎಂದೆನಿಸುತ್ತದೆ. ಈಗಾಗಲೇ ತಿಳಿಸಿರುವಂತೆ ಕ್ರಿ.ಶ. ೧೯೯೯ರಲ್ಲಿ ಪುನಃ ಜೀರ್ಣೋದ್ಧಾರ ಮಾಡಿದ್ದಾರೆ.

**ಗರ್ಭಗುಡಿ:** ಈ ದೇವಾಲಯದ ಗರ್ಭಗುಡಿಯು ವಿಶಾಲವಾಗಿದ್ದು, ಇದು ಗೋಪುರವನ್ನು ಹೊಂದಿದೆ. ಇದರ ಸುತ್ತಲೂ ಸಾಕಷ್ಟು ಸ್ಥಳಾವಕಾಶವಿದೆ. ಈ ಗರ್ಭಗುಡಿಯ ಮಧ್ಯದಲ್ಲಿ ೩ ಅಡಿ ಎತ್ತರದ ಶಿಲ್ಪವಿದೆ. ಇದರ ಕೈಯಲ್ಲಿ ಒಂದು ಕಡೆ ಬಿಲ್ಲು, ಇನ್ನೊಂದು ಬಾಣವಿರುವುದರಿಂದ ಇದು ಕುಮಾರರಾಮನ ಶಿಲ್ಪವೆಂದು ಗುರುತಿಸಬಹುದಾಗಿದೆ. ಹೀಗಾಗಿ ಇದಕ್ಕೆ ಪೂಜಾ ಕೈಂಕರ್ಯಗಳು ನಡೆಯುತ್ತವೆ.

**ರಂಗಮಂಟಪ:** ಈ ದೇವಾಲಯದ ಮಂಟಪದಲ್ಲಿ ಇತರೆ ದೇವಾಲಯಗಳಲ್ಲಿದ್ದಂತೆ ನಾಲ್ಕೂ ಮೂಲೆಗಳಿಗೆ ಹೊಂದಿಕೊಂಡಂತೆ ನಾಲ್ಕು ಕಂಬಗಳಿದ್ದು, ಸುತ್ತಲೂ ಗಾರೆಯನ್ನು ಬಳಸಿ ಗೋಡೆಯನ್ನು ಕಟ್ಟಲಾಗಿದೆ.

ಈ ದೇವಾಲಯದಲ್ಲಿ ಕಂಡುಬರುವ ಕೆಲವು ಮೂರ್ತಿಗಳನ್ನು ಅಲ್ಲಿನ ಸ್ಥಳೀಯರು ಬಸವಣ್ಣನ ಮೂರ್ತಿ ಎಂದು, ಇನ್ನೊಂದು ತ್ರಿಶೂಲ ಹಿಡಿದಿರುವ ಈಶ್ವರನ ಮೂರ್ತಿ, ಮತ್ತೊಂದು ಜಿನಮೂರ್ತಿ ಎಂದು ಅಭಿಪ್ರಾಯ ಪಡುತ್ತಾರೆ. ಕುಮಾರರಾಮನ ಈ ಗುಡಿಯಲ್ಲಿ ಬಸವಣ್ಣನ ಮೂರ್ತಿಯಿರುವುದು ವಿಶೇಷವೆನಿಸಿದೆ. ಬಸವಣ್ಣನವರ ಕಾಲಘಟ್ಟವು ಕುಮ್ಮಟದರಸರ ಕಾಲಕ್ಕೂ ಪೂರ್ವದಲ್ಲಿ ಕಂಡುಬರುತ್ತದೆ. ಹೀಗಾಗಿ ಬಸವಣ್ಣನಿಗೂ ಹಾಗೂ ಕುಮಾರರಾಮನಿಗೂ ಯಾವುದೇ ರೀತಿಯ ಸಂಬಂಧವನ್ನು

ಕಲ್ಪಿಸಲು ಸಾಧ್ಯವಿಲ್ಲ. ಹಾಗೆಯೇ ಜಿನಮೂರ್ತಿಯೂ ಇಲ್ಲಿರುವುದರಿಂದ ಬಹುಶಃ ಈ ಪ್ರದೇಶವು ಜೈನರ ನೆಲೆಯಾಗಿರುವುದರ ಜೊತೆಗೆ ಬಸವಣ್ಣನವರ ತತ್ವಗಳ ಪ್ರಭಾವ ಈ ಪ್ರದೇಶದ ಮೇಲೆ ಆಗಿರಬಹುದೇನೋ ಅನಿಸುತ್ತದೆ. ಜೈನರ ತತ್ವಗಳು, ಬಸವಣ್ಣನವರ ತತ್ವಗಳು, ಕುಮಾರರಾಮನ ಸತ್ಯನಿಷ್ಠೆ, ಶೀಲಸಂಪನ್ನ, ಆಚಾರವಂತಿಕೆಯ ಸಂಪನ್ನ ಗುಣಗಳಿಗೆ ಸಮಾನತೆ ಕಲ್ಪಿಸಿರುವ ಸಾಧ್ಯತೆಯಿದೆ.

ಮೇಲಿನ ಎಲ್ಲಾ ದೇವಾಲಯಗಳನ್ನು ಕುರಿತು ಚರ್ಚಿಸಿದಾಗ ಕೆಲವು ಹೋಲಿಕೆಗಳು, ಕೆಲವೊಂದು ವ್ಯತ್ಯಾಸಗಳು ಕಂಡುಬರುತ್ತದೆ. ಹೊಸಮಲೆದುರ್ಗ ಮತ್ತು ಕುಮ್ಮಟದುರ್ಗದಲ್ಲಿರುವ ದೇವಾಲಯಗಳು ತುಂಬಾ ಪ್ರಾಚೀನ ಕಾಲಕ್ಕೆ ಸೇರಿವೆ. ಹಾಗೆಯೇ ನಿಸರ್ಗ ರಕ್ಷಣೆಯನ್ನು ಪಡೆದುಕೊಂಡಿವೆ. ಮೆಟ್ರಿಕಿಯ ದೇವಾಲಯವು ದೊಡ್ಡ ದೇವಾಲಯವಾಗಿದ್ದರೂ ವಾಸ್ತುಶೈಲಿಯನ್ನಳವಡಿಸಿ ಕಟ್ಟಿಲ್ಲವೆನ್ನುವುದು ಕೊರತೆಯಾಗಿದೆ. ದೊಡ್ಡಪಾಲನಹಳ್ಳಿ ದೇವಾಲಯ ಮತ್ತು ಮಾಡಗೇರಿಯ ದೇವಾಲಯಗಳೆರಡೂ ಮೂಲದಲ್ಲಿ ಶಿಥಿಲವಾಗಿದ್ದರೂ ನಂತರ ಕಾಲಕ್ರಮೇಣ ಜೀರ್ಣೋದ್ಧಾರಗೊಂಡಿವೆ. ಮಹತ್ವಪೂರ್ಣವಾದ ಒಂದು ದೇವಾಲಯವೆಂದರೆ ಅನಿಲಗೋಡಿನ ಮಹಾಸತಿಯರ ದೇವಾಲಯ. ಇಲ್ಲಿ ಕುಮಾರರಾಮನಿಗಿಂತ ಹೆಚ್ಚು ಆತನ ಮಡದಿಯರಿಗೆ ಪೂಜೆ ಕೈಂಕರ್ಯಗಳು ನಡೆಯುತ್ತವೆ. ಇನ್ನು ಇದಕ್ಕೆ ಪೂರಕವಾಗಿ ಮಾಡಗೇರಿಯ ದೇವಾಲಯದ ಆವರಣದಲ್ಲಿ ಮಹಾಸತಿಯರ ಮೂರ್ತಿಗಳಿರುವುದು ಕಂಡುಬರುತ್ತದೆ. ಅಂದರೆ ಕರ್ನಾಟಕದ ಕೆಲವು ಭಾಗಗಳಲ್ಲಿ ಕುಮಾರರಾಮನಿಗೆ ಸಲ್ಲುವ ಗೌರವ, ಭಕ್ತಿ, ಆತನ ಪತ್ನಿಯರಿಗೂ ಸಲ್ಲುತ್ತದೆ ಎನ್ನುವುದು ಈ ದೇವಾಲಯಗಳ ಆರಾಧನೆಗಳಿಂದ ತಿಳಿದುಬರುತ್ತದೆ.

### ೨. ಇತರೆ ದೇವಾಲಯಗಳು

ಈಗಾಗಲೇ ತಿಳಿಸಿರುವ ದೇವಾಲಯಗಳು ವಾಸ್ತುಶೈಲಿಯನ್ನನುಸರಿಸಿದ ದೊಡ್ಡ ದೇವಾಲಯಗಳಾಗಿವೆ. ಆದರೆ ಪ್ರಸ್ತುತವಾಗಿ ಹೇಳಲು ಹೊರಟಿರುವ ದೇವಾಲಯಗಳು ಚಿಕ್ಕದಾಗಿದ್ದು, ಯಾವುದೇ ಪ್ರತ್ಯೇಕ ಅಂಗಗಳನ್ನು ಹೊಂದಿರದೆ ಯಾವುದೇ ರೀತಿಯ ವಾಸ್ತುಶೈಲಿಯನ್ನನುಸರಿಸದೇ ಕಟ್ಟಿರುವ ದೇವಾಲಯಗಳಾಗಿವೆ. ಈ ದೇವಾಲಯಗಳೂ ಸಹ ಕರ್ನಾಟಕದ ವಿವಿಧ ಭಾಗಗಳಲ್ಲಿ ನಿರ್ಮಿತವಾಗಿದ್ದು, ಈಗಲೂ ಜಾತ್ರಾ ಮಹೋತ್ಸವಗಳು ನಡೆಯುತ್ತವೆ. ಈಗ ಒಂದೊಂದಾಗಿ ಈ ದೇವಾಲಯಗಳ ಬಗ್ಗೆ ತಿಳಿಸಿಕೊಡುವ ಪ್ರಯತ್ನ ಮಾಡಲಾಗಿದೆ.

೧. ಕುಮಾರರಾಮ ದೇವಾಲಯ – ಕೊಪ್ಪಳ ಜಿಲ್ಲೆ

೨. ರಾಮ ದೇವಾಲಯ – ಶಿವಮೊಗ್ಗ ಜಿಲ್ಲೆ

೩. ರಾಮಸ್ವಾಮಿ ದೇವಾಲಯ – ಕೊಪ್ಪಳ ಜಿಲ್ಲೆ

೪. ರಾಮಸ್ವಾಮಿ ದೇವಾಲಯ – ಕೊಪ್ಪಳ ಜಿಲ್ಲೆ

೫. ಕುಮಾರಸ್ವಾಮಿ ದೇವಾಲಯ – ಬೆಳಗಾವಿ ಜಿಲ್ಲೆ

೬. ಶ್ರೀ ಕುಮಾರಸ್ವಾಮಿ ದೇವಾಲಯ – ಉತ್ತರಕನ್ನಡ ಜಿಲ್ಲೆ

**ಕುಮಾರರಾಮ ದೇವಾಲಯ – ಕೊಪ್ಪಳ ಜಿಲ್ಲೆ**

ಈ ದೇವಾಲಯದ ಪ್ರವೇಶದ್ವಾರವು ಪೂರ್ವಕ್ಕೆ ಮುಖ ಮಾಡಿದ್ದು, ಇದು ಒಳಗೂ ಹೊರಗೂ ಇಂದರಗಿ ದೇವಾಲಯದ ಮಾದರಿಯಲ್ಲಿಯೇ ಅಂದರೆ ಸುಮಾರು ೩ ಕಿ.ಮೀ. ಸುತ್ತಳತೆಯಲ್ಲಿ ನಿರ್ಮಾಣವಾಗಿದೆ. ಇದು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಜಬ್ಬಲಗುಡ್ಡದಲ್ಲಿ ಕಾಣುತ್ತದೆ. ಈ ಗುಡಿಯೊಳಗೆ ಕುಮಾರರಾಮನ ಪರಿವಾರದವರು ಅಂದರೆ ಬೈಚಪ್ಪ, ಕಾಟಣ್ಣ, ಹೋಲಿಕೆರಾಮ ಹೀಗೆ ಎಂಟು ಜನರ ರುಂಡಗಳು ಎನ್ನುವ ಕಟ್ಟಿಗೆಯ ರುಂಡಗಳನ್ನು ಎತ್ತರವಾದ ಜಗುಲಿಯ ಮೇಲಿಟ್ಟಿದ್ದಾರೆ. ಇದರ ಜೊತೆಗೆ ರಾಮನ ಕೆಲವು ಆಯುಧಗಳು ಸಹ ಇವೆ. ಮತ್ತು ತುಂಬಿದ ಕೊಡವೊಂದಿದೆ. ಇವುಗಳೆಲ್ಲವುಗಳಿಗೆ ಪ್ರತಿ ದಿನ ಪೂಜೆ ನಡೆಯುವುದಿಲ್ಲ. ವಿಶೇಷ ಜಾತ್ರೆ ಸಂದರ್ಭಗಳಲ್ಲಿ ರುಂಡಗಳನ್ನು ಹೊರತೆಗೆದು ಪೂಜಿಸುತ್ತಾರೆ. ಅಲ್ಲಿನ ಸ್ಥಳೀಯರಿಂದ ಅಮವಾಸ್ಯೆ, ಹುಣ್ಣಿಮೆ ದಿನದಂದು ಪೂಜೆಗೊಳಪಡುತ್ತದೆ.

ಕುಮ್ಮಟದುರ್ಗದ ಜಾತ್ರೆಯಲ್ಲಿ ಜಬ್ಬಲಗುಡ್ಡದ ೮ ರುಂಡಗಳೂ ಸೇರುತ್ತವೆ. ಜೊತೆಗೆ ವಿಶೇಷ ಪೂಜೆಯನ್ನು ಮಾಡಲಾಗುತ್ತದೆ. ಕುಮ್ಮಟದುರ್ಗದ ದೇವಾಲಯದ ಅರ್ಚಕರೇ ಇಲ್ಲಿಯೂ ಅರ್ಚಕರಾಗಿ ಸೇವೆ ಸಲ್ಲಿಸುತ್ತಾರೆ. ಗಂಗಾಮತಸ್ಥರೇ ಈ ದೇವಾಲಯಗಳ ಅರ್ಚಕರು ಎನ್ನುವುದು ವಿಶೇಷವೆನಿಸಿದರೂ ಸತ್ಯವಾಗಿದೆ. ಗಂಗಾಮತಸ್ಥರ ಮನೆಗೆ ಹೊಂದಿಕೊಂಡಿರುವ ಕಾರಣಕ್ಕಾಗಿಯೇ ಇವರು ಪೂಜಿಸಬಹುದೆನೋ ಎಂಬ ಅಭಿಪ್ರಾಯಗಳೂ ಇವೆ.

**ರಾಮ ದೇವಾಲಯ – ಶಿವಮೊಗ್ಗ ಜಿಲ್ಲೆ**

ಈ ದೇವಾಲಯವನ್ನು ಮಾಳಗೌಡನು ಕಟ್ಟಿಸಿರುವನೆಂದು ಅಲ್ಲಿಯ ಒಂದು ಶಿಲ್ಪಸಹಿತ ಶಾಸನವು ತಿಳಿಸುತ್ತದೆ. ಅಂದರೆ ಆ ಶಿಲಾಶಾಸನವನ್ನು ಹಾಕಿಸಿದವನು ಮಾಳಗೌಡನು ಎಂಬರ್ಥ ಸೂಚಿಸುತ್ತದೆ. ಈ ಶಾಸನವನ್ನೊಳಗೊಂಡ ಈ ಗುಡಿಯು ಚಿಕ್ಕದಾಗಿದ್ದು ಸುಮಾರು ೪ ಮೀ. ಸುತ್ತಳತೆಯನ್ನು ಹೊಂದಿದ್ದು, ಭದ್ರವಾಗಿ ನಿರ್ಮಾಣವಾಗಿದೆ. ಇಟ್ಟಿಗೆ ಮಣ್ಣಿನಿಂದ ಕಟ್ಟಲಾಗಿದ್ದು, ಮೇಲು ಹೊದಿಕೆಯು ಬಹುಶಃ ತಗಡಿನಿಂದ ಮುಚ್ಚಲಾಗಿದೆ. ಇದು ತುಂಬಾ ಪ್ರಾಚೀನ ಕಾಲದ ದೇವಾಲಯಗಳ ಗುಂಪಿಗೆ ಸೇರಲು ಸಾಧ್ಯವಿಲ್ಲ. ಈ ಗುಡಿಯ ಒಳಗೆ ಮಾಳಗೌಡ ಹಾಕಿಸಿದ ಶಿಲಾಶಾಸನವಿದ್ದು, ಇದು ೧ ಅಡಿ ಅಗಲವಿದೆ. ಸುಮಾರು ೨೧/೨ ಅಡಿ ಉದ್ದವಿದೆ. ಇದರಲ್ಲಿ ಅಶ್ವಾರೋಹಿಯ ಒಂದು ಶಿಲ್ಪವಿದ್ದು, ಕೆಳಗಡೆ ಪೂರ್ಣವಾಗಿ ಶಾಸನವಿದೆ.

ಹೀಗಾಗಿ ಈ ಶಿಲಾಫಲಕಕ್ಕೆ ಪೂಜೆಗಳು ನಡೆಯುತ್ತವೆ. ಅಶ್ವಾರೋಹಿಯ ಶಿಲ್ಪವನ್ನೇ ಅಲ್ಲಿನ ಸ್ಥಳೀಯರು ಕುಮಾರರಾಮನೆಂದು ಪೂಜಿಸುತ್ತಾರೆ. ಪ್ರತಿದಿನವೂ ನಡೆಯುವುದಿಲ್ಲ. ಭಾನುವಾರ ಮತ್ತು ಅಮಾವಾಸ್ಯೆ, ಹುಣ್ಣಿಮೆ, ವಿಶೇಷ ಜಾತ್ರಾ ಮಹೋತ್ಸವಗಳ ಸಂದರ್ಭಗಳಲ್ಲಿ ವಿಶೇಷ ಪೂಜೆ

ನಡೆಯುತ್ತವೆ. ಈ ದೇವಾಲಯವು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಮಾಳಗೊಂಡನ ಕೊಪ್ಪ ಗ್ರಾಮದಲ್ಲಿ ಒಂದು ಜಮೀನಿನಲ್ಲಿ ಪೂರ್ವಕ್ಕೆ ಅಭಿಮುಖವಾಗಿದೆ.

**ರಾಮಸ್ವಾಮಿ ದೇವಾಲಯ – ಕೊಪ್ಪಳ ಜಿಲ್ಲೆ**

ಈ ದೇವಾಲಯವು ಮಲ್ಲಾಪುರ ಗ್ರಾಮದೊಳಗೆ ನಿರ್ಮಿತವಾಗಿದೆ. ಇದರ ನಿರ್ಮಾಣ ಕಾಲವು ಇತ್ತೀಚೆಗಷ್ಟೇ ಆಗಿರಬಹುದು ಅನಿಸುತ್ತದೆ. ಇದು ಸುಮಾರು ೫ ಮೀ. ಸುತ್ತಳತೆ ಹೊಂದಿರುವ ಗುಡಿಯೊಳಗೆ ಸುಮಾರು ೫ ರುಂಡಗಳು ಇವೆ. ಈ ಕಟ್ಟಿಗೆಯ ರುಂಡಗಳನ್ನು ಒಂದು ಪೆಟ್ಟಿಗೆಯೊಳಗೆ ಇಟ್ಟಿರುತ್ತಾರೆ. ಇವುಗಳನ್ನು ದಿನವೂ ಪೂಜಿಸುವುದಿಲ್ಲ. ಪ್ರತೀ ಸೋಮವಾರದಂದು ಪೂಜಿಸುತ್ತಾರೆ. ವಾರ್ಷಿಕ ಜಾತ್ರೆಯ ಸಂದರ್ಭದಲ್ಲಿ ಈ ೫ ರುಂಡಗಳನ್ನು ಇಂದರಗಿ, ೪ ಜಬ್ಬಲಗುಡ್ಡ ಗ್ರಾಮದವರ ಜೊತೆ ಸೇರಿ ಪೂಜಿಸುತ್ತಿದ್ದರು. ಆದರೆ ಮಲ್ಲಾಪುರ ಗ್ರಾಮದವರು ಇಂದರಗಿ ಮತ್ತು ಜಬ್ಬಲಗುಡ್ಡದವರೊಂದಿಗೆ ವೈಮನಸ್ಸು ಕಟ್ಟಿಕೊಂಡು ಇವರೇ ಪ್ರತ್ಯೇಕವಾಗಿ ಜಾತ್ರೆಯನ್ನು ಅದ್ದೂರಿಯಿಂದ ನಡೆಸುತ್ತಾರೆ.

**ರಾಮಸ್ವಾಮಿ ದೇವಾಲಯ – ಕೊಪ್ಪಳ ಜಿಲ್ಲೆ**

ಈ ದೇವಾಲಯವು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿಗೆ ಸೇರಿರುವ ಇಂದರಗಿ ಗ್ರಾಮದಲ್ಲಿ ಕಂಡುಬರುತ್ತದೆ. ಈ ದೇವಾಲಯವೂ ಸಹ ವಿಸ್ತಾರದಲ್ಲಿ, ಜಬ್ಬಲಗುಡ್ಡದ ದೇವಾಲಯಕ್ಕೆ ಹೋಲಿಕೆಯಾಗುತ್ತದೆ. ಹಾಗೆಯೇ ಈ ಗುಡಿಯನ್ನು ಸಹ ಗಂಗಾಮತಸ್ಥರೇ ಅರ್ಚಕರಾಗಿ ಪೂಜಿಸುತ್ತಿದ್ದಾರೆ. ಈ ದೇವಾಲಯದ ಒಳಗೆ ಎರಡು ಕಟ್ಟಿಗೆಯ ರುಂಡಾಕೃತಿಗಳಿದ್ದು, ಒಂದು ಕುಮಾರರಾಮನ ತಲೆ, ಇನ್ನೊಂದು ಕಂಪಿಲರಾಯನ ತಲೆ ಎಂದು ಹೇಳಲಾಗುತ್ತದೆ. ಹೀಗಾಗಿಯೇ ಇಂದರಗಿಯ ಗುಡಿಯನ್ನು 'ಮೂಲದೇವರ ಗುಡಿ' ಎಂದು ಅಲ್ಲಿನ ಸ್ಥಳೀಯರು ಹೇಳುತ್ತಾರೆ. ಇಲ್ಲಿಯೂ ಸಹ ಕುಮಾರರಾಮನ ಆಯುಧಗಳ ಜೊತೆಗೆ ಒಂದು ತುಂಬಿದ ಕೊಡ ಇರುತ್ತದೆ. ಹೀಗಾಗಿಯೇ ಈ ಎರಡೂ ಗ್ರಾಮಗಳು ಕುಮ್ಮಟದಲ್ಲಿ ಸೇರಿ ಪ್ರತಿ ವರ್ಷ ಎಲ್ಲಾ ರುಂಡಗಳನ್ನಿಟ್ಟು ವಿಜೃಂಭಣೆಯಿಂದ ಜಾತ್ರಾ ಮಹೋತ್ಸವವನ್ನು ನಡೆಸುತ್ತಾರೆ.

**ಕುಮಾರಸ್ವಾಮಿ ದೇವಾಲಯ – ಬೆಳಗಾವಿ ಜಿಲ್ಲೆ**

ಈ ದೇವಾಲಯವು ಅತ್ಯಂತ ಪ್ರಾಚೀನತೆಗೇನು ಒಳಪಟ್ಟಿಲ್ಲ. ಆದರೆ ಅದರೊಳಗಿರುವ ಉಬ್ಬುಶಿಲ್ಪವು ತುಂಬಾ ಪ್ರಾಚೀನವಾದದ್ದು. ಆದರೆ ಅದು ಭಗ್ನಗೊಂಡಿದೆ. ಹಾಗೂ ಅದರ ಮೇಲೆ ಯಾವುದೇ ಶಾಸನಗಳಿಲ್ಲ, ಆದರೆ ಇಲ್ಲಿನ ಸ್ಥಳೀಯರು ಮಾತ್ರ ಈ ಶಿಲ್ಪವನ್ನು ಕುಮಾರರಾಮನದ್ದೇ ಎಂದು ನಂಬಿಕೆಯ ಮೇಲೆ ಪೂಜಿಸುತ್ತಾರೆ. ಆದರೆ ಪ್ರತಿ ನಿತ್ಯ ಪೂಜೆ ಪುನಸ್ಕಾರಗಳು ನಡೆಯುವುದಿಲ್ಲ. ಮಂಗಳವಾರದಂದು ಮಾತ್ರ ಪೂಜೆ ನೆರವೇರುತ್ತವೆ. ಹಾಗೆಯೇ ಜಾತ್ರಾ ಮಹೋತ್ಸವಗಳ ಸಂದರ್ಭಗಳಲ್ಲಿ ವಿಶೇಷವಾಗಿ ನಡೆಯುತ್ತವೆ. ಈ ಗ್ರಾಮದಲ್ಲಿ ಮಾತ್ರ ನಾಯಕ ಸಮುದಾಯದವರು ಅರ್ಚಕರೆನ್ನುವುದು ಅಲ್ಲಿನ ಸ್ಥಳೀಯರಿಂದ ಹಾಗೂ ದಾಖಲೆಗಳಿಂದ ತಿಳಿದುಬರುತ್ತದೆ.

**ಶ್ರೀ ಕುಮಾರಸ್ವಾಮಿ ದೇವಾಲಯ - ಉತ್ತರ ಕನ್ನಡ ಜಿಲ್ಲೆ**

ಈ ದೇವಾಲಯವು ಸಹ ಪ್ರಾಚೀನತೆಗೆ ಒಳಪಡದೆ ಆಧುನಿಕ ಶೈಲಿಯಲ್ಲಿಯೇ ಕಾಣುತ್ತದೆ. ಇದು ವಾಸ್ತುಶೈಲಿಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಇದಕ್ಕೆ ಗರ್ಭಗುಡಿ ಮುಂಭಾಗದಲ್ಲಿ ಮಂಟಪದ ರೀತಿಯಲ್ಲಿ ಕಟ್ಟಲಾಗಿದೆ. ಇದು ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲ್ಲೂಕಿನ ಬೇಡಕರ್ಣಿಯ ಗ್ರಾಮದಲ್ಲಿ ಕಂಡುಬರುತ್ತದೆ. ಈ ದೇವಾಲಯದ ಗರ್ಭಗುಡಿಯೊಳಗೆ ಸುಮಾರು ೮ ರುಂಡಗಳಿದ್ದು, ಇವುಗಳನ್ನು ಕಟ್ಟಿಗೆಯಿಂದ ಮಾಡಲಾಗಿದ್ದು, ಇವುಗಳನ್ನು ಕುಮಾರರಾಮ ಮತ್ತು ಅವನ ಪರಿವಾರದವರ ರುಂಡಗಳೆಂದು ಪೂಜಿಸುತ್ತಾರೆ. ಈ ರುಂಡಗಳನ್ನು ಪೆಟ್ಟಿಗೆಯೊಳಗೆ ಇಟ್ಟಿರುತ್ತಾರೆ. ಜಾತ್ರೆ ಸಂದರ್ಭದಲ್ಲಿ ವರ್ಷಕ್ಕೊಮ್ಮೆ ಮಾತ್ರ ಹೊರ ತೆಗೆದು ಪೂಜಿಸಲಾಗುತ್ತದೆ. ಇಲ್ಲಿರುವ ವಿಶೇಷತೆ ಏನೆಂದರೆ ಕುಮಾರರಾಮನ ರುಂಡವು ಹಸಿರು ಬಣ್ಣದಿಂದ ಕೂಡಿದೆ. ಇದುವರೆಗೂ ಎಲ್ಲಿಯೂ ಈ ಬಣ್ಣದ ರುಂಡವು ದೊರೆತಿಲ್ಲ.

ಇಲ್ಲಿಯವರೆಗೂ ಅಧ್ಯಯನಕ್ಕೊಳಪಡಿಸಿದ ಮೇಲಿನ ಆರು ದೇವಾಲಯಗಳಲ್ಲಿ ಮಾಳಗೊಂಡನಕೊಪ್ಪ ದೇವಾಲಯಕ್ಕೆ ಮಾತ್ರ ಜಮೀನನ್ನು ಉಂಬಳಿಯಾಗಿ ನೀಡಿರುವ ವಿಚಾರ ಅಲ್ಲಿನ ಸ್ಥಳೀಯರಿಂದ ತಿಳಿದುಬರುತ್ತದೆ. ಇನ್ನುಳಿದ ಯಾವ ದೇವಾಲಯಗಳಿಗೂ ಈ ಭಾಗ್ಯ ಇಲ್ಲವೆಂದೆನಿಸುತ್ತದೆ. ಇಲ್ಲಿ ಕಂಡುಬರುವ ಪ್ರಮುಖ ವಿಷಯವೇನೆಂದರೆ ದೇವಾಲಯಗಳು ಮತ್ತು ಶಿಲ್ಪಗಳು ಎಷ್ಟೇ ಹಾಳಾಗಿದ್ದರೂ, ಶಿಥಿಲಗೊಂಡಿದ್ದರೂ ಕುಮಾರರಾಮನೇ ಎಂದು ಗುರ್ತಿಸಿ ಇಂದಿಗೂ ಪೂಜಿಸುತ್ತಿರುವುದು ಈತನ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ ಎಂದೆನಿಸುತ್ತದೆ. ಕೆಲವು ದೇವಾಲಯಗಳಲ್ಲಿ ವೀರಗಲ್ಲು ಮುಕ್ಕಾಗಿದ್ದರೂ ಬಿಡದಂತೆ ಪೂಜೆ ಸಲ್ಲಿಸುತ್ತಿರುವುದು ವಿಶೇಷವೆನಿಸುತ್ತದೆ. ಇನ್ನೂ ಕೆಲವು ದೇವಾಲಯಗಳಲ್ಲಿ ಕುಮಾರರಾಮ ಮತ್ತು ಅವನ ರುಂಡಗಳೆಂದು ಪೂಜಿಸುವ ಕಟ್ಟಿಗೆಯ ರುಂಡಗಳಿದ್ದು, ಅವುಗಳಿಗೆ ನೆರವೇರಿಸುವ ಪೂಜೆ ಪುನಸ್ಕಾರಗಳು ಸಹ ಕುಮಾರರಾಮನ ವ್ಯಕ್ತಿತ್ವ ವೀರಕಲಿತನವು ಆಧುನಿಕ ಸಮಾಜಕ್ಕೆ ತುಂಬಾ ಅವಶ್ಯಕವಾಗಿದೆ ಎಂಬುದನ್ನು ಎತ್ತಿ ಹಿಡಿಯುತ್ತದೆ. ಮೇಲಿನ ಎಲ್ಲಾ ದೇವಾಲಯಗಳಲ್ಲಿರುವ ಮೂರ್ತಿಶಿಲ್ಪಗಳು ಅಲ್ಲಿನ ಗ್ರಾಮಗಳ ಪೂಜಾ ಕೈಂಕಾರ್ಯಗಳು, ಸಂಪ್ರದಾಯ, ಆಚರಣೆಗಳು, ಅರ್ಚಕರ ಧಾರ್ಮಿಕ ವಿಧಿ-ವಿಧಾನಗಳು, ಇವೆಲ್ಲವನ್ನು ಕುರಿತು ಅವಲೋಕಿಸಿದಾಗ ಕುಮಾರರಾಮ "ಸರ್ವರೋಗಗಳಿಗೂ ಮದ್ದು" ಎನ್ನುವಂತೆ ಸರ್ವ ಸಂಕಷ್ಟಗಳಿಗೂ ಕುಮಾರರಾಮ ದೇವರಾಗಿರುವುದು ಇಲ್ಲಿ ವಿಶೇಷವಾಗಿದೆ. ಕಾರಣ ಈತನನ್ನು ಸಾಮಾಜಿಕ ನೆಲೆಯಲ್ಲಿ, ಧಾರ್ಮಿಕ ನೆಲೆಯಲ್ಲಿ, ಆರ್ಥಿಕ, ಬೌದ್ಧಿಕ ನೆಲೆಯಲ್ಲಿ ಗುರುತಿಸಬಹುದು. ಏಕೆಂದರೆ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಉದ್ದೇಶಗಳನ್ನಿಟ್ಟುಕೊಂಡು ಪೂಜಿಸುತ್ತಿರುವುದು ಗಮನಕ್ಕೆ ಬರುತ್ತದೆ. ಈತನ ದೇವಾಲಯಗಳು ನಿರ್ಮಾಣವಾಗಿರುವುದು ಒಂದು ಕಡೆಯಾದರೆ, ಅಲ್ಲಿನ ಆಚಾರ, ಸಂಪ್ರದಾಯಗಳು ಉದ್ದೇಶಗಳು ಕುಮಾರರಾಮನನ್ನು ಬೇರೊಂದು ರೀತಿಯ ಸಂಶೋಧನೆಗೆ ಒಳಪಡಿಸುತ್ತವೆ.

ಕರ್ನಾಟಕದ ನಾನಾ ಭಾಗಗಳಾದ ಉತ್ತರ ಕನ್ನಡ, ಕೊಪ್ಪಳ, ಬಳ್ಳಾರಿ, ಶಿವಮೊಗ್ಗ, ಬಾಗಲಕೋಟೆ ಮತ್ತು ತುಮಕೂರು ಈ ಭಾಗಗಳಲೆಲ್ಲಾ ಕುಮಾರರಾಮನ ದೇವಾಲಯಗಳಿದ್ದು, ಅಲ್ಲಿ ರುಂಡಗಳನ್ನು ಕಟ್ಟಿಗೆಯಿಂದ ಮಾಡಿದ ಗುಂಡುಕಲ್ಲುಗಳಾದರೂ ಪೂಜಿಸುವುದೇ ಪ್ರತೀತಿಯಾಗಿದೆ. ಬಳ್ಳಾರಿ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಜಟ್ಟಿಂಗನ ಕಲ್ಲು ಎಂದೇ ಪೂಜಿಸುತ್ತಾರೆ. ಅಂದರೆ ಅದರರ್ಥ ವೀರ ಮರಣವನ್ನಪ್ಪಿದವರ ಸ್ಮಾರಕಗಳನ್ನೇ ಗುಂಡುಕಲ್ಲುಗಳು ಎಂದು ಕರೆಯುತ್ತಾರೆ. ಒಂದು ಕಡೆ ಆಲೋಚಿಸಿದಾಗ ಜಟ್ಟಿಂಗರಾಮೇಶ್ವರ ಕುಮಾರರಾಮನ ಆರಾಧ್ಯ ದೈವ, ಹೀಗಾಗಿ ಇದರ ಪ್ರಭಾವ ಕುಮಾರರಾಮನ ಮೇಲಾಗಿರುವ ಕಾರಣ ಕುಮಾರರಾಮ ಸತ್ತ ನಂತರ ಲಿಂಗಾಕೃತಿಯಾಗಿರಬಹುದು, ಹೀಗಾಗಿ ಜನರು ಈಗಲೂ ಕಲ್ಲಿನ ರೂಪದಲ್ಲಿ ಕುಮಾರರಾಮನನ್ನು ಪೂಜಿಸುತ್ತಿದ್ದಾರೆ ಎಂಬ ವಿಚಾರ ಗಮನಕ್ಕೆ ಬರುತ್ತದೆ.

ಕುಮ್ಮಟದುರ್ಗದ ಬೆಟ್ಟದ ತುದಿಯಲ್ಲಿರುವ ಜಟ್ಟಿಂಗನ ಗುಡಿಯಲ್ಲಿ ಸುಮಾರು ೧೨ ಗುಂಡುಕಲ್ಲುಗಳಿವೆ. ಮೆಟ್ರಿಕಿಯ ರಾಮಸ್ವಾಮಿ ದೇವಾಲಯದಲ್ಲಿ ಒಂದು ರುಂಡಾಕೃತಿಯನ್ನು ಪೂಜಿಸಲಾಗುತ್ತಿದೆ. ಅನಿಲಗೋಡಿನ ದೇವಾಲಯದಲ್ಲಿ ಗುಂಡುಕಲ್ಲನ್ನು ಪೂಜಿಸಲಾಗುತ್ತಿದೆ. ಬೇಡಕರ್ಣಿಯ ದೇವಾಲಯದಲ್ಲಿ ೮ ರುಂಡಗಳನ್ನು ಅಂದರೆ ಕಟ್ಟಿಗೆಯ ರುಂಡಗಳನ್ನು ಪೂಜಿಸಲಾಗುತ್ತಿದೆ.

ಹಾಗೆಯೇ ಶಿವಮೊಗ್ಗದ ಸುತ್ತಮುತ್ತಲಿನ ಗ್ರಾಮಗಳು ಹಾಗೂ ಶಿರಸಿಯ ನೆರೆಹೊರೆಯ ಗ್ರಾಮಗಳಲ್ಲಿ ಮರಗಳ ಕೆಳಗಡೆ ಕಲ್ಲೊಂದನ್ನು ಇಟ್ಟು ಕುಮಾರರಾಮ ಎಂದೇ ಪೂಜಿಸುವುದು ವಿಶೇಷವೆನಿಸುತ್ತದೆ. ಕುಮಾರರಾಮನ ಕುರಿತಂತೆ ಹೆಚ್ಚಿನ ಪ್ರದೇಶಗಳಲ್ಲಿ ಗುಂಡುಕಲ್ಲುಗಳನ್ನು ಕುಮಾರರಾಮನನ್ನಾಗಿ ಪೂಜಿಸುತ್ತಿರುವುದು ಕಣ್ಮರೆಯಾಗಿದ್ದಿರಬಹುದು. ಇದರ ಕುರಿತಂತೆ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ. ಹಾಗೆಯೇ ಗುಂಡುಕಲ್ಲಿನ ರೂಪದಲ್ಲಿ ಕುಮಾರರಾಮನನ್ನು ಕಾಣುತ್ತಿರುವುದು ಸಾಮಾನ್ಯವಾಗಿದ್ದು, ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಯಾವ ರೂಪಗಳಲ್ಲಿ ಕುಮಾರರಾಮನನ್ನು ಪೂಜಿಸುತ್ತಿರುವರೋ ಎಂಬ ವಿಷಯವನ್ನು ಕುರಿತು ಅಧ್ಯಯನಗಳು ನಡೆಯಬೇಕಿದೆ. ಗುಂಡುಕಲ್ಲುಗಳು ಕ್ರಮೇಣ ಇವು ಸಮಾಜದಲ್ಲಿ ಸಾಂಸ್ಕೃತಿಕ ದೇವತೆಗಳಾಗಿ ಬೆಳೆದು ಬಂದವೆಂದು ಹೇಳಲಾಗುತ್ತದೆ.

**೭.೩. ಶಾಸನಗಳು**

ಕರ್ನಾಟಕದಲ್ಲಿ ಸಂಸ್ಕೃತಿಯನ್ನು ಕುರಿತಂತೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಇಂತಹ ಅಧ್ಯಯನಗಳನ್ನು ಎರಡು ನೆಲೆಗಟ್ಟುಗಳಲ್ಲಿ ಕಾಣಬಹುದು. ೧. ಸಂಸ್ಕೃತಿಯನ್ನು ಶೋಧಿಸುವುದು, ಹುಡುಕುವುದು ಅಂದರೆ ಸಾಂಸ್ಕೃತಿಕ ನೆಲೆಗಳನ್ನು ಆಶ್ರಯಿಸುತ್ತದೆ. ೨. ಸಂಸ್ಕೃತಿಯನ್ನು ಚಿಂತನೆಗೆ ಒಳಪಡಿಸುವುದು ಅಂದರೆ ಇದು ಸಂಸ್ಕೃತಿಯ ಶೋಧನೆಯ ಫಲಿತಾಂಶಗಳನ್ನು ನಿರ್ಧರಿಸುತ್ತದೆ. ಸಂಸ್ಕೃತಿಯನ್ನು ಶೋಧಿಸುವಲ್ಲಿ ಸಹಾಯಕವಾಗುವ ಶಾಸನಗಳು, ಸಾಹಿತ್ಯ ಕೃತಿಗಳು, ಕಾವ್ಯ,

ಕಥೆಗಳು, ಕೈಪಿಯತ್ತುಗಳು, ಸಾಂಗತ್ಯಗಳು ಇತರೆ ಕಲೆಗಳಲ್ಲಿ ಮುಖ್ಯ ಆಕರಗಳೆಂದು ಶಾಸನಗಳನ್ನು ಕರೆಯಲಾಗುತ್ತದೆ. ಅನುಷಂಗಿಕ ಆಕರಗಳೆಂದು ಸಾಹಿತ್ಯ ಕೃತಿಗಳು, ಐತಿಹ್ಯಗಳು, ಕೈಫಿಯತ್ತು, ಸಾಂಗತ್ಯಗಳನ್ನು ಕರೆಯಲಾಗುತ್ತದೆ. ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ ಎಂದು ಪಾಶ್ಚಾತ್ಯ ವಿದ್ವಾಂಸರು ದೂಷಿಸುವ ಸಂದರ್ಭದಲ್ಲಿ 'ಶಾಸನಗಳು' ಅಧಿಕೃತ ದಾಖಲೆಗಳಾಗಿ ಬೆಳಕಿಗೆ ಬಂದವು. ಶಾಸನಗಳು ವಾಸ್ತವ ವಿಚಾರಗಳನ್ನು ಸತ್ಯದ ಮಾಹಿತಿಗಳನ್ನು ಹೊರಹಾಕುತ್ತವೆ. ಈ ಕಾರಣದಿಂದಲೇ ಶಾಸನಗಳು ತುಂಬಾ ಮಹತ್ವವನ್ನು ಪಡೆದುಕೊಂಡಿವೆ. ಇವು ಜನಾಂಗದ ಬದುಕಿನ ವಿಶ್ವಕೋಶಗಳಾಗಿವೆ ಎಂದು ಹೇಳಬಹುದು. ತಮಿಳುನಾಡನ್ನು ಹೊರತುಪಡಿಸಿದರೆ ಕರ್ನಾಟಕವೇ ಅತಿ ಹೆಚ್ಚು ಶಾಸನಗಳನ್ನು ಕಂಡಿರುವ ರಾಜ್ಯ ಎಂದು ಗುರ್ತಿಸಬಹುದು. ಇಲ್ಲಿಯವರೆಗೂ ಕರ್ನಾಟಕದಲ್ಲಿ ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳು ಒಟ್ಟಾಗಿ ಹೇಳುವುದಾದರೆ ೩೦,೦೦೦ಕ್ಕೆ ಏರಿವೆ.

ಶಾಸನಗಳ ಶೋಧನೆ ಪ್ರಾರಂಭವಾಗಿದ್ದೇ ೧೯ನೇ ಶತಮಾನದ ಕೊನೆಯ ಭಾಗದಿಂದ ಎಂದು ಹೇಳಬಹುದು. 'ಶಾಸ್' ಎಂಬ ಸಂಸ್ಕೃತ ಧಾತುವಿನಿಂದ 'ಶಾಸನ' ಎಂಬ ಪದ ಹುಟ್ಟಿಕೊಂಡಿದೆ. ಈ ಪದದ ಅರ್ಥ 'ರಾಜಾಜ್ಞೆ' 'ಘೋಷಣೆ ಹೊರಡಿಸು', 'ಆಜ್ಞೆ ಮಾಡು' ಎಂದು ಸೂಚಿಸುತ್ತದೆ. ಇಂತಹ ಶಾಸನಗಳು ಆಯಾ ಕಾಲದ ರಾಜ್ಯಗಳು ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರ ಕುರಿತಂತೆ ದಾಖಲೆಗಳಾಗಿದ್ದು, ಪ್ರಾಚೀನ ಸಂಸ್ಕೃತಿಯ ಮೂಲಕ ಸಾಕ್ಷಿಗಳಾಗಿವೆ. ತಾಳೆಗರಿ, ಕಾಗದಗಳ ಮೇಲೆ ಬರೆಯುವುದನ್ನು ಶಾಸನಗಳೆಂದು ಕರೆಯಲು ಸಾಧ್ಯವಿಲ್ಲ. ಕೇವಲ ಶಿಲೆ, ಲೋಹ, ದಂತಗಳು ಮೇಲೆ ಬರೆಯುವ ದಾಖಲೆಗಳನ್ನು ಶಾಸನಗಳೆಂದು ಕರೆಯಲಾಗುವುದು ಸುಮಾರು ೩೦,೦೦೦ ಕ್ಕೂ ತಲುಪಿದ ಶಾಸನಗಳು ಕೆಲವು ಪ್ರಕಟವಾಗಿವೆ. ಇನ್ನೂ ಕೆಲವು ಪ್ರಕಟವಾಗಿಲ್ಲ ಇಂತಹ ಶಾಸನಗಳು ಯಾವುದೋ ಕ್ಷೇತ್ರಕ್ಕೆ ಒಂದು ಸಾಮ್ರಾಜ್ಯಕ್ಕೆ ಅಥವಾ ಒಂದು ದೇಶಕ್ಕೆ ಒಂದು ಬುಡಕಟ್ಟಿಗೆ, ಒಂದು ಸಮಾಜದ ಸಂಸ್ಕೃತಿಗೆ ಸಂಬಂಧಿಸಿಲ್ಲ. ಹೀಗಾಗಿ ಇಂತಹ ಶಾಸನಗಳನ್ನು ಅಧ್ಯಯನದ ಅನುಕೂಲಕ್ಕಾಗಿ ವರ್ಗೀಕರಿಸಲಾಗಿದೆ.

೧. ದಾನ ಶಾಸನಗಳು

೨. ಪ್ರಶಸ್ತಿ ಶಾಸನಗಳು

೩. ವೀರಗಲ್ಲುಗಳು

೪. ಮಾಸ್ತಿಗಲ್ಲುಗಳು

೫. ನಿಷಧಿಗಲ್ಲುಗಳು

ಶಾಸನಗಳ ಅಧ್ಯಯನವನ್ನು ಪ್ರಮುಖವಾಗಿ ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದು.

೧. ಶಾಸನ ಪ್ರಕಟಗೊಂಡ ಕಾಲ

೨. ಶಾಸನ ಅಧ್ಯಯನ ಕಾಲ

೩. ಶಾಸನ ವೈಭವ ಕಾಲ

೪. ಶಾಸನ ವಿಮರ್ಶನ ಕಾಲ

ಇಂತಹ ಶಾಸನಗಳ ಪಠ್ಯ ಪ್ರಕಟಣೆಗೆ ಬಿ.ಎಲ್ ರೈಸ್, ಆರ್. ನರಸಿಂಹಾಚಾರ್, ಎಂ.ಎಚ್. ಕೃಷ್ಣರವರು ಹೆಚ್ಚಿನ ಆಸಕ್ತಿ ತೋರಿದರು.

ಮಧ್ಯಕಾಲೀನ ಕರ್ನಾಟಕ ಕುರಿತಂತೆ, ಅಲ್ಲಿನ ಆಳ್ವಿಕೆಯ ರಾಜಮನೆತನಗಳು, ರಾಜರುಗಳು, ಅಲ್ಲಿನ ಸಾಂಸ್ಕೃತಿಕ ವಿವರಗಳನ್ನು ಕುರಿತಂತೆ ಹಲವಾರು ಶಾಸನಗಳು ಪತ್ತೆಯಾಗಿದ್ದು, ಪ್ರಕಟಗೊಂಡಿವೆ. ಪ್ರಮುಖವಾಗಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೆಚ್ಚಾಗಿ ಶಾಸನಗಳ ಕೊರತೆ ಕಂಡುಬಂದಂತಿದೆ. ಅಂದರೆ ಕುಮ್ಮಟದುರ್ಗದ ಅರಸರ ಕುರಿತಂತೆ ಇಲ್ಲಿಯವರೆಗೂ ಒಟ್ಟು ೨೩ ಶಾಸನಗಳು ಪ್ರಕಟಗೊಂಡಿದ್ದು, ಕಂಪಿಲರಾಯ ಮತ್ತು ಮುಮ್ಮಡಿಸಿಂಗನ ಕುರಿತು ಹೆಚ್ಚು ಸಂಖ್ಯೆಯಲ್ಲಿ ಶಾಸನಗಳು ದೊರೆತಿದ್ದು, ಕುಮಾರರಾಮನ ಕುರಿತಂತೆ ಶಾಸನಗಳ ದಾಖಲೆಗಳಲ್ಲಿ ಹೆಚ್ಚು ಕೊರತೆ ಉಂಟಾಗಿರುವುದು ಕಂಡುಬರುತ್ತದೆ. ಆದರೂ ಈ ಶಾಸನಗಳ ಪೂರಕ ಮಾಹಿತಿಗಳಿಂದಲೇ ಕುಮ್ಮಟದುರ್ಗದ ಒಂದು ಚಿತ್ರಣ ದೊರಕಲು ಸಹಕಾರಿಯಾಗಿದೆ. ಪ್ರಾರಂಭದಲ್ಲಿ ಮುಮ್ಮಡಿಸಿಂಗ ಅವನ ಪೂರ್ವಿಕರು, ನಂತರ ಮಗ ಕಂಪಿಲರಾಯ ಕುರಿತಂತೆ ಹೆಚ್ಚು ದಾಖಲೆಗಳು ದೊರಕಿದ್ದರೂ ಕುಮಾರರಾಮ ಇಂತಹ ದಾಖಲೆಗಳ ಮಾಹಿತಿಗಳಿಂದ ವಂಚಿತನಾಗಿದ್ದಾನೆ.

**ಹಿರೇಕೋಗಿಲೂರು ಶಾಸನ-೧**

ಹಿರೇಕೋಗಿಲೂರು ಶಾಶನವು ಕ್ರಿ.ಶ ೧೨೮೦ರ ಕಾಲಾವಧಿಗೆ ಸೇರಿದ್ದು, ಸೇವುಣರು ಮತ್ತು ಮುಮ್ಮಡಿಸಿಂಗೇನಾಯ್ಕನ ನಡುವಿನ ಯುದ್ಧದ ಸಂಗತಿಯನ್ನು ತಿಳಿಯಪಡಿಸುತ್ತದೆ. ಈ ಶಾಸನದ ಪ್ರಕಾರ ಯುದ್ಧವು ಪ್ರಮಾಧಿ ಸಂವತ್ಸರದಲ್ಲಿ ಗುರುವಾರ ೩೦ರಂದು ನಡೆದಿದೆ. ಎಂದು ಬಲವಾಗಿ ಸೂಚಿಸುವ ಈ ಶಾಸನವು ದಾವಣಗೆರೆ ಜಿಲ್ಲೆಗೆ ಸೇರಿದ ಚನ್ನಗಿರಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಂಡುಬರುವ ಹಿರೇಕೋಗಿಲೂರು ಗ್ರಾಮದಲ್ಲಿ ಕಲ್ಲೇಶ್ವರ ದೇವಾಲಯದ ಪಶ್ಚಿಮ ದಿಕ್ಕಿನಲ್ಲಿ ಈ ಶಾಸನವು ಕಂಡುಬರುತ್ತದೆ. ಈ ಶಾಸನದ ಪಠ್ಯದ ಆರಂಭದಲ್ಲಿ "ಸ್ವಸ್ತಿಶ್ರೀಮತುಯಾದವ ನಾರಾಯಣಂಭುಜಬಳ ಪ್ರೌಢಪ್ರತಾಪಚಕ್ರವರ್ತಿ ವೀರರಾಮದೇವ ವಿಜಯರಾಜ್ಯೋದಯೇ ಎಂದು ವಕ್ಕಣಿಕೆಯಿದ್ದು, ಯಾದವಕುಲಕ್ಕೆ ಸೇರಿದ ಪ್ರೌಢಪ್ರತಾಪ ಚಕ್ರವರ್ತಿಯಾದ ವೀರರಾಮದೇವನೇ ದೇವಗಿರಿ ಯಾದವರ ಅರಸ ಎಂಬುದು ಸ್ಪಷ್ಟವಾಗುತ್ತದೆ. ಇಲ್ಲಿ ಶಾಸನದ ಕಾಲಕ್ಕೂ ಯಾದವ ಅರಸ ರಾಮದೇವನ ಕಾಲಕ್ಕೂ ಹೋಲುತ್ತದೆ. ಮತ್ತೊಂದು ವಕ್ಕಣಿಕೆ ಈ ರೀತಿಯಿದ್ದು, ಶ್ರೀ ಮನ್ಮಹಾಪ್ರಧಾನಂರಾಯದಂಡನಾಥ ಪೇಸಣಿ ಹನ್ಮ ಶ್ರೀ ವೀರ ಚವುಡರ್ಸರು ಕುರುಗೋಡನಾಡ ದೊರವದಿಗೆ ಮುಂಮಡಿಸಿಂಗೆನಾಯ್ಕನ ಮೇಲೆ ನಡದು ಕಾದಿ ಹಲವಾಳು ಕುದುರೆಯಂ ಕೊಂದು ಶಿವಲೋಕ ಪ್ರಾಪ್ತನಾದನದೆಂತೆಂದಡೆ' ಎಂದು ಬರೆದಿದ್ದು, ಈ ಸಾಲುಗಳನ್ನು ಆಧರಿಸಿ ಹೇಳುವುದಾದರೆ ಈ ಶಾಸನವು ದೇವಗಿರಿ ಸೇವುಣರ ಕಾಲದ್ದು ಎಂದು ಸ್ಪಷ್ಟವಾಗುವುದರ ಜೊತೆಗೆ ರಾಮದೇವನ

ಪ್ರಧಾನ ದಂಡನಾಯಕ ವೀರಚವುಡರಸನು ಕುರುಗೋಡ ನಾಡಗೆ ಒಳಪಡುವ ದೊರವದಿಗೆ ಮುತ್ತಿಗೆ ಹಾಕಿ ಅಲ್ಲಿದ್ದ ಮುಮ್ಮಡಿಸಿಂಗೇನಾಯಕನ ಮೇಲೆ ದಾಳಿ ಮಾಡಿದಾಗ ಚವುಡರಸರು ಮಡಿದರು ಎಂದು ತಿಳಿಸುತ್ತದೆ. ಇದರರ್ಥ ಯಾದವರು ಸೋಲುತ್ತಾರೆ ಹಾಗೂ ಮುಮ್ಮಡಿನಿಗೆ ಜಯ ಲಭಿಸುತ್ತದೆ ಎಂದು ತಿಳಿದುಬರುತ್ತದೆ. ಕುರುಗೋಡನಾಡಿನ ದೊರವದಿಯು ಮುಮ್ಮಡಿಸಿಂಗನ ಅಧೀನದಲ್ಲಿತ್ತೆಂದು ಸೇವುಣರು ಮತ್ತು ಮುಮ್ಮಡಿಯು ಪ್ರಾರಂಭದಲ್ಲಿ ಬದ್ಧ ವೈರಿಗಳಾಗಿದ್ದರೆಂಬುದು ಶಾಸನದ ಮೂಲಕ ಖಚಿತಪಡಿಸಬಹುದು. ಎರಡನೇ ಬಲ್ಲಾಳನು ಗೆದ್ದ ದುರ್ಗಗಳ ಪಟ್ಟಿಯಲ್ಲಿ ದೊರವದಿ ಮತ್ತು ಕುರುಗೋಡುಗಳು ಸೇರಿವೆ.[೧] ಕುರುಗೋಡು ಕ್ರಿ.ಶ ೮ನೇ ಶತಮಾನದಿಂದ ಸುಪ್ರಸಿದ್ಧವಾದ ರಾಜಧಾನಿಯಾಗಿತ್ತೆಂದು, ಹೊಯ್ಸಳ ಸೋಮೇಶ್ವರನ ನೆಲೆವೀಡೂ ಆಗಿತ್ತೆಂದು[೨] ಡಾ. ಬಿ.ಎ. ಸಾಲೆತೊರೆಯವರು ಅಭಿಪ್ರಾಯ ಪಟ್ಟಿದ್ದಾರೆ. ಕುರುಗೋಡು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತದೆ. ಜೋಯಿಸರು ಹೇಳುವ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿರುವ 'ದರೋಜಿ'ಯೇ[೩] ಈ ಪ್ರದೇಶವಾಗಿ ಎಂದು ತಿಳಿಸುತ್ತಾರೆ. ಹೀಗಾಗಿ ಕುರುಗೋಡು, ದೊರವದಿ ಎರಡೂ ಪ್ರದೇಶಗಳೂ ಒಂದೇ ಜಿಲ್ಲೆಗೆ ಸೇರಿದ್ದು ಡಾ.ಸಿ.ಎಸ್. ಪಾಟೀಲರು ಹೇಳುವಂತೆ ಸಂಡೂರು ತಾಲೂಕಿನ 'ದರೋಜಿಯೇ'[೪] ಆಗಿನ ಕುರುಗೋಡಿನ ದೊರವದಿ ಎಂದಿದ್ದಾರೆ. ಕುರುಗೋಡು ಮತ್ತು ದೊರವದಿಗಳೆರಡೂ ಇಮ್ಮಡಿ ಬಲ್ಲಾಳನ ಅಧೀನದಲ್ಲಿದ್ದವೆಂದೂ ಹಾಗೂ ಸಾಲೆತೊರೆಯವರ ಪ್ರಕಾರ ಕುರುಗೋಡು ಹೊಯ್ಸಳ ಸೋಮೇಶ್ವರನ ನೆಲೆ ಬೀಡಾಗಿತ್ತು ಎಂಬ ಎರಡೂ ಹೇಳಿಕೆಗಳನ್ನು ಗಮನಿಸಿದಾಗ ಈ ಎರಡೂ ಭಾಗಗಳು ಹೊಯ್ಸಳರ ಅಧೀನಕ್ಕೆ ಸೇರಿದ್ದವು ಎಂಬುದು ಅರಿವಾಗುತ್ತದೆ. ಜೊತೆಗೆ ಹೊಯ್ಸಳರು ಮತ್ತು ಸೇವುಕರು ಬದ್ಧ ವೈರಿಗಳಾಗಿದ್ದರಿಂದ ಕುರುಗೋಡು ದೊರೆವದಿ ಪ್ರದೇಶಗಳು ಹೊಯ್ಸಳರಿಗೆ ಸೇರಿದ್ದವು ಎಂಬ ಕಾರಣಕ್ಕಾಗಿಯೇ ಅಲ್ಲಿ ನೆಲೆಸಿದ್ದ ಮುಮ್ಮಡಿಸಿಂಗೆಯನಾಯಕನ ಮೇಲೆ ದಾಳಿ ನಡೆದಿರಬಹುದು ಎಂಬ ಸಂಶಯ ಸ್ಪಷ್ಟವಾಗುತ್ತದೆ. ಏಕೆಂದರೆ ಈ ಶಾಸದಲ್ಲಿ ಯಾವ ಕಾರಣಕ್ಕಾಗಿ ಯುದ್ಧ ನಡೆದಿದೆಯೆಂದು ತಿಳಿಸಿಲ್ಲ ಆದರೆ ಯುದ್ಧ ನಡೆದಿರುವ ಸಂಗತಿ ಮಾತ್ರ ವ್ಯಕ್ತವಾಗಿದೆ. ಹೀಗಾಗಿ ಈ ಎರಡೂ ಭಾಗಗಳು ಸೇವುಣರ ಬದ್ಧ ವೈರಿಗಳಾದ ಹೊಯ್ಸಳರ ಅಧೀನವಾಗಿದ್ದವು ಎಂಬ ಒಂದು ಕಾರಣಕ್ಕಾಗಿ ಯುದ್ಧವು ನಡೆದಿದೆಯೇ ವಿನಃ ಮುಮ್ಮಡಿಸಿಂಗೆನಾಯಕನ ಮೇಲೆ ಯಾವುದೇ ದ್ವೇಷ ಜಿದ್ದಿನಿಂದಲ್ಲ ಎಂಬುದು ಸ್ಪಷ್ಟವಾಗುತ್ತದೆ. ನಿಜವಾಗಿಯೂ ಸೇವುಣರು ಸಿಂಗೆಯನಾಯಕನ ನಡುವೆ ವೈಷಮ್ಯ ಕಲಹಗಳು ಇದ್ದಿದ್ದರೆ ಈ ಶಾಸನದಲ್ಲಿ ವ್ಯಕ್ತವಾಗಬೇಕಿತ್ತು ಹೀಗಾಗಿ ಇದು ಸೇವುಣರು ಹೊಯ್ಸಳರ ಪ್ರದೇಶದಲ್ಲಿ ನೆಲೆಸಿದ್ದ ಸಿಂಗೆಯನಾಯಕನ ಮೇಲೆ ದಾಳಿಮಾಡಿ ಆ ಪ್ರದೇಶವನ್ನು ವಶಪಡಿಸಿಕೊಳ್ಳಲು ದಾಳಿ ಮಾಡಲು ಮುಂದಾಗಿದ್ದು, ಸಿಂಗೆಯನಾಯಕನಿಗೆ ಜಯ ಲಭಿಸಿತು.

ಅಂತಿಮವಾಗಿ ಇದರಿಂದ ತಿಳಿದುಬರುವುದೇನೆಂದರೆ ಈತನ ಕಾಲಘಟ್ಟದಲ್ಲಿ ಮುಮ್ಮಡಿಸಿಂಗೆಯನಾಯಕನ ಒಂದು ಸ್ಥಿರವಾದ ರಾಜ್ಯವನ್ನು ಹೊಂದಿಲ್ಲದಿದ್ದರೂ ವೀರ ಪ್ರತಾಪನಾಗಿಯೇ ಈ ಯುದ್ಧದಲ್ಲಿ ಹೋರಾಡಿರುವುದು ತಿಳಿದುಬರುತ್ತದೆ. ಸೇವುಣರು ಸಿಂಗೇಯನ

ಮೇಲೆ ಮೊದಲಿನಿಂದಲೂ ಯಾವುದೇ ದ್ವೇಷವಿಲ್ಲದಿದ್ದರೂ ಹೊಯ್ಸಳರ ಪ್ರದೇಶದಲ್ಲಿ ನೆಲೆಸಿದ್ದನೆಂಬ ಕಾರಣಕ್ಕಾಗಿಯೇ ದಾಳಿ ಮಾಡಿ ಈತನೊಂದಿಗೆ ದ್ವೇಷ ಕಟ್ಟಿಕೊಂಡರೆಂಬುದು ಸ್ಪಷ್ಟವಾಗುತ್ತದೆ. ಈ ಶಾಸನವು ಮುಮ್ಮಡಿಸಿಂಗನ ಹೆಸರನ್ನು ಮೊದಲ ಬಾರಿಗೆ ಪರಿಚಯಿಸಿದೆ.[೫]

## ಹೊಳಲ್ಕೆರೆ ಶಾಸನ

ಹೊಳಲ್ಕೆರೆ ಶಾಸನವು ಕ್ರಿ.ಶ ೧೨೮೧ರ ಕಾಲಾವಧಿಗೆ ಸೇರಿದ್ದು, ಹೊಯ್ಸಳರು ಮುಮ್ಮಡಿಸಿಂಗೆಯನಾಯಕನ ನಡುವಿನ ಕದನವನ್ನು ತಿಳಿಸುತ್ತದೆ. ಈ ಶಾಸನದ ಪ್ರಕಾರ ಯಾವುದು ವಿಷ್ಣು ಸಂವತ್ಸರ ಕಾರ್ತಿಕ ಸೋಮವಾರ ೧೩ರಂದು ನಡೆದಿದೆ ಎಂದು ಸೂಚಿಸುತ್ತದೆ. ಇದು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಲೋಕದೊಳಲು ಗ್ರಾಮದಲ್ಲಿ ಕಂಡುಬರುವ ಸಿದ್ದೇಶ್ವರ ದೇವಾಲಯದ ಹತ್ತಿರ ಈ ವೀರಗಲ್ಲು ಕಾಣಸಿಗುತ್ತದೆ. ಈ ಶಾಸನ ಪಠ್ಯವು 'ವೇತಂಡಕಲ್ಲ ಮುಂದೆ ಮುಮ್ಮಡಿಸಿಂಗೆಯನಾಯಕರ ಕೂಡೆ ಸಂಗಿಯ ನಾಯ್ಕರು ಕಾದಿದಲ್ಲಿ....[೬] ಎಂದು ವಕ್ಕಣಿಕೆಯಿದ್ದು, ಸಂಗಿಯನಾಯ್ಕನು ಮುಮ್ಮಡಿಸಿಂಗೆಯ ನಾಯಕನ ಜೊತೆ ಯುದ್ಧ ಮಾಡಿದರ ಪರಿಣಾಮ ಸಂಗೆಯನಾಯಕ ಕಾಲವಾಗುತ್ತಾನೆ ಎಂಬುದು ಇದರರ್ಥವಾಗಿದೆ. ಅಂದರೆ ವೇತಂಡಕಲ್ಲು ಗ್ರಾಮದ ಹತ್ತಿರದಲ್ಲಿಯೇ ಈ ಯುದ್ಧವಾಗಿದೆ, ಮುಖ್ಯವಾಗಿ ಹೊಯ್ಸಳರ ಸಂಗಯ್ಯನಾಯಕನೊಂದಿಗೆ ಮುಮ್ಮಡಿಯು ಹೋರಾಡಿದನು. ಆದರೆ ಇಲ್ಲಿ ಯುದ್ಧದ ಉದ್ದೇಶ ಏನಾಗಿತ್ತು ಎಂಬ ಯಾವ ವಿಚಾರವೂ ನಮೂದಾಗಿಲ್ಲ, ಆದರೆ ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ಮುಮ್ಮಡಿಸಿಂಗೆನಾಯಕನ ಮೂಲ ಉದ್ದೇಶ ಹೊಯ್ಸಳರ ಪ್ರದೇಶಗಳನ್ನು ಅಧೀನ ಮಾಡಿಕೊಳ್ಳುವುದೇ ಆಗಿತ್ತು ಎಂದೆನಿಸುತ್ತದೆ. ಕಾರಣ ಮುಮ್ಮಡಿಯ ಹೆಸರನ್ನು ಮೊದಲು ಸೂಚಿಸುವ ಹಿರೇಕೋಗಿಲೂರು ಶಾಸನದಲ್ಲಿ ತಿಳಿಸಿರುವ ಹಾಗೆ ದೊರವದಿಯ ಮುಮ್ಮಡಿಯ ಅಧೀನದಲ್ಲಿತ್ತು. ಅಂದರೆ ಈ ದೊರವದಿಯು ಕೂಡಾ ಮುಂಚೆ ಹೊಯ್ಸಳರ ಅಧೀನ ಪ್ರದೇಶವಾಗಿತ್ತು ಎಂಬುದು ನಿಜವಾಗಿರುವುದರಿಂದ ಮುಮ್ಮಡಿಸಿಂಗನು ಹೊಯ್ಸಳರ ಅಧೀನದ ಪ್ರದೇಶಗಳನ್ನೇ ದಾಳಿ ಮಾಡುವ ಗುರಿ ಹೊಂದಿದ್ದನೆನ್ನುವುದು ಗಮನಕ್ಕೆ ಬರುತ್ತದೆ. ಆದರೆ ಕಾರಣ ಏನೆಂಬುದು ಯಾವುದೇ ಆಧಾರಗಳಿಂದ ತಿಳಿದುಬಂದಿಲ್ಲವಾದರೂ ಮುಮ್ಮಡಿಸಿಂಗನು ಹೆಚ್ಚಾಗಿ ಹೊಯ್ಸಳರ ಮೇಲೆ ದಾಳಿ ಮಾಡಿರುವುದು ಹಾಗೂ ಅವರ ಪ್ರದೇಶಗಳನ್ನೇ ಅಧೀನ ಮಾಡಿಕೊಂಡಿರುವ ವಿಚಾರವು ಶಾಸನಗಳಿಂದ ಕಂಡುಬರುತ್ತದೆ.

ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಚಾರವೆಂದರೆ ವೇತಂಡಕಲ್ಲು ದಾಳಿಯನ್ನು 'ಎಂ. ವ್ಹಿ. ಚಿತ್ರಲಿಂಗಯ್ಯನವರು ಮುಮ್ಮಡಿಸಿಂಗನ ಎರಡನೇ ಗೋಗ್ರಹಣವೆಂದು ಕರೆದಿದ್ದಾರೆ. ಅಂದರೆ ಶಾಸನದ ರಚನೆಯ ಕಾಲ, ಸಂವತ್ಸರಗಳ ಆಧಾರದ ಮೇಲೆ ವೇತಂಡಕಲ್ಲು ಎಂಬಲ್ಲಿ ಯುದ್ಧ ನಡೆದಿದ್ದು, ಅದಕ್ಕೂ ಪೂರ್ವದಲ್ಲಿ ಬನ್ನಿಕೋಡು ಗ್ರಾಮದ ಮೇಲೆ ಗೋವುಗಳಿಗಾಗಿಯೇ ಕದನ ನಡೆದಿರುವುದು ನಿರ್ಧರಿಸಬಹುದು. ಈ ಕಾರಣಕ್ಕಾಗಿಯೇ ಚಿತ್ರಲಿಂಗಯ್ಯನವರು ಬನ್ನಿಕೋಡು ದಾಳಿಯ ಒಂದು ತಿಂಗಳ ಅಂತರದಲ್ಲಿ ವೇತಂಡಕಲ್ಲು ಕದನವೂ ಗೋವುಗಳಿಗಾಗಿಯೇ

ನಡೆದಿರಬಹುದು ಎಂಬ ಊಹೆಯ ಮೇರೆಗೆ ಈ ದಾಳಿಯನ್ನು ಎರಡನೇ ಗೋಗ್ರಹಣ ಎಂದು ಕರೆದಿರಬಹುದು. ಆದರೆ ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ಹೊಯ್ಸಳರ ಮೇಲಿನ ಮುಮ್ಮಡಿಸಿಂಗನ ದಾಳಿಗಳನ್ನು ಗಮನಿಸಿದಾಗ, ಹೊಯ್ಸಳರ ಅಧೀನದಲ್ಲಿ ಹೆಚ್ಚಾಗಿ ನಾಯಕರುಗಳೇ ಇರುವುದು ಕಂಡುಬರುತ್ತದೆ. ಈ ನಾಯಕರುಗಳು ಮತ್ತು ಮುಮ್ಮಡಿಸಿಂಗನ ವಿರುದ್ಧ ಕದನವಾಗಿರುವುದು ಸಹ ಶಾಸನಗಳಿಂದ ತಿಳಿದುಬರುತ್ತದೆ. ಹೀಗಾಗಿ ಮುಮ್ಮಡಿಸಿಂಗನು ನಾಯಕ ಜನಾಂಗಕ್ಕೆ ಸೇರಿದವನಾಗಿರುವ ಅಭಿಮಾನದಿಂದಲೇ ಹೊಯ್ಸಳರಿಂದ ವಶಮಾಡಿಕೊಳ್ಳುವ ಉದ್ದೇಶದಿಂದ ದಾಳಿ ಎಸಗಿರಬಹುದು. ಹೀಗಾಗಿಯೇ ಮುಮ್ಮಡಿಸಿಂಗನು ಹೆಚ್ಚಾಗಿ ಹೊಯ್ಸಳರ ಮೇಲೆಯೇ ಕದನವಾಗಿರುವುದು ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬಂದಿದೆ.

ಈ ಶಾಸನದಿಂದ ತಿಳಿದುಬರುವ ಮತ್ತೊಂದು ಸಂಗತಿಯೆಂದರೆ ಗೋವುಗಳಿಗೆ ಹೆಚ್ಚು ಮಹತ್ವವಿತ್ತು, ಪಶುಪಾಲನೆ ಯಥೇಚ್ಛವಾಗಿತ್ತು ಎಂಬುದು ಮನದಟ್ಟಾಗುತ್ತದೆ.

**ಬನ್ನಿಕೋಡು ಶಾಸನ**

ಬನ್ನಿಕೋಡು ಶಾಸನವು ಕ್ರಿಶ ೧೨೮೧ರ ಕಾಲಾವಧಿಗೆ ಸೇರಿದ್ದು, ಹೊಯ್ಸಳರು ಮತ್ತು ಮುಮ್ಮಡಿಸಿಂಗನ ನಡುವಿನ ಕದನವನ್ನು ಬಿಂಬಿಸುತ್ತದೆ. ಲೋಕದೊಳಲು ಶಾಸನದ ವೇತಂಡಕಲ್ಲು ಕದನಕ್ಕೂ ಒಂದು ತಿಂಗಳ ಪೂರ್ವದಲ್ಲಿ ಬನ್ನಿಕೋಡು ಕದನ ನಡೆದಿರುವ ಅಭಿಪ್ರಾಯವನ್ನು ಈಗಾಗಲೇ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಅಂದರೆ ವೇತಂಡಕಲ್ಲು ಕದನ ವಿಷ್ಣುಸಂವತ್ಸರ ಕಾರ್ತಿಕ ಶುಕ್ಲಪಕ್ಷದಲ್ಲಿ ನಡೆದಿದ್ದರೆ, ಬನ್ನಿಕೋಡು ಕದನ ಒಂದು ತಿಂಗಳ ಪೂರ್ವದಲ್ಲಿ ಅಂದರೆ ಆಶ್ವಿಜ ಪಕ್ಷದಲ್ಲಿ ಯುದ್ಧನಡೆದಿರಬಹುದು ಎಂಬುದನ್ನು ಊಹಿಸಬಹುದು. ಕ್ರಿಶ ೧೨೮೧ ಸೆಪ್ಟೆಂಬರ್ ೧೭ರಂದು ಮುಮ್ಮಡಿಸಿಂಗನು ಹರಿಹರ ತಾಲ್ಲೂಕಿನಲ್ಲಿ ಕಂಡುಬರುವ 'ಬನ್ನಿಕೋಡು' ಪ್ರದೇಶದ ಮೇಲೆ ದಾಳಿ ಮಾಡಿ ಅಲ್ಲಿನ ಗೋವುಗಳನ್ನು ವಶಪಡಿಸಿಕೊಂಡಾಗ, ಸಿಟ್ಟಿಗೆದ್ದ ಅಲ್ಲಿನ ಬೇಡರ ಬೀರಬೋವನ ಮಗ ಬೊಂಮನಾಯಕ ಮುಮ್ಮಡಿಯ ಮೇಲೆ ತಿರುಗಿಬೀಳುವನಾದರೂ ಬೊಂಮನಾಯಕ ಸಾವನ್ನಪ್ಪಿದನು ಎಂಬ ವಿಚಾರವನ್ನು ಈ ಶಾಸನ ತಿಳಿಸುತ್ತದೆ. 'ಬೋವ' ಎಂಬ ಪದವು ಜಾತಿ ಸೂಚಕವಾಗಿದ್ದು, ಪೂರ್ವಕಾಲದಲ್ಲಿ 'ನಾಯಕ' ಜಾತಿಯನ್ನು 'ಬೋವ' ಎಂದು ಕರೆಯುತ್ತಿದ್ದುದು ಸತ್ಯವೆನಿಸಿದರೂ ತರ್ಕಿಸಬೇಕಾಗುತ್ತದೆ. 'ಬೋವ' ಎಂಬ ಪದವನ್ನು ಮಾತ್ರ ಗಣನೆಗೆ ತೆಗೆದುಕೊಂಡು 'ನಾಯಕ' ಎಂದು ನಿರ್ಧರಿಸುವುದು ಸ್ವಲ್ಪ ಕಷ್ಟಕರ ಸಂಗತಿಯೆನಿಸುತ್ತದೆ. ಏಕೆಂದರೆ ಇಲ್ಲಿ 'ಬೀರ ಬೋವ' ಎಂದು ಸಂಪೂರ್ಣ ಹೆಸರಾಗಿದ್ದು, ಆತನ ಮಗ ಬೊಂಮನಾಯಕ ಎಂದು ಗುರ್ತಿಸಬಹುದು. ಬೀರಬೋವನ ಹೆಸರಿನ ಮುಂದೆ ನಾಯಕ ಎಂದು ಬರೆದಿಲ್ಲದಿರುವುದು ಮಗನ ಹೆಸರಿನ ಜೊತೆ ಬೊಂಮಯನಾಯಕ ಎಂದು ಸೇರಿಸಿರಬಹುದು, ಬೀರಬೋವ ನಾಯಕನ ಮಗ ಬೊಂಮನಾಯಕ ಎಂಬುದೇ ಸರಿಯೆನಿಸುತ್ತದೆ. ಒಟ್ಟಾರೆ ಹೇಳುವುದಾದರೆ ಬೇಡರ ಕುಲಕ್ಕೆ ಸೇರಿದವರೆ ಹೆಚ್ಚಾಗಿ ಹೊಯ್ಸಳರ ಅಧೀನದಲ್ಲಿದ್ದುದರ ಜೊತೆಗೆ ಮುಮ್ಮಡಿಸಿಂಗೆಯನಾಯಕನೊಂದಿಗೆ ಕಲಹವಾಗಿ ಸೋಲುಂಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ಬಹುಮುಖ್ಯವಾಗಿ ಹೊಯ್ಸಳರ ಅಧೀನರಾಗಿದ್ದ ಅನೇಕ ನಾಯಕಮನೆತನದವರನ್ನು ಹೊಯ್ಸಳರಿಂದ ಬಂದ ಮುಕ್ತಗೊಳಿಸಲಿಕ್ಕಾಗಿಯೇ ಹೊಯ್ಸಳರ ಮೇಲೆ ನಿರಂತರ ದಾಳಿಗಳನ್ನು ಮಾಡಿ ಸೋಲಿಸಿ ಆ ಪ್ರದೇಶಗಳನ್ನು ತನ್ನೆಡೆ ಸೇರಿಸಿಕೊಂಡಿರುವುದು ಆಧಾರಗಳಿಂದ ಸತ್ಯವೆನಿಸುತ್ತದೆ.

ಬನ್ನಿಕೋಡು ದಾಳಿಯು ಗೋವುಗಳಿಗಾಗಿಯೇ ನಡೆದಿರುವುದು ಸತ್ಯಸಂಗತಿ. ಆದರೆ ವೇತಂಡಕಲ್ಲು ದಾಳಿ ಗೋವುಗಳಿಗಾಗಿಯೇ ನಡೆದಿರುವುದು ಸತ್ಯಕ್ಕೆ ದೂರವೆನಿಸುತ್ತದೆ. ಅಂದರೆ ಬನ್ನಿಕೋಡು ದಾಳಿಯ ಒಂದು ತಿಂಗಳ ಅಂತರದಲ್ಲಿ ವೇತಂಡಕಲ್ಲು ದಾಳಿ ನಡೆದಿರಬಹುದು ಆದರೆ ಗೋವುಗಳಿಗಾಗಿಯೇ ನಡೆದಿರುವುದು ನಿರ್ದಿಷ್ಟವಾಗಿ ತಿಳಿದುಬಂದಿಲ್ಲ. ಏಕೆಂದರೆ ಹೊಳಲ್ಕೆರೆ ಶಾಸನದಲ್ಲಿ ಅಂತಹ ಯಾವುದೇ ಆಧಾರಗಳಿಲ್ಲ, ಒಂದು ಅಂತರದಲ್ಲಿ ನಡೆದಿದೆ ಎಂದ ಮಾತ್ರಕ್ಕೆ ಅದೇ ಕಾರಣಕ್ಕಾಗಿಯೇ ನಡೆದಿದೆ ಎಂಬುದು ಕೇವಲ ಕಾಲ್ಪನಿಕವಾಗುತ್ತದೆ. ಅಂತಿಮವಾಗಿ ಹೇಳುವುದಾದರೆ ಬನ್ನಿಕೋಡು ದಾಳಿಯನ್ನು ವರತುಪಡಿಸಿದರೆ ಬೇರೆ ಯಾವ ದಾಳಿಯೂ ಗೋವುಗಳಿಗಾಗಿ ನಡೆದಿಲ್ಲ, ಅಂತಹ ಯಾವುದೇ ದಾಖಲೆಗಳನ್ನು ಶಾಸನಗಳಿಂದ ತಿಳಿಯಲು ಸಾಧ್ಯವಿಲ್ಲದ ಕಾರಣ ಬನ್ನಿಕೋಡು ದಾಳಿಯನ್ನು ಮಾತ್ರ 'ಗೋಗ್ರಹಣ' ಎಂದು ಕರೆಯಬಹುದು. ಆದಾಗ್ಯೂ ಕುಮ್ಮಟದರಸರ ದಾಳಿಗಳು ಸಂಪತ್ತಿಗಾಗಿ ನಡೆದಿಲ್ಲ ತಮ್ಮ ರಾಜ್ಯ ವಿಸ್ತರಣೆಗಾಗಿ ನಡೆದಿವೆ.

**ಹಿರಿಯೂರು ಶಾಸನ**

ಹಿರಿಯೂರು ಶಾಸನವು ಕ್ರಿಶ ೧೨೦೪ರ ಕಾಲಾವಧಿಗೆ ಸೇರಿದ್ದು, ಹೊಯ್ಸಳರು ಮತ್ತು ಮುಮ್ಮಡಿಸಿಂಗೇಯನಾಯಕನ ನಡುವಿನ ಯುದ್ಧದ ವಿಚಾರವನ್ನು ತಿಳಿಯಪಡಿಸುತ್ತದೆ. ಈ ಯುದ್ಧವು ವಿಶು ಸಂವತ್ಸರ ನವೆಂಬರ್ ೧೧ರಂದು ನಡೆದಿದೆ ಎಂದು ಖಚಿತವಾಗಿ ಸೂಚಿಸುವ ಈ ಶಾಸನವು ಚಿತ್ರದುರ್ಗ ಜಿಲ್ಲೆಗೆ ಸೇರಿದ ಹಿರಿಯೂರು ತಾಲ್ಲೂಕಿಗೆ ಸಮೀಪವಿರುವ ಈಗಿನ ಚಳ್ಳಕೆರೆ ತಾಲ್ಲೂಕು ಪ್ರದೇಶದಲ್ಲಿ ಕಂಡುಬರುವ ಈಶ್ವರ ದೇವಸ್ಥಾನದ ಹತ್ತಿರ ದೊರೆತಿದೆ. ಶಾಸನದ ವಕ್ಕಣಿಕೆಯಲ್ಲಿ "(ಚಿ)ಮ್ಮತೂರಕಲ್ಲಿಂಗೆ ಮುಮ್ಮಡಿ ಗಯನಾಯನುಎತ್ತಿಬಂದಲ್ಲಿ ಚಳಕೇರೆಯ ಆಳುಗಳು... ಕೇತಮಲ್ಲ ಸೆಟಿಯಮನೆಯ ಕುಂಬರ ಜಕ್ಕಯನಾಯಕನಮಗ ತಿಪ್ಪೆಯನಾಯಕನು ಕಬೂರ.... ನಲುತಿವಿದ ಸ್ವರ್ಗಸ್ಥನಾದ ಗಲ್ಲು ಎಂಬ ಸಾಲುಗಳಿವೆ. ಬನ್ನಿಕೋಡು ಶಾಸನದಲ್ಲಿ ದಾಳಿಯನ್ನು ಮೊದಲನೇ ಗೋಗ್ರಹಣ ಎಂದಿರುವುದು ಸರಿಯೆನಿಸುತ್ತದೆ. ಆದರೆ ಹಿರಿಯೂರು ಶಾಸನದ ದಾಳಿಯನ್ನು ಮೂರನೇ ಗೋಗ್ರಹಣ ಎಂದಿರುವುದು ಸತ್ಯಕ್ಕೆ ದೂರವೆನಿಸುತ್ತದೆ. ಕಾರಣ ಲೋಕದೊಳಲು ಶಾಸನದಲ್ಲಿ ಬೇಡರ ಯುವಕನೊಂದಿಗೆ ಮುಮ್ಮಡಿಸಿಂಗೇಯನು ಕಾದಾಡಿರುವ ವಿಚಾರ ತಿಳಿದುಬರುತ್ತದೆ. ಆದರೆ ಹಿರಿಯೂರು ಶಾಸನದಲ್ಲಿ ಮಾತ್ರ ಕುರುಬರ ಜಕ್ಕಯ್ಯನಾಯಕನ ತಮ್ಮ ತಿಪ್ಪೆಯನಾಯಕನೊಂದಿಗೆ ಕಾದಾಡಿದನೆಂದು ವಕ್ಕಣಿಕೆಯಿರುವುದರಿಂದ ಇಲ್ಲಿ ಕುರುಬರೊಂದಿಗೆ ದಾಳಿ ನಡೆದಿರುವುದು ಸ್ಪಷ್ಟವೆನಿಸುತ್ತದೆ. ಬನ್ನಿಕೋಡು ದಾಳಿ ಹಾಗೂ ಲೋಕದೊಳಲು ದಾಳಿಗಳು ಬೇಡರ ಯುವಕನೊಂದಿಗೆ

ನಡೆದರೆ, ಹಿರಿಯೂರು ದಾಳಿ ಮಾತ್ರ ಕುರುಬರ ಯುವಕನೊಂದಿಗೆ ನಡೆದಿರುವುದು ಖಚಿತವೆನಿಸುತ್ತದೆ. ಎಂ.ವಿ. ಚಿತ್ರಲಿಂಗಯ್ಯನವರು ಇದನ್ನು ಮೂರನೇ ಗೋಗ್ರಹಣ ಎಂದು ಕರೆದಿರುವುದು ಅಸ್ಪಷ್ಟತೆಯಾಗಿದೆ. ಏಕೆಂದರೆ ಮೂರೂ ದಾಳಿಗಳು ಒಂದೇ ವರ್ಷದಲ್ಲಿ ನಡೆದಿರುವುದರಿಂದ ಒಂದೇ ಕಾರಣಕ್ಕೆ ನಡೆದಿದೆ ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಮುಮ್ಮಡಿಸಿಂಗೆಯನ ಮೇಲೆ ದಾಳಿ ಮಾಡಲು ಹೋಗುತ್ತಿರುವಾಗ, ಮಧ್ಯದಲ್ಲಿ ಚಳ್ಳಕೆರೆ ಪ್ರದೇಶವನ್ನು ದಾಟಿಹೋಗುವ ಸಂದರ್ಭದಲ್ಲಿ ಕುರುಬರು ಅಡ್ಡಿಪಡಿಸಿರಬಹುದು, ಈ ಕಾರಣಕ್ಕಾಗಿ ಅಲ್ಲಿ ಯುದ್ಧ ನಡೆದು ಕುರುಬರ ಯುವಕ ಸ್ವರ್ಗಸ್ಥನಾಗಿರಬಹುದೆಂದು ಅನಿಸುತ್ತದೆ.

**ಹಿರೇಕೋಗಿಲೂರು ಶಾಸನ-೨**

ಹಿರೇಕೋಗಿಲೂರಿನ ಮತ್ತೊಂದು ಶಾಸನವು ಕ್ರಿಶ ೧೨೮೨ರ ಕಾಲಾವಧಿಗೆ ಸೇರಿದ್ದು, ಇದು ಸಹ ಸೇವುಣರು ಮತ್ತು ಮುಮ್ಮಡಿಸಿಂಗೆನಾಯಕನ ನಡುವಿನ ಯುದ್ಧವನ್ನು ಕುರಿತು ತಿಳಿಸುತ್ತದೆ. ಈ ಶಾಸನದ ಪ್ರಕಾರ ಯುದ್ಧವು ಚಿತ್ರಭಾನು ಸಂವತ್ಸರ ಭಾನುವಾರ ೧೫ರಂದು ನಡೆದಿದೆ ಎಂದು ಖಚಿತವಾಗಿ ಹೇಳುವ ಈ ಶಾಸನವು ದಾವಣಗೆರೆ ಜಿಲ್ಲೆಯ ಚೆನ್ನಗಿರಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಹಿರೇಕೋಗಿಲೂರು ಗ್ರಾಮದ ಈಶ್ವರ ದೇವಸ್ಥಾನದ ದಕ್ಷಿಣಕ್ಕೆ ಕಾಣಸಿಗುತ್ತದೆ.[೭] ಈ ಶಾಸನದಲ್ಲಿ "ಶ್ರೀ ಮನ್ಮಹಾಮಂಡಳೇಶ್ವರ ಸಕರ ಸೈನ್ಯಾಧಿಪತಿ ಕನ್ನರ ದೇವನು ಮುಮ್ಮಡಿಸಿಂಗೆಯನಾಯಕನ ಮೇಲೆ ದೊರವಡಿಗೆ ನಡೆದು ಕಾದಿದಲ್ಲಿ ಶ್ರೀಮನ್ಮಹಾಪ್ರಧಾನಂ ರಾಯದಂಡನಾಥ, ಪೇಸಣಹನ್ಮ, ಶರಣಾಗತ ವಜ್ರಪಂಜರಂ, ಕೂಚರ್ಸರ ಮಗ ವಣದೇವರ್ಸರು ಕಾದಿ ಹಲವಾಳು ಕುದುರೆಯಂ ಕೊಂದು ಸುರಲೋಕ ಪ್ರಾಪ್ತನಾದ"..... ನೆಂದು ವಕ್ಕಣಿಕೆಯಿದ್ದು, ಅಂದರೆ ಮುಮ್ಮಡಿಸಿಂಗೇಯನ ಮೇಲೆ ಯಾದವರ ಸಕಲ ಸೇನಾಧಿಪತಿಯಿಂದ ಕನ್ನರದೇವನು ದಂಡೆತ್ತಿ ಬಂದಾಗ ಮುಮ್ಮಡಿಯು ವೀರಾವೇಶದಿಂದ ಹೋರಾಡುವುದರ ಜೊತೆಗೆ ಯಾದವರ ಈ ಸೇನೆಯಲ್ಲಿದ್ದ ಮತ್ತೊಬ್ಬ ಮಹಾಪ್ರಧಾನ ರಾಯದಂಡನಾಥ ಕೂಚರಸನ ಮಗ ವಣದೇವರಸನನ್ನು ಸೋಲಿಸಿ ಕೊಲ್ಲುತ್ತಾನೆ ಎಂಬುದು ಈ ವಕ್ಕಣಿಕೆಯ ಅರ್ಥವಾಗಿದೆ. ಯಾದವರ ಸೇನಾಪತಿ ಕನ್ನರದೇವನು ಮುಮ್ಮಡಿಯ ಮೇಲೆ ದಾಳಿ ಮಾಡಲು ಕಾರಣಗಳು ತಿಳಿಸಿದಿಲ್ಲ. ಇದೇ ಪ್ರದೇಶದಲ್ಲಿ ದೊರೆತ ಮತ್ತೊಂದು ಶಾಸನದಲ್ಲೂ ದಾಳಿಗೆ ಯಾವುದೇ ಕಾರಣಗಳನ್ನು ತಿಳಿಸಿಲ್ಲ. ಈಗಾಗಲೇ ಈ ಪ್ರದೇಶದಲ್ಲಿ ದೊರೆತಿರುವ ಶಾಸನದ ಕುರಿತು ಹಿಂದೆ ಚರ್ಚಿಸಲಾಗಿದ್ದು, ಅದರ ನಿರ್ಣಯದಂತೆ ಇಲ್ಲಿ ಸೇವುಣರಿಗೂ, ಮುಮ್ಮಡಿಸಿಂಗೆಯನಾಯಕನಿಗೂ ಯಾವುದೇ ವೈಷಮ್ಯ ಇಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳಲಾಗಿದೆ. ಅಂದರೆ ಮೊದಲ ದಾಳಿಯಲ್ಲಿ ಯಾದವರ ರಾಯದಂಡನಾಥ ಚವುಡರಸನನ್ನು ಮುಮ್ಮಡಿಸಿಂಗೆಯನು ಸೋಲಿಸಿ ಕೊಂದಿರುವ ಕಾರಣ ಸೇವುಣರ ಮತ್ತೊಬ್ಬ ಸೇನಾಪತಿ ಅದೇ ಜಿದ್ದಿನಿಂದ ಪುನಃ ಎರಡನೇ ಬಾರಿ ಮುಮ್ಮಡಿಸಿಂಗೆಯನ ಮೇಲೆ ದಾಳಿ ಮಾಡಿ ಸೋಲಿಸುವ ಗುರಿ ಹೊಂದಿದ್ದನೆನೋ ಅನಿಸುತ್ತದೆ. ಈ ಕಾರಣದಿಂದಾಗಿಯೇ ಸೇವುಣರಿಗೂ ಮತ್ತು ಮುಮ್ಮಡಿಸಿಂಗೇಯನ ನಡುವೆ ಮತ್ತೊಮ್ಮೆ ಯುದ್ಧ ಸಂಭವಿಸುತ್ತದೆ.

ಈಗಾಗಲೇ ಮೊದಲ ದಾಳಿಯಲ್ಲಿ ಸ್ವರ್ಗಸ್ಥನಾದ ಚವುಡರಸ ಮತ್ತು ಎರಡನೆ ದಾಳಿಯಲ್ಲಿ ಸ್ವರ್ಗಸ್ಥನಾದ ವಣದೇವರಸ ಇವರಿಬ್ಬರು ಒಂದೇ ವಂಶಕ್ಕೆ ಸೇರಿದವರಾಗಿದ್ದರು, ಅಂದರೆ ಚವುಡರಸನ ತಂದೆ ಕೂಚರಸ ಇಬ್ಬರು ಸಹೋದರರಾಗಿದ್ದು, ಸಿಂಹರಾಜನ ಇಬ್ಬರು ಮಕ್ಕಳಾಗಿದ್ದರು ಹೀಗಾಗಿ ವಣದೇವರಸನು ತನ್ನ ಸಹೋದರನಾದ ಚವುಡರಸನನ್ನು ಕೊಂದಿದ್ದಾನೆ ಎಂಬ ಒಂದೇ ಒಂದು ಕಾರಣಕ್ಕಾಗಿ ಮುಮ್ಮಡಿಸಿಂಗೆಯನ ಮತ್ತೊಮ್ಮೆ ಎರಡನೆ ಬಾರಿ ದಾಲಿ ನಡೆದಿರಬಹುದೆಂದು ಖಚಿತವಾಗಿ ಅನಿಸುತ್ತದೆ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಎರಡೂ ದಾಳಿಗಳಲ್ಲೂ ಮುಮ್ಮಡಿಸಿಂಗೆಯನ ಮೇಲೆ ಸೇವುಣರೇ ಉದ್ದೇಶಪೂರ್ವಕವಾಗಿ ದಾಳಿ ಮಾಡಿರುವ ಸಂಗತಿ ಅರ್ಥವಾಗುತ್ತದೆ.

**ಹಿರೇಕೋಗಿಲೂರು ಶಾಸನ-೩**

ಈ ಶಾಸನವು ಕ್ರಿಶ ೧೨೮೨ರ ಕಾಲಾವಧಿಗೆ ಸೇರಿದ್ದು, ಇದು ಸಹ ಈಗಾಗಲೇ ಚರ್ಚಿಸಿರುವ ಈ ಪ್ರದೇಶದ ಎರಡೂ ದಾಳಿಗಳ ಮುಂದುವರಿದ ಭಾಗವನ್ನು ತಿಳಿಸುತ್ತದೆ. ಇದು ಸಹ ಚಿತ್ರಭಾನು ಸಂವತ್ಸರ ಭಾನುವಾರ ೧೦ರಂದು ನಡೆದಿದೆ ಎಂದು ತಿಳಿಸುತ್ತದೆ. ಆದರೆ ಈ ಪ್ರದೇಶದ ಎರಡನೇ ಶಾಸನವು ನವೆಂಬರ್‌ನಲ್ಲಿ ಯುದ್ಧ ನಡೆದಿದೆಯೆಂದು ಸೂಚಿಸುತ್ತದೆ. ಮೂರನೆಯ ಈ ಶಾಸನವು ಸೆಪ್ಟೆಂಬರ್‌ನಲ್ಲಿ ಯುದ್ಧ ಮುಂದುವರಿದುದನ್ನು ಹೇಳುತ್ತದೆ ಅಂದರೆ ಮೊದಲು ಸೆಪ್ಟೆಂಬರ್ ನಂತರ ನವೆಂಬರ್ ತಿಂಗಳು ಬರುವಂತೆ, ಮೊದಲು ವಣದೇವರಸನ ಸಾವಿನ ನಂತರ ಇದೇ ದ್ವೇಷಕ್ಕಾಗಿ ಮುಂದೆ ಕನ್ನರದೇವನು ಮತ್ತೊಮ್ಮೆ ಮೂರನೇ ಬಾರಿ ಮುಮ್ಮಡಿಯ ಮೇಲೆ ದಾಳಿ ಮಾಡಿ ಸಂಪೂರ್ಣ ಸೋತು ಹೋಗುತ್ತಾನೆ. ಇದರಿಂದ ರೊಚ್ಚಿಗೆದ್ದ ಮುಮ್ಮಡಿಸಿಂಗೆಯನು ಚವುಡರಸರ ಮೈದುನನಾದ ಗೋಪರಸನನ್ನು ನಾಗಾವಿ ಕಳಸಾಪುರದ ಪ್ರದೇಶದಲ್ಲಿ ಸೋಲಿಸಿ ಸಂಹರಿಸುತ್ತಾನೆ. ಅಂದರೆ ಇಲ್ಲಿ ಎರಡನೇ ದಾಳಿ ಮತ್ತು ಮೂರನೇ ದಾಳಿಗಳ ಕಾಲದಲ್ಲಿ ವ್ಯತ್ಯಯವಾಗಿರುವುದು ಕಂಡುಬರುತ್ತದೆ. ಅಂದರೆ ಕಾಲದ ಅರಿವಿನ ಕೊರತೆಯಿಂದಲೂ ಹೀಗಾಗಿರಬಹುದು ಎಂದೆನಿಸುತ್ತದೆ.

ಮೇಲಿನ ಮೂರೂ ದಾಳಿಗಳನ್ನು ಗಮನಿಸಿದಾಗ ಒಂದೇ ವಂಶವು ಮುಮ್ಮಡಿಸಿಂಗೆಯನ ಮೇಲೆ ದಾಳಿ ಮಾಡಿರುವುದು ಗಮನಕ್ಕೆ ಬರುತ್ತದೆ. ಆದರೆ ಪ್ರತಿ ದಾಳಿಯಲ್ಲೂ ಸೇವುಣರೇ, ಮುಮ್ಮಡಿ ಮೇಲೆ ದಾಳಿಮಾಡಿರುವುದು ವಿಶೇಷಾರ್ಹವೆನಿಸಿದೆ.

**ಲಕ್ಷ್ಮೇಶ್ವರ ಶಾಸನ**

ಲಕ್ಷ್ಮೇಶ್ವರ ಶಾಸನವು ಕ್ರಿಶ ೧೨೮೬-೮೭ರ ಕಾಲಾವಧಿಗೆ ಸೇರಿದ್ದು, ಇದು ಸೇವುಣರು ಮತ್ತು ಮುಮ್ಮಡಿಸಿಂಗೇನಾಯ್ಕನ ನಡುವಿನ ಕದನವನ್ನು ಸಾರುತ್ತದೆ. ಶಾಸನದ ಪ್ರಕಾರ ಈ ಕದನವು ಸರ್ವಜಿತು ಸಂವತ್ಸರ ಗುರುವಾರ ೧೦ರಂದು ನಡೆದಿದೆ ಎಂದು ಗುರ್ತಿಸುವ ಈ ವೀರಗಲ್ಲು ಶಾಸನವು ಗದಗ ಜಿಲ್ಲೆಗೆ ಒಳಪಡುವ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರ ತಾಲ್ಲೂಕು

ಕಛೇರಿಯ[೮] ಹತ್ತಿರದಲ್ಲಿ ದೊರೆತಿದೆ. ಈ ಶಾಸನವು ಮೂರು ಪಟ್ಟಿಕೆಗಳಲ್ಲಿರುವುದು ವಿಶೇಷವೆನಿಸಿದೆ. ಶಾಸನದ ವಕ್ಕಣಿಕೆಯಲ್ಲಿ "ಸ್ವಸ್ತಿ ಶ್ರೀಮತು ಮಹಾದೇವರಾಯನ ಕೊಮಾ...... ದಾಮನಾಯಕನು ಹುಲಿಗೆ ಶ್ರೀಮತು ಸಕಳಸೈನ್ಯಾಧಿಪತಿ ಸಾರಾಣೆಯನಂ ಮುಮ್ಮಡಿಸಿಂಗೆಯನ ಮೇಲೆ ಕುಮಟಕೆ ಯೆತ್ತಿ ನಡ....." ಈ ಸಾಲುಗಳನ್ನು ಗಮನಿಸಿದರೆ ಪ್ರಮುಖವಾಗಿ ಮೂರು ವಿಷಯಗಳನ್ನು ಹೊರಹಾಕಬಹುದು. ಮೊದಲನೆಯದಾಗಿ ಹುಲಿಗೆರೆ ಎಂಬ ಪ್ರದೇಶಕ್ಕೆ ಅಧಿಪತಿಯಾಗಿದ್ದನೆಂದು ತಿಳಿಯಬಹುದು. ಎರಡನೆಯದಾಗಿ ಮುಮ್ಮಡಿಸಿಂಗನು ಈ ವೇಳೆಗಾಗಲೇ ಕುಮ್ಮಟ ಪ್ರದೇಶದಲ್ಲಿ ನೆಲೆಸಿದ್ದನೆಂದು ತಿಳಿದುಬರುತ್ತದೆ. ಮೂರನೆಯದಾಗಿ ಹುಲಿಗೆರೆಯಿಂದ ತಮ್ಮ ಸೈನ್ಯ ಸಮೇತನಾಗಿ ದಾಮನಾಯಕನು ಮುಮ್ಮಡಿಯ ಮೇಲೆ ದಾಳಿ ಮಾಡಲು ಕುಮ್ಮಟಕ್ಕೆ ಹೊರಟನು ಎಂಬ ಮೂರು ಮಹತ್ತರ ಸಂಗತಿಗಳನ್ನು ಹೊರಹಾಕಲು ಈ ಶಾಸನ ಅನುಕೂಲಕರವಾಗಿದೆ. ಆದರೆ ಈ ಕದನವು ಯಾವ ಕಾರಣಕ್ಕಾಗಿ ನಡೆದಿದೆ, ಯಾವ ಪ್ರದೇಶದಲ್ಲಿ ನಡೆದಿದೆ ಎಂಬುದನ್ನು ತಿಳಿಯಲು ಕಷ್ಟಸಾಧ್ಯವಾಗುತ್ತದೆ. ಆದರೆ ದಾಮನಾಯಕನು ಹುಲಿಗೆರೆಯಿಂದ ಸೈನ್ಯ ಸಮೇತ ಕುಮ್ಮಟಕ್ಕೆ ಹೊರಡುವ ಸಂಗತಿ ತಿಳಿಯುತ್ತದೆ. ನಂತರ ದಾಮನಾಯಕ ಮತ್ತು ಮುಮ್ಮಡಿಸಿಂಗೆಯನ ನಡುವೆ ಯುದ್ಧ ನಡೆದು ಕೊನೆಗೆ ದಾಮನಾಯಕ ಸೋತು ಹತನಾಗುತ್ತಾನೆ. ಇಲ್ಲಿ ಗಮನಕ್ಕೆ ಬರುವ ಮುಖ್ಯ ಸಂಗತಿಯೆಂದರೆ ಈ ಯುದ್ಧಕ್ಕೂ ಪೂರ್ವದಲ್ಲೇ ಹುಲಿಗೆರೆಯು ಮುಮ್ಮಡಿಯ ವಶದಲ್ಲೇನು ಇರಲಿಲ್ಲ, ಆದರೆ ಯುದ್ಧದ ತರುವಾಯ ದಾಮನಾಯಕನ ಸಾವಿನ ನಂತರ ಆ ಪ್ರದೇಶವನ್ನು ಮುಮ್ಮಡಿಯು ವಶಪಡಿಸಿಕೊಂಡಿರಬೇಕು. ಈ ಹುಲಿಗೆರೆ ಪ್ರದೇಶವು ಈಗಿನ ಧಾರವಾಡ ಜಿಲ್ಲೆಯಲ್ಲಿ ಕಂಡುಬರುವ ಹುಲಿಕೆರೆ ಪ್ರದೇಶವೇ ಆಗಿರಬಹುದು. ಹೀಗಾಗಿ ಇದರ ಆಧಾರದ ಮೇಲೆ ಧಾರವಾಡದ ಕೆಲವು ಭಾಗಗಳು ಮುಮ್ಮಡಿಸಿಂಗೆಯನ ಅಧೀನಕ್ಕೆ ಒಳಪಟ್ಟಿದ್ದವೆಂದು ಖಚಿತವಾಗಿ ತಿಳಿಯಬಹುದು. ಆದರೆ ಒಂದು ಗಮನಾರ್ಹ ವಿಚಾರವೆಂದರೆ ಈ ಕದನದ ನಂತರ ಅಂದರೆ ಕ್ರಿ.ಶ. ೧೨೮೬-೮೭ರ ತರುವಾಯ ಧಾರವಾಡದ ಭಾಗಗಳು ಮುಮ್ಮಡಿಸಿಂಗೆಯನ ಕೈವಶವಾಗುವುದು ಕಂಡುಬರುತ್ತದೆ.

**ಜೇನುಕಲ್ಲು ಶಾಸನ**

ಜೇನುಕಲ್ಲು ಶಾಸನವು ಕ್ರಿಶ ೧೩೦೩ರ ಕಾಲಾವಧಿಗೆ ಸೇರಿದ್ದು, ಇದು ಹೊಯ್ಸಳರು ಮತ್ತು ಕಂಪಿಲರಾಯನ ನಡುವೆ ನಡೆದ ಕದನವನ್ನು ಪ್ರಸ್ತಾಪಿಸುತ್ತದೆ. ಈ ಶಾಸನದ ಪ್ರಕಾರ ಯುದ್ಧವು ಶೋಭಕ್ರುತು ಸಂವತ್ಸರ ಗುರುವಾರ ೧ನೇ ತಾರೀಖು ನಡೆದಿದೆ ಎಂದು ತಿಳಿಸುವುದರ ಜೊತೆಗೆ ಈ ವೀರಗಲ್ಲು ಶಾಸನವು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿಗೆ ಸೇರಿದ ಜೇನುಕಲ್ಲು ಗ್ರಾಮದ ಶಂಕರ ದೇವಾಲಯದ ಸನಿಹದಲ್ಲಿಯೇ ದೊರೆತಿದೆ. ಈ ಶಾಸನದ ವಕ್ಕಣಿಕೆಯ ಹೀಗಿದ್ದು "ಹೊಳಲಕೆರೆಗೆ ಕಂದಿಲಿದೇವನುನಡದುಬಂದು ಶ್ರೀಮನುಮಹಾಮಂಡಳೇ ಸ್ವರಮಂಡಳಿಕಮದುರಗಂಡ.... ಸೂರೆಕಾರಗೊನ ರಚಕ್ರವರ್ತಿ ಶ್ರೀಮಾದೆದೇವರಂಗ ಪದ್ಮಾರಾಧಕರು ಮಪ್ಪಕೆಂಧಾರಕರು ಮಪ್ಪಕೆಂದಾರಿದೇವರ್ಸರಾಯ ಮಯ್ದುನ ಬಸವಪ್ಪನು ಕಾದಿಗೆಲ್ಲು ಸುರಲೋಕ ಪ್ರಾಪ್ತನಾದನುಯೆಂದೇ

ಬೀರಗಲ್ಲ ಮಾಡಿದ" ಹೀಗೆ ಬರೆಯಲಾಗಿದ್ದು, ಇದನ್ನು ಗಮನಿಸಿದಾಗ ಕಂಪಿಲನೇ ಹೊಯ್ಸಳರೊಂದಿಗೆ ಕದನವಾಡಿರುವುದು ಪ್ರಸ್ತಾಪವಾಗುತ್ತದೆ. ಅಂದರೆ ಕಂಪಿಲನೆ ಹೊಯ್ಸಳರ ಅಧೀನ ಪ್ರದೇಶವಾದ ಹೊಳಲ್ಕೆರೆಗೆ ಬಂದು ಅಲ್ಲಿನ ಕೆಂದಾರಿದೇವರಸನ ಮೈಯ್ದುನ ಬಸವಪ್ಪನ ಜೊತೆ ಯುದ್ಧ ಮಾಡಿದಾಗ ಕಂಪಿಲರಾಯನಿಗೆ ಜಯ ಲಭಿಸಿ, ಬಸವಪ್ಪ ಸೋತು ಮರಣವನ್ನಪ್ಪುತ್ತಾನೆ.

ಕಂಪಿಲರಾಯನ ದಾಳಿಗೂ ಪೂರ್ವದಲ್ಲಿ ತನ್ನ ತಂದೆ ಮುಮ್ಮಡಿಸಿಂಗನ ಕಾಲದಲ್ಲಿ ಕ್ರಿಶ ೧೨೮೩ರ ಸಂದರ್ಭದಲ್ಲಿ ಮುಮ್ಮಡಿಯೇ ಹೊಯ್ಸಳರೊಂದಿಗೆ ಈ ಪ್ರದೇಶದಲ್ಲಿ ಕದನವಾಡಿರುವುದು ಒಂದು ಶಾಸನದಲ್ಲಿ ಬಂದಿದೆ.[೧೬–೮೩] ಅಂದರೆ ಹೊಯ್ಸಳ ಅಧಿಕಾರಿಯಾದ ಕುಮಾರಮಗರ ಮುರಾರಿ ಸಂಗೆಯ ನಾಯಕನೊಂದಿಗೆ ಮುಮ್ಮಡಿಯು ರಾಮಗಿರಿಯ 'ಗಂಗಸಮುದ್ರ' ಎಂಬಲ್ಲಿ ಯುದ್ಧ ನಡೆಸಿರುವುದು ವ್ಯಕ್ತವಾಗುತ್ತದೆ. ಅಂದರೆ ಇಲ್ಲಿ ಗಮನಿಸಬೇಕಾದ ಮುಖ್ಯ ವಿಚಾರವೆಂದರೆ ಮುಮ್ಮಡಿಯು ದಾಳಿಮಾಡಿದ ರಾಮಗಿರಿಯು ಹೋಬಳಿಯಾಗಿದ್ದು, ಇದು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನ ವ್ಯಾಪ್ತಿಗೆ ಸೇರಿಕೊಂಡಿದೆ. ಈಗಾಗಲೇ ಮುಮ್ಮಡಿಗೂ ಮತ್ತು ಹೊಳಲ್ಕೆರೆ ಪ್ರದೇಶದ ನಾಯಕರಿಗೂ ಯುದ್ಧ ನಡೆದಿದ್ದು, ಅದರಿಂದ ಮುಮ್ಮಡಿಗೆ ಅನ್ಯಾಯವಾಗಿದ್ದಿರಬಹುದು ಅಥವಾ ಸಂಪೂರ್ಣವಾಗಿ ಈ ಪ್ರದೇಶಗಳನ್ನು ಹೊಯ್ಸಳರ ಅಧೀನದಿಂದ ವಶಪಡಿಸಿಕೊಳ್ಳಲು ಸಾಧ್ಯವಾಗಿಲ್ಲದಿರಬಹುದು, ಹೀಗಾಗಿ ಮಗನಾದ ಕಂಪಿಲರಾಯನು ಇದೊಂದು ಕಾರಣಕ್ಕಾಗಿ ಏಕಾಏಕಿ ಹೊಳಲ್ಕೆರೆ ಪ್ರದೇಶದ ಮೇಲೆ ದಾಳಿ ಮಾಡಿರುವುದು ವ್ಯಕ್ತವಾಗುತ್ತದೆ.

**ಬಾಗಿವಾಳು ಶಾಸನ**

ಬಾಗಿವಾಳು ಶಾಸನವು ಕ್ರಿಶ ೧೩೦೩ರ ಕಾಲಾವಧಿಗೆ ಸೇರಿದ್ದು, ಹೊಯ್ಸಳರು ಮತ್ತು ಕಂಪಿಲರಾಯನ ನಡುವಿನ ಯುದ್ಧವನ್ನು ಕುರಿತು ತಿಳಿಸುತ್ತದೆ. ಈ ಶಾಸನದ ಪ್ರಕಾರ ಯುದ್ಧವು ಶೋಭಕ್ರಿತು ಸಂವತ್ಸರದಲ್ಲಿ ನಡೆದಿದೆ ಎಂದು ತಿಳಿಸುವ ತಾಲ್ಲೂಕಿನ ಎಲ್ಲೆಯೊಳಗೆ ಸಿಗುವ ಬಾಗಿವಾಳು ಗ್ರಾಮದಲ್ಲಿ ಕಂಡುಬರುತ್ತದೆ. ಈ ವೀರಗಲ್ಲು ಶಾಸನದಲ್ಲಿ ೩ ಭಾಗಗಳನ್ನು ಕಾಣಬಹುದು. ಅಂದರೆ ಒಂದೇ ಯುದ್ಧದ ಬಗ್ಗೆ ತಿಳಿಸಿರುವುದು ಗಮನಾರ್ಹವಾಗಿದೆ. ಕಂಪಿಲದೇವನನ್ನು ರಣನಾಯ್ಕನೆಂದು ಕರೆದಿರುವುದು ವಿಶೇಷವೆನಿಸಿದೆ. ಇಲ್ಲಿ ಕಂಪಿಲನಿಗೂ ಮತ್ತು ಚಿತ್ರದುರ್ಗಕ್ಕೆ ಪ್ರಾಂತ್ಯಾಧಿಕಾರಿಯಾಗಿದ್ದ ಹೊಯ್ಸಳರ ೩ನೇ ಬಲ್ಲಾಳನ ಮೈದುನನಾಗಿದ್ದ ಸೋಮೆಯದಣ್ಣಾಯಕನ ನಡುವೆ ಯುದ್ಧ ನಡೆದಿದ್ದು, ಕಂಪಿಲನೇ ಈತನ ಮೇಲೆ ದಾಳಿ ನಡೆಸಿರುವುದು ತುಂಬಾ ಮುಖ್ಯವೆನಿಸಿದೆ. ಕಾರಣ ಕಂಪಿಲನು ಹೊಯ್ಸಳರನ್ನು ಹೆಚ್ಚು ದ್ವೇಷಿಸುತ್ತಿದ್ದನು ಎಂಬ ಸಂಗತಿ ಖಾತ್ರಿಯಾಗುತ್ತದೆ.

ಕಂಪಿಲನ ಅಧಿಕಾರವಧಿಯಲ್ಲಿ ನಡೆದ ಯುದ್ಧಗಳನ್ನು ಗಮನಿಸಿದಾಗ ಹೆಚ್ಚು ಯುದ್ಧಗಳನ್ನು ಹೊಯ್ಸಳರೊಂದಿಗೆ ನಡೆದಿರುವುದು ಕಂಡುಬಂದಿವೆ. ಅದರಲ್ಲಿಯೂ ಕಂಪಿಲನೇ ಹೊಯ್ಸಳರ ಮೇಲೆ ದಾಳಿ ಮಾಡಿರುವುದು ತಿಳಿದುಬರುತ್ತದೆ. ಈ ಯುದ್ಧಕ್ಕೆ ಹಿನ್ನೆಲೆ, ಕಾರಣಗಳು

ತಿಳಿದುಬಂದಿಲ್ಲವಾದರೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿರಬೇಕು. ಏಕೆಂದರೆ ಜೇನುಕಲ್ಲಿನ ಶಾಸನವು[೧೦] ೨೮-೧೦೬ ಈ ಯುದ್ಧದ ಸಂಗತಿಯನ್ನು ತಿಳಿಸುತ್ತಾ ಮತ್ತೊಂದು ವಿಚಾರವನ್ನು ಮುಂದುವರಿಸಿದೆ. ಹಾಗೆಯೇ ಸೋಮೆಯದಣ್ಣಾಯಕನು ಹತನಾಗುವ ವಿಚಾರವನ್ನು ಚಿಟ್ಟನಹಳ್ಳಿ ಶಾಸನವು ತಿಳಿಸುತ್ತದೆ.[೧೧] ೨೭-೧೦೦ ಅಂದರೆ ಸುಮಾರು ಮೂರು ಶಾಸನಗಳು ಈ ಯುದ್ಧದ ಬಗ್ಗೆ ಪ್ರಸ್ತಾಪ ಮಾಡಿರುವುದರಿಂದ ಕಂಪಿಲನು ತುಂಬಾ ವೀರಾವೇಶದಿಂದಲೇ ಹೋರಾಡಿರಬೇಕು ಹಾಗೂ ಇಲ್ಲಿಂದಲ್ಲೇ ಕಂಪಿಲನ ರಾಜಕೀಯ ಏಳಿಗೆಯಾಗಿರಬೇಕು ಎಂದೆನಿಸುತ್ತದೆ.

ಬಹುಮುಖ್ಯವಾಗಿ ಈ ಯುದ್ಧದ ನಿರ್ಣಾಯಕತೆಯನ್ನು ಕುರಿತು ಸೋಲು ಗೆಲುವಿನ ವಿಚಾರಗಳನ್ನು ಯಾವ ಶಾಸನಗಳಲ್ಲಿಯೂ ತಿಳಿಸಿಲ್ಲ. ಆದರೆ ಹೊಯ್ಸಳರ ಸೇನಾನಿಗಳೇ ಸೋತು ಮರಣವನ್ನೊಂದಿರುವುದರಿಂದ ಕಂಪಿಲನೇ ಇಲ್ಲಿ ವಿಜಯಿಯಾಗಿರಬೇಕು ಹಾಗೂ ಚಿತ್ರದುರ್ಗದ ಸುತ್ತಮುತ್ತಲಿನ ಹೆಚ್ಚು ಪ್ರದೇಶಗಳು ಹೊಯ್ಸಳರ ಅಧೀನದಲ್ಲಿದ್ದುದರಿಂದ ಅವುಗಳನ್ನು ವಶಪಡಿಸಿಕೊಳ್ಳುವಲ್ಲಿ ಕಂಪಿಲನು ಯಶಸ್ವಿಯಾಗಿರಬೇಕು ಎಂದೆನಿಸುತ್ತದೆ. ಕಂಪಿಲನ ಆಡಳಿತಾತ್ಮಕ ಏಳಿಗೆ ಇಲ್ಲಿಂದ ಆಗಿರಬೇಕು.

**ಚಿಟ್ಟನಹಳ್ಳಿ ಶಾಸನ**

ಚಿಟ್ಟನಹಳ್ಳಿ ಶಾಸನವು ಕ್ರಿಶ ೧೩೦೩ರ ಕಾಲಾವಧಿಗೆ ಸೇರಿದ್ದು, ಹೊಯ್ಸಳರು ಮತ್ತು ಕಂಪಿಲರಾಯನ ನಡುವಿನ ಯುದ್ಧದ ಹೋರಾಟವನ್ನು ತಿಳಿಸುತ್ತದೆ. ಈ ಯುದ್ಧವು ಶೋಭಕೃತು ಸಂವತ್ಸರ ಸೋಮವಾರ ೧ ರಂದು ನಡೆದಿದೆ ಎಂದು ಉಲ್ಲೇಖಿಸುವ ಶಾಸನವು ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿಗೆ ಸೇರಿದ ಚಿಟ್ಟನಹಳ್ಳಿ ಗ್ರಾಮದಲ್ಲಿ ದೊರೆತಿದೆ. ಬಾಗಿವಾಳು ಶಾಸನದ ಸಂಗತಿಗಳನ್ನೇ ಈ ಶಾಸನವೂ ಒಳಗೊಂಡಿದೆ. ಈಗಾಗಲೇ ಚರ್ಚಿಸಿರುವಂತೆ ಈ ಯುದ್ಧವು ಮಹತ್ವಪೂರ್ಣದ್ದಾಗಿರಬೇಕು. ಇದಕ್ಕೂ ಮುಖ್ಯವಾಗಿ ಈ ಯುದ್ಧದಲ್ಲಿ ಹೊಯ್ಸಳರ ಪರವಾಗಿ ಅನೇಕರು ಸತ್ತಿರುವುದು ಗಮನಕ್ಕೆ ಬರುತ್ತದೆ. ಅಂದರೆ ಈ ಯುದ್ಧದ ಫಲಿತಾಂಶಗಳು ಯಾವುದೇ ರೀತಿಯಾಗಿ ಯಾವ ಶಾಸನದಲ್ಲೂ ಕಂಡುಬಂದಿಲ್ಲವಾದರೂ ಕೆಲವು ಸೂಕ್ಷ್ಮತೆಗಳ ಮೂಲಕ ಅರಿಯಬಹುದು. ಹೊಯ್ಸಳರ ಪರವಾಗಿ ಹೋರಾಡಿದ ಸೈನಿಕರೇ ಹೆಚ್ಚು ಸತ್ತಿರುವುದರಿಂದ ಹೊಯ್ಸಳರು ಈ ಯುದ್ಧದಲ್ಲಿ ಸೋತಿರುವುದು, ಕಂಪಿಲನು ವಿಜಯಿಯಾಗಿರುವುದು ಸ್ಪಷ್ಟವಾಗುತ್ತದೆ.

ಬಾಗಿವಾಳು ಶಾಸನವು ಕ್ರಿಶ ೧೩೦೩ರಲ್ಲಿ ಕಂಪಿಲನು ಮೊಟ್ಟಮೊದಲಬಾರಿಗೆ ಹೊಯ್ಸಳರ ಮೇಲೆ ಕದನವೆಸಗಿದ್ದನ್ನು ದಾಖಲಿಸುತ್ತದೆ.[೧೨] ಇದನ್ನು ಗಮನಿಸಿದಾಗ ಕಂಪಿಲನು ರಾಜಕೀಯವಾಗಿ ಏಳಿಗೆ ಹೊಂದುವ ಪ್ರಾರಂಭ ಕಾಲದಿದಲೇ ಹೊಯ್ಸಳರ ಮೇಲೆ ದ್ವೇಷವಿತ್ತು ಎಂಬುದು ಅರಿವಾಗುತ್ತದೆ. ಅಂದರೆ ತಂದೆಯಾದ ಮುಮ್ಮಡಿಸಿಂಗನು ಚಿತ್ರದುರ್ಗದ ಪ್ರದೇಶಗಳಲ್ಲಿ ಹಲವು ಬಾರಿ ಯುದ್ಧಮಾಡಿರುವುದು ಹಾಗೂ ಈ ಯುದ್ಧಗಳಲ್ಲಿ ಕೆಲವು ಬಾರಿ ವಿಫಲ ಹೊಂದಿದ್ದಿರಬಹುದು ಅನಿಸುತ್ತದೆ. ಈ ಕಾರಣದಿಂದಾಗಿಯೇ ತಂದೆಯಿಂದಾಗದ ಕೆಲಸಗಳನ್ನು ಪೂರ್ಣಗೊಳಿಸುವ ಸಲುವಾಗಿ ಮಗ ಕಂಪಿಲರಾಯನು ಅದೇ ಪ್ರದೇಶಗಳ ಮೇಲೆ ದಾಳಿ ಮಾಡಿರುವುದು ಕಂಡುಬರುತ್ತದೆ.

**ಕುಮ್ಮಟದುರ್ಗ ಶಾಸನ-೧**

ಕುಮ್ಮಟದುರ್ಗದ ಮೊದಲನೆ ಶಾಸನವು ಕ್ರಿಶ ೧೩೧೫ರ ಕಾಲಾವಧಿಗೆ ಸೇರಿದ್ದು, ದೆಹಲಿ ಸುಲ್ತಾನರಿಗೂ ಹಾಗೂ ಕಂಪಿಲನಿಗೂ ನಡೆದ ಯುದ್ಧವನ್ನು ಕುರಿತು ಉಲ್ಲೇಖಿಸುತ್ತದೆ. ಈ ಯುದ್ಧವು ರಾಕ್ಷಸ ಸಂವತ್ಸರದ ಬುಧವಾರ ೧೪ ರಂದು ನಡೆದಿದೆ ಎಂದು ತೇದಿ ವಿವರಗಳ ಮೇಲೆ ಅಂದಾಜಿಸುವ ಈ ಶಾಸನವು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿಗೆ ಸೇರಿರುವ ಕಮ್ಮಟದುರ್ಗದಲ್ಲಿ ರಾಮಸ್ವಾಮಿ ಗುಡ್ಡದ ದಕ್ಷಿಣಭಾಗದ ಕಣಿವೆಯಲ್ಲಿ ದೊರಕಿದೆ. ಈ ಶಾಸನ ಮೂರು ಭಾಗಗಳಲ್ಲಿದ್ದು, ಕಂಪಿಲನ ರಾಜ್ಯ  ಆಳ್ವಿಕೆ ಕುರಿತು ವಿಚಾರವನ್ನು ಕುರಿತು ತಿಳಿಸುವ ಏಕೈಕ ಶಾಸನವಾಗಿದೆ. ಈಗಾಗಲೇ ಚರ್ಚಿಸಿರುವಂತೆ ಡಾ.ಜಿ. ವರದರಾಜರಾವ್ ಮತ್ತು ಸೀತಾರಾಮ್ ಜಾಗೀರ್‌ದಾರರು "ಮಾಂಡಲಿಕ ಹೊಯ್ಸಳ(ಣ)" ಎಂದು ಕರೆದಿದ್ದನ್ನು ಡಾ. ಸಿ.ಎನ್. ಪಾಟೀಲರು "ಮಹಾನಾಯಕಾಚಾರ್ಯ್ಯ" ಎಂದು ಕರೆದಿರುವುದು ಸತ್ಯಕ್ಕೆ ಹತ್ತಿರವಾಗಿದೆ ಕಾರಣ ಕುಮ್ಮಟದುರ್ಗದ ಮತ್ತೊಂದು ವೀರಗಲ್ಲಿನ ಶಾಸನವು ಈ ಬಗ್ಗೆ ಸ್ವಲ್ಪಮಟ್ಟಿನ ನೆರವು ನೀಡುವುದರೊಂದಿಗೆ ಸಿ.ಎಸ್. ಪಾಟೀಲರ ಹೆಚ್ಚು ಪೂರಕಗೊಳಿಸುತ್ತದೆ.[೧೩] ಹೀಗಾಗಿ ಪಾಟೀಲರ ಅಭಿಪ್ರಾಯದಂತೆ ಮಹಾನಾಯಕಾಚಾರ್ಯ್ಯ ಎಂಬುದೇ ಸರಿ ಎನಿಸುತ್ತದೆ.

ಈ ಶಾಸನದಿಂದ ಕಂಪಿಲನು ಕ್ರಿ.ಶ. ೧೩೧೫ರ ವೇಳೆಗಾಗಲೇ ಕುಮ್ಮಟದುರ್ಗವನ್ನು ವಶಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದ ಎಂಬುದು ಸ್ಪಷ್ಟವಾಗುತ್ತದೆ. ಕುಮ್ಮಟದುರ್ಗವು ಕಂಪಿಲನ ರಾಜಧಾನಿಯಾಗಿತ್ತು ಎಂಬುದನ್ನು ಸ್ಪಷ್ಟವಾಗಿ ಅರಿಯಬಹುದು. ಈ ಕಾಲಕ್ಕಾಗಲೇ ಕಂಪಿಲದೇವನು ಬದ್ಧ ವೈರಿಗಳಾದ ಹೊಯ್ಸಳರ ಮೇಲೆ ದಾಳಿಗಳನ್ನು ನಡೆಸಿ, ಹಂತಹಂತವಾಗಿ ಅವರ ಅಧೀನದ ಪ್ರದೇಶಗಳನ್ನು ವಶಮಾಡಿಕೊಂಡು ಕೊನೆಗೆ ಕುಮ್ಮಟದುರ್ಗವನ್ನು ರಾಜಧಾನಿಯಾಗಿ ಮಾಡಿಕೊಂಡಂತೆ ಕಾಣುತ್ತದೆ. ಹೀಗಾಗಿ ಇಂತಹ ಪರಾಕ್ರಮಿಯ ರಾಜಧಾನಿಯನ್ನು ಭೇದಿಸುವುದು ದೆಹಲಿ ಸುಲ್ತಾನರಿಗೆ ಮುಖ್ಯವಾಗಿದ್ದರಿಂದಲೇ ದೆಹಲಿ ಸುಲ್ತಾನರ ನೇಮಿಖಾನನು ಕಂಪಿಲನ ಮೇಲೆ ದಾಳಿ ಮಾಡಿರುವುದು ಕಂಡುಬರುತ್ತದೆ. ಅಂದರೆ ಇಲ್ಲಿ ದೆಹಲಿ ಸುಲ್ತಾನರು ವಿಜಯಿಯಾಗಿರಬಹುದು ಎಂದೆನಿಸುತ್ತದೆ.

ದೆಹಲಿಯ ನೇಮಿಯ ದಾಳಿ ಮಾಡಿದಾಗ ಸಿಂಗೇನಾಯ್ಕನ ತಂವು ರಾಮನಾಯ್ಕನು ರಣದಲಿ ಹೊಯ್ದಾಡಿ ಬಿದ್ದನು' ಎಂದಿದ್ದು, ಅಂದರೆ ರಾಮನಾಯ್ಕ ಕಂಪಿಲನ ಸಂಬಂಧಿಯಾಗಿ ಇರಬಹುದು ಹಾಗೂ ರಾಮನಾಯ್ಕನು ತನ್ನ ತಂದೆಯಾದ ಮುಮ್ಮಡಿಸಿಂಗೆನಾಯಕನ ಸಹೋದರನಾಗಿರಬಹುದು ಎಂದೆನಿಸುತ್ತದೆ.

ಬಹುಮುಖ್ಯವಾಗಿ ವರದರಾಜರಾವ್-ಜಾಗೀರದಾರರು ತಮ್ಮ ವಾದದ ಸಮರ್ಥನೆಗೆ ಕ್ರಿಶ ೧೩೨೫ರ ರಾಮಘಡ ಶಾಸನದ "ಇಬ್ಬರು ದಾಯದ ದಂಡಿನ್ನೊಳಗೆ ಎಂಬ ಸಾಲನ್ನು ಕಂಪಿಲನು ಮತ್ತು ಹೊಯ್ಸಳರು ಬಂಧುಗಳಾಗಿದ್ದರು, ನಂತರ ದಾಯಾದಿಗಳಾದರು ಎಂಬ ಹೇಳಿಕೆಯನ್ನು ಸಮರ್ಥಿಸಲು ಬಳಸಿಕೊಂಡಿರುವುದು ಹಿಂದಿನ ಚರ್ಚೆಗಳಲ್ಲಿ ಕಂಡುಬರುತ್ತದೆ.

**ಕುಮ್ಮಟದುರ್ಗ ಶಾಸನ-೨**

ಕುಮ್ಮಟದುರ್ಗದ ಮತ್ತೊಂದು ಶಾಸನವು ಕ್ರಿಶ ೧೪ನೆಯ ಶತಮಾನದ ಅವಧಿಗೆ ಸೇರಿದ್ದಾಗಿದೆ. ಇದು ದೆಹಲಿಸುಲ್ತಾನರು ಮತ್ತು ಕಂಪಿಲದೇವನ ನಡುವಿನ ಯುದ್ಧವನ್ನು ದಾಖಲಿಸುತ್ತದೆ. ಈ ಶಾಸನದಲ್ಲಿ ತೇದಿ ವಿವರಗಳು ದಾಖಲಾಗಿಲ್ಲದಿರುವುದರಿಂದ ಖಚಿತವಾಗಿ ಕಾಲ, ಸಂವತ್ಸರಗಳ ಕುರಿತು ತಿಳಿಸಲು ಕಷ್ಟಕರವಾಗುತ್ತದೆ. ಈ ವೀರಗಲ್ಲು ಶಾಸನವೂ ಕೂಡ ಕುಮ್ಮಟದುರ್ಗದ ರಾಮಸ್ವಾಮಿ ಬೆಟ್ಟದ ದಕ್ಷಿಣದಲ್ಲಿ ದೊರೆತಿದೆ. ಇಲ್ಲಿನ ಶಾಸನದಲ್ಲಿನ ವಕ್ಕಣಿಕೆಯ ಪ್ರಕಾರ ಕಂಪಿಲದೇವನನ್ನು ನಾಯಕಾಚಾರ್ಯ ಎಂದು ಕರೆದಿರುವುದು ಸ್ಪಷ್ಟವೆನಿಸುತ್ತದೆ. ಕುಮ್ಮಟದುರ್ಗದ ಮೊದಲ ಶಾಸನಕ್ಕೆ ಇದು ಮುಖ್ಯ ಆಧಾರವೆನಿಸುತ್ತದೆ.

ದೆಹಲಿ ಸುಲ್ತಾನರು ಮತ್ತು ಕಂಪಿಲದೇವನ ನಡುವೆ ಯುದ್ಧ ನಡೆದ ಪರಿಣಾಮ ಸಿಂಗ ಎಂಬುವವನು ರಣರಂಗದಲ್ಲಿ ಮಡಿದನೆಂಬ ವಿಚಾರ ದಾಖಲಾಗಿದೆ. ಆದರೆ ಇದಕ್ಕೆ ಕಾರಣಗಳೇನು ಯುದ್ಧದ ಪರಿಣಾಮ ಗೆಲುವು, ಸೋಲುಗಳ ಕುರಿತು ಯಾವುದೇ ಮಾಹಿತಿಗಳಿಲ್ಲ.

**ಹೊಸಕೋಟೆ ಶಾಸನ**

ಹೊಸಕೋಟೆ ಶಾಸನವು ಕ್ರಿಶ ೧೩೨೦ರ ಕಾಲಾವಧಿಗೆ ಸೇರಿದ್ದಾಗಿದೆ. ಇದು ಹೊಯ್ಸಳರು ಮತ್ತು ಕಂಪಿಲರ ನಡುವಿನ ಮತ್ತೊಂದು ಬಹುಮುಖ್ಯ ಕದನವನ್ನು ತಿಳಿಸುತ್ತದೆ. ಈ ಯುದ್ಧವು ರೌದ್ರಿ ಸಂವತ್ಸರದಲ್ಲಿ ನಡೆದಿದೆ ಎಂದು ಸೂಚಿಸುವ ಶಾಸನವು ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿಗೆ ಒಳಪಡುವ ಹೊಸಕೋಟೆ ಗ್ರಾಮದಲ್ಲಿ ಕಂಡುಬರುತ್ತದೆ. ಇದು ಕಂಪಿಲ ಮತ್ತು ಹೊಯ್ಸಳರ ನಡುವೆ ವೈಷಮ್ಯ ಮುಂದುವರೆದುದನ್ನು ಚಿತ್ರಿಸುತ್ತದೆ.[೧೪]

ಕ್ರಿ.ಶ.೧೨೮೦ರ ಹಿರೇಕೋಗಿಲೂರು ಶಾಸನವು ಯಾದವರು ಮುಮ್ಮಡಿಸಿಂಗನ ಮೇಲೆ ಯುದ್ಧ ಮಾಡಲು ದೊರವಡಿಗೆ ದಾಳಿ ಮಾಡಿದರು ಎಂದು ತಿಳಿಸುತ್ತದೆ. ಅಂದರೆ ಮೊದಲು 'ಎರಡನೇ ಬಲ್ಲಾಳನು ಗೆದ್ದ ದುರ್ಗಗಳ ಪಟ್ಟಿಯಲ್ಲಿ ದೊರವಡಿ ಮತ್ತು ಕುರುಗೋಡುಗಳು ಸೇರಿವೆ'[೧೫] ಎಂದು ಹೇಳಿದ್ದು, ಹೀಗಾಗಿ ಹೊಯ್ಸಳರು ಈ ಮುಂಚೆ ಪ್ರದೇಶವು ತಮಗೆ ಸೇರಿತ್ತು ಎಂಬ ಕಾರಣದಿಂದಲೇ ಇರಬೇಕು, ಪುನಃ ದೊರವಡಿಯ ಮೇಲೆ ಕ್ರಿಶ ೧೩೨೦ರಲ್ಲಿ ಕಂಪಿಲನ ಮೇಲೆ ದಾಳಿಮಾಡಿರುವುದು ಈ ಶಾಸನದಿಂದು ತಿಳಿಯುತ್ತದೆ. ಅಂದರೆ ಕುಮ್ಮಟದರಸರು ಪ್ರಾರಂಭದಿಂದ ಅಂತ್ಯದ ಆಳ್ವಿಕೆಯವರೆಗೂ ಹೊಯ್ಸಳೊಂದಿಗೆ ಯುದ್ಧ ಮಾಡುತ್ತಲೇ ಬಂದಿರುವುದನ್ನು ಶಾಸನಗಳ ಮೂಲಕ ಗಮನಿಸಬಹುದು.

**ರಾಮಘಡ ಶಾಸನ-೧**

ರಾಮಘಡ ಶಾಸನವು ಕ್ರಿಶ ೧೩೨೩ರ ಕಾಲಾವಧಿಗೆ ಸೇರಿದ್ದು, ಹೊಯ್ಸಳರು ಮತ್ತು ಕಂಪಿಲದೇವನ ವೈರತ್ವವನ್ನು ಈ ಯುದ್ಧದ ಮೂಲಕ ಬಿಂಬಿಸುತ್ತದೆ. ಈ ಯುದ್ಧವು ದನ್ದುಬಿ ಸಂವತ್ಸರದ ಸೋಮವಾರ ೧೫ರಂದು ನಡೆದಿದೆ ಎಂದು ಖಚಿತಪಡಿಸುವ ಈ ಶಾಸನವು ಬಳ್ಳಾರಿ

ಜಿಲ್ಲೆಯ ಸಂಡೂರು ತಾಲ್ಲೂಕಿನ ರಾಮಘಡ (ಹೊಸಮಲೆದುರ್ಗ)ದಲ್ಲಿ ದೇವಾಲಯದ ಹತ್ತಿರದಲ್ಲೇ ಕಂಡುಬಂದಿದೆ. ವೀರಕಂಪಿಲದೇವನ ಮೇಲೆ ಬಲ್ಲಾರಾಯನು ಯಿಬ್ಬರು ದಾಯದ ದಂಡಿನೊಳಗೆ ದಂಡಿನ ಬಯಿಚಯ್ಯನು ಆ ಸಮರಂಗದ ಕಟ್ಟಿನಲ್ಲಿ ಹೊಕ್ಕು ಆ ಕಂಪಿಲದೇವನು ಬಯಿ(ಚ) ಬೋವನ ಕುದಿರೆ(ಯ)ನು ಯೇರಿದಡೆ ಆ ಬಯಿಚಬೋವನು ಸಮರಂಗದ ಕಟ್ಟ(ನಲ್ಲಿ)ತಿರುಗಿ ಹಾರಿ ಹೊಯಿದಾಡಿ ಬಿದ್ದನು" ಈ ವರದಿಯಂತೆ ಈಗಾಗಲೇ ಕೆಲವು ವಿದ್ವಾಂಸರುಗಳು ಈ ಶಾಸನವನ್ನು 'ಕಂಪಿಲನು ಹೊಯ್ಸಳರ ಬಂಧುವೆನ್ನುವುದರಲ್ಲಿ ಮಹತ್ತರವಾದ ಪಾತ್ರವಹಿಸುತ್ತದೆ.[೧೬] ಎಂದು ನಿರ್ಣಯಿಸಿದ್ದಾರೆ. "ಯಿಬ್ಬರು ದಾಯದ ದಂಡಿನೊಳಗೆ" ಎಂಬ ಸಾಲಿನಲ್ಲಿ 'ದಾಯದ' ಎಂಬ ಪದವನ್ನು 'ದಾಯಾದಿ' ಎಂದು ಓದಿರುವ ಆಧಾರದ ಮೇಲೆ ಹೊಯ್ಸಳರು ಮತ್ತು ಕಂಪಿಲರು ಸಹೋದರರೆಂದು ಪರಿಗಣಿಸಿದ್ದಾರೆ. ಆದರೆ 'ದಾಯ' ಎಂಬ ಪದವು 'ಆಟ', 'ಕುತಂತ್ರ' ಅಥವಾ 'ಪಣ' ಎಂದೆಲ್ಲಾ ನಾನಾ ಅರ್ಥಗಳನ್ನು ಸೂಚಿಸುವಾಗ ಇದನ್ನು 'ದಾಯಾದಿ' ಎಂದು ಓದಿರುವುದು ಅಷ್ಟೊಂದು ಸಮಂಜಸವಲ್ಲವೆನಿಸುತ್ತದೆ. "ವೀರ ಕಂಪಿಲದೇವನ ಮೇಲೆ ಬಲ್ಲಾಖರಾಯನ ಯಿಬ್ಬರು ದಾಯದ ದಂಡಿನೊಳಗೆ" ಅಂದರೆ ಕಂಪಿಲ ಮತ್ತು ಬಲ್ಲಾಖನ ಆಟದ/ಕುತಂತ್ರದ ಸೇನೆಗಳೊಳಗೆ ಹೋರಾಡಿ ಬಯಿಚಚೋವ ಎಂಬಾತನು ಮಡಿದಿರಬೇಕು ಎಂದೆನಿಸುತ್ತದೆ. ಇಲ್ಲಿ ಇವರಿಬ್ಬರನ್ನು ಸೋದರರೆನ್ನಲು ಯಾವುದೇ ಖಚಿತವಾದ ಆಧಾರಗಳಿಲ್ಲವಾದ್ದರಿಂದ ಹಾಗೂ ಬೇರೆ ಯಾವ ಶಾಸನವೂ ಇವರಿಬ್ಬರನ್ನು ದಾಯಾದಿಗಳು/ ಸಹೋದರರೆಂದು/ಸಂಬಂಧಿ ಎಂದು ತಿಳಿಸಿಲ್ಲ. ಈ ಕಾರಣಕ್ಕಾಗಿಯೇ ಹೊಯ್ಸಳರೇ ಬೇರೆ, ಕುಮ್ಮಟದರಸರೇ ಬೇರೆ ಎಂದು ನಿರಾತಂಕವಾಗಿ ಸೂಚಿಸಬಹುದು.

**ಯರಬಳ್ಳಿ ಶಾಸನ**

ಯರಬಳ್ಳಿ ಶಾಸನವು ಕ್ರಿಶ ೧೩೨೪ರ ಕಾಲಾವಧಿಗೆ ಸೇರಿದ್ದು ಇದು ಸಹ ಕಂಪಿಲರಾಯ ಮತ್ತು ಹೊಯ್ಸಳರ ನಡುವಿಗೆ ಯುದ್ಧವನ್ನು ಸಾರುತ್ತದೆ. ಯುದ್ಧವು ಕ್ರೋಧನ ಸಂವತ್ಸರದ ಆದಿತ್ಯವಾರ ೧೦ರಂದು ನಡೆದಿರುವುದನ್ನು ಸೂಚಿಸುವ ಈ ಶಾಸನವು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಯರಬಳ್ಳಿ ಗ್ರಾಮದ ಹೊಲದಲ್ಲಿ ಕಂಡುಬರುತ್ತದೆ. ಈ ಶಾಸನದಲ್ಲಿ ಕಂಪಿಲನನ್ನು ಕಂಪಿಲದೇವ ಎಂದು ಕರೆದಿರುವುದು ವಿಶೇಷವೆನಿಸಿದೆ. ಇಲ್ಲಿ "ಕರಡಿಕೆರೆಯ ಪೆರುಮಗ ಮಗ ನಾಗೆಯನಾಯ್ಕ"[೧೭] ಅಂದರೆ ಪೆರುಮಗೌಡ ಎಂಬುವನು ಕರಡಿಕೆರೆಗೆ ಅಧಿಪತಿಯಾಗಿದ್ದನೆಂದು ಈತನ ಮಗ ನಾಗೆಯನಾಯ್ಕನು ಹುಳಿಯೂರಿಗೆ ಅಧಿಪತಿಯಾಗಿದ್ದರಿಂದ ಕಂಪಿಲನು ದಾಳಿ ಮಾಡಿದಾಗ ೩ನೇ ಬಲ್ಲಾಳನ ಮಹಾಪ್ರಧಾನ ಬೆಬೆಯದಣ್ಣಾಯಕರು ಹಾಗೂ ಅವರ ಮಗ ಸಿಂಗೇಯದಣ್ಣಾಯಕರು ಕಂಪಿಲನ ವಿರುದ್ಧ, ನಾಗೆಯನಾಯ್ಕನ ಪರವಾಗಿ ಯುದ್ಧಕ್ಕಿಳಿದರು. ಈ ಸಂದರ್ಭದಲ್ಲಿ ನಾಗೆಯನಾಯ್ಕನ ಜೊತೆಗೆ ಕೆಲವು ವೀರರು ಮಡಿದರೆಂದು ತಿಳಿಸುತ್ತದೆ. ಅಂದರೆ ಇಲ್ಲಿ ಯಾರು ಗೆಲುವನ್ನು ತಂದುಕೊಂಡರೆಂಬುದರಲ್ಲಿ ಸ್ಪಷ್ಟತೆಯಿಲ್ಲ. ಆದರೆ ಇದರಿಂದ ತಿಳಿದುಬರುವ ಮುಖ್ಯ ಸಂಗತಿಯೆಂದರೆ ಈ ಯುದ್ಧದಲ್ಲಿ ದಣ್ಣಾಯಕರು ಸೋತರೆಂದು

ಅನಿಸುತ್ತದೆ. ಕಾರಣ ಇವರು ಸೋತಿರುವ ಕಾರಣದಿಂದಲೇ ಪುನಃ ಕಂಪಿಲನ ಮೇಲೆ ಇವರು ದಾಳಿ ಮಾಡಿರುವ ಸಂಗತಿಯನ್ನು ಮುಂದಿನ ಕಡಸೂರು ಗ್ರಾಮದ ಶಾಸನ ತಿಳಿಸಿಕೊಡುತ್ತದೆ.

**ಕಡಸೂರು ಶಾಸನ**

ಕಡಸೂರು ಶಾಸನವು ಕ್ರಿ.ಶ ೧೩೨೫ರ ಕಾಲಾವಧಿಗೆ ಸೇರಿದ್ದಾಗಿದೆ. ಇದು ಯರಬಳ್ಳಿ ಶಾಸನ ತಿಳಿಸಿರುವ ಯುದ್ಧದ ಮುಂದುವರಿದ ಭಾಗವೆನಿಸುತ್ತದೆ. ಈ ಯುದ್ಧವು ಸಹ ಕ್ರೋಧನ ಸಂವತ್ಸರದಲ್ಲೇ, ನಡೆದಿದ್ದು, ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ವ್ಯಾಪ್ತಿಗೆ ಸೇರುವ ಕಡಸೂರು ಗ್ರಾಮದ ಬೈರೇದೇವರ ದೇವಾಲಯದ ಹತ್ತಿರದಲ್ಲಿ ಕಂಡುಬಂದಿದೆ.

ಹುಳಿಯೂರು ಕದನ ಹಾಗೂ ಕಡಸೂರು ಶಾಸನ ತಿಳಿಸಿರುವ ಕದನಗಳು ಒಂದೇ ಸಂವತ್ಸರದಲ್ಲಿ ಅದೇ ವ್ಯಕ್ತಿಗಳ ನಡುವೆ ಒಂದಾದ ಮೇಲೆ ಒಂದು ಯುದ್ಧ ನಡೆದಿರುವುದು ಗಮನಕ್ಕೆ ಬರುತ್ತದೆ. ಮೊದಲು ಹುಳಿಯೂರು ಕದನದಲ್ಲಿ ನಾಗೆಯನಾಯ್ಕನ ನೆರವಿಗೆ ಬಂದ ದಣ್ಣಾಯಕರು ಇಲ್ಲಿ ಸೋಲನ್ನನುಭವಿಸಿರಬಹುದು, ಹೀಗಾಗಿಯೇ ಪುನಃ ಮತ್ತೊಂದು ತಿಂಗಳಿನಲ್ಲಿ ಗೆಲುವಿಗಾಗಿ ಕಂಪಿಲನ ಮೇಲೆ ದಣ್ಣಾಯಕರು ಯುದ್ಧ ಮಾಡಿರಬಹುದು. ಆದರೆ ಈ ಶಾಸನವು ಅಸ್ಪಷ್ಟತೆಯಿಂದ ಕೂಡಿದ್ದು ಹಾಗೂ ಅಲ್ಲಲ್ಲಿ ತ್ರುಟಿತಗೊಂಡಿರುವುದರಿಂದ ಅಂತಿಮ ತೀರ್ಮಾನ ಏನೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ.

**ಕೂಡ್ಲಿ ಶಾಸನ**

ಕೂಡ್ಲಿ ಶಾಸನವು ಕ್ರಿ.ಶ ೧೪ನೆಯ ಶತಮಾನದ ಕಾಲಾವಧಿಗೆ ಸೇರಿದ್ದಾಗಿದೆ. ಇದು ಸಹ ಹೊಯ್ಸಳ ಮತ್ತು ಕಂಪಿಲನ ನಡುವಿನ ಯುದ್ಧವು ಇನ್ನು ದುಪ್ಪಟ್ಟಾಗಿರುವುದನ್ನು ಹೇಳುತ್ತದೆ. ಈ ಶಾಸನವು ಶಿವಮೊಗ್ಗ ತಾಲ್ಲೂಕಿನ ವ್ಯಾಪ್ತಿಗೆ ಒಳಪಟ್ಟ ಕೂಡ್ಲಿಯ ಕಲ್ಲು ಮಠದ ಮುಂದೆ ಕಾಣಸಿಗುತ್ತದೆ. ಯುದ್ಧದ ಮುಂದುವರಿದ ಭಾಗವೆನಿಸುತ್ತದೆ. ಈ ಯುದ್ಧವು ಕುಮ್ಮಟದ ನಾಯಕರಿಗೂ ಹೊಯ್ಸಳರಿಗೆ ಜರುಗಿದ ಆರನೇ ಸಮರವನ್ನು ಸಾರುತ್ತದೆ.[೧೮] ಇಲ್ಲಿ ವಿಶೇಷವೆಂದರೆ 'ಪಿಂಗಳಿರಾಯ' ಎಂದು ಕಂಪಿಲರಾಯನನ್ನು ಕರೆದಿರುವುದು ಹೊಸತೆನಿಸಿದೆ. ಅಂದರೆ ಇದು ಈತನಿಗೆ ಬಿರುದಾಗಿರಬಹುದು. ಇಲ್ಲಿ ಯಾವುದೇ ಶಕವರ್ಷಗಳ ಮಾಹಿತಿಗಳಿಲ್ಲದ ಕಾರಣ ಬರವಣಿಗೆಯ ಆಧಾರದ ಮೇಲೆ ಕಾಲವನ್ನು ನಿರ್ಣಯಿಸಬಹುದಾಗಿದೆ.

ಕಂಪಿಲರಾಯನು ಸಿರಗುಪ್ಪೆಯ ಬಳಿ ತನ್ನ ಸೇನೆಯ ಜೊತೆ ಬೀಡುಬಿದ್ದ ವಾರ್ತೆಯನ್ನು ಬಲ್ಲಾಳನು ಕೇಳಿ ಯುದ್ಧಕ್ಕೆ ಸಿದ್ಧನಾಗುವುದು, ನಂತರ ಇವರಿಬ್ಬರ ನಡುವೆ ಯುದ್ಧ ನಡೆದರೂ ಸೋಲು ಗೆಲುವಿನ ಸಂಗತಿ ತಿಳಿದುಬರುವುದಿಲ್ಲ. ಕೆಲವೊಂದು ಅಸ್ಪಷ್ಟ ಮಾಹಿತಿಗಳು ದೊರೆತಿರುವುದರಿಂದ ಬೇಬೆದಣ್ಣಾಯಕರ ಮೈಯ್ದುನ ಸಕ್ಕಿ ಸಾಹಣಿಯರು ಬಲ್ಲಾಳನಿಗೆ ಬಾಷೆ ಮಾಡುವ ಸಂಗತಿ ಇದೆ.

ಮೇಲಿನ ಎಲ್ಲಾ ಯುದ್ಧಗಳಲ್ಲೂ ಹೆಚ್ಚಾಗಿ ಹೊಯ್ಸಳ ಮತ್ತು ಕಂಪಿಲನ ನಡುವೆಯೇ ನಡೆದಿರುವುದು ಗಮನಕ್ಕೆ ಬರುತ್ತದೆ. ಅಂದರೆ ಬಹುಶಃ ಚಿತ್ರದುರ್ಗದ ಹೆಚ್ಚು ಭಾಗಗಳು ಹೊಯ್ಸಳರ ಅಧೀನದಲ್ಲಿದ್ದವು. ಹೀಗಾಗಿ ಸೇವುಣರು ಈ ಪ್ರದೇಶಗಳನ್ನು ವಶಮಾಡಿಕೊಳ್ಳಲು ಮುಂದಾದಾಗ ಇವರ ಸಾಮಂತರಾಗಿದ್ದ ಕುಮ್ಮಟದರಸರು ಸೇವುಣರ ಪರವಾಗಿ ಹೊಯ್ಸಳರ ವಿರುದ್ಧ ಯುದ್ಧಗಳನ್ನು ನಡೆಸಿರಬಹುದೆಂಬ ತೀರ್ಮಾನಕ್ಕೆ ಬರಬಹುದು.

**ಲಕ್ಷ್ಮೇಶ್ವರ ಶಾಸನ**

ಲಕ್ಷ್ಮೇಶ್ವರ ಶಾಸನವು ಕ್ರಿಶ ೧೪ನೆಯ ಶತಮಾನದ ಕಾಲಾವಧಿಗೆ ಸೇರಿದ್ದಾಗಿದೆ. ದೆಹಲಿ ಸುಲ್ತಾನರು ಮತ್ತು ಕಂಪಿಲನ ನಡುವಿನ ದಾಳಿಯನ್ನು ಬಿತ್ತರಿಸುವ ಈ ಶಾಸನವು ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರ ಗ್ರಾಮದ ತಾಲ್ಲೂಕು ಕಚೇರಿಯ ಹತ್ತಿರದಲ್ಲಿ ದೊರೆತಿದೆ. ಕಂಪಿಲರಾಯ ಮತ್ತು ಸಿಡಿಲಬೊಮ್ಮರ ಮರಣಕ್ಕಾಗಿ ಪುರುಜನರು ಮರುಗಿದರೆಂದು ಹೇಳುತ್ತದೆ.[೧೯] ಈ ಹೇಳಿಕೆಗೆ ಪೂರಕವಾಗಿ "ಕ್ರಿ.ಶ. ೧೩೨೭ರಲ್ಲಿ ನಡೆದ ಕಂಪಿಲನ ಕಡೆಯ ಕದನವನ್ನು ಕುರಿತದ್ದಾಗಿರಬೇಕೆಂದು ಶ್ರೀ ಆರ್.ಎಸ್.ಪಂಚಮುಖಿಯವರು ಅಭಿಪ್ರಾಯಪಡುತ್ತಾರೆ.[೨೦]

ಈ ಶಾಸನದ ಮಾಹಿತಿಗಳು ಅಸ್ಪಷ್ಟವಾಗಿದ್ದು, ಯಾವುದನ್ನು ಖಚಿತವಾಗಿ ನಿರ್ಧರಿಸಲು ಸಾಧ್ಯವಿಲ್ಲದ ಕಾರಣ ವಿದ್ವಾಂಸರ ಹೇಳಿಕೆಗೆ ಪೂರಕವಾಗಿ ಕಂಪಿಲನು ಮತ್ತು ಸಿಡಿಲಬೊಮ್ಮರು ಸತ್ತಿರುವ ವಿಚಾರ ಕೇಳಿ ಅಲ್ಲಿನ ಜನರು ಮರುಗಿರುವ ಸಂಗತಿಯನ್ನು ಕುರಿತು ಈ ಶಾಸನದಲ್ಲಿ ತಿಳಿಸಿರಬಹುದು ಎಂದೆನಿಸುತ್ತದೆ.

**ಲಂಡನ್‌ನಲ್ಲಿರುವ ಶಾಸನ**

ಲಂಡನ್ ಶಾಸನವು ಕ್ರಿಶ ೧೩ನೆಯ ಶತಮಾನದ ಕಾಲಾವಧಿಗೆ ಸೇರಿದ್ದಾಗಿರಬಹುದು. ಮುಮ್ಮಡಿಸಿಂಗನು ಜೈನ ಧರ್ಮೀಯರಿಗೆ ಕಿರುಕುಳ ಕೊಟ್ಟಿರುವ ಕುರಿತು ತಿಳಿಸುವ ಈ ಶಾಸನವು ಲಂಡನ್‌ನ ವಿಕ್ಟೋರಿಯಾ ಅಂಡ್ ಆಲ್ಬರ್ಟ್ ಮ್ಯೂಸಿಯಂನ ಪಾರ್ಶ್ವನಾಥ ಪೀಠದಲ್ಲಿ[೨೧] ಕಂಡುಬಂದಿದೆ. ಡಾ.ಸಿ.ಎಸ್. ಪಾಟೀಲರು ಲಂಡನಿಗೆ ಭೇಟಿ ಕೊಟ್ಟಾಗ ಈ ಶಾಸನವನ್ನು ಬೆಳಕಿಗೆ ತಂದರು. ಇಲ್ಲಿ "ಎರಂಬರಗೆಯ ಧರ್ಮ ಮುಮ್ಮಡಿಸಿಂಗನ ಬಾಧೆ ಇಂದ ಕೆಟ್ಟಡೆ" ಎಂದು ವಕ್ಕಣಿಕೆ ಮುಂದುವರಿದಿದ್ದು, ಎರಂಬಗೆಯ ಧರ್ಮ ಅಂದರೆ ಜೈನ ಧರ್ಮ ಎಂದರ್ಥ. ಜೈನಧರ್ಮಕ್ಕೆ ಮುಮ್ಮಡಿಸಿಂಗನು ಕಿರುಕುಳ ಕೊಟ್ಟಿದ್ದರಿಂದ ಈ ಧರ್ಮ ಅವನತಿ ಹೊಂದಿತು. ಪುನಃ ಕೇತಿಸೆಟ್ಟಿಯ ಮಗ ಮಲ್ಲಿಸೆವಿಯು ಪಾರ್ಶ್ವದೇವರನ್ನು ಮಾಡಿಸುವ ಮೂಲಕ ಪುನಃ ಜೀರ್ಣೋದ್ಧಾರ ಮಾಡಿಸಿದನೆಂಬ ಅರ್ಥವಿದೆ. ಆದರೆ ಮುಮ್ಮಡಿಸಿಂಗನು ಜೈನಧರ್ಮಕ್ಕೆ ಕಿರುಕುಳ ನೀಡಿದ ಎಂಬ ಹೇಳಿಕೆಯು ಈ ಶಾಸನವನ್ನು ಹೊರತುಪಡಿಸಿದರೆ, ಬೇರೆ ಯಾವ ದಾಳಕೆಯಲ್ಲೂ ಕಂಡುಬಂದಿಲ್ಲ. ಪ್ರಮುಖವಾಗಿ ಯಾವ ಕಾರಣಕ್ಕಾಗಿ ಕಿರುಕುಳ ನೀಡಿದ ಎಂಬ ವಿಚಾರ ವ್ಯಕ್ತವಾಗಿಲ್ಲ.

ಈ ಶಾಸನದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಗಳಿವೆ. ಕ್ರಿಶ ೧೨೮೧ರ ಕಾಲಾವಧಿಯ ಹಿರಿಯೂರು ಶಾಸನ ಹೇಳುವ ಹಾಗೆ ಮುಮ್ಮಡಿಸಿಂಗನು ಚಿತ್ರದುರ್ಗದ ಮೇಲೆ ದಾಳಿ ಮಾಡಲು ಹೊರಟಾಗ ಮಾರ್ಗ ಮಧ್ಯದಲ್ಲಿ ಚಳ್ಳಕೆರೆ ಎಂಬ ಗ್ರಾಮದ ಮೇಲೆ ದಾಳಿ ಮಾಡಿದನು. ಆಗ ಅಲ್ಲಿನ ಆಳುಗಳಾದ ಕೇತಮಲ್ಲಸೆಟ್ಟಿಯ ಮನೆಯ ಕುರುಬರ ಜಕ್ಕಯ್ಯನಾಯಕನ ತಮ್ಮ ತಿಪ್ಪೆಯನಾಯಕ ಮಡಿದನೆಂದು ಅರ್ಥವಿದೆ. ಚಳ್ಳಕೆರೆಯ ಮೇಲೆ ಮುಮ್ಮಡಿಯು ದಾಳಿ ಮಾಡಿದ್ದರಿಂದ ಅದೇ ದ್ವೇಷದಿಂದಲೇ ಕೇತಮಲ್ಲಿ ಸೆಟಿಯರು ಮುಮ್ಮಡಿಯ ವಿರುದ್ಧ ಜೈನ ಧರ್ಮವನ್ನು ಕೆಡಿಸಿದ ಎಂಬ ದೂರನ್ನು ಈ ಶಾಸನದ ಮೂಲಕ ದಾಖಲಿಸಿದಂತಿದೆ. ಮುಮ್ಮಡಿಯು ಚಳ್ಳಕೆರೆಯ ಮೇಲೆ ದಾಳಿ ಮಾಡಿದಾಗ ಜೈನರಿಗೆ ತೊಂದರೆ ನೀಡಿರಬಹುದೇನೊ ಅನಿಸುತ್ತದೆ. ಹೀಗಾಗಿಯೇ ಅಲ್ಲಿನ ಕೇತಮಲ್ಲಿಸೆವಿಯರು ಪಾರ್ಶ್ವನಾಥ ದೇವರನ್ನು ಪುನರುಜ್ಜೀವನಗೊಳಿಸಿರಬಹುದು.

**ವಿಜಯನಗರ ಪೂರ್ವದ ಹಂಪಿ ಶಾಸನ**

ಹಂಪಿ ಶಾಸನ ಕ್ರಿಶ ೧೪ನೆಯ ಶತಮಾನಕ್ಕೆ ಸೇರಿರಬಹುದೆಂದೆ ಲಿಪಿಯ ಆಧಾರದ ಮೇರೆ ತಿಳಿಸಬಹುದು ಕಂಪಿಲದೇವನು ಲಿಂಗಗಳನ್ನು ಪ್ರತಿಷ್ಠಾಪಿಸಿರುವ ಸಂಗತಿಯನ್ನು ತಿಳಿಸುತ್ತದೆ. ಈ ಶಾಸನವು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಹಂಪಿಯಲ್ಲಿ ಕಂಡುಬಂದಿದೆ. ಕಂಪಿಲನ ತಂದೆ ಮುಮ್ಮಡಿಸಿಂಗೇನಾಯಕ, ತಾಯಿ ಮಾದನಾಯತಿ ಹಾಗೂ ಪೆರುಮೆಯನಾಯಕನು ಸೇರಿದಂತೆ ಮೂವರ ಲಿಂಗಗಳನ್ನು ಪ್ರತಿಷ್ಠಾಪಿಸಿರುವ ಸಂಗತಿಯನ್ನು ತಿಳಿಸುತ್ತದೆ. ಇಲ್ಲಿ ಪೆರುಮೆಯನಾಯಕ ಯಾರೆಂಬುದರಲ್ಲಿ ಸ್ಪಷ್ಟತೆಯಿಲ್ಲ.

ಕಂಪಿಲನು ಕೇವಲ ಯುದ್ಧ ಹಾಗೂ ರಾಜ್ಯ ಕಟ್ಟುವುದರಲ್ಲೇ ನಿರತನಾಗಿರಲಿಲ್ಲ. ಬದಲಿಗೆ ಧಾರ್ಮಿಕ ಕಾರ್ಯಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಿದ್ದ ಎಂಬುದರಲ್ಲಿ ಸ್ಪಷ್ಟತೆಯನ್ನು ತೋರಿಸುತ್ತದೆ. ಹಾಗೆಯೇ ಕಂಪಿಲನಿಗೆ ತನ್ನ ತಂದೆ, ತಾಯಿಯ ಬಗ್ಗೆ ಇರುವ ಗೌರವವನ್ನು ಎತ್ತಿ ತೋರಿಸುತ್ತದೆ. ಕಂಪಿಲನು ತನ್ನ ತಂದೆ ತಾಯಿಯರ ಸ್ಮರಣೆಗಾಗಿ ಲಿಂಗಗಳನ್ನು ಪ್ರತಿಷ್ಠಾಪಿಸಿದ್ದ ಎಂದರೆ ತನ್ನ ತಂದೆಯ ನಡೆನುಡಿಗಳು, ರಾಜ್ಯಾಡಳಿತದ ನೀತಿಗಳೆಲ್ಲವನ್ನೂ ಪಾಲನೆ ಮಾಡುತ್ತಿದ್ದನೆನ್ನುವುದರಲ್ಲಿ ಸಂದೇಹವೇ ಇಲ್ಲ. ಇದಕ್ಕೆ ಪೂರಕವಾಗಿ ಮುಮ್ಮಡಿಯು ಯುದ್ಧ ಮಾಡಿದ ಪ್ರದೇಶಗಳಲ್ಲೇ ಪುನಃ ಕಂಪಿಲನು ಯುದ್ಧ ಮಾಡಿರುವುದು, ಹೊಯ್ಸಳರ ಮೇಲೆ ಪದೇ ಪದೇ ದಾಳಿ ಮಾಡಿರುವುದನ್ನು ಕಾಣಬಹುದು. ಆದರೆ ಪೆರುಮೆಯನಾಯಕ ಯಾರೆಂಬುದು ಮಾತ್ರ ಇಂದಿಗೂ ಪ್ರಶ್ನಾರ್ಥಕವಾಗಿಯೇ ಉಳಿದಿದೆ.

**ಸಂಗೂರು ಶಾಸನ**

ಸಂಗೂರು ಶಾಸನವು ಕ್ರಿಶ ೧೪೦೭ರ ಕಾಲಾವಧಿಗೆ ಸೇರಿದ್ದಾಗಿದೆ. ಇದು ಕುಮಾರರಾಮನಾಥ ದೇವರ ವಿಗ್ರಹ ಪ್ರತಿಷ್ಠಾಪನೆ ಮಾಡಿರುವ ಸಂಗತಿಯನ್ನು ಕುರಿತು ತಿಳಿಸುತ್ತದೆ. ಈ ಶಾಸನವು ಹಾವೇರಿ ತಾಲ್ಲೂಕಿನ ವ್ಯಾಪ್ತಿಗೆ ಒಳಪಡುವ ಸಂಗೂರು ಗ್ರಾಮದ ಅಗಸೆಬಾಗಿಲು ಬಳಿ ದೊರೆತಿದ್ದು[೨೨],

ವಿಜಯನಗರ ಸಾಮ್ರಾಜ್ಯದ ಒಂದನೇ ದೇವರಾಯನ ಕಾಲವನ್ನು ಈ ಶಾಸನವು ಗುರ್ತಿಸುತ್ತದೆ. ಈ ವೇಳೆಯಲ್ಲಿ ದೇವರಾಯನ ಸೇನಾಧಿಪತಿಯಾಗಿದ್ದ ಸಂಗಮನ ಮಗನಾಗಿದ್ದ ಮಾದರಸನು ಕುಮಾರರಾಮನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿಸಿದನು. ಈತನು ಕಂಪಿಲರಾಯನ ಕಾಲದಲ್ಲಿ ಆತನ ನಿಯೋಗಾಧಿಪತಿಯಾಗಿದ್ದು, ಈತನು ಬೈಚವೆಗ್ಗಡೆಯ ಮೊಮ್ಮಗನೂ ಆಗಿದ್ದನೆಂದು ದಾಖಲಾಗಿದೆ.

ನಾ.ಶ್ರೀ ಪುರೋಹಿತರು ಕುಮಾರರಾಮನಾಥ ದೇವರ ವಿಗ್ರಹವನ್ನು ಪ್ರತಿಷ್ಠಾಪಿಸಬೇಕಾದರೆ ಕಂಪಿಲರಾಯ, ಕುಮಾರರಾಮ ಹಾಗೂ ಮಂತ್ರಿ ಬೈಚಪ್ಪ ಈ ಮೂವರು ಬದುಕಿದ್ದರೆಂದು ಹಾಗೂ ಈ ಶಾಸನದಲ್ಲಿ ಮೊದಲು ಬೈಚಪ್ಪನ ಹೆಸರು, ನಂತರ ಈತನ ಅಧೀನ ಅಧಿಕಾರಿಯಾದ ಹೆಗ್ಗಡೆಯ ಬೊಮ್ಮ ಮತ್ತು ಮಾದರಸನನ್ನು ಸೇರಿಸಿದ್ದು ಇವರಿಗೆ ಕ್ರಮವಾಗಿ ಮೊದಲು ಎರಡು ಮೂರನೇ ಸ್ಥಾನಗಳನ್ನು ಕೊಟ್ಟಿದ್ದಾನೆಂದು ತಿಳಿಸುತ್ತಾರೆ.[೨೩] ಆದರೆ ಇದನ್ನು ಕೆಲವು ವಿದ್ವಾಂಸರು ವಿರೋಧಿಸುತ್ತಾರೆ. ಕಾರಣ ಕ್ರಿಶ ೧೩೨೦ರ ವೇಳೆಗಾಗಲೇ ಕುಮ್ಮಟದರಸರ ಆಳ್ವಿಕೆ ಕೆಲವು ವರ್ಷಗಳ ಮಾತ್ರ ಉಳಿದಿತ್ತು. ದೇವರಾಯನ ಕಾಲಕ್ಕಾಗಲೇ ಕುಮಾರರಾಮನ ಶೌರ್ಯ ಪರಾಕ್ರಮಗಳು ಮನೆಮಾತಾಗಿದ್ದವು. ಕುಮಾರರಾಮನು ಈ ಕಾಲಕ್ಕಾಗಲೇ ಸ್ಮೃತಿಶೇಷವಾಗಿದ್ದನೆಂಬ ಸಂಗತಿ ಶಾಸನಗಳಿಂದ ನಿರ್ಧರಿತವಾಗುತ್ತದೆ. ಹೀಗಾಗಿ ಪುರೋಹಿತರ ಹೇಳಿಕೆ ಪ್ರಮಾದವೆನಿಸುತ್ತದೆ.

ಕುಮಾರರಾಮನು ಅಂತ್ಯವಾದ ಅಲ್ಪಾವಧಿಯಲ್ಲೇ ಈತನ ವಿಗ್ರಹ ಮಾಡಿಸಿ ಪ್ರತಿಷ್ಠಾಪಿಸಿರುವುದು ಕುಮಾರರಾಮನ ವ್ಯಕ್ತಿತ್ವವನ್ನು ಎತ್ತಿ ಹಿಡಿಯುತ್ತದೆ. ಚಿಕ್ಕ ರಾಜ್ಯವನ್ನು ಕಟ್ಟಿಕೊಂಡು ಆಳ್ವಿಕೆ ಮಾಡಿದರಾದರೂ ಈತನ ಕೀರ್ತಿ ಮಾತ್ರ ಉತ್ತುಂಗಕ್ಕೇರಿದೆ ಎನ್ನುವುದು ಮಾತ್ರ ಸತ್ಯವಾಗಿದೆ. ಕುಮಾರರಾಮನ ನಡೆನುಡಿ, ಗುಣ, ವ್ಯಕ್ತಿತ್ವಗಳಿಗೆ ಹೆಸರಾಗಿ, ಅವನ ವೀರತನದ ಗುಣಾವಳಿಗಳು ಆಗಿನ ಸಮಾಜವನ್ನು ಮೂಕರನ್ನಾಗಿಸಿರಬೇಕು. ಈ ಕಾರಣದಿಂದಾಗಿಯೇ ಕುಮಾರರಾಮನನ್ನು ಒಬ್ಬ ದೇವರನ್ನಾಗಿ ಪೂಜಿಸುತ್ತಿರುವುದು ವಿಶೇಷವೆನಿಸುತ್ತದೆ.

**ಕೊಕ್ಕೋಡು ಶಾಸನ**

ಕೊಕ್ಕೋಡು ಶಾಸನವು ಕ್ರಿ.ಶ. ೧೪೩೨ರ ಕಾಲಾವಧಿಗೆ ಸೇರಿದ್ದು, ಕುಮಾರರಾಮನು ಪರಾಕ್ರಮ, ವೀರತನವು ಮತ್ತೊಬ್ಬ ವೀರನಿಗೆ ಮಾದರಿಯಾಗಿರುವ ಸಂಗತಿಯನ್ನು ತಿಳಿಸಿಕೊಡುವ ಈ ಶಾಸನವು ಶಿವಮೊಗ್ಗ ಜಿಲ್ಲೆಯ, ತೀರ್ಥಹಳ್ಳಿ ತಾಲ್ಲೂಕಿನ ಕೊಕ್ಕೋಡಿನ ಕೊಳವಳ್ಳಿಯ ಮಾಸ್ತಿಗುಡಿಯಲ್ಲಿ ದೊರೆಯುತ್ತದೆ. ಇಲ್ಲಿ ಕುಮಾರರಾಮನಿಗಾಗಿಯೇ ಈ ಶಾಸನವನ್ನು ಹಾಕಿಸಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಸಂಗೂರು ಶಾಸನದಂತೆ ಈ ಶಾಸನವೂ ಸಹ ದೇವರಾಯನ ಕಾಲದಲ್ಲಿಯೇ ದಾಖಲಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ನಾ.ಶ್ರೀ.ಪುರೋಹಿತರು ಹೇಳುವ ಹಾಗೆ "ಕುಮಾರರಾಮನು ಎರಡನೇ ದೇವರಾಯನ ಕಾಲದವರೆಗೂ ಜೀವಿಸಿದ್ದನೆಂದು ಹೇಳಿರುವರು.[೨೪] ಆದರೆ ಇದನ್ನು ವಿರೋಧಿಸಿದ ಜೋಯಿಸರು ಮತ್ತು ಪಿ.ವಿ. ದೇಸಾಯಿಯವರ ಅಭಿಪ್ರಾಯವು ಸರಿಯೆನಿಸುತ್ತದೆ. ಏಕೆಂದರೆ ಕುಮಾರರಾಮನು ಈ ವೇಳೆಗಾಗಲೇ ಸ್ಮೃತಿಶೇಷನಾಗಿಲ್ಲದಿದ್ದಿದ್ದರೆ

ಆತನನ್ನು ದೇವರಿಗೆ ಹೋಲಿಸಿ ವಿಗ್ರಹ ಪ್ರತಿಷ್ಠಾಪಿಸುತ್ತಿರಲೂ ಇಲ್ಲ, ಆತನನ್ನು ಮಾದರಿಯಾಗಿಟ್ಟುಕೊಂಡು ಪೂಜಿಸುವ ಅವಶ್ಯಕತೆಯೂ ಇರುತ್ತಿರಲಿಲ್ಲ.

ಒಂದು ವೇಳೆ ಕುಮಾರರಾಮನು ಇದ್ದಿದ್ದರೆ ಆತನ ಪ್ರಸ್ತುತತೆಯನ್ನು ಯಾವುದಾದರೊಂದು ಶಾಸನಗಳಲ್ಲಾದರೂ ಪ್ರಸ್ತಾಪವಾಗುತ್ತಿತ್ತು. ಎನ್ನುವುದು ಮಾತ್ರ ಅಕ್ಷರಶಃ ಸತ್ಯವೆನಿಸುತ್ತದೆ. ಈ ಶಾಸನವು ಕುಮಾರರಾಮನ ಪೌರುಷವನ್ನು ಮಾದರಿಯಾಗಿರಿಸಿಕೊಂಡು ಮತ್ತೊಬ್ಬ ವೀರನ ಹೋರಾಟವನ್ನು ಬಿತ್ತರಿಸುವುದರ ಜೊತೆಗೆ ಭೂಮಿಯನ್ನು ದತ್ತಿ ಬಿಟ್ಟ ವಿಚಾರವನ್ನು ಹೊರಹಾಕುತ್ತದೆ. ಅಂದರೆ ಬೊಮ್ಮರಸ ಹೆಗ್ಗಡೆಯ ಮಗ ಪುಟ್ಟ ಹೆಗಡೆಯು ಕುಮಾರರಾಮನ ಪ್ರತಾಪದಂತೆ ಯುದ್ಧದಲ್ಲಿ ಹೋರಾಡಿ ಮಡಿದಿದ್ದು, ಅವನ ಸ್ಮರಣೆಗಾಗಿ ಬೊಮ್ಮರಸ ಹೆಗಡೆಯು ಭೂಮಿಯನ್ನು ದತ್ತಿ ನೀಡಿರುವ ವಿಚಾರವನ್ನು ತಿಳಿಸಿಕೊಡುತ್ತದೆ. ಅಂದರೆ ಪುಟ್ಟ ಹೆಗಡೆ ಯುದ್ಧದಲ್ಲಿ ಸತ್ತಿರುವ ವಿಚಾರ ಮಾತ್ರ ತಿಳಿದಿದ್ದು, ಯಾವ ಯುದ್ಧದಲ್ಲಿ, ಯಾರ ವಿರುದ್ಧ ಯುದ್ಧ ಮಾಡಿದನೆಂಬ ಯಾವ ಸಂಗತಿಗಳೂ ಇಲ್ಲ. ಇಲ್ಲಿ ಕುಮಾರರಾಮನನ್ನೇ ಮಾದರಿಯಾಗಿಸಿಕೊಳ್ಳಲು ಆತನ ಶೌರ್ಯ, ಪರಾಕ್ರಮಗಳು, ನೇರ ನುಡಿಗಳು ಅಲ್ಲಿನ ಸಮಾಜದ ಮೇಲೆ ಉತ್ತಮವಾದ ಪ್ರಭಾವವನ್ನು ಬೀರಿದ್ದವು.

**ರಾಮಘಡ ಶಾಸನ-೨**

ರಾಮಘಡ ಶಾಸನವು ಕ್ರಿ.ಶ ೧೫೨೮ರ ಕಾಲಾವಧಿಗೆ ಸೇರಿದ್ದಾಗಿದೆ. ರಾಮನಾಥ ದೇವಾಲಯವನ್ನು ಒಬ್ಬ ಸ್ತ್ರೀ ನಿರ್ಮಿಸಿರುವ ಸಂಗತಿಯನ್ನು ಕುರಿತು ಹೇಳುತ್ತದೆ. ಈ ಶಾಸನವು ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ರಾಮಘಡದ ರಾಮಸ್ವಾಮಿ ದೇವಾಲಯದ ಗೋಡೆಯಲ್ಲಿ ಕುಮ್ಮಟದರಸರ ವಂಶಾವಳಿಯ ಮೇಲೆ ಬೆಳಕು ಚೆಲ್ಲುತ್ತದೆ.[೨೫] ಅಂದರೆ ಇಲ್ಲಿ ಕುಮ್ಮಟದರಸರ ವಂಶಾವಳಿಯೇ ಚಿತ್ರಿತವಾಗಿದೆ. ಇವರ ವಂಶಾವಳಿಯನ್ನು ಕುರಿತಂತೆ ಇದು ಎರಡನೇ ಶಾಸನವಾಗಿದೆ. ಇದು ಶ್ರೀಕೃಷ್ಣದೇವರಾಯನ ಕಾಲಾವಧಿಯಲ್ಲಿ ರಚನೆಯಾದ ಶಾಸನವಾಗಿದೆ. ಮುಮ್ಮಡಿಸಿಂಗೆಯ ಮಗ ಕಂಪಿಲರಾಯನನ್ನು ಖಂಡೆಯರಾಯ ಎಂದು ಸಂಬೋಧಿಸಿರುವುದು, ಈತನ ರಾಣಿ ವೀರಗುಜ್ಜಲಹರಿಹರದೇವಿ ಇವರಿಬ್ಬರ ಪುತ್ರ ಹೊಸಮಲೆಗೆ ಒಡೆಯನಾದ ರಾಮನಾಥನನ್ನು 'ಛಪ್ಪನ್ನ ದೇಶದ ರಾಯರು' ಎಂದು ಕರೆದಿರುವುದು ದಾಖಲಾಗಿದೆ. 'ಛಪ್ಪನ್ನ' ಎಂದರೆ 'ಐವತ್ತಾರು' ಎಂದರ್ಥ ಕೊಡುತ್ತದೆ. ಆಡುಮಾತಿನಲ್ಲಿ ಐವತ್ತಾರು ವೀರರಗೂ ಒಡೆಯನಂತೆ ಕುಮಾರರಾಮನನ್ನು ಹೊಗಳಿರುವುದು ಇಲ್ಲಿ ತಿಳಿದುಬರುತ್ತದೆ. ಅಂದರೆ ಅಂತಹ ವೀರಾನುವೀರರಿಗೂ ವೀರ ಈ ಕುಮಾರರಾಮನಾಗಿದ್ದನೆಂಬ ಅರ್ಥಕೊಡುತ್ತದೆ.

ಗೋಪಾಯಿ ಎಂಬ ಒಬ್ಬ ಮಹಿಳೆ ಕುಮಾರರಾಮ ಮತ್ತು ಅವನ ಕುಟುಂಬ ಪರಿವಾರದವರ ಸ್ಮರಣೆಗಾಗಿ ಒಂದು ದೇವಾಲಯವನ್ನು ನಿರ್ಮಿಸಿ ಗಂಟೆ, ಜಾಗಟೆ, ಹರಿವಾಣ, ಚಂಬು ಮುಂತಾದ ಪೂಜಾ ಸಾಮಗ್ರಿಗಳನ್ನು ನೀಡಿರುವ ಸಂಗತಿ ತಿಳಿಯುತ್ತದೆ. ಗೋಪಾಯಿಯು ರಾಮನಾಥನ

ಕೊನೇರಿನಾಯಕನ ಮಗಳೂ ಹಾಗೂ ಕಾವನಾಯಕವೊಡೆಯ ಹಳ್ಳದ ರಾಮನಾಥನ ಪತ್ನಿಯೂ ಆಗಿದ್ದಳು. ಈಕೆಯ ಜೊತೆಗೆ ರಾಮನಾಥನ ಮನೆಯ ಹಾಡುಗಾರನಾಗಿದ್ದ ಸೋಮಣಯ್ಯ ವಿಜಯನಗರದ ಹನುಮಂತದೇವರ ಪೂಜಾರಿಯಾದ ರಾಮಣ್ಣರಸು ಸಹಕಾರದಿಂದ ದೇವಾಲಯ ಕಟ್ಟಿಸಿ, ಪ್ರತಿದಿನ ಪೂಜಾ ಕೈಂಕರ್ಯಗಳು ನಡೆಯಲೆಂದು ನೀಡಿರುವುದಾಗಿ ಉಲ್ಲೇಖವಾಗಿದೆ. ಇವರ ಪ್ರತಿಯೊಂದು ಹೆಸರಿನಲ್ಲಿ 'ರಾಮನಾಥ' ಎಂಬ ಹೆಸರು ಉಲ್ಲೇಖವಾಗಿರುವುದು ವಿಶೇಷವಾಗಿದೆ. ಅಂದರೆ ಇವರು ಕುಮ್ಮಟದರಸರ ಮನೆತನದಾಗಿರಬೇಕು. ಹಾಗೂ ಹೊಸಮಲೆ ರಾಮನಾಥನು ಇವರ ಕುಲದೇವರಾಗಿರಬೇಕು ಎಂದು ತೋರುತ್ತದೆ.

ಒಬ್ಬ ಸಾಮಾನ್ಯ ಸ್ತ್ರೀ ದೇವಾಲಯವನ್ನು ಕಟ್ಟಿಸಿರುವುದು ಆಗಿನ ಸಮಾಜದ ಸ್ಥಿತಿಗತಿಗಳನ್ನು ಬಿಂಬಿಸುತ್ತದೆ. ಸ್ತ್ರೀಯರಿಗೆ ಆಗಿನ ಸಮಾಜದಲ್ಲಿ ಇದ್ದಂತಹ ಗೌರವ, ಸ್ಥಾನಮಾನಗಳ ಸೂಚಕದಂತಿದೆ. ಧಾರ್ಮಿಕ ಕಾರ್ಯಗಳಲ್ಲಿ ಸ್ತ್ರೀ ಪುರುಷನಂತೆ ಸಮಾನವಾಗಿ ಭಾಗವಹಿಸಬಹುದು, ಇಂತಹ ಕಾರ್ಯಗಳನ್ನು ಸ್ತ್ರೀ ನಿರ್ವಹಿಸಬಲ್ಲಳು ಎಂಬುದನ್ನು ಅರಿಯಬಹುದು.

**ಹರಿಹರ ಶಾಸನ**

ಹರಿಹರ ಶಾಸನವು ಕ್ರಿ.ಶ ೧೩೦೦ರ ವೇಳೆಗೆ ಸಂಬಂಧಿಸಿದ್ದು, ಕಂಪಿಲರಾಯನು ಬ್ರಹ್ಮದತ್ತಿಯನ್ನು ಪುನರೀಕರಿಸುವ ಸಂಗತಿಯು ವ್ಯಕ್ತವಾಗಿದೆ. ಸಾರ್ವ್ವರಿ ಸಂವತ್ಸರದಲ್ಲಿ ರಚನೆಯಾಗಿರುವ ಈ ಶಾಸನವು ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಹರಿಹರೇಶ್ವರ ದೇವಾಲಯ ದಕ್ಷಿಣ ಭಾಗದಲ್ಲಿ ಕಂಡುಬರುತ್ತದೆ. ಈ ಶಾಸನ ಹೇಳುವ ಹಾಗೆ ಸೇವುಣರ ಕೃಷ್ಣಕಂದರನು ಹರಿಹರವನ್ನು ಬ್ರಹ್ಮದತ್ತಿಯಾಗಿ ನೀಡಿದ್ದನೆಂದು ಅನಿಸುತ್ತದೆ. ಹೀಗಾಗಿ ಕಂಪಿಲನು ಸೇವುಣರ ಬೆಂಬಲಿಗನಾಗಿದ್ದರಿಂದ ಕೃಷ್ಣಕಂದರನ ಧಾರ್ಮಿಕ ಕಾರ್ಯಗಳನ್ನು ನೆರವೇರಿಸುವಲ್ಲಿ, ಅಂದರೆ ಕಂದರನು ನೀಡುತ್ತಿದ್ದ ದತ್ತಿಯನ್ನು ಪುನರೀಕರಿಸುವ ಮೂಲಕ ಅಲ್ಲಿನ ಮಹಾಜನಗಳಿಗೆ ಬ್ರಹ್ಮದತ್ತಿಯನ್ನು ನೀಡಿದನೆಂದು ತಿಳಿದುಬಂದಿದೆ.

ಅಂದರೆ ಕಂಪಿಲನಿಗೆ ಯುದ್ಧವೊಂದೆ ಅಗತ್ಯವಾಗಿರಲಿಲ್ಲ ಪ್ರಮುಖವಾಗಿ ರಾಜನಿಷ್ಠೆಯನ್ನು ಪಾಲಿಸುವವನಾಗಿದ್ದ. ಹಾಗೆಯೇ ಸಮಾಜದ ಏಳಿಗೆಗಾಗಿ, ಸಮಾಜಮುಖಿ ಕಾರ್ಯಗಳು ಹಾಗೂ ಧಾರ್ಮಿಕ ಕಾರ್ಯಗಳಿಗಾಗಿ ಹೆಚ್ಚು ಒತ್ತನ್ನು ನೀಡುತ್ತಿದ್ದನೆಂದು ಇದರಿಂದ ತಿಳಿದುಬರುತ್ತದೆ. ಕಂಪಿಲರಾಯನು ಜನಹಿತ ಕಾರ್ಯಗಳಲ್ಲಿ ಆಸಕ್ತಿ ಹೊಂದಿದ್ದನೆಂಬ ಸಂಗತಿಯು ಇದರಿಂದ ಸ್ಪಷ್ಟವಾಗುತ್ತದೆ. ಮತ್ತೊಂದು ಕುತೂಹಲಕಾರಿಯಾದ ಸಂಗತಿಯೇನೆಂದರೆ ಕಂಪಿಲರಾಯನು ಹರಿಹರೇಶ್ವರ ದೇವಾಲಯ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದನೆಂಬುದು ತಿಳಿಯುತ್ತದೆ. ಹರಿಹರದ ಜನರಿಗೆ ದತ್ತಿ ನೀಡುತ್ತಿದ್ದನೆಂದರೆ ದಾವಣಗೆರೆಯ ಭಾಗಗಳು ಕಂಪಿಲರಾಯನ ವಶದಲ್ಲಿದ್ದವೆಂದು ತಿಳಿದುಬರುತ್ತದೆ. ಹಾಗೆಯೇ ಸೇವುಣರ ನಂತರದ ಅಧಿಕಾರ ಕುಮ್ಮಟದರಸರಿಗೆ ದೊರಕಿರಬಹುದು.

**ಮಾಳಗೊಂಡನಕೊಪ್ಪ ಶಾಸನ**

ಮಾಳಗೊಂಡನಕೊಪ್ಪ ಶಾಸನವು ಸುಮಾರು ಕ್ರಿಶ ೧೬ನೇ ಶತಮಾನದ ಕಾಲಕ್ಕೆ ಸೇರಿದುದಾಗಿದೆ. ಕುಮಾರರಾಮನಾಥ ಒಡೆಯರಿಗೆ ಹೊಲಗದ್ದೆಯನ್ನು ನೈವೇದ್ಯಕ್ಕೆ ದಾನದ ರೂಪದಲ್ಲಿ ನೀಡಿರುವುದನ್ನು ಕಾಣಬಹುದು. ಈ ಶಾಸನವು ಬಹುದಾನಯ ಸಂವತ್ಸರಕ್ಕೆ ಸೇರಿದ್ದು, ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಮಾಳಗೊಂಡನ ಕೊಪ್ಪದ ದೇವಾಲಯದಲ್ಲಿ ಕಂಡುಬಂದಿದೆ. ಕಂಪಿಲರಾಯನ ಮಗನಾದ ರಾಮನಾಥ ಒಡೆಯರಿಗೆ ಹೊಲ ಗದ್ದೆಯನ್ನು ನೀಡಿರುವುದಾಗಿ ಆ ಕೊಪ್ಪದ ಕೆಂಚಗೌಡನ ಮಗ ಮಾಳಗೌಡನು ಅಲ್ಲಿನ ಕೌಲಕಟ್ಟೆಯ ಕೆಳಗಿನ ಹೊಸಗದ್ದೆಯನ್ನು ಧರ್ಮವಾಗಿ ನೀಡಿದನೆಂಬ ಸಂಗತಿಯಿದೆ. ಕುಮ್ಮಟದರಸರಲ್ಲಿ ಕುಮಾರರಾಮನನ್ನು ದೈವೀ ಸ್ವರೂಪವಾಗಿ ಕಾಣುವುದು ಹಲವು ಶಾಸನಗಳಿಂದ ಹಾಗೂ ಪ್ರಸ್ತುತ ಜಾತ್ರಾಮಹೋತ್ಸವಗಳು, ಸಮಾಜದ ಆಚರಣೆಗಳಿಂದ ತಿಳಿದುಬರುತ್ತದೆ. ಮುಮ್ಮಡಿಸಿಂಗ ಮತ್ತು ಕಂಪಿಲರಾಯನಿಗಿಂತ ಹೆಚ್ಚಿನ ಗೌರವ ಸ್ಥಾನಮಾನಗಳು ಶಾಸನಗಳಿಂದ ಕುಮಾರರಾಮನಿಗೆ ದೊರೆತಿವೆ. ಕಾರಣ ಆತನ ನಡೆನುಡಿ ವ್ಯಕ್ತಿತ್ವ ಇಡೀ ಸಮಾಜವನ್ನೇ ಬೆರಗಾಗಿಸುವಂತದ್ದು ಎಂದು ಅನಿಸುತ್ತದೆ. "ಕಂಪಿಲದೇವನ ಕುಮಾರ ರಾಮನಾಥ ವೊಡೇರಿಗೆ ತಾಳಗುಂದದ ಒಳಗಣ ಕೊಪ್ಪದ ಕೆಂಚಗಉಡನ ಮಗ ಮಾಳಗಉಡ ಮಾಡಿದ ಧರ್ಮಕುಲ ಕಟ್ಟೆಯ ಕೆಳಗಣ ಗದ್ದೆ ಕೊಳಗೆ ಹೊಲನ ದ್ಯೋವನ ದ್ಯಕ್ಕೆ ಬಿಟ್ಟ ಧರ್ಮ, ಎಂಬುದಾಗಿ ವಕ್ಕಣಿಕೆ ಇದ್ದು, ಮುಂದುವರಿದು ಶಾಸನವು ತ್ರುಟಿತಗೊಂಡಿದೆ. ಯಾವ ಉದ್ದೇಶಕ್ಕಾಗಿ ಹೀಗಾಗಿ ಪ್ರಸ್ತುತ ಅಧ್ಯಾಯದಲ್ಲಿ ಶಾಸನಗಳ ಕುರಿತಂತೆ ಕುಮ್ಮಟದುರ್ಗಕ್ಕೆ ಮತ್ತು ಅಲ್ಲಿನ ಅರಸರಿಗೆ ಸಂಬಂಧಿಸಿದಂತೆ ಇಲ್ಲಿಯವರೆಗೂ ದೊರೆತಿರುವ ಶಾಸನಗಳ ದಾಖಲು ಮಾಹಿತಿಗಳನ್ನು ಬಗೆ ಬಗೆಯಾಗಿ ತಿಳಿಸಿಕೊಡುವ ಪ್ರಯತ್ನ ಮಾಡಲಾಗಿದೆ.

**ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿರುವ ಒಂದು ಶಾಸನ**

ಶ್ರೀ ರಾಮನಾಥ ದೇವರ ಪಾದ (ಕೆ)

.......................ಯರು ಕೊಟ್ಟ ಮಾನ್ಯ (ಭಕ್ತನೊಬ್ಬ)[೨೬]

ಈ ಶಾಸನವು ಸುಮಾರು ಕ್ರಿ.ಶ. ೧೫ನೇ ಶತಮಾನದ ವೇಳೆಗೆ ಸಂಬಂಧಿಸಿದ್ದಾಗಿದೆ. ವಿಜಯನಗರ ಆಳ್ವಿಕೆಯ ಕಾಲಕ್ಕೆ ಹೋಲುವ ಲಿಪಿಯಾಗಿದ್ದು ತ್ರುಟಿತಗೊಂಡಿದೆ. ಈ ಶಾಸನವು ಬಾಗಲಕೋಟೆ ಜಿಲ್ಲೆಗೆ ಸೇರಿದ ಸೀತಿಮನಿ ಎಂಬ ಗ್ರಾಮದ ಹೊರವಲಯದಲ್ಲಿ ಕಂಡುಬಂದಿದೆ. ಈಗಾಗಲೇ ಈ ಗ್ರಾಮವು ಮುಳುಗಿ ಹೋಗಿದೆ ಎಂಬುದು ಅಲ್ಲಿನ ಸ್ಥಳೀಯರ ಅಭಿಪ್ರಾಯವಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿಗಳಿಗಾಗಿ ಕನ್ನಡ ಶಾಸನ ಸಂಪುಟಗಳ ಅಧ್ಯಯನ ಮಾಡುತ್ತಿರುವ ಸಂದರ್ಭದಲ್ಲಿ ಈ ಶಾಸನ ಅಲ್ಲಿ ಉಲ್ಲೇಖಗೊಂಡಿತ್ತು. ಇದು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿರಬಹುದು ಎಂಬ ಅಭಿಪ್ರಾಯದ ಮೇರೆಗೆ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಕುಮಾರರಾಮನನ್ನು ಚಾರಿತ್ರಿಕ ವ್ಯಕ್ತಿಯೆಂದು ಗುರುತಿಸುವುದಕ್ಕಿಂತ ಹೆಚ್ಚಾಗಿ ಒಬ್ಬ ಆರಾಧ್ಯ ದೈವನಾಗಿ ಪೂಜಿಸುತ್ತಿರುವುದು ಗಮನಾರ್ಹವಾಗಿದೆ. ಈ ಶಾಸನವು ಕುಮ್ಮಟದರಸರ ಕಾಲ ಹಾಗೂ ವಿಜಯನಗರದ ಅರಸರ ಕಾಲಕ್ಕೂ ಒಂದು ಶತಮಾನದ ಅಂತರದಲ್ಲಿ ಬರೆದಿರುವುದಾಗಿದೆ. ಇಲ್ಲಿ ಕುಮಾರರಾಮನನ್ನು ಶಾಸನಗಳಲ್ಲಿ ರಾಮನಾಥ ಎಂದು ಉಲ್ಲೇಖಿಸಿರುವುದು ನೈಜತೆಗೆ ಹತ್ತಿರವಾಗಿದೆ. ರಾಮನಾಥನನ್ನು ದೇವರು ಎಂದು ಕರೆದಿರುವರೆಂದರೆ, ಕುಮಾರರಾಮನನ್ನು ಬಿಟ್ಟು ಬೇರೆ ಯಾವ ಅರಸನಾಗಿರಲು ಸಾಧ್ಯವಿಲ್ಲ. ಮಧ್ಯಕಾಲೀನ ಚರಿತ್ರೆಯಲ್ಲಿ ಯಾವ ಅರಸನು ದೇವರೆಂದು ಆರಾಧನೆಗೊಂಡಿಲ್ಲ. ಈ ರೀತಿ ಆರಾಧನೆಗೊಳ್ಳುತ್ತಿರುವ ಏಕೈಕ ಅರಸ ಕುಮಾರರಾಮನಾಥ. ವಿರೂಪಾಕ್ಷ ಪಂಡಿತ ವಿರಚಿತ ಚನ್ನಬಸವ ಪುರಾಣದ ಕಾಲಜ್ಞಾನದಲ್ಲಿ (೧೫೦೫) ಕಂಪಿಲರಾಯನ ಮಗ ರಾಮನಾಥನ ಪ್ರಸ್ತಾಪವಿದೆ.[೨೭] ರಾಮನಾಥನನ್ನು ದೇವರು ಎಂದು ಗುರುತಿಸಿರುವುದು ಸಂಗೂರು ಶಾಸನ ಕ್ರಿ.ಶ. ೧೪೦೭ರ ಈ ಶಾಸನದಲ್ಲಿ ಮಾದರಸನೆಂಬುವನು ಕುಮಾರರಾಮನ ದೇವರ ಮೂರ್ತಿ ಸ್ಥಾಪಿಸಿದನೆಂಬ ವಿಷಯವನ್ನು ತಿಳಿಸಲಾಗಿದೆ. ಈತನ ತಂದೆಯ ಹೆಸರು ಸೇನಾಧಿಪತಿ ಸಂಗಮನೆಂತಲೂ ಈ ಸಂಗಮನ ಅಜ್ಜನಾಗಿದ್ದ ಬೈಚಪ್ಪವೆಗ್ಗಡೆ ಕಂಪಿಲರಾಯನ ಬಾಹತ್ತರ ನಿಯೋಗಾಧಿಪತಿ (ಮಂತ್ರಿ)ಯಾಗಿದ್ದನೆಂತಲೂ ಪ್ರಸ್ತುತ ಶಾಸನ ತಿಳಿಸುತ್ತದೆ. ಈತನು ಕುಮಾರರಾಮನ ಸಾಂಗತ್ಯದಲ್ಲಿ ಉಲ್ಲೇಖಿತನಾದ ಮಂತ್ರಿ ಬೈಚಪ್ಪನೇ ಇರಬೇಕೆಂದು ಈಗಾಗಲೇ ಜಿ. ವರದರಾಜರಾಯರಂತಹ ವಿದ್ವಾಂಸರು ಊಹಿಸಿದ್ದಾರೆ.[೨೮] ಸಂಗೂರು ಶಾಸನವು ಕುಮಾರರಾಮನನ್ನು ದೇವರೆಂದು ಖಚಿತಪಡಿಸಿದ್ದು, ಸೀತಿಮನಿ ವೀರಗಲ್ಲು ಶಾಸನದಲ್ಲಿ ಬರುವ ರಾಮನಾಥನು ಕುಮಾರರಾಮನೇ ಆಗಿರಬಹುದು ಎಂಬ ನಿಲುವು ಪ್ರಸ್ತುತ ಅಧ್ಯಯನದ್ದಾಗಿದೆ.

### ೭.೪. ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು

ಅನಾದಿಕಾಲದಿಂದಲೂ ಮಾನವನ ಸಮಾಜವು ನಾಗರೀಕತೆಯಿಂದ ಸಂಸ್ಕೃತಿಯ ಕಡೆಗೆ ಹಂತಹಂತವಾಗಿ ಬೆಳವಣಿಗೆಯನ್ನು ಕಾಣುತ್ತಿದೆ. ಇದರ ಜೊತೆ ಜೊತೆಗೆ ಸಮಾಜವು ಹಲವು ನಂಬಿಕೆಗಳಿಗೆ ತಲೆಬಾಗುತ್ತಾ ಹೋಯಿತು. ಇದೇ ರೀತಿ ಹುಟ್ಟು, ಸಾವಿನ ಬಗೆಗಿನ ನಂಬಿಕೆಗಳು, ವಿವಿಧ ರೀತಿಯ ಕಲ್ಪನೆಗಳು ಸಹಜವಾಗಿಯೇ ಬೆಳೆಯುತ್ತಾ ಬಂದವು. ಜಗತ್ತಿನಲ್ಲಿ ಹುಟ್ಟು ಸಾವು ಅನಿವಾರ್ಯವಾಗಿರಬಹುದು. ಆದರೆ ಹುಟ್ಟಿಗಿಂತಲೂ ಸಾವು ಎನ್ನುವುದು ಎಲ್ಲರ ಪಾಲಿಗೆ ಕಟ್ಟಿಟ್ಟ ಬುತ್ತಿಯೇ ಸರಿ. ಇದು ಪ್ರಕೃತಿಯ ನಿಯಮವೂ ಆಗಿದೆ. ಸಾವಿನ ಸಂಗತಿಗೆ ಬಂದಾಗ ಸಾವು ಎನ್ನುವುದು ಅನಿವಾರ್ಯವಾಗಿದ್ದರೂ, ಆ ವ್ಯಕ್ತಿ ಸತ್ತು ಮಣ್ಣು ಸೇರಿದ್ದರೂ, ಆತನ ಸ್ಮರಣೆ ಉಳಿಯಲಿಕ್ಕಾಗಿ, ಆತನ ಒಳ್ಳೆಯ ಗುಣಗಳನ್ನು ಅಳವಡಿಸಿಕೊಳ್ಳುವುದು, ಆತನ ಮೌಲ್ಯಗಳನ್ನು ಗೌರವಿಸುವುದು, ಆತನನ್ನೇ ದೇವರಂತೆ ಆರಾಧಿಸುವುದು ಹಿಂದಿನಿಂದಲೂ ನಡೆದುಬಂದಿದೆ. ಅಂತಹ ವ್ಯಕ್ತಿಗಳನ್ನು ದೈವಾಂಶ ಸಂಭೂತರೆಂದೇ ಕರೆಯಲಾಗುತ್ತಿತ್ತು. ಇದು ಭಾರತಕ್ಕಿಂತ ಈಜಿಪ್ಟ್ ನಾಗರೀಕತೆಗೆ ಹೆಚ್ಚು ಅನ್ವಯಿಸುತ್ತದೆ. ಏಕೆಂದರೆ ಈ ಶವಸಂಸ್ಕಾರ ಪದ್ಧತಿ ಈಜಿಪ್ಷಿಯನ್ನರ ರೀತಿಯ ನಂಬಿಕೆಗಳು ಈ ಭಾಗಗಳಲ್ಲಿ ಜನರು ಅಳವಡಿಸಿಕೊಂಡಿದ್ದರೆಂಬುದನ್ನು ವೀರಗಲ್ಲುಗಳಿಂದ

ತಿಳಿದುಕೊಳ್ಳಬಹುದು. ಕೆಲವೇ ಕೆಲವು ನಾಯಕರ ವಿಚಾರಗಳಲ್ಲಿ ಮಾತ್ರ ನಾವು ಕಾಣಬಹುದು. ಇಂತಹ ಸಂಪ್ರದಾಯವನ್ನು ಕರ್ನಾಟಕದ ನಾಯಕ ಅಪ್ರತಿಮ ವೀರ, ಅಸಹಾಯಕ ಶೂರ, ಪರನಾರಿ ಸೋದರತ್ವಕ್ಕೆ ಹೆಸರಾದ ಕುಮಾರರಾಮನ ಆದರ್ಶ ಗುಣಗಳಿಗೆ ಜನರು ಬೆರಗಾಗಿ ಆತನನ್ನು ದೈವವನ್ನಾಗಿ ನಂಬಿ ಈಗಲೂ ನಾನಾ ಪ್ರದೇಶಗಳಲ್ಲಿ ಆರಾಧಿಸುತ್ತಾರೆ. "ಕಳೆದ ಶತಮಾನದಲ್ಲಿ ಬ್ರಿಟಿಷರೊಂದಿಗೆ ಹೋರಾಡಿ ತನ್ನ ಒಡನಾಡಿಗಳ ಕುಹಕ ತಂತ್ರದಿಂದ ಮರಣವನ್ನಪ್ಪಿದ ಸಂಗೊಳ್ಳಿರಾಯಣ್ಣ ಸತ್ತ ಕೆಲವೇ ದಿನಗಳಲ್ಲಿ ಮಕ್ಕಳಿಲ್ಲದವರಿಗೆ ಮಕ್ಕಳನ್ನು ದಯಪಾಲಿಸುವ, ಸಂತಾನ ಕರುಣಿಸುವ ದೈವನಾದ"[೨೯] ಎಂಬ ಹಲವು ಸಂಗತಿಗಳು ತಿಳಿದುಬರುತ್ತವೆ. ಈ ರೀತಿಯಾಗಿ ಅಂತವರ ಸ್ಮರಣೆಗಾಗಿ ಕೆಲವು ಕಲ್ಲುಗಳನ್ನು ನೆಡುವುದು, ಆ ಕಲ್ಲುಗಳ ಮೇಲೆ ಅಂತಹ ವ್ಯಕ್ತಿಗಳ ಶಿಲ್ಪವನ್ನು ಹೋರಾಡಿದ ದೃಶ್ಯಗಳನ್ನು ಅಥವಾ ಆತನ ಸಾವಿನ ಸುದ್ದಿಯನ್ನು ತಿಳಿಸಲು ವೀರಗಲ್ಲುಗಳನ್ನು ನೆಡುವ ಕಾರ್ಯ ನಮ್ಮ ನಾಡುಗಳಲ್ಲಿ ಪ್ರಾರಂಭವಾದವು. ಅದರ ಜೊತೆ ಜೊತೆಗೆ ಅಂತಹ ಕೆಲವೇ ಕೆಲವು ವ್ಯಕ್ತಿ/ವೀರರನ್ನು ದೈವಪುರುಷನನ್ನಾಗಿ ಪೂಜಿಸುವುದು ನಡೆದುಬಂತು. ಹೀಗಾಗಿ ಕುಮಾರರಾಮನು ಈ ವಿಚಾರಗಳಲ್ಲಿ ಮೊದಲಿಗನಾಗುತ್ತಾನೆ.

ನಾಗರೀಕತೆಗಳ ಕಾಲದಿಂದಲೂ ಇಂತಹ ನೆನಪಿನ ಸ್ಮಾರಕಗಳನ್ನು ಕಾಣುತ್ತಿದ್ದೇವೆ. ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವ್ಯಕ್ತಿಗಳ ಸಾಧನೆಗಳ ನೆನಪನ್ನು ಘನೀಭವಿಸಿ ಅಭಿವ್ಯಕ್ತಿಗೊಳಿಸುವ ಸಾಧನೆಗಳಾಗಿ ಈ ಸ್ಮಾರಕಗಳು ಕಾಣಿಸಿಕೊಂಡಿವೆ.

ಕೆಲವು ಅಪ್ರತಿಮ ವೀರರುಗಳ ಬಗೆಗೆ ಲಿಖಿತವಾಗಿಯೂ, ಅಲಿಖಿತವಾಗಿಯೂ ಅಪಾರವಾದ ಆಕರಗಳು ದೊರೆತಿವೆ. ಇದರಲ್ಲಿ ಬಹುಮುಖ್ಯವಾಗಿ ಕುಮ್ಮಟದರಸರ ಕುರಿತು ನಿರ್ಮಾಣವಾದಂತಹ ಸ್ಮಾರಕಗಳು ಅಪೂರ್ವವಾಗಿವೆ. ಇಲ್ಲಿಯವರೆಗೂ ದೊರೆತಿರುವ ಹಲವು ರೀತಿಯ ಸ್ಮಾರಕಗಳಲ್ಲಿ ವೀರಗಲ್ಲುಗಳು ಪ್ರಮುಖ ಪಾತ್ರವಹಿಸಿವೆ. ಇವುಗಳಲ್ಲಿ ಶಾಸನರಹಿತ ವೀರಗಲ್ಲುಗಳು ಮತ್ತು ಶಾಸನ ಸಹಿತ ವೀರಗಲ್ಲುಗಳು ಕಂಡುಬಂದಿದ್ದು, ಒಟ್ಟಾರೆ ಸುಮಾರು ೨೦ ವೀರಗಲ್ಲುಗಳು ದೊರೆತಿದ್ದು, ಕುಮಾರರಾಮನಿಗೆ ಸಂಬಂಧಿಸಿದಂತೆ ಸುಮಾರು ೫ ವೀರಗಲ್ಲುಗಳನ್ನು ಕಾಣಬಹುದು. ಶಿಲ್ಪಗಳನ್ನು ಒಳಗೊಂಡ ವೀರಗಲ್ಲುಗಳನ್ನೇ ಹೆಚ್ಚಾಗಿ ಕಾಣಬಹುದು.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ವೀರಗಲ್ಲುಗಳನ್ನು ನಾಲ್ಕು ರೀತಿಯಲ್ಲಿ ವಿಂಗಡಿಸಿಕೊಳ್ಳಲಾಗಿದೆ.

೧. ಶಾಸನ ಸಹಿತ ವೀರಗಲ್ಲುಗಳು

೨. ಶಾಸನ ರಹಿತ ವೀರಗಲ್ಲುಗಳು

೩. ಶಿಲ್ಪ ಸಹಿತ ವೀರಗಲ್ಲುಗಳು

೪. ಶಿಲ್ಪ ರಹಿತ ವೀರಗಲ್ಲುಗಳು

೧. ಶಾಸನ ಸಹಿತ ವೀರಗಲ್ಲುಗಳು

**ಬಿದರಕಟ್ಟೆ ಶಾಸನ:** ಈ ಶಾಸನವು ಅಶ್ವಾರೋಹಿಯಾದ ರಾಮನಾಥ ಶಿಲ್ಪದ ಕೆಳಗಡೆ ಕಂಡುಬಂದಿದೆ. ಈ ಶಾಸನವು ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲ್ಲೂಕಿನ ಬಿದರಕಟ್ಟೆ ಗ್ರಾಮದ ಹೊಲದಲ್ಲಿ ನಿಲ್ಲಿಸಿರುವ ಕಲ್ಲಾಗಿದೆ. ಇದರಲ್ಲಿ ರಾಮನಾಥನ ಶಿಲ್ಪವನ್ನು ಮಾತ್ರ ನೋಡಬಹುದು. ಈ ಶಾಸನವು ಸಂವತ್ಸರ, ಶಾಸನದ ಪ್ರಮಾಣ, ಪಠ್ಯಗಳ ಕೊರತೆಯಿಂದ ತುಂಬಿದೆ. ಈ ವೀರಗಲ್ಲನ್ನು ಹೊಲದಲ್ಲಿ ನಿಲ್ಲಿಸಿರುವುದರಿಂದ ಆ ಗ್ರಾಮದ ಜನರ ಆರ್ಥಿಕ ಸಂತುಷ್ಟಿಗೆ ದೇವರಾಗಿರಬಹುದೇನೋ ಅನಿಸುತ್ತದೆ. ತಮ್ಮ ತಮ್ಮ ಹೊಲದ ಬೆಳೆಗಳು ಚೆನ್ನಾಗಿ ಬರಬೇಕೆಂಬ ದೃಷ್ಟಿಯಿಂದ ಕುಮಾರರಾಮನನ್ನು ಪೂಜಿಸುವುದು ಕಂಡುಬರುತ್ತದೆ. ಈ ರೀತಿಯಾಗಿ ಹಲವು ಗ್ರಾಮಗಳಲ್ಲಿ ರಾಮನನ್ನು ಕೃಷಿ ದೈವನನ್ನಾಗಿ ಪೂಜಿಸುತ್ತಿರುವುದು ಕಾಣಸಿಗುತ್ತದೆ.

೨. **ಕುಳೇನೂರು ಶಾಸನ:** ಈ ಶಾಸನವು ಅಶ್ವಾರೋಹಿ ಉಬ್ಬುಶಿಲ್ಪವನ್ನು ಹೊಂದಿದ್ದು, ಅದರ ಕೆಳಗೆ ಸ್ತ್ರೀರೂಪದ ಕೆತ್ತನೆಯಿದೆ. ಕ್ರಿ.ಶ. ೧೫ನೇ ಶತಮಾನಕ್ಕೆ ಸಂಬಂಧಿಸಿದ ಈ ಶಾಸನ ಹಾವೇರಿ ತಾಲೂಕಿನ ಕುಳೇನೂರು ಗ್ರಾಮದ ಅಗಸೆಯ ಹತ್ತಿರವಿರುವ ಈ ಶಾಸನ ಕ್ರಿ.ಶ. ೧೫ನೇ ಶತಮಾನಕ್ಕೆ ಸಂಬಂಧಿಸಿದೆ.[೩೦] ಇದರ ಕೆಳಗೆ "ಕುಳುವನೂರ ಬಾರಿಕ ಕಾಸೆಬೋವನ ಹೆಂಡತಿ ಬನದೆ ಬೋವತಿ ಪ್ರತಿಷ್ಠಾಪನೆಯ ರಾಮೆಯದೇವರ ನಿಲ್ಲಿಸಿದ"ಳೆಂದು ಉಲ್ಲೇಖಿಸುತ್ತದೆ. ಅಂದರೆ ಕುಳೇನೂರು ಗ್ರಾಮವು ಮಾದರಸನ ಅಧೀನದಲ್ಲಿದ್ದಿರಬೇಕು, ಇದೇ ಊರಿನ ಅಂಬಿಗ ಕಾಸಬೋವನ ಹೆಂಡತಿ ಬೋವತಿಯು ರಾಮದೇವರನ್ನು ಪ್ರತಿಷ್ಠಾಪಿಸಿರಬೇಕು ಎಂಬ ಅರ್ಥ ಕೊಡುತ್ತದೆ. ಹೆಚ್ಚಿನ ಮಾಹಿತಿಗಳನ್ನು ತಿಳಿಯಲು ಶಾಸನವು ತ್ರುಟಿತಗೊಂಡಿದೆ.

ಬನದೆ ಬೋವತಿ ಎಂಬ ಮಹಿಳೆ ಸಾಮಾನ್ಯ ಸ್ತ್ರೀಯಾಗಿದ್ದಳೆಂದು ಅನಿಸುತ್ತದೆ. ಕುಮಾರರಾಮನನ್ನು ದೈವೀಪುರುಷನನ್ನಾಗಿ ಕಾಣುತ್ತಿರುವುದು ಈತನಿಗೂ ಪರಮ ಭಕ್ತರಿದ್ದರೆಂಬುದು ತಿಳಿದುಬರುತ್ತದೆ. ಒಬ್ಬ ಸಾಮಾನ್ಯ ಮಹಿಳೆ ಕುಮಾರರಾಮನಾಥ ದೇವರ ಶಿಲ್ಪವನ್ನು ಪ್ರತಿಷ್ಠಾಪಿಸಿರುವುದರಿಂದ ಆ ಕಾಲದಲ್ಲಿ ಸ್ತ್ರೀಗಿದ್ದ ಸ್ಥಾನಮಾನಗಳನ್ನು ತಿಳಿಯಲು ಅನುಕೂಲವಾಗುತ್ತದೆ. ಕುಳುವನೂರಿನ ಒಬ್ಬ ಸಾಮಾನ್ಯ ಕಾವಲುಗಾರನಾಗಿದ್ದ ಕಾಸೆಬೋವನ ಹೆಂಡತೆ ಬನದೆ ಬೋವತಿ ಎಂಬಾಕೆ ರಾಮದೇವರನ್ನು ಪ್ರತಿಷ್ಠಾಪಿಸಿದಳು. ಈ ವೇಳೆಗಾಗಲೇ ಕುಮಾರರಾಮನು ವಿಭಿನ್ನ ಕುಲದವರನ್ನು ತನ್ನ ವ್ಯಕ್ತಿತ್ವ, ವೀರತ್ವ ಗುಣಗಳಿಂದ ಆಕರ್ಷಿಸಿದ್ದ. ಹೀಗಾಗಿಯೇ ಕುಮಾರರಾಮನನ್ನು ಆರಾಧ್ಯ ದೈವವನ್ನಾಗಿಸಿರುವುದು ಶಾಸನಗಳಿಂದ ಹೊರಹೊಮ್ಮುತ್ತದೆ.

ಈ ಶಾಸನವು ಹಲವು ಅಂಶಗಳಿಂದ ಹೊರಹಾಕುತ್ತದೆ. 'ಬಾರಿಕ' ಎಂದರೆ 'ಕಾವಲುಗಾರ' ಎಂದರ್ಥ. 'ಬೋವ' ಎಂದರೆ 'ಬೆಸ್ತ' ಎಂಬರ್ಥವನ್ನು ಸೂಚಿಸುತ್ತದೆ. ಅಂದರೆ ಈ ಕಾಲದ ಸಮಾಜದಲ್ಲಿ ಹಲವಾರು ಜಾತಿಗಳಿದ್ದವು. ಉಚ್ಚ ಕುಲದಿಂದ ಹೀನ ಕುಲದವರೆವಿಗೂ ಇದ್ದವೆಂಬುದನ್ನು ತೋರುತ್ತದೆ. ಶಾಸನವನ್ನು ಹಾಕಿಸುವ, ದೇವರನ್ನು ಪ್ರತಿಷ್ಠಾಪನೆಗೊಳಿಸುವಂತಹ ಧಾರ್ಮಿಕ

ಕ್ರಿಯೆಗಳಲ್ಲಿ ಭಾಗವಹಿಸಲು ಸಾಮಾನ್ಯ ಜಾತಿಯವರಿಗೂ ಅವಕಾಶವಿತ್ತು ಎಂಬುದನ್ನು ತಿಳಿಯಬಹುದು. ಇದರಿಂದ ತಿಳಿದುಬರುವ ಮತ್ತೊಂದು ಮುಖ್ಯ ಸಂಗತಿಯೆಂದರೆ ಕುಮಾರರಾಮ ಆತನ ವಂಶಸ್ಥರಿಗೆ ಅಥವಾ ಕೆಲವೇ ಕೆಲವರಿಗೆ ಆರಾಧ್ಯದೈವನಾಗಿರದೆ ಪ್ರತಿಯೊಂದು ಕುಲದವರಿಗೂ ಈತನು ದೈವಿಕ ಪುರುಷನಾಗಿದ್ದನೆಂದು ಹಾಗೂ ಪ್ರತಿಯೊಬ್ಬರೂ ಕುಮಾರರಾಮನನ್ನು ಪೂಜಿಸುವುದನ್ನು ಪ್ರಸ್ತುತದಲ್ಲೂ ಉದಾಹರಣೆಗಳನ್ನು ತೆಗೆದುಕೊಳ್ಳಬಹುದು.

**೩. ವರಾಹ ಶಾಸನ:** ಈ ಶಾಸನವೂ ಸಹ ರಾಮನಾಥ ಅಶ್ವಾರೋಹಿ ಉಬ್ಬುಶಿಲ್ಪದಿಂದ ಕೂಡಿದೆ. ಶಾಸನವು ಭಗ್ನಗೊಂಡಿರುವುದರಿಂದ ಕೆಲವು ಮಾಹಿತಿಗಳು ಮಾತ್ರ ದೊರಕುತ್ತವೆ. ಅಂದರೆ ಮಲ್ಲರಸನಾಯಕನು ಅಶ್ವಾರೂಢ ವೀರರಾಮನಾಥನ ಶಿಲ್ಪವನ್ನು ಮಾಡಿಸಿದನೆಂಬ ವಿಚಾರ ಮಾತ್ರ ಇದೆ. ಹಿರೇಕೆರೂರು ತಾಲೂಕಿನ ವರಾಹ ಗ್ರಾಮದ ಕೆರೆಯ ಏರಿಯ ಮೇಲಿರುವ ಈ ಶಾಸನವು ಕ್ರಿ.ಶ. ೧೪೪೭ಕ್ಕೆ ಸಂಬಂಧಿಸಿದೆ.[೩೧]

ರಾಮನಾಥನ ಉಬ್ಬುಶಿಲ್ಪವು ಶಾಸನ ಸಹಿತ ಶಿಲ್ಪವಾಗಿದ್ದು, ಮಲ್ಲರಸನಾಯಕನೆಂಬುವನು ಇದನ್ನು ಪ್ರತಿಷ್ಠಾಪಿಸಿದನೆಂದು ಹೇಳುತ್ತದೆ. ಈ ಮಲ್ಲರಸನಾಯಕನು ಯಾರು? ಈತನು ಕುಮಾರರಾಮನ ವಿಗ್ರಹವನ್ನೇ ಪ್ರತಿಷ್ಠಾಪಿಸಲು ಕಾರಣವೇನು ಎಂಬ ಹಲವು ಪ್ರಶ್ನೆಗಳು ಮೂಡುತ್ತವೆ. ಆದರೆ ಕುಳೇನೂರು ಶಾಸನದಂತೆ ಈ ವರಾಹ ಶಾಸನವೂ ಹಾವೇರಿ ಜಿಲ್ಲೆಯ ವ್ಯಾಪ್ತಿಗೊಳಪಡುವ ಗ್ರಾಮಗಳಲ್ಲಿ ದೊರೆತಿರುವುದರಿಂದ ಕುಮಾರರಾಮನ ಪ್ರಭಾವ ಇಲ್ಲೆಲ್ಲಾ ಇದ್ದಿರಬಹುದು. ಹಾಗೆಯೇ ಮಲ್ಲರಸನು 'ನಾಯಕ' ಮತಸ್ಥನಾಗಿರುವುದರಿಂದ ಕುಲದ ಅಭಿಮಾನ ಈ ವಿಗ್ರಹವನ್ನು ಪ್ರತಿಷ್ಠಾಪನೆಯ ಕಾರ್ಯಗಳನ್ನು ಮಾಡಿಸಿರಬಹುದೆಂಬ ಸೂಚನೆಗಳು ಕಂಡುಬರುತ್ತವೆ. ಕುಮಾರರಾಮನ ಸಾಹಸ, ಪರಾಕ್ರಮ, ಉದಾತ್ತ ಭಾವನೆ, ಸತ್ಯನಿಷ್ಠೆ, ನೀತಿಪ್ರಜ್ಞೆ ಇವೆಲ್ಲವೂ ಕುಮಾರರಾಮನನ್ನು ದೈವೀಪುರುಷ ಸ್ಥಾನಕ್ಕೆ ಕೂರಿಸಿದೆ.

**ಸಂಗೂರು ಶಾಸನ:** ಹಾವೇರಿ ತಾಲ್ಲೂಕಿನ ಸಂಗೂರು ಗ್ರಾಮದಲ್ಲಿ ಪ್ರತಿಮೆ ಮತ್ತು ಶಾಸನವಿರುವ ವೀರಗಲ್ಲೊಂದನ್ನು ಕಾಣಬಹುದು. ತಲೆಗೂದಲನ್ನು ಕಟ್ಟಿರುವ, ಬಲಗೈಯಲ್ಲಿ ಖಡ್ಗವಿರುವ, ಎಡಗೈಯಲ್ಲಿ ಲಗಾಮು ಹಿಡಿದಿರುವ, ಮುಖವು ನೇರವಾಗಿದ್ದು, ವೀರಾವೇಶದಿಂದ ಕೂಡಿರುವ, ಸೊಂಟದಲ್ಲಿ ತೂಗುತ್ತಿರುವ ಕತ್ತಿಯಿರುವುದು ಕಂಡುಬಂದಿದೆ. ಈ ವಿಗ್ರಹದ ಕೆಳಗೆ ಶಾಸನವಿದ್ದು, "ಶ್ರೀವೀರಪ್ರತಾಪ ಹರಿಹರ ಮಹಾರಾಯರ ಕುಮಾರ ದೇವರಾಯರು ಸುಕ(ಖ)ದಿಂ ರಾಜ್ಯಂಗೆಯ್ಯುತ್ತಿರದ್ದಲು (೧) ಗೋವೆಯ ರಾಜ್ಯಕ್ಕೆ ಸಲುಹ(ವ) ಚಂದ್ರಗುತ್ತಿಯ ನಾಡೊಳಗಣ ಚಂಗಾಪುರದಲ್ಲು ಕಂಪಿಲರಾಯನ ಬಾಹತ್ತರ ನಿಯೋಗಾಧಿಪತಿ ಪತಿಕಾರ್ಯಧುರಂಧರನುಮಪ್ಪ ಬೈಚವೆಗ್ಗಡೆಯ ಮೊಮ್ಮ ಸೇನಾಧಿಪತಿ ಸಂಗಮನಕುಮಾರ ಮಾದರಸು ಕುಮಾರರಾಮನಾಥದೇವರ ಪ್ರತಿಷ್ಠೆಯ ಶಕವರ್ಷ ೧೩೩೯ನೆಯ ಸರ್ವ(ಜಿ)ತು ಸಂವತ್ಸರದ ಅಶ್ವಯುಜ ಸುದ್ಧ ೧೦ ಆದಿತ್ಯವಾರದಲ್ಲು ಮಾಡಿಸಿದ"ನೆಂದು ಹಾಕಿಸಲಾಗಿದೆ. ಅಂದರೆ ಒಂದನೇ ದೇವರಾಯನ ಆಳ್ವಿಕೆಯ ಕಾಲದಲ್ಲಿ ಆತನ ಸೇನಾಧಿಪತಿಯಾಗಿದ್ದ ಸಂಗಮನ

ಮಗ ಮಾದರಸನು ಚಂಗಾಪುರದಲ್ಲಿ ರಾಮನಾಥ ದೇವರ ಶಿಲ್ಪವನ್ನು ಪ್ರತಿಷ್ಠಾಪಿಸಿರುವ ವಿಚಾರವನ್ನು ತಿಳಿಸಿದ್ದು, ಕುಮಾರರಾಮನಿಗೆ ನಿಷ್ಠರಾಗಿದ್ದರಿಂದಲೇ ಈತನ ವಿಗ್ರಹವನ್ನು ಪ್ರತಿಷ್ಠಾಪಿಸಿರುವುದು ಬೆಳಕಿಗೆ ಬರುತ್ತದೆ. "ಕುಮಾರರಾಮ ಮಡಿದು ೭೮ ವರ್ಷಗಳ ಬಳಿಕ ಮಾದರಸನಿಂದ ನೆರವೇರಲ್ಪಟ್ಟ ಈ ವಿಗ್ರಹ ಪ್ರತಿಷ್ಠಾಪನೆ ತುಂಬಾ ಅಭೂತಪೂರ್ವ ಉತ್ಸವವಾಗಿ ನಡೆಯಿತೆಂದು ತಿಳಿದುಬರುತ್ತದೆ."[೩೨] ವಿಜಯನಗರದ ಅರಸರು, ಸೇನಾಪತಿಗಳು ಕುಮ್ಮಟದರಸರನ್ನು ಮಾದರಿಗಳಾಗಿ ಇಟ್ಟುಕೊಂಡಿದ್ದಂತೆ ಕಾಣುತ್ತದೆ. ಇವರ ಶೌರ್ಯ ಪ್ರತಾಪಗಳು, ಕುಮಾರರಾಮನ ಶುಚಿ ಗುಣಗಳಿಗೆ ಬೆರಗಾಗಿದ್ದರೆಂದು, ವಿಜಯನಗರ ಸಾಮ್ರಾಜ್ಯ ಸ್ಥಾಪಿಸಲು ಇವರು ಬೆನ್ನೆಲುಬಾಗಿದ್ದರೆಂಬ ಗೌರವ ಹೊಂದಿದ್ದರಿಂದ ಇವರ ನೆನಪಿಗಾಗಿ ಹಾಕಿಸಿರಬಹುದೆಂದು ತೋರುತ್ತದೆ.

**ಮಾಳನಕೊಪ್ಪ:** ಮಾಳನಕೊಪ್ಪ ಗ್ರಾಮವು ಶಿಕಾರಿಪುರ ತಾಲ್ಲೂಕಿನ ವ್ಯಾಪ್ತಿಗೆ ಸೇರಿದ್ದು, ಈ ಗ್ರಾಮದ ರಾಮನ ದೇವಸ್ಥಾನದಲ್ಲಿ ಶಾಸನ ಸಹಿತ ವೀರಗಲ್ಲು ಕಂಡುಬಂದಿರುವುದನ್ನು ವಿಶ್ಲೇಷಿಸಬಹುದು. ಇಲ್ಲಿ ಕಂಡುಬಂದಿರುವ ಶಿಲಾಫಲಕವು ಸುಮಾರು ೩ ಅಡಿ ಎತ್ತರ, ೨.೫ ಅಡಿ ಅಗಲವಿದ್ದು, ಇದರ ಮೇಲ್ಭಾಗದಲ್ಲಿ ಕುಮಾರರಾಮನು ಕುದುರೆಯನ್ನು ಓಡಿಸುತ್ತಿರುವ ಉಬ್ಬುಶಿಲ್ಪವೊಂದನ್ನು ಕೆತ್ತಲಾಗಿದೆ. ಬೇರೆ ಭಾಗಗಳಲ್ಲಿ ಕಂಡುಬಂದಿರುವಂತೆ ಇಲ್ಲಿಯೂ ಸಹ ಮುಖದಲ್ಲಿ ವೀರಾವೇಶ ತುಂಬಿದ್ದು ಬಲಗೈಯಲ್ಲಿ ಈಟಿಯನ್ನು ಹಿಡಿದಿದ್ದು, ಎಡಗೈಯಲ್ಲಿ ಕುದುರೆಯ ಲಗಾಮನ್ನು ಹಿಡಿದಿರುವುದು ಕಾಣುತ್ತದೆ. ಈತನ ಜೊತೆಗೆ ಒಂದು ಸ್ತ್ರೀ ಚಿತ್ರಣವಿದ್ದು, ಬಹುಶಃ ಪತ್ನಿಯಿರಬಹುದು. ಹಾಗೂ ರಾಮನ ತಲೆಯ ಮೇಲೆ ಛತ್ರಿ ಹಿಡಿದಿರುವ ದೃಶ್ಯ ಕಾಣಸಿಗುತ್ತದೆ. ಈ ವಿಗ್ರಹದ ಕೆಳಗಡೆ ಶಾಸನವು ಉಲ್ಲೇಖವಾಗಿದೆ. "ಕಂಪಿಲದೇವನ ಕುಮಾರ ರಾಮನಾಥ ವೊಡೇರಿಗೆ ತಾಳಗುಂದದ ಒಳಗಣ ಕೊಪ್ಪದ ಕೆಂಚಗಉಡನ ಮಗ ಮಾಳಗಉಡ ಮಾಡಿದ ಧರ್ಮಕವುಲ ಕಟ್ಟೆಯ ಕೆಳಗಣ ಗದ್ದೆ"[೩೩] ... ಇನ್ನೂ ಮುಂದುವರೆದಿದ್ದು, ತ್ರುಟಿತಗೊಂಡಿದೆ. ಲಿಪಿಯ ಆಧಾರದ ಮೇಲೆ ಇದು ಸು. ೧೬ನೆಯ ಶತಮಾನಕ್ಕೆ ಸೇರಿದುದಾಗಿದೆ. ಕುಮಾರರಾಮನ ಪ್ರಭಾವ ೧೬ನೇ ಶತಮಾನಕ್ಕೂ ಬೀರಿತ್ತು ಎಂಬುದು ತಿಳಿಯುತ್ತದೆ. ಹಾಗೆಯೇ ಕುಮಾರರಾಮನ ಆರಾಧನೆಗಾಗಿ ಗದ್ದೆಯನ್ನು ದತ್ತಿ ಬಿಟ್ಟಿರುವಂತೆ ತಿಳಿದುಬರುತ್ತದೆ.

**೨. ಶಾಸನ ರಹಿತ ವೀರಗಲ್ಲುಗಳು**

ಕುಮ್ಮಟದರಸರಿಗೆ ಸಂಬಂಧಿಸಿದಂತೆ ಶಾಸನಗಳು ಉಲ್ಲೇಖವಾಗಿರುವ ವೀರಗಲ್ಲುಗಳೇ ಹೆಚ್ಚು ದೊರೆತಿವೆ. ಕೆಲವೇ ಕೆಲವು ವೀರಗಲ್ಲುಗಳು ಮಾತ್ರ ಶಾಸನ ರಹಿತವಾಗಿ ದೊರೆತಿದ್ದು ಕೆಲವು ಹಾಳಾಗಿ ಹೋಗಿವೆ. ಅಂತಹ ಒಂದು ಶಿಲ್ಪವನ್ನು ನೋಡುವುದಾದರೆ ಹಾವೇರಿ ಜಿಲ್ಲೆಯಲ್ಲಿ ಕಂಡುಬಂದಿದೆ.

**ಬಿದರಕಟ್ಟೆ:** ಬಿದರಕಟ್ಟೆ ಗ್ರಾಮವು ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕಿಗೆ ಸೇರಿದ್ದು, ಆ ಗ್ರಾಮದ ಹೊಲದಲ್ಲಿ ಕಂಡುಬಂದಿರುವ ಅಪ್ರಕಟಿತವಾದ ಶಿಲ್ಪವಾಗಿದ್ದು, ಇಲ್ಲಿ ಯಾವುದೇ ಶಾಸನ

ಬರವಣಿಗೆಯು ಉಲ್ಲೇಖವಾಗಿಲ್ಲ. ಪ್ರಾರಂಭದಲ್ಲಿಯೇ ರಾಮನಾಥನು ಕುದುರೆ ಏರಿ ಕೂತಿರುವ ಶಿಲ್ಪವನ್ನು ಕೆತ್ತನೆ ಮಾಡಲಾಗಿದೆ. ಶಾಸನವಿಲ್ಲದ ಕಾರಣ ಶಾಸನ ರಹಿತ ವೀರಗಲ್ಲು ಎಂದು ಗುರ್ತಿಸಬಹುದು.

**೩. ಶಿಲ್ಪ ಸಹಿತ ವೀರಗಲ್ಲುಗಳು**

ಕುಮಾರರಾಮನ ಅಭೂತಪೂರ್ವ ವ್ಯಕ್ತಿತ್ವಕ್ಕೆ ಜನರು ಬೆರಗಾಗಿರುವುದು ವೀರಗಲ್ಲುಗಳಿಂದ ಸ್ಪಷ್ಟವಾಗುತ್ತದೆ. ಸುಮಾರು ೨೦ ಶಿಲ್ಪಸಹಿತ ವೀರಗಲ್ಲುಗಳು ದೊರೆತಿದ್ದು, ಸಾಮಾನ್ಯವಾಗಿ ಹೆಚ್ಚು ಶಿಲ್ಪಗಳು ಅಶ್ವಾರೋಹಿಯಾಗಿ ಕಾಣಿಸಿಕೊಂಡಿರುವ ಕುಮಾರರಾಮನ ಭಂಗಿಗಳೇ ಕಂಡುಬಂದಿವೆ. ಹೀಗಾಗಿ ಸ್ಮಾರಕಗಳಲ್ಲಿ ಇವು ತುಂಬಾ ಮಹತ್ವವನ್ನು ಪಡೆದುಕೊಂಡಿವೆ.

**ಹಿರೇಕಾಂಶಿ ಶಿಲ್ಪ ಸಹಿತ ವೀರಗಲ್ಲು**

ಶಿಲ್ಪ ಸಹಿತವಾಗಿ ಕಂಡುಬಂದಿರುವ ವೀರಗಲ್ಲಿನಲ್ಲಿ ಕುಮಾರರಾಮನು ಅಶ್ವಾರೋಹಿಯಾಗಿರುವ ಭಂಗಿಯು ಇದರಲ್ಲಿದೆ. ಈ ಶಿಲ್ಪವು ಹಾನಗಲ್ಲಿನಿಂದ ೧೫ ಕಿ.ಮೀ. ಅಂತರದಲ್ಲಿ ಕಂಡುಬರುವ ಹಿರೇಕಾಂಶಿ ಗ್ರಾಮದ ಮಧ್ಯಭಾಗದಲ್ಲಿ ಕಾಣಸಿಗುತ್ತದೆ. ಈ ಶಿಲೆಯಲ್ಲಿ ತಲೆಗೆ ಪೇಟ ಸುತ್ತಿರುವುದು ಕಾಣುತ್ತದೆ. ಸುಮಾರು ೨.೫ ಅಡಿ ಎತ್ತರವಿದ್ದು, ೧.೫ ಅಡಿ ಅಗಲದ ಶಿಲೆಯಾಗಿದ್ದು, ಇದನ್ನು ಆ ಗ್ರಾಮದ ಸ್ಥಳೀಯರು 'ರಾಮದೇವರು' ಎಂದು ಪೂಜೆ ಮಾಡುತ್ತಾರೆ. ಅಂದರೆ ಹಬ್ಬ ಹರಿದಿನಗಳಲ್ಲಿ ವಿಶೇಷವಾಗಿ ಪೂಜೆಮಾಡುವುದು ಇಂದಿಗೂ ನಡೆಯುತ್ತದೆ. ಈ ಶಿಲೆಯು ಮೇಲ್ಭಾಗದಲ್ಲಿ ಕಮಾನಿನಾಕಾರ ಹೊಂದಿದ್ದು, ಇದರಲ್ಲಿರುವ ಶಿಲ್ಪವು ಉಬ್ಬುಶಿಲ್ಪದಂತೆ ಗೋಚರಿಸುತ್ತದೆ.

**ಚಿಕ್ಕಾಂಶಿ ಶಿಲ್ಪ ಸಹಿತ ವೀರಗಲ್ಲು**

ಹಿರೇಕಾಂಶಿಯಲ್ಲಿ ದೊರೆತಿರುವ ಶಿಲ್ಪದಂತೆ ಅಶ್ವಾರೋಹಿಯಾದ ಕುಮಾರರಾಮನ ಚಿತ್ರವಿದೆ. ಇದು ಹಾನಗಲ್ಲಿನಿಂದ ವಾಯುವ್ಯ ದಿಕ್ಕಿಗೆ ಹೋದರೆ ಸುಮಾರು ೧೮ ಕಿ.ಮೀ. ಅಂತರದಲ್ಲಿ ಚಿಕ್ಕಾಂಶಿ ಗ್ರಾಮವು ಕಂಡುಬರುತ್ತದೆ. ಈ ಗ್ರಾಮದ ಒಂದು ಹೊಲದಲ್ಲಿ ಈ ಶಿಲ್ಪವು ಕಂಡುಬಂದಿದ್ದು, ಕುದುರೆಯೇರಿರುವ ಕುಮಾರರಾಮನ ಹಿಂಭಾಗದಲ್ಲಿ ಇಬ್ಬರು ವೀರರು, ಗುರಾಣಿ ಮತ್ತು ಕತ್ತಿ ಹಿಡಿದು ನಿಂತಿರುವ ಮತ್ತೊಬ್ಬ ವೀರನನ್ನು ಕಾಣಬಹುದು. ಇದನ್ನು 'ಕೋಮರಾಮ'ನೆಂದು ಪೂಜಿಸುತ್ತಾರೆ. ಇಲ್ಲಿಯೂ ಸಹ ವಿಶೇಷವಾದ ಹಬ್ಬ ಹರಿದಿನಗಳಲ್ಲಿ ಈ ಮೂರ್ತಿಗೆ ಅಲ್ಲಿನ ಸ್ಥಳೀಯರು ಪೂಜಿಸುತ್ತಾರೆ. ಈ ಶಿಲ್ಪವು ಒಂದು ದೊಡ್ಡ ಆಲದ ಮರದ ಕೆಳಗೆ ಇರುವುದರಿಂದ ಈಗಲೂ ಸುರಕ್ಷಿತವಾಗಿದೆ.

ಇದು ಕುಮಾರಾರಮನ ಶೌರ್ಯ, ಪರಾಕ್ರಮವನ್ನು ಸೂಚಿಸುತ್ತದೆ. ಕುದುರೆಯೇರಿರುವ ಕುಮಾರರಾಮನ ಹಿಂಭಾಗದಲ್ಲಿ ಇಬ್ಬರು ವೀರರು ಹಾಗೂ ಮತ್ತೊಬ್ಬ ವೀರ ಗುರಾಣಿ, ಕತ್ತಿಯನ್ನು ಹಿಡಿದಿದ್ದಾರೆ. ಇವರು ಕುಮಾರರಾಮನ ಜೊತೆ ಯುದ್ಧಕ್ಕೆ ಸಿದ್ಧರಾಗಿರುವಂತೆ ಕಾಣುವುದು ಇವರು

ಯುದ್ಧಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದ್ದರೆಂಬುದನ್ನು ಅರಿಯಬಹುದು. ಹಾಗೆಯೇ ಕುಮ್ಮಟದುರ್ಗದ ರಾಜ್ಯದಲ್ಲಿ ವೀರರಿಗೆ ಕೊರತೆಯಿರಲಿಲ್ಲ ಎಂಬುದನ್ನು ಬಿಂಬಿಸುತ್ತದೆ.

**ಮಲ್ಲುಗ್ಗಂದ ಶಿಲ್ಪಸಹಿತ ವೀರಗಲ್ಲು**

ಈ ಶಿಲ್ಪವು ಕುಮಾರರಾಮನು ಅಶ್ವಾರೋಹಿಯಾಗಿರುವ ಶಿಲ್ಪವಾಗಿ ದೊರೆತಿದೆ. ಮಲ್ಲುಗ್ಗಂದ ಗ್ರಾಮವು ಹಾನಗಲ್ಲಿನಿಂದ ದಕ್ಷಿಣ ದಿಕ್ಕಿಗೆ ಹೋದರೆ ಸುಮಾರು ೨೦ ಕಿ.ಮೀ. ದೂರದಲ್ಲಿ ಕಂಡುಬರುತ್ತದೆ. ಆ ಗ್ರಾಮದ ಹತ್ತಿರದ ಒಂದು ಜಮೀನಿನಲ್ಲಿ ಈ ಶಿಲೆ ಕಾಣಸಿಗುತ್ತದೆ. ಈ ಶಿಲ್ಪದಲ್ಲೂ ಎಡಬಲ ಬದಿಗಳಲ್ಲಿ ಸೂರ್ಯಚಂದ್ರನ ಚಿತ್ರಗಳಿದ್ದು, ಕುದುರೆಯೇರಿ ರಾಮನಾಥನು ಕೂತಿದ್ದು, ಎಡಗೈಯಲ್ಲಿ ಕುದುರೆಯ ಲಗಾಮನ್ನು ಹಿಡಿದಿದ್ದು, ಹೊರಮೇಲ್ಮೈಗೆ ಕವಚವನ್ನು ತೊಟ್ಟಿದ್ದು, ಸೊಂಟದಲ್ಲಿ ಕತ್ತಿ, ತಲೆಯ ಮುಡಿ ಕಟ್ಟಿರುವ ಚಿತ್ರಗಳಿದ್ದು, ಕುದುರೆಯು ಓಡಲು ಸಿದ್ಧವಾಗಿರುವ ಭಂಗಿಯಲ್ಲಿದ್ದು, ಕುದುರೆಯೇರಿ ಕೂತಿರುವ ಈತನಿಗೆ ಒಬ್ಬ ಛತ್ರಿ ಹಿಡಿದಿರುವ ದೃಶ್ಯಗಳು ಕಣ್ತುಂಬುವಂತಿದೆ.

ಈ ಶಿಲ್ಪವನ್ನು ಕುಮಾರರಾಮದೇವನೆಂದೇ ಪೂಜಿಸಲ್ಪಡುವ ಈ ಶಿಲ್ಪವು ಜಮೀನನಲ್ಲಿರುವುದರಿಂದ ಕಾಳುಗಳನ್ನು ಬಿತ್ತುವ ಸಂದರ್ಭದಲ್ಲಿ ಪ್ರಾರಂಭದಲ್ಲಿ ಇದಕ್ಕೆ ಮೊದಲು ಶಿಲ್ಪಕ್ಕೆ ಪೂಜೆ ಸಲ್ಲಿಸಿ ನಂತರದ ಕೆಲಸ ಕಾರ್ಯಗಳನ್ನು ಆರಂಭಿಸುತ್ತಾರೆ. ಪ್ರತಿದಿನ ಪೂಜೆ ನಡೆಯದಿದ್ದರೂ ಹಬ್ಬ, ಹರಿದಿನಗಳಲ್ಲಿ ಮಾತ್ರ ಕಡ್ಡಾಯವಾಗಿ ನಡೆಸುತ್ತಾರೆ. ಇಲ್ಲಿನ ಸ್ಥಳೀಯರು ಅತ್ಯಂತ ಭಕ್ತಿ ಗೌರವಗಳಿಂದ ಪೂಜಿಸುತ್ತಾರೆ. ಈ ಶಿಲ್ಪಕ್ಕೆ ಯಾವುದೇ ರೀತಿಯ ಹಾನಿಯುಂಟಾಗದಂತೆ ಇಲ್ಲಿನ ಸ್ಥಳೀಯರು ನೋಡಿಕೊಳ್ಳುತ್ತಿದ್ದಾರೆ.

ಇದರಿಂದ ತಿಳಿದುಬರುವ ಮತ್ತೊಂದು ವಿಚಾರವೆಂದರೆ ಆ ಕಾಲಾವಧಿಯಲ್ಲಿ ವ್ಯವಸಾಯಕ್ಕೆ ನೀರಾವರಿಗೆ ಹೆಚ್ಚು ಪ್ರಾಧಾನ್ಯತೆ ನೀಡುತ್ತಿದ್ದು, ವ್ಯವಸಾಯವನ್ನು ದೇವರೆಂದು ನಂಬಿದ್ದರೆಂದು ಅನಿಸುತ್ತದೆ. ಕುಮಾರರಾಮ ಯುದ್ಧದ ವೀರನಾಗಿ ಬಿಂಬಿತನಾಗಿರುವುದಷ್ಟೇ ಅಲ್ಲ, ಗ್ರಾಮದೇವರಾಗಿ ಅಲ್ಲಿನ ಜನರ ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮೀಕರಿಸುವ ಕಾರ್ಯವನ್ನು ಪ್ರಸ್ತುತದಲ್ಲಿ ಮಾಡುತ್ತಿರುವುದು ಕಂಡುಬರುತ್ತದೆ.

**ಮೂಡೂರು ಶಿಲ್ಪಸಹಿತ ವೀರಗಲ್ಲು**

ಮೂಡೂರು ಗ್ರಾಮವು ಹಾನಗಲ್ಲಿನ ಮಲ್ಲುಗ್ಗಂದ ಗ್ರಾಮದ ಹತ್ತಿರದಲ್ಲೇ ಕಂಡುಬರುತ್ತದೆ. ಈ ಶಿಲ್ಪವನ್ನು 'ಕೋಮರಾಮ' ದೇವರೆಂದು ಸ್ಥಳೀಯರು ಪೂಜಿಸಲು ಕಾರಣವೆಂದರೆ ಇಲ್ಲಿಯೂ ಸಹ ಕುಮಾರರಾಮ ಅಶ್ವಾರೋಹಿಯಾಗಿದ್ದು, ಎಡಗೈಯಲ್ಲಿ ಕುದುರೆಯ ಲಗಾಮನ್ನು, ಬಲಗೈಯಲ್ಲಿ ಈಟಿಯನ್ನು ಹಿಡಿದಿದ್ದು, ಇಲ್ಲಿಯೂ ಸಹ ಕತ್ತಿಯನ್ನು ಸೊಂಟದಲ್ಲಿ ಕಾಣಬಹುದು. ತಲೆಗೂದಲನ್ನು ಕಟ್ಟಿದ್ದು, ಉಡುಗೆ-ತೊಡುಗೆಯನ್ನು ತೊಟ್ಟಂತೆ ಕಾಣುತ್ತದೆ. ಈತನ ಎಡಬಲ ಬದಿಗಳಲ್ಲಿ ಸೂರ್ಯಚಂದ್ರನ ಆಕೃತಿಗಳನ್ನು ಕಾಣಬಹುದಾಗಿದೆ.

ಈ ಶಿಲ್ಪವನ್ನು ಕೊಮಾರರಾಮದೇವರೆಂದು ಪೂಜಿಸುವ ಸ್ಥಳೀಯರು ಹರಕೆ ಹೊತ್ತು, ಬ್ಯಾಟೆಯನ್ನು ಕಡಿದು, ಅಡುಗೆ ಮಾಡಿ ಎಲ್ಲರೂ ಸೇರಿ ತಿನ್ನುವ ಪದ್ಧತಿ ಇದೆ. ವಿಶೇಷ ದಿನಗಳಲ್ಲಿ ಪೂಜೆ ಸಲ್ಲಿಸುತ್ತಾರೆ. ಇಲ್ಲಿ ಕುಮಾರರಾಮ ಹರಕೆಯ ದೇವರಾಗಿ ಕಾಣಿಸಿರುವುದು ವಿಶೇಷವಾಗಿದೆ. ಮುಖ್ಯವಾಗಿ ಅಲ್ಲಿ 'ಹರಕೆ ಪದ್ಧತಿ' ಇತ್ತೆಂಬುದನ್ನು ಈ ವೀರಗಲ್ಲಿನಿಂದ ತಿಳಿಯಬಹುದು. ಕುಮಾರರಾಮನು ಸಮಾಜದ ದೈವೀಪುರುಷನಾಗಿ ಅವರ ಕೋರಿಕೆಗಳನ್ನು ಈಡೇರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಾನೆ.

**ಶಿರಗೋಡು ಶಿಲ್ಪಸಹಿತ ವೀರಗಲ್ಲು**

ಈ ಶಿಲ್ಪವು ಶಿರಗೋಡು ಗ್ರಾಮದ ಜಮೀನಿನಲ್ಲಿ ಕಂಡುಬಂದಿದೆ. ಈ ಗ್ರಾಮವು ಹಾನಗಲ್ಲಿನಿಂದ ಸುಮಾರು ೨೦ ಕಿ.ಮೀ. ಅಂತರದಲ್ಲಿದೆ. ಈ ಶಿಲ್ಪವು ಯಾವ ಕಾರಣದಿಂದಲೋ ಸುಮಾರು ನಾಲ್ಕೈದು ಭಾಗಗಳಾಗಿ ಹೊಡೆದಿರುವುದರಿಂದ ಇಲ್ಲಿ ಕುಮಾರರಾಮ ಮತ್ತು ಅವನ ಬಲ ಮತ್ತು ಎಡ ಪಕ್ಕದಲ್ಲಿ ಇಬ್ಬರು ಸ್ತ್ರೀಯರು ಇರುವುದರಿಂದ ಇದು ಒಂದು ರೀತಿಯಿಂದ ವೀರಗಲ್ಲು ಅನಿಸಬಹುದು. ಇನ್ನೊಂದು ಕಡೆಯಿಂದ ಮಹಾಸತಿಕಲ್ಲು ಅನಿಸಬಹುದು. ಇಲ್ಲಿನ ಸ್ಥಳೀಯರು ಕುಮಾರರಾಮನೆಂದೇ ಪೂಜಿಸುತ್ತಿರುವುದರಿಂದ ವಿಶೇಷ ದಿನಗಳಲ್ಲಿ ವಿಶೇಷವಾದಂತಹ ಪೂಜೆಗಳು ನಡೆಯುತ್ತವೆ. ಈ ಶಿಲ್ಪದಲ್ಲಿ ನಾಲ್ಕೈದು ಸಾಲುಗಳ ಬರಹವಿರುವುದು ಕಾಣುತ್ತದೆ.

**ಶೃಂಗೇರಿ ಶಿಲ್ಪ ಸಹಿತ ವೀರಗಲ್ಲು**

ಈ ಗ್ರಾಮವು ಹಾನಗಲ್ಲಿನಿಂದ ಸುಮಾರು ೨೭ ಕಿ.ಮೀ. ದಕ್ಷಿಣ ದಿಕ್ಕಿನಲ್ಲಿ ಕಂಡುಬರುತ್ತದೆ. ಈ ಶಿಲ್ಪವು ಇತರೆ ಶಿಲ್ಪಗಳಂತೆ ಅಶ್ವಾರೋಹಿಯಾದ ಕುಮಾರರಾಮನನ್ನೇ ಹೋಲಿಸುತ್ತದೆ. ಇಲ್ಲಿಯೂ ಕುದುರೆಯ ಲಗಾಮನ್ನು ಹಿಡಿದಿರುವುದು, ಸೊಂಟದಲ್ಲಿ ಕತ್ತಿಯಿರುವುದು ಸಾಮಾನ್ಯವಾಗಿದೆ. ಮುಖದಲ್ಲಿ ಉದ್ದನೆಯ ಮೀಸೆಯಿದ್ದು, ವೀರ ಭಾವಾವೇಶ ತುಂಬಿ ಕಾಣುತ್ತದೆ. ಈ ಶಿಲ್ಪವನ್ನು ಅಲ್ಲಿನ ಸ್ಥಳೀಯರು 'ರಾಮಂತ ದೇವರು' ಎಂದು ಪೂಜಿಸುತ್ತಾರೆ. ಈ ಶಿಲ್ಪಕ್ಕೆ ಯಾವುದೇ ರೀತಿಯ ಹಾನಿಯಾಗದಂತೆ ವಿಶೇಷವಾಗಿ ಹಬ್ಬ ಹರಿದಿನಗಳಲ್ಲಿ ಪೂಜೆ ಕಾರ್ಯಗಳನ್ನು ಕೈಗೊಳ್ಳುತ್ತಾರೆ.

**ಕುಮ್ಮಟದುರ್ಗ ಶಿಲ್ಪ ಸಹಿತ ವೀರಗಲ್ಲು**

'ಕಾಗೆರಾಮನ ಕಲ್ಲು' ಎಂದೇ ಕರೆಯಲ್ಪಡುವ ಈ ಶಿಲ್ಪವು ಕುಮ್ಮಟದುರ್ಗದ ನೈರುತ್ಯ ಕಡೆಗೆ ಸಾಗಿದರೆ ಅಲ್ಲಿ ಎರಡು ಕೋಟೆಗಳ ನಡುವೆ ಹೊಂಡದಲ್ಲಿ ಕಾಣಸಿಗುತ್ತದೆ. ಈ ಶಿಲ್ಪದ ವಿಶೇಷತೆಯೆಂದರೆ ಇದು ಹಸಿರು ಬಣ್ಣಕ್ಕಿದೆ. ಸುಮಾರು ೩ ಅಡಿ ಎತ್ತರವಿದ್ದು, ೧.೫ ಅಡಿ ಅಗಲವಿದೆ. ಇಲ್ಲಿಯೂ ಸಹ ಖಡ್ಗವಿಡಿದು, ಕುದುರೆಯ ಲಗಾಮು ಹಿಡಿದು ಕುದುರೆ ಸವಾರನಾಗಿರುವ ಕುಮಾರರಾಮನ ಚಿತ್ರಣವನ್ನು ಕಾಣುತ್ತೇವೆ. ಇದು ಒಂದು ಉಬ್ಬುಶಿಲ್ಪದಂತೆ ಕಂಡುಬಂದಿದೆ. ವಿಶೇಷವಾಗಿ ಉಡುಗೆ, ತೊಡುಗೆ ಜೊತೆಗೆ ಕೈಬಳೆ, ಕಿವಿಯೋಲೆ, ಡಾಬು, ಕೊರಳ ಪದಕಗಳನ್ನು ಧರಿಸಿರುವುದು, ಮುಖದಲ್ಲಿ ಮೀಸೆಯಿದ್ದು, ಸೊಂಟದಲ್ಲಿ ಕತ್ತಿಯಿದ್ದು, ಕುದುರೆಯ ಲಗಾಮನ್ನು ಹಿಡಿದಿದ್ದಾನೆ.

ಈ ಶಿಲ್ಪದಲ್ಲಿ ಕಂಡುಬರುವ ಪಕ್ಷಿಯನ್ನು ಅಲ್ಲಿನ ಸ್ಥಳೀಯರು ಕಾಗೆಯೆಂದು ಗುರ್ತಿಸಿ 'ಕಾಗೆರಾಮನ ಕಲ್ಲು' ಎಂದು ಕರೆಯುತ್ತಾರೆ. ಈ ಶಿಲ್ಪವನ್ನು ಪರಿಶೀಲಿಸಿದ ಎಮ್.ಎಚ್. ರಾಮಶರ್ಮರು "ಇದು ಬೊಲ್ಲನೆಂಬ ಕುದುರೆಯ ಮೇಲೆ ಕುಳಿತ ರಾಮನಾಥ ಚಿತ್ರವೆನ್ನುವುದಕ್ಕೆ ಸಂದೇಹವೇ ಇಲ್ಲ" ಎಂದು ಅಭಿಪ್ರಾಯಪಟ್ಟಿದ್ದಾರೆ.[೩೪] ಆದರೆ ಇನ್ನೂ ಕೆಲವರು 'ಹೋಲಿಕೆರಾಮ' ಎಂದು ಗುರ್ತಿಸುತ್ತಾರೆ. ಮುಖ್ಯವಾಗಿರುವ ವಿಚಾರವೆಂದರೆ 'ರಾಮ'ನೆಂದು ವಿಶೇಷವಾಗಿ ಪೂಜಿಸುವುದು ಕಂಡುಬರುತ್ತದೆ.

**ಮುತ್ತಲಮಟ್ಟಿ ಶಿಲ್ಪ ಸಹಿತ ವೀರಗಲ್ಲು**

ಸೊರಬ ತಾಲೂಕಿಗೆ ಸೇರಿದ ಈ ಗ್ರಾಮವು ಸಹಿತವಾಗಿ ಇನ್ನೂ ಮೂರು ಗ್ರಾಮಗಳಲ್ಲಿ ಕುಮಾರರಾಮನನ್ನೇ ಹೋಲುವ ಶಿಲ್ಪಗಳು ದೊರೆತಿದ್ದು, ಈ ಮುತ್ತಲಮಟ್ಟಿ ಗ್ರಾಮವು ಸೊರಬಯಿಂದ ಸುಮಾರು ೧೯ ಕಿ.ಮೀ. ದಕ್ಷಿಣಕ್ಕೆ ಕಂಡುಬರುತ್ತದೆ. ಇಲ್ಲಿ ಸಹ ಕುಮಾರರಾಮ ಕುದುರೆಯೇರಿ ಕುಳಿತಿದ್ದು, ಕತ್ತಿ ಹಿಡಿದಿರುವುದು, ಕಡಿವಾಣ ಹಿಡಿದಿರುವ, ವೀರಾವೇಶದ ಮುಖಭಾವನೆಗಳು ಗೋಚರಿಸುವಂತೆ ಚಿತ್ರಗಳಿದ್ದು, 'ರಾಮಂತದೇವ'ನೆಂದು ಈ ಊರಿನ ಜನರು ಪೂಜಿಸುತ್ತಾರೆ. ವಿಶೇಷ ದಿನಗಳಲ್ಲಿ ಮಾತ್ರ ಪೂಜೆ ಕೈಂಕರ್ಯಗಳು ನಡೆಯುತ್ತವೆ.

**ಹೆಜ್ಜೆ ಶಿಲ್ಪ ಸಹಿತ ವೀರಗಲ್ಲು**

ಕುದುರೆ ಸವಾರನಾಗಿರುವಂತೆ, ವೀರನ ಮುಖಚರ್ಯೆ, ಕತ್ತಿ, ಭಲ್ಲೆಯನ್ನು ಹಿಡಿದಿರುವ ಉಡುಪನ್ನು ಧರಿಸಿರುವ ಸಾಮಾನ್ಯ ಲಕ್ಷಣಗಳಿರುವ ಈ ಶಿಲ್ಪವು ಸೊರಬ ತಾಲೂಕಿಗೆ ಸೇರಿದ ಹೆಜ್ಜೆ ಗ್ರಾಮದಲ್ಲಿ ಕಂಡುಬಂದಿದ್ದು ಸುಮಾರು ೨.೫ ಅಡಿ ಎತ್ತರ, ೩ ಅಡಿ ಅಗಲವಿದೆ. ಈ ಶಿಲ್ಪವನ್ನು ಅಲ್ಲಿನ ಜನರು ರಾಮದೇವರೆಂದೇ ಪೂಜಿಸುತ್ತಿದ್ದಾರೆ. ವಿಶೇಷ ದಿನಗಳಲ್ಲಿ ಮಾತ್ರ ವಿಶೇಷವಾಗಿ ಆರಾಧಿಸುತ್ತಾರೆ.

**ಶಂಕ್ರಿಕೊಪ್ಪ ಶಿಲ್ಪಸಹಿತ ವೀರಗಲ್ಲು**

ಕೇವಲ ಅರ್ಧದಡಿಯಷ್ಟು ಸುತ್ತಳತೆ ಹೊಂದಿರುವ ಈ ಶಿಲ್ಪವು ಸೊರಬ ತಾಲೂಕಿನ ಶಂಕ್ರಿಕೊಪ್ಪ ಎಂಬ ಸುಮಾರು ೩೨ ಕಿ.ಮೀ. ಅಂತರದ ಗ್ರಾಮದಲ್ಲಿ ಕಂಡುಬರುತ್ತದೆ. ಆ ಗ್ರಾಮದ ಬೇವಿನಮರದ ಕೆಳಗೆ ಕಂಡಿದ್ದು, ಇದರ ಪಕ್ಕದಲ್ಲಿಯೇ ಕೆಲವು ಗುಂಡುಕಲ್ಲುಗಳಿವೆ. ಈ ಶಿಲ್ಪವೂ ಕೂಡ ಅಶ್ವಾರೋಹಿಯಾದ ಭಂಗಿಯಲ್ಲಿದ್ದು, ಇಲ್ಲಿನ ಜನರು 'ಕೊಮಾರರಾಮ' ದೇವರೆಂದು ಪೂಜಿಸುತ್ತಾರೆ. ವಿಶೇಷ ದಿನಗಳಲ್ಲಿ ಪೂಜೆ, ನೈವೇದ್ಯಗಳು ನಡೆಯುತ್ತವೆ.

**ಶಕುನಹಳ್ಳಿ ಶಿಲ್ಪ ಸಹಿತ ವೀರಗಲ್ಲು**

ಶಕುನಹಳ್ಳಿ ಗ್ರಾಮದ ಹೊಲದಲ್ಲಿ ದೊರೆತಿದ್ದ ಈ ಶಿಲ್ಪವು ಭಗ್ನವಾಗಿದ್ದು, ಉಳಿದ ಭಾಗಗಳಿಂದ ಕೆಲವು ಮಾಹಿತಿಗಳನ್ನು ಕೂಡಿಹಾಕಲಾಗಿದೆ. ಈ ವೀರಗಲ್ಲು ಅಲ್ಲಿನ ಸಮಾಜದಲ್ಲಿನ ಆರ್ಥಿಕ

ಸ್ಥಿತಿಗತಿಗಳನ್ನು ಕುರಿತು ಮತ್ತೊಂದು ರೀತಿಯಲ್ಲಿ ಅಭಿವೃದ್ಧಿಸುತ್ತದೆ. ಅಂದರೆ ಕಿವಿಯೋಲೆ, ಡಾಬು, ಪದಕಗಳಂತಹ ಹಲವು ಆಭರಣಗಳನ್ನು ಧರಿಸುತ್ತಿದ್ದರಿಂದ ಆರ್ಥಿಕವಾದ ಸುಸ್ಥಿತಿಯು ನೆಲೆಸಿತ್ತೆಂಬ ವಿಚಾರವು ಸ್ಪಷ್ಟವಾಗುತ್ತದೆ. ಹಾಗೆಯೇ ಅವರು ಆಭರಣ ಪ್ರಿಯರಾಗಿದ್ದರೆಂದು ತಿಳಿದುಬರುತ್ತದೆ. ಆಭರಣ ತಯಾರಿಸುವ ಅಕ್ಕಸಾಲಿಗರೂ ಸಹ ಅಲ್ಲಿನ ಸಮಾಜದಲ್ಲಿದ್ದರೆಂಬುದು ಖಚಿತವಾಗುತ್ತದೆ. ಅಶ್ವಾರೋಹಿಯಾಗಿದ್ದು, ಸುಮಾರು ೨ ಅಡಿ ಸುತ್ತಳತೆಯನ್ನು ಹೊಂದಿರಬಹುದು. ಈ ಶಿಲ್ಪವನ್ನು 'ರಾಮದೇವರು' ಎಂದೇ ಪೂಜಿಸುತ್ತಾರೆ.

**ಮೇಲುಪಾಲಿ ಶಿಲ್ಪ ಸಹಿತ ವೀರಗಲ್ಲು**

ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲೂಕಿಗೆ ಸೇರುವ ಗ್ರಾಮದ ಈ ಶಿಲ್ಪವು ತುಂಬಾ ವಿಶೇಷವೆನಿಸಿದೆ. ಕಾರಣ ಎಲ್ಲಾ ಶಿಲ್ಪಗಳಲ್ಲಿ ಕುಮಾರರಾಮ ಅಶ್ವಾರೋಹಿಯಾಗಿರುವುದನ್ನು ಸಾಮಾನ್ಯವಾಗಿ ಕಾಣಬಹುದು. ಆದರೆ ಇಲ್ಲಿ ಆತನ ಕುದುರೆಯನ್ನು ಆಕರ್ಷಕ ಭಂಗಿಯಲ್ಲಿ ನಿಲ್ಲಿಸಿರುವುದು ಕಾಣುತ್ತದೆ. ಹಾಗೂ ಈ ಶಿಲೆಯು ತ್ರಿಕೋನ ಆಕಾರದಲ್ಲಿದ್ದು, ಇದು ಕೊಪ್ಪ ತಾಲೂಕಿನಿಂದ ಸುಮಾರು ೧೯ ಕಿ.ಮೀ. ದೂರದಲ್ಲಿ ಮೇಲುಪಾಲಿಯಲ್ಲಿ ಕಂಡುಬಂದಿದೆ. 'ಕೊಮಾರರಾಮ' ದೇವರೆಂದು ಇಲ್ಲಿನ ಸ್ಥಳೀಯರು ನಂಬಿದ್ದಾರೆ. ಆದರೆ ಇದನ್ನು ಪೂಜಿಸುವ ವಿಚಾರವು ತಿಳಿದುಬಂದಿಲ್ಲ.

**ಹೆಬ್ಬುತ್ತಿ ಶಿಲ್ಪ ಸಹಿತ ವೀರಗಲ್ಲು**

'ರಾಮಂತದೇವ'ರೆಂದು ಪೂಜಿಸಿಕೊಳ್ಳುವ ಈ ಶಿಲ್ಪವು ಶಿರಸಿ ತಾಲ್ಲೂಕಿನಿಂದ ಸುಮಾರು ೨೦ ಕಿ.ಮೀ. ದಕ್ಷಿಣಕ್ಕೆ ಹೆಬ್ಬುತ್ತಿ ಎಂಬ ಗ್ರಾಮದಲ್ಲಿನ ಶಿಲ್ಪವು ಸ್ವಲ್ಪ ವಿಶೇಷತೆಯಿಂದ ಕೂಡಿದೆ. ಕುದುರೆಯೇರಿ ಕೂತಿರುವ ಕುಮಾರರಾಮನ ಹಿಂದೆ ನಾಲ್ವರಿದ್ದು, ಮೂವರ ಕೈಯಲ್ಲಿ ಕತ್ತಿಗಳಿದ್ದು, ಒಬ್ಬ ಮಾತ್ರ ಛತ್ರಿ ಹಿಡಿದಿದ್ದಾನೆ. ಆದರೆ ಈ ಶಿಲ್ಪದಲ್ಲಿ ರಾಮನ ಮುಂಬದಿಯಲ್ಲಿರುವ ಒಬ್ಬನ ಕೈಯಲ್ಲಿ ಕತ್ತಿಯಿದ್ದು, ಇನ್ನೊಂದು ಕೈಯಲ್ಲಿ ಗುರಾಣಿ ಹಿಡಿದಿರುವುದು ಎಲ್ಲಾ ಶಿಲ್ಪಗಳಿಗಿಂತ ವಿಶೇಷವೆನಿಸಿದೆ. ಪ್ರತಿದಿನ ಈ ದೇವರಿಗೆ ಪೂಜೆ ಮಾಡುವ ಬದಲು ಪ್ರತಿ ಭಾನುವಾರದಂದು ಹಾಗೂ ವಿಶೇಷ ದಿನಗಳಲ್ಲಿ ಮಾತ್ರ ಪೂಜೆಗಳು ನಡೆಯುತ್ತವೆ.

**ಚಿತ್ರದುರ್ಗದ ಶಿಲ್ಪ ಸಹಿತ ವೀರಗಲ್ಲು**

ಈ ಶಿಲ್ಪವು ಚಿತ್ರದುರ್ಗದ ನಗರ ಪ್ರದೇಶದ ಜಿಲ್ಲಾ ನ್ಯಾಯಾಲಯದ ಮುಂಭಾಗದಲ್ಲಿರುವ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕಚೇರಿಯ ಆವರಣದ ನೈರುತ್ಯ ದಿಕ್ಕಿನಲ್ಲಿದೆ. ಸಾಕಷ್ಟು ಮುಕ್ಕಾಗಿರುವ ಶಿಲ್ಪವನ್ನು ಈಗಾಗಲೇ ಬಿ.ರಾಜಶೇಖರಪ್ಪ ಅವರು ಪರಿಚಯಿಸಿದ್ದಾರೆ.[೩೫] ಕೂದಲು ಉದ್ದವಿರುವ ವ್ಯಕ್ತಿಯ ಕೈಯಲ್ಲಿ ಕತ್ತಿ ಹಿಡಿದಿದ್ದು, ಎಡಗೈಯಲ್ಲಿ ಹಗ್ಗದ ಸಹಾಯದಿಂದ ಕುದುರೆಯನ್ನು ಎಳೆಯುತ್ತಿರುವ ಈ ಚಿತ್ರವಿರುವ ಶಿಲ್ಪವು ೨ ಅಡಿ ಎತ್ತರವಿದ್ದು, ೧.೫ ಅಡಿ ಅಗಲವುಳ್ಳದ್ದಾಗಿದೆ.

ಆದರೆ ಇಲ್ಲಿನ ಸ್ಥಳೀಯರಿಗೆ ಈ ಶಿಲ್ಪವು ಹೆಚ್ಚು ಪರಿಚಯವಿಲ್ಲದಿರಬಹುದು. ಆದರೆ ಬಿ.ರಾಜಶೇಖರಪ್ಪ ಅವರು ಇದನ್ನು ಕಡುಗಲಿಯ ಶಿಲ್ಪವೆಂದು ಗುರ್ತಿಸಿದ್ದಾರೆ.

**ಚಿಕ್ಕೋಡು ಶಿಲ್ಪಸಹಿತ ವೀರಗಲ್ಲು**

ಅಶ್ವಾರೋಹಿಯಾಗಿರುವ ಈ ಶಿಲ್ಪವು 'ರಾಮಸ್ವಾಮಿ' ಎಂದೇ ಹೆಸರುವಾಸಿಯಾಗಿದೆ. ಈ ಶಿಲ್ಪವು ತೀರ್ಥಹಳ್ಳಿಯಿಂದ ಸುಮಾರು ೨೧ ಕಿ.ಮೀ. ಅಂತರದಲ್ಲಿ ದಕ್ಷಿಣ ದಿಕ್ಕಿಗೆ ಸಾಗುವ ಮಾರ್ಗದಲ್ಲಿ ಚಿಕ್ಕೋಡು ಎಂಬ ಗ್ರಾಮದಲ್ಲಿ ಕಾಣಸಿಗುತ್ತದೆ. ಎಲ್ಲಾ ಶಿಲ್ಪಗಳಂತೆ ಈ ಶಿಲ್ಪವೂ ಅದೇ ರೀತಿಯ ಲಕ್ಷಣಗಳನ್ನು ಹೊಂದಿದ್ದು, ಅಲ್ಲಿನ ಜನರು ವಿಶೇಷ ದಿನಗಳಲ್ಲಿ ರಾಮ ದೇವರಿಗೆ ಪೂಜೆ ಸಲ್ಲಿಸುವುದು ವಿಶೇಷವಾಗಿದೆ.

**ಕಚ್ಚವಿ ಶಿಲ್ಪಸಹಿತ ವೀರಗಲ್ಲು**

ಕಚ್ಚವಿ ಗ್ರಾಮವು ಹಾವೇರಿ ಜಿಲ್ಲೆಗೆ ಸೇರಿದ ಹಿರೇಕೆರೂರು ತಾಲ್ಲೂಕಿನ ಈಶಾನ್ಯಕ್ಕೆ ಸುಮಾರು ೨೦ ಕಿ.ಮೀ. ಅಂತರದಲ್ಲಿ ಕಾಣಸಿಗುತ್ತದೆ. ಒಂದು ಹೊಲದಲ್ಲಿ ಈ ಶಿಲ್ಪವು ಕಂಡುಬಂದಿದ್ದು, ಈ ಹೊಲವನ್ನು 'ರಾಮಂತದೇವರ ಹಾಳಿ' ಎಂದು ಕರೆಯುತ್ತಾರೆ. ಆದರೆ ಇದಕ್ಕೆ ಯಾವುದೇ ರಕ್ಷಣೆ ಇಲ್ಲವಾದರೂ ಬಿತ್ತುವ ಸಂದರ್ಭದಲ್ಲಿ ಮಾತ್ರ ಇದಕ್ಕೆ ಪೂಜೆಗಳು ನಡೆಯುತ್ತವೆ ಎಂಬ ವಿಚಾರವಂತೂ ಸ್ಪಷ್ಟವಾಗಿದೆ. ಇಲ್ಲಿಯೂ ಸಹ ಅಶ್ವಾರೋಹಿಯಾಗಿಯೇ ಕುಮಾರರಾಮನು ಕಂಡಿದ್ದು, ಸಾಮಾನ್ಯ ಲಕ್ಷಣಗಳನ್ನೇ ಇಲ್ಲಿಯೂ ಕಾಣಬಹುದು. ಈ ಶಿಲ್ಪದಲ್ಲಿ ಹಿಂಬದಿಯಲ್ಲಿ ಇಬ್ಬರು ವೀರರು ನಿಂತಿರುವ ದೃಶ್ಯವಿದ್ದು, ಶಿಲ್ಪವು ೩ ಅಡಿ ಅಗಲವಾಗಿದ್ದು, ೪ ಅಡಿ ಎತ್ತರವನ್ನು ಹೊಂದಿದೆ.

**ಮಡ್ಲೂರು ಶಿಲ್ಪ ಸಹಿತ ವೀರಗಲ್ಲು**

ಮಡ್ಲೂರು ಗ್ರಾಮವು ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿಗೆ ಸೇರಿದ್ದು, ಅಲ್ಲಿಂದ ಪಶ್ಚಿಮಕ್ಕೆ ಸುಮಾರು ೨೯ ಕಿ.ಮೀ. ಅಂತರದಲ್ಲಿ ಕಂಡುಬರುತ್ತದೆ. ಈ ಶಿಲ್ಪವೂ ಮಲ್ಲುಂದ ಶಿಲ್ಪದ ಲಕ್ಷಣಗಳನ್ನೇ ಹೊಂದಿದ್ದು ವಿಶೇಷವೆನಿಸುತ್ತದೆ. ಈ ಶಿಲ್ಪವನ್ನು 'ರಾಮದೇವರ ಹಾಳಿ' 'ರಾಮದೇವರ ಹಕ್ಕಲ' ಎಂದು ಪೂಜಿಸುತ್ತಿದ್ದು, ಇದರ ಮೇಲೆ ಎಣ್ಣೆ ಸುರಿದುದರಿಂದ ಅಸ್ಪಷ್ಟವಾಗಿ ಕಾಣುತ್ತದೆ. ಸುಮಾರು ೩ ಅಡಿ ಅಗಲ, ೨.೫ ಅಡಿ ಎತ್ತರ ಹೊಂದಿರುವ ಈ ಶಿಲ್ಪವು ಕೋನಾಕೃತಿಯಲ್ಲಿದೆ. ಅಶ್ವಾರೋಹಿಯಾದ ವ್ಯಕ್ತಿಯ ಹಿಂಭಾಗದಲ್ಲಿ ಇಬ್ಬರು ವ್ಯಕ್ತಿಗಳನ್ನು ಮುಂಭಾಗದಲ್ಲಿ ಒಬ್ಬ ವೀರನನ್ನು ಕಾಣಬಹುದಾಗಿದೆ. ವಿಶೇಷ ದಿನಗಳಲ್ಲಿ ಮಾತ್ರ ಪೂಜೆಗಳನ್ನು ಕೈಗೊಳ್ಳಲಾಗುತ್ತದೆ.

ಶಿಲ್ಪಸಹಿತ ವೀರಗಲ್ಲುಗಳು ಕುಮಾರರಾಮನಿಗೆ ಸಂಬಂಧಿಸಿದಂತೆ ಕರ್ನಾಟಕದಾದ್ಯಂತ ಹೆಚ್ಚು ಜಿಲ್ಲೆಗಳ ಪ್ರದೇಶಗಳಲ್ಲಿ ದೊರೆತಿವೆ. ಈಗಾಗಲೇ ದೊರೆತಿರುವ ಕುಮಾರರಾಮನಿಗೆ ಸಂಬಂಧಿಸಿದ ಅನೇಕ ಶಿಲ್ಪಗಳು ಅಶ್ವಾರೋಹಿಯಾಗಿ, ಸಾಮಾನ್ಯ ಲಕ್ಷಣಗಳನ್ನೇ ಬಿಂಬಿಸಿವೆ. ಈ ಶಿಲ್ಪಗಳ

ರಚನೆಯು ಸಾಮಾನ್ಯವಾಗಿ ಕುಮ್ಮಟದರಸರ ನಂತರದ ಕಾಲದಲ್ಲಿಯೇ ಆಗಿರಬೇಕು ಅನಿಸುತ್ತದೆ. ಏಕೆಂದರೆ ಹೆಚ್ಚು ಕಡಿಮೆ ಲಕ್ಷಣಗಳು ಎಲ್ಲಾ ಶಿಲ್ಪಗಳಲ್ಲೂ ಒಂದೇ ರೀತಿ ಇವೆ. ಆದರೆ ಹೆಬ್ಬತ್ತಿ ಶಿಲ್ಪ ಮತ್ತು ಕಚ್ಚವಿ ಶಿಲ್ಪಗಳು ಒಂದೇ ಲಕ್ಷಣಗಳಿದ್ದು, ಉಳಿದವುಗಳಿಗಿಂತ ಭಿನ್ನವಾಗಿವೆ. ಕುಮ್ಮಟದುರ್ಗದ ಶಿಲ್ಪವು ಸ್ವರೂಪದ ದೃಷ್ಟಿಯಿಂದ ಭಿನ್ನವಾಗಿದೆ. ಅಂದರೆ ಆ ಶಿಲ್ಪವು ಹಸಿರು ಬಣ್ಣಕ್ಕಿರುವುದು ವಿಶೇಷವೆನಿಸಿದೆ. ಈ ಪ್ರದೇಶಗಳಷ್ಟೇ ಅಲ್ಲದೆ ಬಾಗಲಕೋಟೆ ಜಿಲ್ಲೆ ಹಾಗೂ ಗದಗ ಜಿಲ್ಲೆಗಳನ್ನೊಳಗೊಂಡಂತೆ ಕುಮಾರರಾಮನ ಸಂಬಂಧಿ ವೀರಗಲ್ಲುಗಳು ದೊರೆತಿವೆ. ಕೆಲವು ಇಂದಿಗೂ ಸುಸ್ಥಿತಿಯಲ್ಲಿವೆ. ಇನ್ನೂ ಕೆಲವು ಭಗ್ನಗೊಂಡಿವೆ.

ಮೇಲಿನ ಎಲ್ಲಾ ಶಿಲ್ಪಗಳನ್ನು ಗಮನಿಸಿದಾಗ ಕಂಡುಬರುವ ಪ್ರಮುಖ ವಿಚಾರವೆಂದರೆ ಹೆಚ್ಚು ಶಿಲ್ಪಗಳು ಹೊಲಗಳಲ್ಲೇ ದೊರೆತಿವೆ. ಅಷ್ಟೇ ಅಲ್ಲದೆ ಯಾವುದೇ ಧಾನ್ಯಗಳನ್ನು ಬೆಳೆಯಬೇಕಾದರೆ ಆ ಮೂರ್ತಿಗೆ ಪೂಜೆ ಸಲ್ಲಿಸಿ ನಂತರ ಬಿತ್ತುವ ಕಾರ್ಯ ಮಾಡಲಾಗುತ್ತದೆ. ಹೀಗಾಗಿ ಕುಮಾರರಾಮನನ್ನು ಕೃಷಿಪರ ದೇವರನ್ನಾಗಿ ಪೂಜೆ ಮಾಡುತ್ತಾರೆ ಎನ್ನುವ ಸಂಗತಿ ತಿಳಿಯುತ್ತದೆ. ಅಂದರೆ ಕುಮಾರರಾಮ ಕೃಷಿಗೆ ಹೆಚ್ಚು ಆದ್ಯತೆಯನ್ನು ನೀಡಿದ್ದ ಎಂಬುದು ಸ್ಪಷ್ಟವಾಗುತ್ತದೆ.

ಕುಮಾರರಾಮ ಕನ್ನಡ ನಾಡನ್ನು ದಾಟಿ ಹೊರನಾಡುಗಳಲ್ಲಿ ಇಂದಿಗೂ ಅಜರಾಮರನಾಗಿದ್ದನೆಂದರೆ ಆತನ ವ್ಯಕ್ತಿತ್ವದ ಪ್ರಭಾವ ಸಮಾಜದ ಮೇಲೆ ಆಗಿದೆ ಎಂದರೆ ತಪ್ಪಿಲ್ಲ. ಹೀಗಾಗಿ ಕುಮಾರರಾಮ ಕೇವಲ ಕುಲದೇವರನ್ನಾಗಿ ಪೂಜೆ ಮಾಡುತ್ತಿಲ್ಲ. ಕೃಷಿ ಆರಾಧ್ಯದೈವನಾಗಿ, ಮೂರ್ತಿಶಿಲ್ಪವಾಗಿ, ಸಮಾಜದ ಆಚರಣೆಗಳಲ್ಲಿ ಒಬ್ಬ ದೇವರಂತೆ ನಾನಾ ಉದ್ದೇಶಗಳನ್ನಿಟ್ಟುಕೊಂಡು ಪೂಜೆ ಸಲ್ಲಿಸುತ್ತಿದ್ದಾರೆ.

**೭.೫. ಕೆರೆ, ಕಟ್ಟೆ, ಬಾವಿ ಮತ್ತು ಕೋಟೆಗಳು**

ಕುಮ್ಮಟದುರ್ಗವು ಅಲ್ಲಿನ ಸುತ್ತಮುತ್ತಲಿನ ಪ್ರದೇಶಗಳಿಗೆ ಕೇಂದ್ರಬಿಂದುವಾಗಿದ್ದು, ಸಮುದ್ರಮಟ್ಟದಿಂದ ಈ ಬೆಟ್ಟವು ೬೯೬ ಕಿ.ಮೀ. ಎತ್ತರದಲ್ಲಿದೆ. ಮುಕ್ಕುಂಪಿ ಕೆರೆಯಿಂದ ದಕ್ಷಿಣಕ್ಕೆ ಕೋಟೆಯಿರುವುದು ಕಂಡುಬಂದಿದೆ. ಕುಮಾರರಾಮನ ಬೆಟ್ಟವು ಕೋಟೆಯಿಂದ ಆವೃತವಾಗಿದ್ದು, ಹೆಚ್ಚು ಬಂಡೆಗಲ್ಲುಗಳಿಂದ ಕೂಡಿದೆ. ಮಾದಿಗ ಹಂಪಯ್ಯನ ಬೆಟ್ಟ ಮತ್ತು ಕುಮಾರರಾಮನ ಗುಡ್ಡವನ್ನು ಸುತ್ತುವರಿದು ಕೋಟೆಯನ್ನು ಕಟ್ಟಲಾಗಿದೆ. ಮತ್ತೊಂದು ಕೋಟೆಯು ಮಾದಿಗ ಹಂಪಯ್ಯನ ಗುಡ್ಡವನ್ನು ಒಳಗೊಂಡು ಶಿವನ ದೇವಾಲಯವನ್ನು ಸುತ್ತುವರೆದಿದೆ. ಹೀಗೆ ಒಂದನ್ನೊಂದು ಗುಡ್ಡಗಳನ್ನು ಜೋಡಿಸುತ್ತಾ ಸುಮಾರು ೬ ಕೋಟೆಗಳನ್ನು ಈ ದುರ್ಗದಲ್ಲಿ ಕಾಣುತ್ತೇವೆ. ರಾಮಸ್ವಾಮಿ ಬೆಟ್ಟವು ಪೂರ್ವದಲ್ಲಿ ಬಂಡೆಯ ರಾಶಿಗಳನ್ನು ಹೊಂದಿದೆ. ಇದು ಸಹಜವಾಗಿ ಕುಮ್ಮಟದುರ್ಗಕ್ಕೆ ರಕ್ಷಣೆ ನೀಡುವಂತಿದೆ. ಮಾದಿಗ ಹಂಪಯ್ಯನ ಬೆಟ್ಟದಲ್ಲೂ ಬಂಡೆಗಳೇ ರಕ್ಷಾಕವಚಗಳಾಗಿವೆ. ಇದನ್ನು 'ಜೇನುಕಲ್ಲುಗುಡ್ಡ' ಎಂತಲೇ ಕರೆಯುತ್ತಾರೆ.

ಮೇಲೆ ತಿಳಿಸಿರುವ ಬೆಟ್ಟಗಳ ಜೊತೆಗೆ ಇನ್ನೂ ಕೆಲವು ಬೆಟ್ಟಗಳನ್ನು ಒಳಗೊಂಡಂತೆ ೬ ಕೋಟೆಗಳನ್ನು ಹೆಸರಿಸಲಾಗಿದೆ.

೧. ಕುಮಾರರಾಮನ ಗುಡ್ಡದಿಂದ ಬೊಲ್ಲನ ಗುಡ್ಡಕ್ಕೆ ಒಂದು ಕೋಟೆ.

೨. ಮಾದಿಗ ಹಂಪಯ್ಯನ ಗುಡ್ಡದಿಂದ ಕುಮಾರರಾಮನ ಗುಡ್ಡಕ್ಕೆ ಒಂದು ಕೋಟೆ.

೩. ಗುಲಗಂಜಿ ಗುಡ್ಡದಿಂದ ಕುಮಾರರಾಮನ ಗುಡ್ಡಕ್ಕೆ ಒಂದು ಕೋಟೆ

೪. ಮಾದಿಗ ಹಂಪಯ್ಯನ ಗುಡ್ಡದಿಂದ ಹನುಮಂತನ ಗುಡ್ಡಕ್ಕೆ ಒಂದು ಕೋಟೆ

೫. ಕಾಟಪ್ಪನ ಬೆಟ್ಟದಿಂದ ಗುಲಗಂಜಿ ಬೆಟ್ಟಕ್ಕೆ ಒಂದು ಕೋಟೆ

೬. ಬೊಲ್ಲನ ಗುಡ್ಡದಿಂದ ಕಾಟಪ್ಪನ ಬೆಟ್ಟಕ್ಕೆ ಒಂದು ಕೋಟೆ

ಈ ರೀತಿಯಾಗಿ ಕುಮ್ಮಟದುರ್ಗವು ದೇವಾಲಯಗಳು, ಶಿಲ್ಪಗಳು, ಕೋಟೆಗಳು, ವೀರಗಲ್ಲುಗಳು, ಕೆರೆಗಳು, ಕುದುರೆ ಕಲ್ಲುಗಳು ಹಾಗೂ ಕೆಲವು ಕಟ್ಟಡಗಳನ್ನು ಒಳಗೊಂಡಿದ್ದು, ಕುಮ್ಮಟದುರ್ಗದ ಇತಿಹಾಸವನ್ನು ವಿವರಿಸುತ್ತವೆ.

**ಬೊಲ್ಲನ ಕೆರೆ:** ಬೊಲ್ಲನೆಂದರೆ ಕುಮಾರರಾಮನ ಕುದುರೆಯಾಗಿದ್ದು, ಕುಮಾರರಾಮನು ಓರಂಗಲ್ಲಿನ ಪ್ರತಾಪರುದ್ರನಿಂದ ಹೋರಾಡಿ ತಂದಿರುವನು ಎಂದು ತಿಳಿದುಬಂದರೆ, ಮತ್ತೊಂದು ರೀತಿಯಲ್ಲಿ ಹೇಳುವುದಾದರೆ, ಕುಮಾರರಾಮ ಮಾವಿನ ಹಣ್ಣಿನಿಂದ ಜನಿಸಿದರೆ, ಬೊಲ್ಲನು ಅದರ ವಾಟೆಯಿಂದ ಜನಿಸಿದನು ಎಂಬ ಹಲವು ಹೇಳಿಕೆಗಳ ಪ್ರಕಾರ ಈ ಬೊಲ್ಲನ ಹೆಸರಿನಲ್ಲಿ ಕೆರೆ ಕಂಡುಬಂದಿದ್ದು, ೩ ಗುಡ್ಡಗಳಿಗೆ ಅಂದರೆ ಬೊಲ್ಲನಗುಡ್ಡ, ಕುಮಾರರಾಮನ ಗುಡ್ಡ ಮತ್ತು ಕಾಟಪ್ಪನ ಗುಡ್ಡಗಳಿಗೆ ಹೊಂದಿಕೊಂಡಿದೆ. ಈಗ ಅಲ್ಲಿನ ಸ್ಥಳೀಯರು ನೀರು ಇಲ್ಲದ ಕಾರಣ ಬೇಸಾಯ ಮಾಡುತ್ತಿದ್ದಾರೆ.

ಗಂಗಾವತಿಯಿಂದ ಪೂರ್ವಾಭಿಮುಖವಾಗಿರುವ ಈ ಕೆರೆಯು ದೊಡ್ಡ ಕೆರೆಯಾಗಿದ್ದು, ಪಶ್ಚಿಮಕ್ಕೆ ಕುಮಾರರಾಮನ ಬೆಟ್ಟ, ನೈರುತ್ಯಕ್ಕೆ ಕಾಟಪ್ಪನ ಬೆಟ್ಟ ಮತ್ತು ಈಶಾನ್ಯ ದಿಕ್ಕಿಗೆ ಬೊಲ್ಲನ ಕೆರೆ ಬೆಟ್ಟ ಗುಡ್ಡಗಳಿಂದ ಕಣಿವೆ ನಿರ್ಮಾಣವಾಗಿದ್ದು, ದೊಡ್ಡದಾಗಿ ಅರ್ಧವೃತ್ತಾಕಾರದಲ್ಲಿ ನಿರ್ಮಿಸಲಾಗಿದೆ. ಇದು ದೊಡ್ಡ ಕಲ್ಲುಗಳಿಂದ ನಿರ್ಮಾಣವಾದ ಚೌಕಾಕಾರದ ನೀರಿನ ಚಲನೆಯನ್ನು ನಿಯಂತ್ರಿಸುವ ವಿರೂಪಗೊಂಡಿರುವ ರಚನೆ ಇದೆ. ಇದು ಈಗ ಒಣಗಿ ಹೋಗಿದ್ದು ಕುಮ್ಮಟದರಸರ ಕಾಲದಲ್ಲಿ ವ್ಯವಸಾಯ ಮಾಡಲ್ಪಡುತ್ತದೆ. ಕುಮಾರರಾಮನು ಪ್ರೀತಿಯಿಂದ ಬೊಲ್ಲನ ಕೆರೆ ಎಂದು ಇದನ್ನು ಹೆಸರಿಸಲ್ಪಟ್ಟಿದ್ದಾನೆ.

**ವಕ್ರಾಣಿ ಕೆರೆ:** ಕುಮ್ಮಟದುರ್ಗದ ಈಶಾನ್ಯ ದಿಕ್ಕಿಗೆ ಇರುವ, ಅರ್ಧ ವೃತ್ತಾಕಾರದಲ್ಲಿರುವ ಕುಮಾರರಾಮ ಮತ್ತು ಮಾದಿಗ ಹಂಪಯ್ಯನ ಬೆಟ್ಟಗಳ ಕಣಿವೆಗಳಲ್ಲಿ ನಿರ್ಮಾಣವಾಗಿದೆ. ಇದು

ಅಗಲ ಪಥವನ್ನು ಹೊಂದಿದ್ದು, ಇದನ್ನು ಬೃಹದಾಕಾರದ ಕಲ್ಲುಗಳಿಂದ ನಿರ್ಮಿಸಲಾಗಿದೆ. ಇಲ್ಲಿಯ ನೀರನ್ನು ಆಕಳು ಮತ್ತು ದನಕರುಗಳಿಗೆ ಕುಡಿಯಲು ಉಪಯೋಗಿಸುತ್ತಿದ್ದರು. ಅಲ್ಲದೆ ಜನಸಾಮಾನ್ಯರೂ ಸಹ ಕುಡಿಯಲು ಉಪಯೋಗಿಸುತ್ತಿದ್ದರು.

ಇದನ್ನು ವಕ್ರವಾಗಿ ಕಟ್ಟಿರುವುದರಿಂದ 'ವಕ್ರಾಣಿ ಕೆರೆ' ಎಂದು ಕರೆಯಲಾಗಿದೆ. ಇದು ಮಾದಿಗ ಹಂಪಯ್ಯನ ಮತ್ತು ಕುಮಾರರಾಮನ ಗುಡ್ಡದ ಮಧ್ಯಭಾಗದಲ್ಲಿರುವುದು. ಸಾಕುಪ್ರಾಣಿಗಳಿಗೆ ಅನುಕೂಲವಾಗುತ್ತಿದ್ದು ಎಂದು ಅಲ್ಲಿನ ಕೆಲವು ಅವಶೇಷಗಳಿಂದ ತಿಳಿಯಬಹುದಾಗಿದೆ.

**ಮಾದಿಗ ಹಂಪಯ್ಯನ ಕೆರೆ:** ಮಾದಿಗ ಹಂಪಯ್ಯನ ಗುಡ್ಡದಿಂದ ಪೂರ್ವಾಭಿಮುಖವಾಗಿರುವ ಶಿವನ ದೇವಾಲಯದ ಬಳಿ ಚಿಕ್ಕಕೆರೆಯನ್ನು ನಿರ್ಮಿಸಲಾಗಿಗಿದೆ. ನೀರಿನ ಅನುಕೂಲಕ್ಕಾಗಿ ನಿರ್ಮಿಸಿರಬೇಕೆಂದು ತಿಳಿದುಬಂದಿದೆ. ಅಂದರೆ ಪ್ರಸ್ತುತದಲ್ಲಿಯೂ ಅದನ್ನು ಬಳಸಿಕೊಳ್ಳುತ್ತಿರುವುದು, ಪ್ರಾಣಿಗಳ ದಾಹ ತೀರಲು ಇದು ಉಪಯೋಗವಾಗಿದೆ. ಕುಮಾರರಾಮನ ಪರಿವಾರದವರಲ್ಲಿ ಮಾದಿಗ ಹಂಪಯ್ಯನೂ ಒಬ್ಬನಾಗಿದ್ದನು. ಈತನು ಕುಮಾರರಾಮನ ಎಲ್ಲಾ ಕಾರ್ಯಗಳಿಗೂ ಪೂರಕವಾಗಿಯೇ ಜೊತೆಯಾಗಿದ್ದನು. ಕುಮಾರರಾಮನು ಜಾತಿ ಧರ್ಮದ ಕಟ್ಟುಪಾಡುಗಳು ಗಣನೆಗೆ ತೆಗೆದುಕೊಳ್ಳುತ್ತಿರಲಿಲ್ಲ ಎನ್ನುವುದು ಮಾದಿಗನಾದ ಹಂಪಯ್ಯನ ಗೆಳೆತನದಿಂದ ತಿಳಿಯಬಹುದು.

**ರಾಮನ ದೋಣಿ:** ಈ ದೋಣಿಯು ರಾಮಸ್ವಾಮಿ ಗುಡಿಯ ಹತ್ತಿರದಲ್ಲಿಯೇ ರಾಮನ ಹೊಂಡ ಕಂಡುಬರುತ್ತದೆ. ಜಾತ್ರೆಯ ಸಂದರ್ಭದಲ್ಲಿ ಗಂಗಾಸ್ನಾನ, ಗಂಗಾಪೂಜೆ ಪ್ರತಿಯೊಂದಕ್ಕೂ ಇದನ್ನು ಬಳಸಿಕೊಳ್ಳುತ್ತಾರೆ. ಪ್ರಸ್ತುತದಲ್ಲೂ ರಾಮನ ದೋಣಿಯನ್ನು ಪವಿತ್ರ ತೀರ್ಥ ಎಂದೇ ಅಲ್ಲಿನ ಜನರು ನಂಬಿಕೊಂಡಿರುವ ವಿಶೇಷವಾಗಿದೆ. ಅಲ್ಲಿನ ಜನರ ಕೃಷಿ ಬೆಳೆಗಳು ಚೆನ್ನಾಗಿ ಬರಲು, ಪುತ್ರ ಸಂತಾನವನ್ನು ಬೇಡುವವರು, ಯಾವುದೇ ರೋಗಗಳಿಗೆ ತುತ್ತಾದವರಿಗೆ ಗುಣಪಡಿಸಲು, ಯಾವುದೇ ಪೀಡೆ, ಪಿಶಾಚಿಗಳು ಮನೆಯೊಳಗೆ ಸುಳಿಯದಂತಿರಲು ಪ್ರತಿಯೊಂದಕ್ಕೂ ಈ ದೋಣಿಯು ಪವಿತ್ರವಾಗಿರುವುದು ಹಾಗೂ ತುಂಬಾ ಅಗತ್ಯವಾಗಿರುವುದು ಗಮನಾರ್ಹವಾಗಿದೆ.

**ಸಭಾಂಗಣ ಕಟ್ಟಡ:** ಕುಮ್ಮಟದುರ್ಗದ ಅರಸರು ಅಂತ್ಯವಾದಾಗ ಮುಸ್ಲಿಂರ ಅಧೀನದಲ್ಲಿ ಇದು ನಿರ್ಮಾಣವಾಗಿರಬೇಕು. ಏಕೆಂದರೆ ಸಭಾಂಗಣದ ನಾಲ್ಕು ಕಡೆಗಳಲ್ಲಿ ವೃತ್ತಾಕಾರದ ಬುರುಜುಗಳಿದ್ದು, ಇಸ್ಲಾಮಿಕ್ ಶೈಲಿಯಲ್ಲಿರುವಂತೆ ಕೆಲವು ಅವಶೇಷಗಳು ಕಂಡುಬಂದಿವೆ. ಇದು ಈಗ ಬಿದ್ದುಹೋಗಿರುವುದರಿಂದ ಉಳಿದಿರುವ ಕೆಲವು ಅವಶೇಷಗಳನ್ನು ಮಾತ್ರ ಕಾಣಬಹುದಾಗಿದೆ.

**ಅರಮನೆ:** ಕುಮಾರರಾಮನ ಗುಡ್ಡದ ದಕ್ಷಿಣ ದಿಕ್ಕಿಗೆ ಈ ಕಟ್ಟಡದ ಅವಶೇಷಗಳು ಕಂಡುಬಂದಿದ್ದು, ಪೂರ್ವ ದಿಕ್ಕಿಗೆ ಇದರ ಪ್ರವೇಶದ್ವಾರವಿದ್ದು, ಈ ಭಾಗದಲ್ಲಿ ಸದ್ಯಕ್ಕೆ ಸ್ಥಳೀಯರು, ಬೇಸಾಯ ಮಾಡುತ್ತಿರುವುದು ಕಂಡುಬಂದಿದೆ. ಇಲ್ಲಿ ಸುಮಾರು ಎರಡು ಅರಮನೆಗಳು ಇದ್ದಿರಬಹುದು ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

**ಆನೆಲಾಯ:** ಕುಮ್ಮಟದುರ್ಗದಲ್ಲಿ ಕಂಡುಬಂದಿದ್ದು, ಅಲ್ಲಿನ ಸ್ಥಳೀಯರು 'ಆನೆಪಾಗ' ಎಂದು ಕರೆಯುತ್ತಾರೆ. ಆನೆಗಳನ್ನು ಬಿಡಲು ಇಂತಹ ಕಟ್ಟಡಗಳನ್ನು ನಿರ್ಮಿಸಲಾಗಿದ್ದು, ರಾಮಸ್ವಾಮಿ ದೇವಾಲಯದ ಪೂರ್ವ ಮತ್ತು ದಕ್ಷಿಣ ದಿಕ್ಕಿನ ಮಧ್ಯದಲ್ಲಿ ನಿರ್ಮಾಣ ಮಾಡಲಾಗಿದೆ. ಅಂದರೆ ಕುಮ್ಮಟದುರ್ಗದ ರಾಮಸ್ವಾಮಿ ದೇವಾಲಯದ ನೈರುತ್ಯದಿಕ್ಕಿನ ಕೆಳಭಾಗದಲ್ಲಿ ದೊಡ್ಡದಾಗಿ ಆಯತಾಕಾರವಾಗಿ ನಿರ್ಮಾಣವಾಗಿದೆ. ೨.೬೦ ಮೀಟರ್ ಎತ್ತರವಿದ್ದು, ಪೀಟ್ ಇದರ ಗೋಡೆಗಳು ಒಂದು ಅಡ್ಡಸಾಲಿನಿಂದ ದೊಡ್ಡ ಕಲ್ಲುಗಳಿಂದ ಯಾವುದೇ ಲೋಹದಿಂದ ಒಂದು ಕಟ್ಟಡದಂತೆ ನಿರ್ಮಿಸಲಾಗಿದೆ. ಕೇವಲ ಒಂದು ಕಡೆ ಒರಟಾದ ಕಲ್ಲುಗಳಿಂದ ರಚನೆಯಾಗಿದೆ. ಈ ಭಾಗವನ್ನು ನಿರ್ಮಾಣದ ಒಳಭಾಗಕ್ಕೆ ಎದುರಾಗಿ ವ್ಯವಸ್ಥೆಗೊಳಿಸಲಾಗಿದೆ. ಇದು ಪಶ್ಚಿಮ ಭಾಗಕ್ಕೆ ಬಾಗಿಲನ್ನು (೧.೪೦ ಮೀಟರ್ ಅಗಲ)ವನ್ನು ಹೊಂದಿದೆ. ಅಟ್ಟಗಳಲ್ಲಿ ಅಡ್ಡ ಗೋಡೆಗಳಾಗಲಿ ಇಲ್ಲಿ ಇಲ್ಲ. ಮಾನವನ ವಾಸಸ್ಥಳ ಮನೆಗಳಾಗಲೀ ಇದ್ದಿಲ್ಲ ಎಂಬುದನ್ನು ಸೂಚಿಸುತ್ತದೆ. ಈ ದಪ್ಪನೆಯ ಗೋಡೆಗಳು ಗಟ್ಟಿಯಾದ ಕಲ್ಲುಗಳಿಂದ ಕಟ್ಟಲಾಗಿದೆ. ನಿರ್ಮಾಣದಲ್ಲಿ ಗಟ್ಟಿತನಕ್ಕೆ ಗಮನ ಹರಿಸಲಾಗಿದೆ ಎಂಬುದನ್ನು ಸೂಚಿಸುತ್ತದೆ. ಇಲ್ಲಿ ಆನೆಪಾಗವಿಲ್ಲದೆ ಆಳ್ವಿಕೆ ನಡೆಸುವುದಿಲ್ಲ ಎಂಬುದು ವಾಡಿಕೆ. ಆನೆಪಾಗದ ಬಳಿ ಇನ್ನಿತರ ನಿರ್ಮಾಣಗಳಿವೆ.

**ಸುಲ್ತಾನ್‌ಪುರ:** ಕುಮ್ಮಟದುರ್ಗದ ಪಶ್ಚಿಮ ದಿಕ್ಕಿಗಿದೆ. ನಾಲ್ಕು ಕಿ.ಮೀ. ಸಾಗಿದರೆ ಅಲ್ಲಿಯ ಸುಲ್ತಾನ್‌ಪುರ ಎಂಬ ಹಾಳುಬಿದ್ದ ಗ್ರಾಮವಿದೆ. ದೆಹಲಿಯ ಸುಲ್ತಾನರು ಕುಮ್ಮಟದುರ್ಗದ ಮೇಲೆ ಯುದ್ಧ ಮಾಡಲು ಮತ್ತು ಕುಮ್ಮಟದುರ್ಗದ ಕೋಟೆಯನ್ನು ಮುತ್ತಿಗೆ ಹಾಕಲು ಈ ಸುಲ್ತಾನ್ ಪುರದಲ್ಲಿ ಬಿಡಾರಹೂಡಿ ತನ್ನ ಸೈನ್ಯವನ್ನು ತಯಾರು ನಡೆಸುತ್ತಿದ್ದರು. ಈ ಪ್ರದೇಶಕ್ಕೆ ದೆಹಲಿ ಸುಲ್ತಾನನು ಬಂದು ವಾಸ್ತವ್ಯ ಹೂಡಿದ್ದಕ್ಕೆ ಸುಲ್ತಾನ್‌ಪುರ ಎಂದು ಕರೆಯುತ್ತಾರೆ.

**ತೆಂಬಾ:** ಗಂಗಾವತಿ ತಾಲೂಕಿನ ಮೊದಲ ಹಳ್ಳಿ (ಊರು) ಎಂದರೆ ತೆಂಬವಾಗಿದೆ. ಇದು ವಿಜಯನಗರ ಕಾಲದಿಂದ ಬಂದಂತಹುದು. ರಾಂಪುರದಿಂದ ಸುಮಾರು ಐದು-ಆರು ಕಿ.ಮೀ. ದೂರದಲ್ಲಿದೆ. ತೆಂಬಾದಿಂದ ಹಂಪಿಗೆ ಹೋಗುವ ದಾರಿಯಿದೆ. ಕುಮಾರರಾಮನ ಬೆಟ್ಟದಿಂದ ಚೆನ್ನಿಗರಾಮನು ಮೊದಲು ತೆಂಬಾದ ಬಯಲಿನಲ್ಲಿ ಬಂದು ನೆಲೆ ನಿಂತಿದ್ದನು ಎಂಬುದು ಜನರ ನಂಬಿಕೆಯಾಗಿದೆ.

**ಹೋಲಿಕೆರಾಮ:** ಹೋಲಿಕೆರಾಮ ಗಂಗಾವತಿಯಿಂದ ಸುಮಾರು ೧೫ ಕಿ.ಮೀ. ಇರುವ ಪಶ್ಚಿಮ ದಿಕ್ಕಿನೆಡೆಯಿದೆ. ಐತಿಹಾಸಿಕವಾಗಿ ಹೋಲಿಕೆರಾಮ, ಕಂಪಿಲರಾಯನಿಗೆ ೧. ಹರಿಯಾಲದೇವಿ ೨. ರತ್ನಾಜಿ ಇಬ್ಬರು ಹೆಂಡತಿಯರು ಇರುತ್ತಾರೆ. ಕುಮಾರರಾಮ ದಾಸಿಯ ಮಗನು. ಈತನ ಮಲತಾಯಿ ರತ್ನಾಜಿಯು ಕುಮಾರರಾಮನಿಗೆ ಮನಸೋತು ರತ್ನಾಜಿ ಕುಮಾರರಾಮನನ್ನು ಆಲಂಗಿಸಲು ಕರೆದಾಗ, ರಾಮನು 'ನೀನು ನನ್ನ ತಾಯಿ' ಎಂದು ತಿರಸ್ಕರಿಸುತ್ತಾನೆ. ಈ ಕಾರಣಕ್ಕಾಗಿ ಕೋಪಿಸಿಕೊಂಡ ರತ್ನಾಜಿಯು ತನ್ನ ಗಂಡನಿಗೆ ನಿಮ್ಮ ಮಗ ನನ್ನನ್ನು ಮಾನಭಂಗ

ಮಾಡಲು ಬಂದಿದ್ದನೆಂದು ಸುಳ್ಳು ಹೇಳಿದಾಗ ಕಂಪಿಲನು ತನ್ನ ಮಂತ್ರಿ ಬೈಚಪ್ಪನನ್ನು ಕರೆದು ರಾಮನ ರುಂಡವನ್ನು ಕಡಿದು ತಾ ಎಂದು ಹೇಳಿದಾಗ, ಹೋಲಿಕೆರಾಮನು ತನ್ನ ರುಂಡವನ್ನು ಕಡಿದಾಗ ತನ್ನ ಪ್ರಾಣವನ್ನು ಅರ್ಪಿಸುವನು.

**ಬೊಲ್ಲಕುದುರೆ:** ಕುಮಾರರಾಮನ ಬೆಟ್ಟದಲ್ಲಿ ಪೂರ್ವಾಭಿಮುಖವಾಗಿರುವ ಈ ಬೊಲ್ಲ ಕುದುರೆಯು ಬೆಟ್ಟದಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿದೆ. ಕತ್ತೆಯು ಗರ್ಭಿಣಿಯಾದ ನಂತರ ಆಂಧ್ರಪ್ರದೇಶದ ವಾರಂಗಲ್ಲಿನ ಪ್ರತಾಪರುದ್ರನ ಆಸ್ಥಾನದಲ್ಲಿ ಕತ್ತೆಯು ಗಂಡು ಕುದುರೆಯನ್ನು ಹೆರುತ್ತದೆ. ಅದೇ ಬೊಲ್ಲ ಕುದುರೆ. ಅಲ್ಲಿ ಆಸ್ಥಾನದಲ್ಲಿ ಎಪ್ಪತ್ತು ಸಾವಿರ ಕುದುರೆಗಳಿಗೆ ಇದು ಒಂದು ಬಲ್ಲಾಳ ಕುದುರೆಯಾಗಿ ಆತನ ಎಪ್ಪತ್ತು ರಾಯನನ್ನಾಗಲಿ ಏರಲು ಆಗುವುದಿಲ್ಲ. ಕುಮಾರರಾಮನು ಓರಂಗಲ್ಲಿಗೆ ಮುತ್ತಿಗೆ ಹಾಕಿದಾಗ ಬಲ್ಲಾಳ ಕುದುರೆಯನ್ನು ಮನ್ನಿಸಿ ಇದನ್ನು ಹತ್ತಿದರೆ ಶರಣಾಗುತ್ತೇನೆ. ಆದರೆ ಕುಮಾರರಾಮನ ಬಲ್ಲಾಳ ಕುದುರೆ ಮನ್ನಿಸಿ ಅದನ್ನು ಹತ್ತುತ್ತಾನೆ. ಆಗ ಕುದುರೆಯನ್ನೇರಿ ಕುಮ್ಮಟದುರ್ಗಕ್ಕೆ ಬರುತ್ತಾನೆ. ಕುಮಾರರಾಮ ಸತ್ತ ಬಲ್ಲಾಳ ಕುದುರೆಯು ಗುಂಡಿಗೆ ದಂಡೆಯ ಮೇಲೆ ಹೋಗಿ ಸಾವನ್ನಪ್ಪುತ್ತದೆ. ಅದಕ್ಕೆ ಬಲ್ಲ ಕುದುರೆಯು ಎಂಬ ಪ್ರತೀತಿಯಿದೆ.

**ಹಾಲುಬಾವಿ:** ಗಂಗಾವತಿಯಿಂದ ಸುಮಾರು ೧೪-೧೫ ಕಿ.ಮೀ. ದೂರದಲ್ಲಿರುವ ಕುಮಾರರಾಮನ ಕುಮ್ಮಟದ ಬಲಭಾಗಕ್ಕೆ ಬರುವುದೇ ಹಾಲುಬಾವಿ. ಈ ಹಾಲುಬಾವಿ ಕುಮ್ಮಟದ ಕೋಟೆಯ ಜನರಿಗೆ ಮುಖ್ಯವಾದ ನೀರಿನ ಆಧಾರವಾಗಿದೆ. ಈ ನೀರು ಹಾಲಿನಂತೆ ಇರುತ್ತದೆ. ಕುಮಾರರಾಮನ ಕುಮ್ಮಟ ಗ್ರಾಮದ ಜನರು, ಸೈನಿಕರು ಮತ್ತು ದನಕರುಗಳಿಗೆ ನೀರಿನ ದಾಹವನ್ನು ತೀರಿಸಿಕೊಳ್ಳಲು ಉಪಯೋಗಿಸುತ್ತಿದ್ದರು. ಇವತ್ತಿಗೂ ಬೇಸಿಗೆ ಕಾಲದಲ್ಲಿಯೂ ಹಾಲಿನಂತೆ ನೀರು ಬತ್ತದೇ ಇರುವಂತಹದ್ದು. ಅದಕ್ಕೆ ಇದನ್ನು ಹಾಲುಬಾವಿ ಎಂದು ಇಲ್ಲಿನ ಸ್ಥಳೀಯರು ಕರೆಯುತ್ತಾರೆ.

**ತೋರಣ:** ಕುಮ್ಮಟದುರ್ಗದಲ್ಲಿ ಬರುವ ಈ ತೋರಣವನ್ನು ಹುಲಿ ಬಾಗಿಲು ಎಂದು ಕರೆಯುತ್ತಾರೆ. ಇದು ಕುಮ್ಮಟದುರ್ಗದಲ್ಲಿ ಕೋಟೆಯ ಸುತ್ತ ಆವರಣದಿಂದ ಸುಂದರಿಸಲ್ಪಟ್ಟಿದೆ. ಇದರ ತೋರಣ ವ್ಯವಸ್ಥೆಗೊಳಿಸಿದ ಕಲ್ಲಿನ ಮೇಲೆ ನಿರ್ಮಿಸಲ್ಪಟ್ಟಿದೆ. ಇದು ಎರಡು ಕಂಬ ಸಾಲುಗಳನ್ನು ಮತ್ತು ಅಟ್ಟವನ್ನು ಹೊಂದಿದೆ. ಕೋಟೆಯ ಮೇಲೆ ಚೌಕಾಕಾರವಾಗಿ ರಚಿಸಲ್ಪಟ್ಟಿದೆ. ಮಧ್ಯ ಭಾಗವು ಅಷ್ಟ ಮುಖಗಳನ್ನು ಹೊಂದಿರುವಂತೆ ನಿರ್ಮಿಸಲ್ಪಟ್ಟಿದೆ. ಇದರ ಪಕ್ಕದಲ್ಲಿ ಎರಡು ಕಂಬಸಾಲುಗಳನ್ನು ನೆಟ್ಟಿರುವುದು ಕಂಡುಬರುತ್ತದೆ. ಇದನ್ನು 'ಚಿಂತಾಲಕಲ್ಲು' ಎಂದೂ ಸಹ ಕರೆಯುವುದುಂಟು.

**ದೊಂಬರ ಕೆರೆ:** ಗಂಗಾವತಿಯಿಂದ ಜಬ್ಬಲ್‌ಗುಡ್ಡದ ಸುಮಾರು ೨.೫ ಕಿ.ಮೀ. ದಕ್ಷಿಣಾಭಿಮುಖ ವಾಗಿದೆ. ಕುಮ್ಮಟದುರ್ಗದ ಕಂಪಿಲರಾಯನ ಎರಡನೆಯ ಹೆಂಡತಿ ರತ್ನಾಜಿ ದೊಂಬರವಳಾಗಿದ್ದು ಆಕೆಯ ಕುಟುಂಬವು ಈ ಕೆರೆಯ ಪಕ್ಕದಲ್ಲಿ ವಾಸವಾಗಿದ್ದರು. ಅದಕ್ಕೆ ದೊಂಬರ ಕೆರೆ, ದೊಂಬರ

ಬಿಂಚೀಕೆರೆ ಎಂಬ ವಾಡಿಕೆ. ಈ ಕೆರೆಯಲ್ಲಿ ದೊಂಬರದವರ (ಜಾತಿ), ಸಮುದಾಯವು ಮಾತ್ರ ನೀರು ಸೇವನೆ ಮಾಡಬೇಕಿರುತ್ತಿತ್ತು. ಈ ಮೂಲಕ ರತ್ನಾಜಿಯು ಅವರದೇ ಆದ ಕೆರೆಯನ್ನು ಕಟ್ಟಿಸಿಕೊಂಡಿದ್ದನು.

**ಪುರದುರ್ಗ:** ಕುಮಾರರಾಮನ ಬೆಟ್ಟದ ಮೇಲೆ ಆಯತಾಕಾರದ (೨೫೧೦೫ ಮೀ) ಪುರದುರ್ಗ ಚಿತ್ರ ಉತ್ತರ ದಕ್ಷಿಣವಾಗಿ ಹರಡಿದೆ. ಇದರ ಮೂಲೆಗಳಲ್ಲಿ ಅಟ್ಟಗಳಿವೆ. ಪೂರ್ವಕ್ಕಿರುವ ಬಾಗಿಲಿನಿಂದ ಇದನ್ನು ಪ್ರವೇಶಿಸುವುದು. ಈ ಬಾಗಿಲು ಉತ್ತಮ ಕಲ್ಲುಗಳಿಂದ ಆವರಿಸಿದ್ದು, ವಿರೂಪಗೊಂಡಿದೆ. ಪಿ.೧೨೩೨ ಈ ಬಾಗಿಲು ಭೂಮಿಯಲ್ಲಿ ಅರ್ಧ ಉಳಿದಿದ್ದು, ಉಳಿದ ಅರ್ಧ ಭಾಗ ಮೇಲೆ ಕಾಣುತ್ತದೆ. ಹಿಂದೆ ಹೇಳಿದ ಬಾಗಿಲಿನಂತೆಯೇ ಇದೆ. ಅರಮನೆಯ ಮುಂಭಾಗದಲ್ಲಿ ಕೆಲವೆಡೆ ಸುಣ್ಣದ ಕಲ್ಲಿನಿಂದ ನುಣುಪುಗೊಳಿಸಲಾಗಿದೆ. ಇಲ್ಲಿ ಚಳಿ ಕಾಯಿಸಿಕೊಳ್ಳಲು ಬೆಂಕಿ ಹಾಕಲು ಸ್ಥಳ ಬಿಟ್ಟಿದ್ದಾರೆ. ಆದ್ದರಿಂದ ಇದನ್ನು ಜನರು ಉಪಯೋಗಿಸುತ್ತಿದ್ದರು. ಕುಮ್ಮಟವನ್ನು ಆಕ್ರಮಿಸಿದ ನಂತರ ಚಳಿ ಕಾಯಿಸಲು ನಿರ್ಮಿಸಿದ ಸ್ಥಳ ಮತ್ತು ನುಣುಪುಗೊಳಿಸುವಿಕೆ ಇವೆಲ್ಲವನ್ನು ನಿರ್ಮಿಸಿದ್ದು ಮುಸ್ಲಿಂಮರೇ ಎಂದು ಕಂಡುಬರುತ್ತದೆ.

**ಕುದುರೆ ಕಲ್ಲುಗಳು:** ಕಂಪಿಲರಾಯನೇ ಈ ಕುದುರೆಕಲ್ಲಿನ ಕಲ್ಪನೆಯನ್ನು ಪರಿಚಯಿಸಿದ ಮೊದಲ ವ್ಯಕ್ತಿಯಾಗಿದ್ದಾನೆ. ಅಬ್ದುಲ್ ರಜಾಕ್ ವಿಜಯನಗರಕ್ಕೆ ಭೇಟಿ ನೀಡಿದಾಗ ಕುದುರೆಕಲ್ಲಿನ ಬಗ್ಗೆ ಹೇಳಿದ್ದು, ಇವುಗಳನ್ನು ಶತ್ರುಗಳ ಕುದುರೆಗಳ ಚಲನೆಯನ್ನು ತಡೆಯಲು ನಿರ್ಮಿಸುತ್ತಿದ್ದರೆಂದು ತಿಳಿದುಬಂದಿದೆ. ಕುಮ್ಮಟದುರ್ಗದಲ್ಲಿ ಸುಮಾರು ೪ ಕುದುರೆ ಕಲ್ಲುಗಳು ಕಂಡುಬಂದಿದ್ದು, ಇನ್ನೂ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ.

ಇವು ಕುಮಾರರಾಮನ ಬೆಟ್ಟದ ಪಶ್ಚಿಮಕ್ಕೆ ಮತ್ತು ದಕ್ಷಿಣಕ್ಕೆ ಎರಡು ಗುಡ್ಡದ ಮಧ್ಯದಲ್ಲಿದೆ. ಸಾಲುಸಾಲಾಗಿ ಕುದುರೆಯ ಕಲ್ಲುಗಳನ್ನು ಹಾಕಿ ಕುಮ್ಮಟದುರ್ಗಕ್ಕೆ ಬರುವ ಕುದುರೆಯ ಮತ್ತು ಸೈನಿಕರು ಕುದುರೆಯ ಕಲ್ಲುಗಳಿಗೆ ಅಲ್ಲಿ ನಿಲ್ಲುವ ಒಂದು ತಾಣವಾಗಿತ್ತು. ಕುಮ್ಮಟದುರ್ಗದ ಸೈನಿಕರು ಎರಡು ಗುಡ್ಡದ ಸೈನಿಕರನ್ನು ಕುದುರೆಯ ಕಲ್ಲಿನಿಂದ ಕೊಲ್ಲುತ್ತಿದ್ದು (ಪ್ರಾಣ ತೆಗೆಯುತ್ತಿದ್ದರು) ಕುದುರೆಕಲ್ಲು ಕುಮ್ಮಟದುರ್ಗಕ್ಕೆ ಸುರಕ್ಷತೆ ಮತ್ತು ರಕ್ಷಣೆಗೆ ಕುಮ್ಮಟದುರ್ಗದ ಸುತ್ತಲೂ ಕುದುರೆಯ ಕಲ್ಲುಗಳನ್ನು ನೆಟ್ಟಿರುತ್ತಾರೆ.

**ಕುಂತಿಳಿಯುವ ಬಂಡೆ:** ಕುಮಾರರಾಮನ ಬೆಟ್ಟದ ಹತ್ತಿರ ಜಬ್ಬಲ್‌ಗುಡ್ಡದ ಪಶ್ಚಿಮ ದಿಕ್ಕಿಗೆ ಇರುವ ಎರಡು ಕಿ.ಮೀ. ದೂರದಲ್ಲಿ ಇದೆ. ವಿಶೇಷತೆ ಆ ಬಂಡೆಯಿಂದ ಕೆಳಗಡೆ ಇಳಿಯುವುದಕ್ಕೆ ಒಂದೇ ಮಾರ್ಗ ಅದೇ ಕುಂತು ಇಳಿಯುವ ಬಂಡೆಯ ಮೇಲೆ ಕುಂತು ಇಳಿಯುವಷ್ಟು ಸ್ಥಳವನ್ನು ಆ ಬಂಡೆಯ ಮೇಲೆ ಹೊಂದಿಕೊಂಡಿದೆ. ಕುಂತು ಇಳಿಯುವ ಕ್ರಮಕ್ಕೆ ಕುಂತು ಇಳಿಯುವ ಬಂಡೆ ಎಂದು ಕರೆಯುತ್ತಾರೆ. ಬಹುಶಃ ಇದನ್ನು ಶತ್ರುಗಳಿಂದ ತಪ್ಪಿಸಿಕೊಳ್ಳಲು ಇಂತಹ ಮಾರ್ಗವನ್ನು ರೂಪಸಿರಬಹುದೆಂದು ಅನಿಸುತ್ತದೆ.

**ನೂಲಿ ಹನುಮಪ್ಪನ ಬಂಡೆ:** ಕುಮ್ಮಟದುರ್ಗದಿಂದ ಒಂದು ಕಿ.ಮೀ. ದೂರದಲ್ಲಿದೆ. ಈ ಬಂಡೆಯು ಜಬ್ಬಲ್‌ಗುಡ್ಡದಿಂದ ದಕ್ಷಿಣಾಭಿಮುಖವಾಗಿದೆ. ವಿಶೇಷತೆಯೆಂದರೆ, ಹನುಮಂತ ದೇವರು ಗುಂಪಿಗೆ ಒಡೆದು ಮೂಡಿರುವುದು ಕಲಾಕೃತಿಯಿದೆ. ಅದರ ದೇವಸ್ಥಾನದ ಮುಂಭಾಗದ ನೀರಿನ ಹೊಂಡವಿದೆ.

**ಗುಂಡುಕಲ್ಲುಗಳು**

ಗುಂಡುಕಲ್ಲುಗಳು ಎಂಬ ಸ್ಮಾರಕಗಳು ಹೊಸ ಬಗೆಯದ್ದಾಗಿವೆ. ಆದರೆ ಕುಮಾರರಾಮ ಪರಿಚಯ ಇರುವ ಪ್ರದೇಶಗಳಿಗೆ ಇವು ದೈವಸಮಾನಕ್ಕೆ ಹೋಲುತ್ತವೆ. ಈ ಗುಂಡುಕಲ್ಲುಗಳನ್ನು ಸ್ಮಾರಕಗಳ ಗುಂಪಿಗೆ ಸೇರಿಸಬೇಕಾಗುತ್ತದೆ. ಕಾರಣ ಕುಮಾರರಾಮ ಸತ್ತ ನಂತರ ರುಂಡಗಳು ಗುಂಡುಕಲ್ಲಾಗಿ/ಲಿಂಗಾಕೃತಿಯಾಗಿ ಪರಿವರ್ತನೆಯಾದವು ಎಂಬ ನಂಬಿಕೆಗಳು ಬಲವಾಗಿರುವುದರಿಂದ ಕರ್ನಾಟಕದಲ್ಲಿ ಕುಮಾರರಾಮನ ಪ್ರಭಾವದಲ್ಲೆಲ್ಲಾ ಗುಂಡುಕಲ್ಲುಗಳನ್ನು ಕುಮಾರರಾಮನ ರುಂಡಗಳಾಗಿ ಪೂಜಿಸುತ್ತಾರೆ.

ಕುಮ್ಮಟದರಸರು ಮಧ್ಯಕಾಲೀನ ಚರಿತ್ರೆಯಲ್ಲಿ ತಮ್ಮ ತಮ್ಮ ವ್ಯಾಪ್ತಿಯ ಪ್ರದೇಶವನ್ನು ಪರಿಣಾಮಕಾರಿಯಾಗಿಯೇ ಆಳಿದರು.[೩೬] ಈ ಕಾಲಘಟ್ಟದಲ್ಲಿ ಕರ್ನಾಟಕದ ಸಮಾಜವು ಭಾರೀ ಸ್ಥಿತ್ಯಂತರವನ್ನು ಹೊಂದಬೇಕಾಯಿತು. ಕುಮ್ಮಟದುರ್ಗ ಅತ್ಯಂತ ಚಿಕ್ಕ ರಾಜ್ಯವಾಗಿದ್ದರೂ, ವೈರಿಗಳನ್ನು ಸದೆ ಬಡಿಯುವಲ್ಲಿ ದೊಡ್ಡ ತಂತ್ರಗಳನ್ನೇ ಅಳವಡಿಸಿಕೊಂಡಿದ್ದರು. ಅಂದರೆ ಕುಮ್ಮಟದರಸರ ಆಚಾರ–ವಿಚಾರ, ನಡೆ–ನುಡಿಗಳೇ ಇವರಿಗೆ ಕಳಸಪ್ರಾಯದಂತಿದ್ದವು. ಹೀಗಾಗಿ ಕುಮ್ಮಟದರಸರು ಸಾಂಸ್ಕೃತಿಕ ಚರಿತ್ರೆಯಲ್ಲಿ ಬೆರೆತುಹೋಗಿದ್ದಾರೆ ಎಂದರೆ ತಪ್ಪಾಗಲಾರದು.[೩೭]

ಕುಮಾರರಾಮನು ಚರಿತ್ರಾತ್ಮಕ ವ್ಯಕ್ತಿಯಾದರೂ ಸಾಂಸ್ಕೃತಿಕವಾಗಿ ವಿಭಿನ್ನ ನೆಲೆಗಳಲ್ಲಿ ಗುರ್ತಿಸಿಕೊಂಡಿದ್ದಾನೆ. ಈತನ ಕುರಿತು ರಚನೆಯಾದ ಸಾಂಗತ್ಯ ಕೃತಿಗಳು ಕುಮಾರರಾಮನನ್ನು ನಾಯಕನನ್ನಾಗಿ ನೋಡುವುದರ ಜೊತೆಗೆ ಪ್ರಭುತ್ವ ಮತ್ತು ಜನಸಾಮಾನ್ಯರ ನಡುವಿನ ಅಂತರವನ್ನು ತೊಡೆದುಹಾಕುವಲ್ಲಿ ಯಶಸ್ವಿಯಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ಕುಮ್ಮಟದರಸರನ್ನು ಕುರಿತಂತೆ ಕಲೆ, ಸಾಹಿತ್ಯ, ವಾಸ್ತುಶಿಲ್ಪದ ಹೆಗ್ಗುರುತುಗಳನ್ನು ಚರ್ಚಿಸಲಾಗಿದೆ. ಈ ಪ್ರಯತ್ನವು ಜನಸಾಮಾನ್ಯರನ್ನು ಎಚ್ಚರಿಸುತ್ತದೆ. ಕುಮಾರರಾಮನು ವಿಭಿನ್ನ ಕ್ಷೇತ್ರಗಳಲ್ಲಿ ಪ್ರಭಾವ ಬೀರುತ್ತಿರುವುದರಿಂದ ಸಮಾಜದ ಉತ್ತಮ ಬೆಳವಣಿಗೆಗೆ ಕಾರಣವಾಗುತ್ತದೆ.[೩೮]

ಕುಮಾರರಾಮ ಸಾಹಿತ್ಯ ಕೃತಿಗಳಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡು, ಸಾಹಿತ್ಯವೇ ಈತನಿಂದ ಸೃಷ್ಠಿಯಾಗಿದೆ ಎನ್ನುವಷ್ಟರ ಮಟ್ಟಿಗೆ ಈತನ ಕುರಿತು ಸಾಕಷ್ಟು ಕೃತಿಗಳು ರಚನೆಯಾಗಿವೆ. ಕುಮಾರರಾಮ ಕಂಪಿಲರಾಯನನ್ನು ಕೇವಲ ಚಾರಿತ್ರಿಕ ಅರಸನನ್ನಾಗಿ ಕಾಣದೇ ಸಮಾಜಕ್ಕೆ ಉತ್ತಮ ಸಂದೇಶ ನೀಡುವ ಒಬ್ಬ ದೈವೀಪುರುಷನಾಗಿ ಕಂಡಿರುವುದು ವಿಶೇಷವಾಗಿದೆ. ದೇವಾಲಯಗಳು, ಸ್ಮಾರಕಗಳು, ವೀರಗಲ್ಲುಗಳು, ಶಿಲ್ಪಗಳಲ್ಲಿ ಕುಮಾರರಾಮ ಬೆರೆತುಹೋಗಿರುವ ಕಾರಣ ಈತನ

ಆದರ್ಶ ಗುಣಗಳು, ನಂಬಿ ಬಂದವರನ್ನು ಕಾಪಾಡುವುದು, ನುಡಿದಂತೆ ನಡೆಯುವುದು, ಪರನಾರಿ ಸೋದರತೆ, ಅನ್ಯ ಧರ್ಮೀಯರನ್ನು ಗೌರವಿಸುವುದು, ಜನಸಾಮಾನ್ಯರನ್ನು ಆಪ್ತರಂತೆ ಕಾಣುವುದು ಈ ರೀತಿಯ ಹಲವಾರು ಜನಪರ ಕಾರ್ಯಗಳು ಕುಮ್ಮಟದರಸರ ಒಡಲಲ್ಲಿದ್ದವು ಎಂದರೆ ತಪ್ಪಾಗಲಾರದು. ಹೀಗಾಗಿ ಕುಮ್ಮಟದರಸರು ಚಾರಿತ್ರಿಕ ವ್ಯಕ್ತಿಗಳಾಗಿ ಸಾಂಸ್ಕೃತಿಕ ವೀರರಾಗಿ ಪ್ರಸ್ತುತ ದಿನಗಳಲ್ಲೂ ಉತ್ಸವ ಮೂರ್ತಿಗಳಾಗಿ ಜನರಿಗೆ ಮಾನವೀಯ ಸಂದೇಶವನ್ನು ನೀಡುವ ಕಾರ್ಯ ಮಾಡುತ್ತಿದ್ದಾರೆ ಎಂದರೆ ಅದು ಉತ್ಪ್ರೇಕ್ಷೆಯಲ್ಲ.[೩೯]

### ಕೊನೆ ಟಿಪ್ಪಣಿಗಳು


೧. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೫, ಭಾಗ-೨, ಚನ್ನರಾಯಪಟ್ಟಣ, ಪು. ೧೭೯

2. Social and political life in vijayanagar empire part-I, page, 116

೩. ಪ್ರಬುದ್ಧ ಕರ್ನಾಟಕ ಸಂ(೧)ಗದಗ, ಪು. ೩೨

4. Devaraj D.V. and Patil C.S., 1987-88, p.243

5. ಎಪಿಗ್ರಾಫಿಯಾ ಕರ್ನಾಟಿಕಾ, ಶಾ.ಸಂ. ೮, ಭಾಗ-೧, ಚೆನ್ನಗಿರಿ ೨೪

6. Ephigraphia carnatic, XI, Holalkere-37

7. Mysore Archaeological Reports, 1935 No.39

೮. SII, Vol, XX No.222

9. Ephigrapia carnatica, XI, Holalkere-83.

10. Ephigrapia carnatica, XI Halakere, 106

11. Ephigrapia carnatica, VI, Krishnarajpet, 100

12. Ephigrapia carnatica, XV, Halenarsipur 83

13. Patil C.S, VPR-1987-88 page 213

14. Ephigrapia carnatica, VIII Part II Nagar 19

15. Ephigrapia carnatica, V Part II Channarayapatna Page 179

16. Annual report No. 75, 1943-44

17. Ephigraphia carnatica Vol.XI, Hiriyur 16

18. Mysore Archaeological Reports, 1923 No.121

19. South Indian Inscriptions Vol XX. 1965, 331-332

20. Ephigraphia Indica Vol. XXIII page.185

೨೧. ಪಾಟೀಲ ಸಿ.ಎಸ್., ವಿಜಯನಗರ ಅಧ್ಯಯನ ಸಂ.೩

22. Ephigraphia Indica Vol. XXIII page.185

೨೩. ಕರ್ಮವೀರ, ೧೯೪೨, ಪು. ೧೬

೨೪. ಕರ್ಮವೀರ, ೧೯೪೨, ಪು. ೨೫

25. Annual report on south Indian Ephigraphy , 1943-45, 1943-44 no.76

೨೬. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ಸಂ(೯), ಪು. ೨೦

೨೭. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೪, ಭಾಗ-೨, ಪು. ೧೨೫

೨೮. ವಾಲ್ಮೀಕಿ ಜ್ಯೋತಿ, ೧೯೮೯, ಪು. ೨೮-೨೯.

೨೯. ಕಲಬುರ್ಗಿ ಎಂ.ಎಂ., ಧಾ.ಜಿ.ಶಾ.ಸೂ. ಹಾವೇರಿ ೪೪, ಪು. ೪೩

೩೦. ಅದೇ, ಪು. ೪೩

೩೧. ಅದೇ, ಹಿರೇಕೆರೂರು. ಪು. ೨೨೧

೩೨. ದೇಸಾಯಿ ಪಿ.ಬಿ., ನಾಗರಮರಿ (ಚಾರಿತ್ರಿಕ ಕಥಾ ಸಂಕಲನ), ಪು. ೨

೩೩. ಭೋಜರಾಜ ಪಾಟೀಲ, ಇತಿಹಾಸ ದರ್ಶನ, ಸಂ. ೧೩, ಪು. ೩೨

೩೪. ರಾಮಶರ್ಮ ಎಂ.ಎಚ್., ರಣಧೀರ ರಾಮನಾಥ, ಕ್ಷೇತ್ರಯಾತ್ರೆ, ಪು. ೭೮

೩೫. ಪ್ರಜಾವಾಣಿ ದಿನಪತ್ರಿಕೆ (ಬದುಕು ಭವಿಷ್ಯ) ೧೨/೫/೧೯೮೫

೩೬. ಬಳ್ಳಾರಿ, ಚಿತ್ರದುರ್ಗ ಮತ್ತು ರಾಯಚೂರು ಜಿಲ್ಲೆಗಳ ದೇವಾಲಯ ಕೋಶಗಳನ್ನು ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ಪ್ರಕಟಿಸಿದೆ. ಕೆ.ಎಂ. ಸುರೇಶ್, ಸಿ.ಎಸ್. ವಾಸುದೇವನ್ ಮತ್ತು ಎಸ್.ವೈ.ಸೋಮಶೇಖರ್ ಅವರು ಕುಮ್ಮಟದುರ್ಗದ ನಾಯಕರ ಪ್ರಾಚ್ಯಾವಶೇಷಗಳನ್ನು ಕುರಿತು ವಿವರಿಸಿದ್ದಾರೆ.

೩೭. ಕುಮ್ಮಟದುರ್ಗದ ಕೋಟೆಯ ಗೋಡೆ, ಕೋಟೆ ಮೆಟ್ಟಿಲು, ಕುಮ್ಮಟದುರ್ಗದ ವೀರಗಲ್ಲುಗಳು, ಸ್ಮಾರಕ ಶಿಲ್ಪಗಳು, ವೀರನೊಬ್ಬನ ಸ್ಮಾರಕ ಶಿಲೆ, ಕಾಟಪ್ಪನ ಕಟ್ಟೆ, ಹೊಸಮಲೆದುರ್ಗದ ಕುಮಾರರಾಮನ ಶಾಸನ ಮತ್ತು ರಾಮಸ್ವಾಮಿ ದೇವಾಲಯ, ಕುಮ್ಮಟದುರ್ಗದ ಜೈನ ದೇವಾಲಯ, ಮಲ್ಲಿಕಾರ್ಜುನ ದೇವಾಲಯ ಮೊದಲಾದ ಸ್ಮಾರಕಗಳು ಕಂಡುಬರುತ್ತವೆ.

೩೮. ನೋಡಿ: ಮಹದೇವ.ಸಿ : ಶಾಸನಗಳಲ್ಲಿ ಕುಮ್ಮಟದುರ್ಗದ ಅರಸರು, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೧೫, ಪು. ೧ ರಿಂದ ೫೭ ರವರೆಗೆ ಗಮನಿಸಲಾಗಿದೆ. ಸು. ೨೨ಕ್ಕೂ ಹೆಚ್ಚು ಶಾಸನಗಳು ಕುಮ್ಮಟದುರ್ಗದ ಬಗ್ಗೆ ಬೆಳಕು ಚೆಲ್ಲುತ್ತವೆ. ಹಂಪಿಯ ಹೇಮಕೂಟದಲ್ಲಿ ಕಂಪಿಲರಾಯನ ಗುಡಿ ಹಾಗೂ ಶಾಸನ ಇರುವುದು ಗಮನಾರ್ಹ.

೩೯. ಶೇಷಶಾಸ್ತ್ರಿ : ಕರ್ನಾಟಕದ ವೀರಗಲ್ಲುಗಳು, ಕ.ಸಾ.ಪ. ೧೯೮೨ ಈ ಪುಸ್ತಕದಲ್ಲಿ ಕುಮಾರರಾಮನ ಬಗ್ಗೆ ಸಾಕಷ್ಟು ಪಠ್ಯ ಹಾಗೂ ಛಾಯಾಚಿತ್ರದ ವಿವರಗಳಿವೆ.



## ಅಧ್ಯಾಯ: ಎಂಟು

# ಸಮಾರೋಪ

ಕುಮಾರರಾಮ ಕರ್ನಾಟಕದ ಚರಿತ್ರೆಯಲ್ಲಿ ಕಂಡು ಬರುವ ಸುಪ್ರಸಿದ್ಧ ಐತಿಹಾಸಿಕ ವೀರ ಇವನ ಸುದ್ಗುಣಗಳು ಪ್ರಸ್ತುತದ ಇಡೀ ಸಮಾಜಕ್ಕೆ ಮಾದರಿಯಾಗಿವೆ. ಕುಮಾರರಾಮನ ಶೌರ್ಯ, ವೀರಪರಾಕ್ರಮಗಳು ಸಮಕಾಲೀನ ಅರಸರನ್ನು ನಿದ್ದೆಗೆಡಿಸಿದ್ದವು ಎಂದರೆ ತಪ್ಪಾಗಲಾರದು. ಇವನ ಧರ್ಮಾಭಿಮಾನ, ದೇಶಾಭಿಮಾನ, ಆಪತ್ಕಾಲದ ರಕ್ಷಣೆ, ಪರನಾರಿ ಸೋದರತ್ವ, ಕ್ಷಮಿಸುವಂತಹ ಗುಣಗಳು ಪ್ರಸ್ತುತ ಸಮಾಜದಲ್ಲಿ ಗೌರವದಿಂದ ಬದುಕಲು ಉತ್ತಮ ಆಧಾರಗಳಾಗಿವೆ. ಕುಮಾರರಾಮನ ವೀರತನ ಸ್ವಾಮಿ ನಿಷ್ಠೆಗಳು ಇವನನ್ನು ದೈವತ್ವಕ್ಕೆ ಕೂರಿಸಿರುವುದು ಹಾಗೂ ಸರ್ವಕಾಲಿಕ ಜನಮನ್ನಣೆಗೆ ಕೂರಿಸಿರುವುದಷ್ಟೇ ಅಲ್ಲ ಇವನ ಸಾತ್ವಿಕ ಗುಣಗಳೇ ಎಲ್ಲಾ ಕಾಲಕ್ಕೂ, ಎಲ್ಲಾ ಸಮುದಾಯಗಳಿಗೂ ಆದರ್ಶಪ್ರಾಯವಾಗಿವೆ. ಕುಮಾರರಾಮನ ಆದರ್ಶತತ್ವಗಳೇ ಇಲ್ಲದಂತಹ ಕಾಲಾವಧಿಯಲ್ಲಿ ಆದರ್ಶ ಗುಣಗಳನ್ನು ಎತ್ತಿಹಿಡಿದಿದ್ದನೆಂದರೆ ಬಹುಬೇಗ ದೈವ ಪುರುಷನಾಗಿರುವುದರಲ್ಲಿ ಸಂದೇಹವೇ ಇಲ್ಲ. ಕುಮ್ಮಟದರಸರ ಪತನದ ಕೆಲವು ವರ್ಷಗಳ ಅಂತರದಲ್ಲಿ ಕುಮಾರರಾಮ ದೈವಪುರುಷನಾಗಿದ್ದು. ವಿಜಯನಗರ ಸಾಮ್ರಾಜ್ಯದ ಅರಸ ಕೃಷ್ಣದೇವರಾಯನ ವೇಳೆಗಾಗಲೇ ಕುಮಾರರಾಮ ದೇವರಾಗಿ ಆರಾಧನೆಗೊಳಗಾಗಿದ್ದನು. ಕೃಷ್ಣದೇವರಾಯ ಕುಮಾರರಾಮನಿಗೆ ದೇವಾಲಯವನ್ನು ನಿರ್ಮಿಸಿದ್ದು, ಒಬ್ಬ ಅರಸ ಮತ್ತೊಬ್ಬ ಅರಸನ ದೇವಾಲಯವನ್ನು ಕಟ್ಟಿಸಿರುವುದು ನಿಜಕ್ಕೂ ಗಮನಾರ್ಹವಾದುದು.

ಕುಮಾರರಾಮ ಒಬ್ಬ ಬೇಡನಾಗಿ ಸರ್ವಜನಾಂಗಗಳಿಂದಲೂ ಆರಾಧಿಸಿಕೊಳ್ಳುತ್ತಿರುವ ಚಾರಿತ್ರಿಕ ವೀರ. ಕ್ರಿ.ಶ. ೧೩೨೭ರಲ್ಲಿ ಕುಮಟದುರ್ಗವು ಪತನ ಹೊಂದಿ, ತನ್ನ ಪರಾಕ್ರಮಗಳನ್ನು ಜನತೆಯ ಕಾವ್ಯಗಳ ಮೂಲಕ ಜನಪದ ಹಾಡುಗಳು ಜನಾನುರಾಗಿಯಾಗಿವೆ. ಚಿಕ್ಕ ರಾಜ್ಯವು ದೊಡ್ಡ ಸಾಮರ್ಥ್ಯದಲ್ಲಿ ಪ್ರದರ್ಶನ ಮಾಡಿದ್ದುದು ಪ್ರಸ್ತುತ ಜನರ ಬಾಯಲ್ಲಿ ಇನ್ನೂ ಜೀವಂತವಾಗಿವೆ. ಕುಮ್ಮಟದುರ್ಗವನ್ನು ತಡೆರಾಜ್ಯ ಎಂದು ಮೊದಲಬಾರಿಗೆ ನೀಲಕಂಠಶಾಸ್ತ್ರಿಗಳು ಬಳಸಿದರು. 'ಎರಡು ಪ್ರಬಲ ರಾಜ್ಯಗಳ ನಡುವೆ ಇದ್ದು, ಅವುಗಳ ಘರ್ಷಣೆ ತಡೆಯುವ ರಾಜ್ಯವೇ ತಡೆರಾಜ್ಯ' ಎಂದರ್ಥ ಬರುತ್ತದೆ. ಅಂದರೆ ದೇವಗಿರಿ ಸೇವುಣರು ಹಾಗೂ ದ್ವಾರಸಮುದ್ರದ ಹೊಯ್ಸಳರು ಎರಡು ಪ್ರಬಲ ರಾಜಮನೆತನಗಳಾಗಿದ್ದು, ಅವುಗಳ ಘರ್ಷಣೆ ತಡೆಯುವ ಕಾರ್ಯವು

ಕುಮ್ಮಟದರಸರದಾಗಿತ್ತು. ಆದರೆ ಈ ಎರಡೂ ರಾಜ್ಯಗಳ ಘರ್ಷಣೆಯಲ್ಲಿ ಕುಮ್ಮಟದರಸರು ತಮ್ಮ ರಾಜ್ಯವನ್ನು ವಿಸ್ತಾರಮಾಡಿಕೊಳ್ಳಲು ಮುಂದಾದರು.

ಪ್ರಸ್ತುತ ಅಧ್ಯಯನದಲ್ಲಿ ಕುಮ್ಮಟದುರ್ಗದ ಪೂರ್ವೇತಿಹಾಸದಿಂದ ಮೂಲವಂಶಾವಳಿ, ರಾಜಧಾನಿಗಳು, ಸಾಮಾಜಿಕ, ಆರ್ಥಿಕ, ಧಾರ್ಮಿಕತೆ, ಸಾಂಸ್ಕೃತಿಕ ಕಲಾ ಚಟುವಟಿಕೆಗಳನ್ನು ಒಳಗೊಂಡಂತೆ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನದ ಮೂಲಕ ಕುಮ್ಮಟದುರ್ಗದ ಅರಸರು ಮೂಲತಃ ಬೇಡ ಕುಲಕ್ಕೆ ಸೇರಿದವರೆಂದು, ಕುಮಾರರಾಮನು ವಿಭಿನ್ನ ನೆಲೆಗಳ ಮೂಲಕ ಜನಾನುರಾಗಿಯಾಗಿ, ಆರಾಧ್ಯದೈವವಾಗಿದ್ದಾನೆ. ಚಾರಿತ್ರಿಕವಾಗಿ ಕುಮ್ಮಟದರಸರ ರಾಜಧಾನಿಗಳು, ಆರ್ಥಿಕತೆಯಲ್ಲಿ ಹೊಸ ಅಂಶಗಳನ್ನು ಪ್ರಸ್ತಾಪಿಸಲಾಗಿದೆ.

**ಅಧ್ಯಯನದ ಫಲಿತಗಳು**

ಪ್ರಸ್ತುತ ಅಧ್ಯಯನದಲ್ಲಿ ಕುಮ್ಮಟದುರ್ಗದ ಪೂರ್ವದ ಸ್ಥಿತಿಗತಿಗಳು ರಾಜಕೀಯವಾಗಿ ಪೈಪೋಟಿಯಿಂದ ಕೂಡಿದ್ದವು. ಕುಮ್ಮಟದುರ್ಗವು ಕುಮ್ಮಟದರಸರಿಗೂ ಪೂರ್ವದ ಅರಸುಮನೆತನಗಳ ಅವಧಿಯಲ್ಲಿ ನಿರ್ಮಾಣವಾಗಿತ್ತು. ಅಂದರೆ ಚೋಳರ ಕಾಲದಲ್ಲಿ ಈ ದುರ್ಗಕ್ಕಾಗಿ ಯುದ್ಧಗಳು ನಡೆದಿದ್ದವು. ಈ ಪ್ರದೇಶಕ್ಕಾಗಿ ಆಗಾಗ ಚೋಳರು ಮತ್ತು ಕಲ್ಯಾಣಿ ಚಾಲುಕ್ಯರ ನಡುವೆ ಘರ್ಷಣೆಗಳು ನಡೆಯುತ್ತಿದ್ದವು. ಆದರೆ ಕುಮ್ಮಟದರಸರೊಂದಿಗೆ ಯಾವುದೇ ಸಂಬಂಧವಿಲ್ಲದಿರುವುದು ಮಾತ್ರ ಗಮನಾರ್ಹವಾಗಿದೆ. ಹೊಯ್ಸಳರು, ಸೇವುಣರು ಮತ್ತು ಕುಮ್ಮಟದರಸರ ನಡುವೆ ಇರುವ ಸಂಬಂಧಗಳು, ಕಲಹಗಳನ್ನು ಕುರಿತು ಈಗಾಗಲೇ ಹಲವು ಶಾಸನಗಳು ಗುರುತಿಸಿವೆ. ಪ್ರಸ್ತುತ ಅಧ್ಯಯನದಲ್ಲೂ ಬಳಸಿಕೊಳ್ಳಲಾಗಿದೆ. ಆದರೆ ಶಾಸನಗಳನ್ನೇ ಆಧಾರವಾಗಿಟ್ಟುಕೊಂಡು ಮುಮ್ಮಡಿಸಿಂಗ ಹಾಗೂ ಕಂಪಿಲರಾಯನ ದಾಳಿಗಳು ಸಮಕಾಲೀನ ರಾಜ್ಯಗಳಾದ ಹೊಯ್ಸಳ, ಸೇವುಣರೊಂದಿಗೆ ಯಾವ ಕಾರಣಗಳಿಗಾಗಿ ನಡೆದಿವೆ ಎಂದು ಹೇಳುವ ಪ್ರಯತ್ನ ಮಾಡಲಾಗಿದೆ. ಸೇವುಣರ ವಿರುದ್ಧ ನಡೆಸಿದ ದಾಳಿಗಳ ಆಧಾರದ ಮೇಲೆ ಮುಮ್ಮಡಿಸಿಂಗನು ಇವರಿಗೆ ಬದ್ಧ ವೈರಿಯಾಗಿದ್ದನೆಂದು, ಕಂಪಿಲರಾಯನು ಸೇವುಣರಿಗೆ ವಿಧೇಯನಾಗಿರುವ ಸಂಗತಿಗಳನ್ನು ಚರ್ಚಿಸಲಾಗಿದೆ. ಹಾಗೆಯೇ ಹೊಯ್ಸಳರೊಂದಿಗಿನ ಮುಮ್ಮಡಿಸಿಂಗನ ಯುದ್ಧಗಳು ಕಂಪಿಲನ ಕಾಲಕ್ಕೆ ವರ್ಗಾವಣೆಯಾದವೆಂದು ಹೇಳಬಹುದು. ಮುಮ್ಮಡಿಸಿಂಗನು ತನ್ನ ತಂದೆ ದಾಳಿ ಮಾಡಿದ ಪ್ರದೇಶಗಳು ಹಾಗೂ ಸುತ್ತಮುತ್ತಲಿನ ಪ್ರದೇಶಗಳ ಮೇಲೆಯೇ ದಾಳಿ ಮಾಡಿದುದು ಗಮನಾರ್ಹವಾದ ಸಂಗತಿ. ಹೀಗಾಗಿ ಮುಮ್ಮಡಿಸಿಂಗನು ಹೊಯ್ಸಳರೊಂದಿಗೆ ಹೆಚ್ಚು ಘರ್ಷಣೆಗಳನ್ನು ಕಟ್ಟಿಕೊಳ್ಳದೆ ಸೇವುಣರಿಗೆ ಬದ್ಧ ವೈರಿಯಾಗಿಯೇ ಬಿಂಬಿತನಾಗುತ್ತಾನೆ. ಹಾಗೆಯೇ ಕಂಪಿಲರಾಯನನ್ನು 'ಹೊಯ್ಸಳರ ಬಂಧು' ಎಂಬ ಹೇಳಿಕೆಯ ಕುರಿತು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಿದ್ದು, ಕಂಪಿಲನ ಅತೀ ಹೆಚ್ಚು ಯುದ್ಧಗಳು ಹೊಯ್ಸಳರೊಂದಿಗೆ ನಡೆದಿರುವುದು ಗಮನಿಸಬೇಕಾದ ಅಂಶವಾಗಿದೆ. ಹೀಗಾಗಿ ಕಂಪಿಲರಾಯನ ಹಾಗೂ ಹೊಯ್ಸಳೊಂದಿಗಿನ ಸಂಬಂಧ ಹದಗೆಟ್ಟಿರುವುದರ ಜೊತೆಗೆ ಹೊಯ್ಸಳರ ಬಂಧುವಲ್ಲ ಎಂಬುದು ವಿಧಿತವಾಗುತ್ತದೆ.

ಕುಮ್ಮಟದರಸರ ರಾಜಧಾನಿಗಳನ್ನು ಕುರಿತು ಹಲವು ಚರ್ಚೆಗಳಾಗಿವೆ. ವಿದ್ವಾಂಸರ ಅಭಿಪ್ರಾಯಗಳ ಆಧಾರದ ಮೇಲೆ ಕುಮ್ಮಟದುರ್ಗ, ಹೊಸಮಲೆದುರ್ಗ ಎರಡೂ ಪ್ರದೇಶಗಳನ್ನು ರಾಜಧಾನಿಗಳೆಂದು ಒಪ್ಪಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹನೆಯದೆರೆ, ದೊರವದಿ ಹಾಗೂ ಜಟ್ಟಿಂಗ ರಾಮೇಶ್ವರ ಪ್ರದೇಶಗಳು ರಾಜಧಾನಿಗಳಾಗಿದ್ದವೋ ಅಥವಾ ಇಲ್ಲವೋ ಎಂಬ ಚರ್ಚೆಗಳನ್ನು ನಡೆಸಿದ್ದು, ಹನೆಯದೆರೆ ಮತ್ತು ಜಟ್ಟಿಂಗ ರಾಮೇಶ್ವರ ರಾಜಧಾನಿಯಾಗಿರಲಿಲ್ಲ ಎಂಬುದನ್ನು ಖಚಿತವಾಗಿ ಹೇಳಬಹುದು. ದೊರವದಿಯು ಕುಮ್ಮಟದರಸರ ಆಡಳಿತ ಕೇಂದ್ರವಾಗಿತ್ತು ಎಂಬ ಆರ್.ಎಸ್. ಪಂಚಮುಖಿಯವರ ಅಭಿಪ್ರಾಯವನ್ನು ಓರೆಗೆ ಹಚ್ಚುವ ಮೂಲಕ ದೊರವದಿಯು ಕುಮ್ಮಟದರಸರ ರಾಜಧಾನಿ ಆಗಿತ್ತು ಎಂಬ ಅಭಿಪ್ರಾಯವು ಪ್ರಸ್ತುತ ಅಧ್ಯಯನದ್ದಾಗಿದೆ. ರಾಜಧಾನಿಗೂ ಆಡಳಿತಕೇಂದ್ರಕ್ಕೂ ಹೆಚ್ಚೇನು ವ್ಯತ್ಯಾಸಗಳಿಲ್ಲ. ಇಲ್ಲಿ ರಾಜಧಾನಿಯಾಗಲೂ ಹಾಗೂ ಆಡಳಿತ ಕೇಂದ್ರವಾಗಲೂ ಅರ್ಹತೆಯಿರುವ ಪ್ರದೇಶ ದೊರವದಿ ಆಗಿತ್ತು. ಇದು ಗುಡ್ಡಗಳನ್ನು ಹೊಂದಿರುವ ಪ್ರದೇಶವಾಗಿದ್ದು, ಶತ್ರುಗಳನ್ನು ತಡೆಯಲು ಉತ್ತಮ ಸ್ಥಳವಾಗಿದ್ದರಿಂದ ದೊರವದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದು ಹೇಳಬಹುದು. ಮುಮ್ಮಡಿಸಿಂಗನು ಆರಂಭದಲ್ಲಿ ಹನೆಯದೆರೆಯಿಂದ ವಲಸೆ ಬರುವಾಗ ಅಲ್ಲಿ ದೊರೆತಿದ್ದ ದ್ರವ್ಯ ಸಂಪತ್ತುಗಳೊಡನೆ ಬಂದು ದೊರವದಿಯು ಬಹುಶಃ ರಕ್ಷಣೆಗೆ ಸೂಕ್ತ ಪ್ರದೇಶವಾಗಿರುವುದರಿಂದಲೇ ನೆಲೆಸಿದ್ದಿರಬೇಕು. ಹೀಗಾಗಿ ದೊರವದಿಯು ಕುಮ್ಮಟದರಸರ ರಾಜಧಾನಿಯಾಗಿತ್ತು ಎಂಬ ನಿಲುವು ಪ್ರಸ್ತುತ ಅಧ್ಯಯನಕ್ಕೆ ಸೇರಿದೆ. ದೊರವದಿಯನ್ನು ಮುಮ್ಮಡಿಸಿಂಗನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡಂತಹ ವೇಳೆಯಲ್ಲಿ ಹಲವು ಬಾರಿ ಶತ್ರುಗಳು ಈ ಪ್ರದೇಶದ ಮೇಲೆ ದಾಳಿ ಮಾಡಿರುವುದು ತಿಳಿದುಬರುತ್ತದೆ. ಬಹುಶಃ ಈ ಪ್ರದೇಶವು ಭೌಗೋಳಿಕ ಸಂಪತ್ತನ್ನು ಹೊಂದಿದ್ದಿರಬಹುದು. ಹೀಗಾಗಿ ವಿವಿಧ ಆಯಾಮಗಳಲ್ಲಿ ಚರ್ಚಿಸಿದ ನಂತರ ದೊರವದಿಯು ಕುಮ್ಮಟರಸರ ರಾಜಧಾನಿ ಸ್ಥಾನಕ್ಕೆ ಅರ್ಹವಾಗಿತ್ತು ಎಂಬುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ. ದೊರವದಿಯಿಂದ ಮುಮ್ಮಡಿಸಿಂಗನ ಮರಣಾನಂತರ ಆತನ ಪರಿವಾರವು ಜಟ್ಟಿಂಗ ರಾಮೇಶ್ವರದಲ್ಲಿ ಸ್ವಲ್ಪಕಾಲ ನೆಲೆಸಿ ನಂತರ ಹೊಸಮಲೆದುರ್ಗವನ್ನು ಕಟ್ಟಿ ನೆಲೆಯೂರಿದರು. ಜಟ್ಟಿಂಗ ರಾಮೇಶ್ವರ ದೇವಾಲಯದ ಪ್ರಾಚೀನತೆಯು ಬೆಟ್ಟಗಳಿಂದ ಕೂಡಿದ್ದು, ಇಟ್ಟಿಗೆಯ ಕಟ್ಟಡಗಳಿರುವುದು ಕಂಡುಬರುತ್ತದೆ. ಇಲ್ಲಿ ಕೆಲವು ಇಟ್ಟಿಗೆಯ ಅವಶೇಷಗಳೂ ಕಂಡುಬರುತ್ತವೆ. ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅಶೋಕನ ಬಂಡೆಗಲ್ಲು ಶಾಸನ ಮತ್ತು ಚೈತ್ಯಗಳು ಕಂಡುಬಂದಿರುವುದರಿಂದ ಬೌದ್ಧ ಧರ್ಮದ ಪ್ರಭಾವವಿತ್ತೆಂದು ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ಜಟ್ಟಿಂಗ ರಾಮೇಶ್ವರ ಬೆಟ್ಟದ ಮೇಲೂ ಅಶೋಕನ ಬಂಡೆಗಲ್ಲು ಶಾಸನವಿದೆ. ಈ ಅಂಶಗಳನ್ನು ಗಮನಿಸಿದರೆ ಮೌರ್ಯರ ನಂತರ ಕಾಲಕ್ರಮೇಣ ಬೌದ್ಧಧರ್ಮ ಅವನತಿ ಹೊಂದಿ, ಶೈವಕ್ಷೇತ್ರವಾಗಿ ಮುಂದುವರೆದಿರಬೇಕು. ರಾಮೇಶ್ವರ, ಕಂಪಿಲೇಶ್ವರ, ಗುಂಡಬ್ರಹ್ಮಯ್ಯ ಈ ಎಲ್ಲಾ ದೇವರುಗಳು ಕುಮ್ಮಟದರಸರಿಂದ ಪೂಜಿತಗೊಂಡಿವೆ. ಶೈವ ಪರಿಸರಕ್ಕೆ ಕುಮ್ಮಟದರಸರು ಮಹತ್ವ ನೀಡಿದ್ದರೆಂಬುದು ಪ್ರಸ್ತುತ ಅಧ್ಯಯನದ ವಾದವಾಗಿದೆ. ಕುಮ್ಮಟದುರ್ಗ ರಾಜಧಾನಿಯಾಗುವ ಮೊದಲು ಹೊಸಮಲೆದುರ್ಗ

ರಾಜಧಾನಿಯಾಗಿತ್ತು. ಇದರ ಮೊದಲ ಹೆಸರೆ ಹೊಸಮಲೆದುರ್ಗ ನಂತರ ರಾಮನಿಂದ 'ರಾಮಘಡ'/ 'ರಾಮನಮಲೆ' ಎಂಬ ಹೆಸರು ಬಂದಿರುವುದು ನಂಬಲರ್ಹವಾದುದು.

ಹೊಯ್ಸಳ – ಕುಮ್ಮಟದುರ್ಗದ ಕಾಲದ ಕೆಲವು ಸ್ಥಳಗಳು ಮರುನಾಮಕರಣಗೊಳ್ಳುತ್ತವೆ.

* ಬಾಣಸುರನ ಪಟ್ಟಣ – ಗುಡೇಕೋಟೆ (ಎರಡನೇ ಬಲ್ಲಾಳನ ಕಾಲದಲ್ಲಿ)

* ಓರುಗಲ್ಲು ಪಟ್ಟಣ – ಇಂದಿನ ಚಳ್ಳಕೆರೆ ನಗರದ ಕಾಟಪ್ಪನಹಟ್ಟಿ, ಇದು ಕುಮ್ಮಟದುರ್ಗದ ಕುಮಾರರಾಮನ ಸಂಬಂಧಿ ಕಾಟಣ್ಣನಿಂದ ಕಾಟಪ್ಪನಹಟ್ಟಿ ಎಂದು ಹೆಸರು ಬಂದಿದ್ದು ಓರುಗಲ್ಲು ಎಂಬ ಹೆಸರಿನಿಂದ ಮರುನಾಮಕರಣಗೊಂಡಿದೆ.

ಕುಮ್ಮಟದರಸರು ಮೂಲತಃ ಬೇಡರು (ನಾಯಕರು) ಆಗಿದ್ದರು ಎಂಬ ನಿಲುವನ್ನು ಒಪ್ಪಿಕೊಳ್ಳಲಾಗಿದೆ. ಬೇಡ ಎನ್ನಲು ಪೂರಕ ಮಾಹಿತಿಗಳು ಸಾಕಷ್ಟಿವೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಶಾಸನಗಳನ್ನು ತರ್ಕಿಸುವ ಮೂಲಕ ತಮ್ಮದೇ ನಿಲುವಿನಲ್ಲಿ ಒಪ್ಪಿಕೊಳ್ಳಲಾಗಿದೆ. ಮುಮ್ಮಡಿ ಸಿಂಗೆಯನನ್ನು 'ಮರುಳೆನವರು', 'ಪುವ್ವಲ ಕುಲ'ಕ್ಕೆ ಸೇರಿದವರೆಂದು ಹಾಗೂ ಈ ಕುಲಗಳು ಬೇಡಜನಾಂಗದಲ್ಲಿ ಮಾತ್ರ ಪ್ರಸ್ತುತದಲ್ಲೂ ಪ್ರಚಲಿತದಲ್ಲಿವೆ. ಜಾಗೀರದಾರರು ಕಂಪಿಲನನ್ನು 'ಹೊಯ್ಸಳ ಬಂಧು' ದಾಯಾದಿಗಳೂ ಎಂದೂ ಅರ್ಥೈಸುವ ಮೂಲಕ ಮತ್ತೊಂದು ರೀತಿಯಲ್ಲಿ ಬೇಡರಲ್ಲ ಎಂಬ ನಿಲುವಿಗೆ ಬದ್ಧರಾಗಿರಬಹುದು. ಆದರೆ ಪ್ರಸ್ತುತ ಅಧ್ಯಯನದಲ್ಲಿ 'ಯಿಬ್ಬರು ದಾಯದ ದಂಡಿನೊಳಗೆ' ಎಂಬ ವಾಕ್ಯದಲ್ಲಿ 'ದಾಯದ' ಎಂದರೆ 'ದಾಯಾದಿ' ಎಂದು ತಿರುಚಿರುವ ಪ್ರಯತ್ನವೂ ನಡೆದಿರಬಹುದು. 'ದಾಯ' ಎಂಬ ಪದದ ಅರ್ಥ 'ಕುತಂತ್ರ' 'ಸಮಯಾವಕಾಶ' ಹೀಗೆ ನಾನಾರ್ಥಗಳಿವೆ. ಅಂದರೆ ಇಬ್ಬರೂ ಕುತಂತ್ರಗಳನ್ನು ಹೆಣೆಯುತ್ತಿರುವ ಸೈನ್ಯ ಎಂಬ ಅರ್ಥವನ್ನು ಕೊಡುತ್ತದೆ. ಹೀಗಾಗಿ ಕಂಪಿಲನು ಬೇಡಕುಲಕ್ಕೆ ಸೇರಿರುವವನೇ ಹೊರತು ಹೊಯ್ಸಳರ ಬಂಧುವಾಗಿರಲಿಲ್ಲ ಎಂಬುದು ಒಪ್ಪಿಕೊಳ್ಳಬೇಕಾದ ಸಂಗತಿ. ಕಂಪಿಲನ ಹೆಚ್ಚು ಯುದ್ಧಗಳು ಹೊಯ್ಸಳರೊಂದಿಗೆ ನಡೆದಿದ್ದವು. ಇದೊಂದು ಆಧಾರ ಕಂಪಿಲನು ಹೊಯ್ಸಳರ ಬಂಧುವಲ್ಲ ಎನ್ನುವುದಕ್ಕೆ ಪುಷ್ಠಿ ನೀಡುತ್ತದೆ.

* ರಾಜನ ರಾಜಣ್ಣ ಅವರು "ನಾಯಕ ಜನಾಂಗದ ಇತಿಹಾಸ" ಎಂಬ ಪುಸ್ತಕದಲ್ಲಿ ಹೊಯ್ಸಳರು ಬೇಡ ಜನಾಂಗಕ್ಕೆ ಸೇರಿದವರೆಂದು ತಿಳಿಸುತ್ತಾರೆ.

* ಬಸವಿ, ದೇವದಾಸಿ, ವೇಶ್ಯಾ ಪದ್ಧತಿಗಳು ಕುಮ್ಮಟದುರ್ಗದ ಅರಸರ ಅವಧಿಯಲ್ಲಿ ವ್ಯಾಪಕವಾಗಿ ಹೆಚ್ಚಾಯಿತು.

* ನಾಯಕರಲ್ಲಿ ಎರಡು ಪಂಗಡಗಳಾಗಿ ವಿಭಜನೆಗೊಂಡು ಆದಿವಾಸಿ ಬೇಡರು ಕೋಳಿ ತಿನ್ನದೇ ಇರುವವರು ಮತ್ತು ನಾಗರೀಕರಾಗಿ ನಾಯಕರಾದರೆಂಬುದನ್ನು ನೋಡುತ್ತೇವೆ. ಅದೇ ಇಂದು ಊರು ಮತ್ತು ಮ್ಯಾಸನಾಯಕ ಎಂದು ಕರೆಯಲಾಗುತ್ತಿದೆ.

* ಊರು ಬೇಡ ಮತ್ತು ಮ್ಯಾಸ ಬೇಡ ಎಂಬ ಭೇದ ಭಾವ ಹುಟ್ಟಿದ್ದೇ ಇಲ್ಲಿಂದ. ಹೆಣ್ಣನ್ನು, ಅತ್ತಿಗೆಯನ್ನು ಹೆತ್ತ ತಾಯಿಯಂತೆ ಮ್ಯಾಸ ನಾಯಕರು ಗೌರವಿಸುತ್ತಾರೆ. ಅದೇ ಊರು ನಾಯಕರು ದೇವದಾಸಿಗೆ ಬಸವಿಗೆ ಬಿಟ್ಟು ಭೋಗಿಸುತ್ತಾರೆ. ಇತ್ತೀಚಿಗೆ ವೇಶ್ಯವಾಟಿಕೆಯಲ್ಲಿ ಹೆಚ್ಚಾಗಿ ಮರಿಯಮ್ಮನಹಳ್ಳಿ, ಹಗರಿಬೊಮ್ಮನಹಳ್ಳಿ, ಹರಪನಹಳ್ಳಿ, ಹೊಸಪೇಟೆ, ಕೂಡ್ಲಿಗಿ ಹಾಗೂ ಹಡಗಲಿಯಲ್ಲಿ ಊರು ನಾಯಕ ಮಹಿಳೆಯರು ತೊಡಗಿರುವುದು ಅಧ್ಯಯನದಿಂದ ಬೆಳಕಿಗೆ ಬಂದಿದೆ.

ಪ್ರಸ್ತುತ ಅಧ್ಯಯನದಲ್ಲಿ ಕುಮಾರರಾಮನಿಗೆ ಸಂಬಂಧಿಸಿದ ಒಂದು ಶಾಸನವನ್ನು ಪರಿಚಯಿಸಿದ್ದು, ಈ ಶಾಸನದಲ್ಲಿ ರಾಮನಾಥ ದೇವರೆಂದು ದಾಖಲಿಸಿರುವುದು ಹಾಗೂ ಕಾಲಾವಧಿಯ ಆಧಾರದ ಮೇಲೆ ಶಾಸನವನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ಶಾಸನವು ಈಗಾಗಲೇ ಶಾಸನ ಸಂಪುಟದಲ್ಲಿ ಪ್ರಕಟಗೊಂಡಿದ್ದು, ಅಧ್ಯಯನಕ್ಕೆ ಬಳಸಿಕೊಳ್ಳದಿರುವುದು ನಿರ್ಲಕ್ಷ್ಯೆ ಎನ್ನುವುದಕ್ಕಿಂತ ಇದು ತ್ರುಟಿತಗೊಂಡಿರುವ ಕಾರಣ ಇದನ್ನು ಕೈಬಿಟ್ಟಿರಬಹುದು. ಪ್ರಸ್ತುತ ಅಧ್ಯಯನದಲ್ಲಿ ಕುಮಾರರಾಮನನ್ನು 'ರಾಮನಾಥ' ಎಂದು ಕರೆದಿರುವುದು ಕೆಲವು ಕೃತಿಗಳಿಂದ ವಿಧಿತವಾಗಿದೆ. ಕುಮಾರರಾಮನನ್ನು ದೇವರೆಂದು ಪೂಜಿಸಿರುವುದು ಸಂಗೂರು ಶಾಸನದಿಂದ ತಿಳಿದುಬಂದಿದೆ. ಈ ಎರಡೂ ಆಧಾರಗಳು ಪ್ರಸ್ತುತ ದೊರೆತಿರುವ ಶಾಸನಕ್ಕೆ ಪುಷ್ಟಿ ನೀಡುವುದರಿಂದ ಹೊಸ ಶಾಸನವನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡು ಚರ್ಚಿಸಲಾಗಿದೆ.

ಕುಮ್ಮಟದರಸರ ಕಾಲಾವಧಿಯ ಸಾಮಾಜಿಕ ವ್ಯವಸ್ಥೆಯನ್ನು ಕುರಿತಂತೆ ವಿವರಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲಿನ ನ್ಯಾಯಾಂಗ ವ್ಯವಸ್ಥೆಯು ಪ್ರಸ್ತುತ ಅಧ್ಯಯನದಲ್ಲಿ ಹೊಸದಾಗಿ ಸಂಗ್ರಹಿಸಿ ಕಲೆಹಾಕುವ ಪ್ರಯತ್ನ ಮಾಡಲಾಗಿದೆ. ನಂತರ ಆರ್ಥಿಕ ವ್ಯವಸ್ಥೆಯಲ್ಲಿ ಬರುವ ಕೃಷಿ, ಕೈಗಾರಿಕೆ, ವ್ಯಾಪಾರ, ಲೋಹದ ಅಚ್ಚು ತಯಾರಿಕೆ (ನಾಣ್ಯ ಟಂಕಿಸುವಿಕೆ) ಕುರಿತಂತೆ ಹಲವು ಹೊಸ ಹೊಸ ವಿಚಾರಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ. ಕುಮ್ಮಟದರಸರ ಕಾಲಾವಧಿಯಲ್ಲಿನ ಯಾವುದೇ ರೀತಿಯ ನಾಣ್ಯಗಳು ಇಲ್ಲಿಯವರೆಗೂ ದೊರೆತಿಲ್ಲ. ಮಧ್ಯಕಾಲೀನ ಸಂದರ್ಭದಲ್ಲಿ ದೊಡ್ಡ ರಾಜ್ಯಗಳು ನಾಣ್ಯ ಟಂಕಿಸುವ ಕಾರ್ಯವನ್ನು ಅಳವಡಿಸಿಕೊಳ್ಳುತ್ತಿದ್ದರು. ಆದರೆ ಚಿಕ್ಕ, ಪುಟ್ಟ ಮನೆತನಗಳಲ್ಲಿ ಕಾಣುವುದು ಅಸ್ಪಷ್ಟವೇ ಸರಿ. ರಾಮನಾಥ ಚರಿತೆಯಲ್ಲಿ ಹೇಳುವಂತೆ ಕುಮ್ಮಟದರಸರ ಕಾಲಾವಧಿಯಲ್ಲಿ ಲೋಹವನ್ನು ಎರಕ ಹೊಯ್ಯುತ್ತಿದ್ದರು. ಎರಕ ಹೊಯ್ಯುವವರ ಕೇರಿಯೇ ಇತ್ತು ಎಂದು ಹೇಳಿದ್ದಾನೆ. ಎರಕ ಹೊಯ್ಯುವ ಪದ್ಧತಿಯ ನಿರ್ದಿಷ್ಟ ಕೆಲಸ ಎಂದರೆ ಲೋಹಗಳನ್ನು ಕರಗಿಸಿ ಎರಕ ಹೊಯ್ಯುವುದು. ಈ ಕಾರ್ಯದಿಂದ ನಾಣ್ಯಗಳ ಪರಿಚಯವಿದ್ದಿರಬಹುದು. ಹಾಗೆಯೇ ಬೇರೆ ರಾಜ್ಯಗಳೊಂದಿಗೆ ವಿನಿಮಯ ವ್ಯವಸ್ಥೆಗಾದರೂ ನಾಣ್ಯಗಳ ಅವಶ್ಯಕತೆಯಿತ್ತು. ನಾಣ್ಯಗಳು ಬಹುಶಃ ಆಂತರಿಕವಾಗಿ, ಚಿಕ್ಕ ಮಟ್ಟದಲ್ಲಿ ಬೆಳೆದಿದ್ದಿರಬಹುದು. ಹೀಗಾಗಿಯೆ ನಾಣ್ಯಗಳು ದೊರತಿಲ್ಲದಿರುವುದು ದುರದೃಷ್ಟಕರವಾದ ಸಂಗತಿಯಾಗಿದೆ. ಮುಂದಿನ ಸಂಶೋಧನೆಗಳಾದರೂ ಇದರ ಕಡೆಗೆ ಹೆಚ್ಚಿನ ಗಮನಹರಿಸಬೇಕು.

ಕುಮ್ಮಟದರಸರ ಕಾಲಕ್ಕೆ ಸಂಬಂಧಿಸಿ ರಚನೆಗೊಂಡಂತಹ ಸಾಹಿತ್ಯ ಪ್ರಕಾರಗಳು ಬಹುಶಃ ಬೇರೆ ಯಾವ ಅರಸನಿಗೂ ಈ ರೀತಿಯ ಗೌರವಗಳು ಸಂದಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಕಂಪಿಲರಾಯ, ಮುಮ್ಮಡಿಸಿಂಗರಂತೆ ಕುಮಾರರಾಮನು ಶಾಸನಗಳಲ್ಲಿ ಕಡಿಮೆಯೇ ಎಂದು ಹೇಳಬಹುದು. ವೀರಗಲ್ಲುಗಳು, ದೇವಾಲಯಗಳು ಕರ್ನಾಟಕದಾದ್ಯಂತ ದೊರೆತಿವೆ. ಅವುಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಕುಮಾರರಾಮನ ಹೆಸರನ್ನು ಹೊಂದಿರುವ ಸ್ಥಳಗಳನ್ನು ಇತ್ತೀಚೆಗೆ ಗುರುತಿಸಿದ್ದು, ರಾಮನಹಳ್ಳಿ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ ಕಂಡುಬರುತ್ತದೆ. ಹಾಗೆಯೇ ಮತ್ತೊಂದು ಕೊಮಾರನಹಳ್ಳಿ ಇದು ಚಿತ್ರದುರ್ಗ ಜಿಲ್ಲೆಯ, ಹೊಳಲ್ಕೆರೆ ತಾಲ್ಲೂಕಿಗೆ ಸೇರಿರುವ ಗ್ರಾಮವಾಗಿದ್ದು, ಬಹುಶಃ ಕುಮಾರರಾಮನ ಪ್ರಭಾವದ ಮೇರೆಗೆ ಹೆಸರು ಇಟ್ಟಿರಬಹುದು.

ಕುಮ್ಮಟದರಸರು ಚಾರಿತ್ರಿಕ ವ್ಯಕ್ತಿಗಳಾಗಿ ಗುರ್ತಿಸಿಕೊಂಡಿದ್ದರೂ ಪ್ರಸ್ತುತ ಸಮಾಜಕ್ಕೆ ಅವರ ಆದರ್ಶ ನಡೆನುಡಿಗಳು ಅವಶ್ಯಕವಾಗಿವೆ. ಕುಮಾರರಾಮ ವಿಭಿನ್ನ ನೆಲೆಗಳಲ್ಲಿ ಗುರ್ತಿಸಿಕೊಳ್ಳುತ್ತಿದ್ದಾನೆ. ಎಲ್ಲಾ ಕ್ಷೇತ್ರಗಳಲ್ಲಿ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಕಾರ್ಯಗಳ ನೆರವೇರಿಕೆಗೆ ಕುಮಾರರಾಮನನ್ನು ದೈವೀಪುರುಷನಾಗಿ ಆರಾಧಿಸುತ್ತಿರುವುದು ಗಮನಾರ್ಹವಾಗಿದೆ. ಮೌಖಿಕವಾಗಿ ಕುಮಾರರಾಮ ಸರ್ವ ಜನಾಂಗಗಳಿಂದಲೂ ಮೆರುಗನ್ನು ಪಡೆದುಕೊಳ್ಳುತ್ತಿದ್ದಾನೆ. ಮೌಖಿಕ ಆಚರಣೆಗಳಲ್ಲಿ ಇಡೀ ಕರ್ನಾಟಕದಾದ್ಯಂತ ಕೆಲವು ವಿಚಾರಗಳಿಂದಷ್ಟೇ ಅಲ್ಲದೇ ಸರ್ವರೋಗಗಳಿಗೂ ಮದ್ದು ಎನ್ನುವಂತೆ ಸರ್ವಸಮಸ್ಯೆಗಳಿಗೂ ಕುಮಾರರಾಮ ದೇವರೇ ಪರಿಹಾರ ಎನ್ನುವಷ್ಟರಮಟ್ಟಿಗೆ ಗುರುತಿಸಿಕೊಳ್ಳುತ್ತಿದ್ದಾರೆ. ಮೂಲತಃ ಕುಮಾರರಾಮ ಬೇಡ ಕುಲಕ್ಕೆ ಸೇರಿದವನಾದರೂ ಅನ್ಯ ಧರ್ಮಗಳಿಗೂ ಮೀರಿದ ಸಂದೇಶವನ್ನು ಈತನ ವ್ಯಕ್ತಿತ್ವ ತಿಳಿಸಿಕೊಡುತ್ತದೆ. ಪ್ರಸ್ತುತದಲ್ಲಿ ಕುಮಾರರಾಮನು 'ದೇವರು', 'ಅಲ್ಲಾ', 'ಏಸು', ಬುಡಕಟ್ಟು ದೇವರಾಗಿ ಅನ್ಯ ಧರ್ಮ ಕುಲಗಳನ್ನದೇ ಮೌಖಿಕವಾಗಿ ಜನರ ಮನಸ್ಸಲ್ಲಿ ಮನೆದೇವರಾಗಿದ್ದಾನೆ.

* ಕುಮ್ಮಟದರಸರು ಆರಂಭದಲ್ಲಿ ಸೇವುಣರ ಅಧೀನರಾಗಿದ್ದು ನಂತರದಲ್ಲಿ ಮಾಂಡಲೀಕರಾಗುತ್ತಾರೆ. ಅನಂತರ ಕುಮ್ಮಟದರಸರು ಸ್ವತಂತ್ರ ರಾಜ್ಯವನ್ನು ಕಟ್ಟಿಕೊಂಡ ಮೇಲೆ, ಇವರ ಜೊತೆ ಅನೇಕ ದಂಡಯಾತ್ರೆಗಳಲ್ಲಿ ಪಾಲ್ಗೊಂಡ ಶಿವಮೊಗ್ಗ ಜಿಲ್ಲೆಯ ಹೊಸಗುಂದದ ಸಾಂತರರು ಇವರಿಗೆ ಅಧೀನರಾಗಿ ಮಾಂಡಲಿಕರಾದರು ಎಂಬುದು ಪ್ರಸ್ತುತ ಅಧ್ಯಯನದ ವಾದವಾಗಿದೆ.

* ಕಂಪಿಲರಾಯನು ದೆಹಲಿಸುಲ್ತಾನರೊಡನೆ ಯುದ್ಧ ಮಾಡಿ ಮಡಿದ ಮೇಲೆ ಈತನ ಸಾವಿಗಾಗಿ ಸಾರ್ವತ್ರಿಕ ನೋವನ್ನು ವ್ಯಕ್ತಪಡಿಸುವ ಶಾಸನವು ಲಕ್ಷ್ಮೇಶ್ವರದಲ್ಲಿ ಕಂಡುಬರುತ್ತದೆ. ಅದರಂತೆಯೇ ಕುಮಾರರಾಮನು ತಂದೆಯ ನಂತರ ಅದೇ ಯುದ್ಧದಲ್ಲಿ ಅಂತ್ಯ ಕಾಣುತ್ತಾನೆ. ಕುಮಾರರಾಮನ ಅಂತ್ಯವನ್ನು ಕಂಡ ಅಲ್ಲಿನ ಸ್ಥಳೀಯರು ಮರುಗಿ ವ್ಯಾಪಕವಾದ ಸಹಾನುಭೂತಿಯನ್ನು ತೋರಿಸಿದರ ಫಲವಾಗಿ ವಿಜಯನಗರದ ಅಧಿಕಾರಿಗಳೇ ಹಿರೇಕೆರೂರು ತಾಲ್ಲೂಕಿನ ವೀರಾಪುರದಲ್ಲಿ

ಕುಮಾರರಾಮನ ಪ್ರತಿಮೆಯನ್ನು ಪ್ರತಿಷ್ಠಾಪಿಸುತ್ತಾರೆ. ಈ ಕಾರ್ಯವನ್ನು ಮಾಡಿ ವಿಜಯನಗರದ ಅರಸರು ತಮ್ಮ ದೃಢತೆಗೆ ಬಳಸಿಕೊಳ್ಳುತ್ತಾರೆ ಎನ್ನುವುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ.

* ದ್ವಾರಸಮುದ್ರದ ಹೊಯ್ಸಳರು, ದೇವಗಿರಿಯ ಯಾದವರು ಸಮಕಾಲೀನ ಅರಸರಾಗಿದ್ದು, ಯಾದವರಿಗೆ ಸಾಮಂತರಾಗಿದ್ದ ಕುಮ್ಮಟದರಸರು ಸಂಘರ್ಷದ ಹಾದಿಗಳನ್ನು ತಾವೇ ಸೃಷ್ಟಿ ಮಾಡಿಕೊಂಡರು. ಆ ಕಾಲಘಟ್ಟದ ಧರ್ಮ, ಸಮಾಜದ ಮಜಲುಗಳು ವಿಭಿನ್ನವಾಗಿದ್ದರೂ ತಮ್ಮದೇ ಚೌಕಟ್ಟಿನಲ್ಲಿ ಸವಾಲುಗಳನ್ನು ಸ್ವೀಕರಿಸಿದರು. ಇವರು ಹೊಯ್ಸಳರಿಗೆ ಹಾಗೂ ಸೇವುಣರಿಗೆ ಶತ್ರುಗಳೂ ಆಗಿದ್ದರೂ, ವಿಧೇಯರು ಆಗಿದ್ದರೂ ಕೂಡ ತಮ್ಮ ರಾಜ್ಯವನ್ನು ನಿರ್ಭೀತಿಯಿಂದಲೇ ಕಟ್ಟಿಕೊಂಡರು. ಕಂಪಿಲನ ಅತಿ ಹೆಚ್ಚು ಯುದ್ಧಗಳು ಹೊಯ್ಸಳರೊಂದಿಗೆ ನಡೆದಿರುವುದರಿಂದ ಕಂಪಿಲನು ಹೊಯ್ಸಳರ ಬಂಧುವಾಗಿರಲಿಲ್ಲ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಒಪ್ಪಿಕೊಳ್ಳಲಾಗಿದೆ.

* ಕುಮ್ಮಟದರಸರು ೪೭ ವರ್ಷಗಳ ಕಾಲಘಟ್ಟದಲ್ಲಿ ಕ್ರಿ.ಶ. ೧೨೮೭ ರಿಂದ ಕ್ರಿ.ಶ. ೧೩೦೦ರ ವರೆವಿಗೂ ನಿರ್ವಾತ ಕಾಲ ಎಂದು ಗುರ್ತಿಸಲಾಗುತ್ತದೆ. ಕಾರಣ ಕ್ರಿ.ಶ. ೧೨೮೭ರಲ್ಲಿ ಮುಮ್ಮಡಿಸಿಂಗನು ಮರಣ ಹೊಂದುತ್ತಾನೆ ಎಂಬ ಸೂಕ್ಷ್ಮತೆಗಳು ಶಾಸನಗಳಿಂದ ತಿಳಿದುಬರುತ್ತವೆ. ಆ ನಂತರದಲ್ಲಿ ಸುಮಾರು ೧೩ ವರ್ಷಗಳ ಕಾಲ ಅಂದರೆ ಕ್ರಿ.ಶ. ೧೩೦೦ರವರೆಗೆ ಯಾವುದೇ ಶಾಸನಗಳಲ್ಲಿ ಇವರ ಕುರಿತಂತೆ ಯಾವ ಮಾಹಿತಿಗಳು ದೊರೆಯುವುದಿಲ್ಲ. ಕಾರಣ ಇಲ್ಲಿ ಯಾವುದೇ ಯುದ್ಧಗಳಾಗಿಲ್ಲ ಎಂಬುದು ಒಂದು ಅಂಶವಾದರೆ ಕೇವಲ ಕಂಪಿಲರಾಯನ ರಾಜ್ಯ ನಿರ್ಮಾಣ ಕುರಿತಂತಹ ಬೆಳವಣಿಗೆ ಆಗಿರುವುದು ಮತ್ತೊಂದು ಅಂಶವಾಗಿದೆ. ಹೀಗಾಗಿ ಈ ಕಾಲದಲ್ಲಿ ಯಾವುದೇ ಏಳುಬೀಳುಗಳಿಲ್ಲದ ಕಾರಣ ನಿರ್ವಾತ ಕಾಲವಾಗಿತ್ತು ಎಂಬುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ.

* ಕುಮ್ಮಟದರಸರ ಕಾಲದಲ್ಲಿ ಧಾರ್ಮಿಕ ಸ್ಥಿತಿಗತಿಗಳನ್ನು ಸ್ಥಳೀಯ ಚರಿತ್ರೆಯೊಳಗಿನ ಅಂದಂದಿನ ಕಾಲದಲ್ಲಿ ಆಚರಣಾತ್ಮಕ ಮತ್ತು ಮೌಖಿಕ ಕಥನ ಪರಂಪರೆಯೊಳಗೆ ಸುರುಳಿ ಸುತ್ತಿಕೊಂಡಿರುವ ಹಲವು ಧಾರ್ಮಿಕ ಪಂಥಗಳನ್ನು, ಧಾರ್ಮಿಕ ತಿಕ್ಕಾಟಗಳನ್ನು ಸೂಕ್ಷ್ಮವಾಗಿ ಅರಿಯುವ ಪ್ರಯತ್ನವನ್ನು ಮಾಡಲಾಗಿದೆ.

* ಕುಮ್ಮಟದರಸರ ಕಾಲದ ಪ್ರಭುತ್ವವು ರಾಜಧರ್ಮದ ಭಾಗವಾಗಿ ತೋರುತ್ತಿದ್ದ ಸರ್ವಮತಗಳನ್ನು, ಪೋಷಿಸುವ ಅನ್ಯಧರ್ಮ ಸಹಿಷ್ಣುತೆ, ಉದಾರನೀತಿಯನ್ನು ಸಾಬೀತುಪಡಿಸುತ್ತದೆ. ಈ ಕಾರಣದಿಂದ ಸಾಮಂತರ ಅರಸರು ಕುಮ್ಮಟದರಸರ ರಾಜಾದಾಯಕ್ಕೆ ಕಾರಣವಾಗುವ ಕುಶಲಕರ್ಮಿ ಗುಂಪುಗಳನ್ನು ಉತ್ತೇಜಿಸುವ ವಿಧಾನಗಳನ್ನು ತಿಳಿಸಲು ಪ್ರಯತ್ನಿಸಲಾಗಿದೆ.

* ಕಂಪಿಲನ ರಾಜ್ಯದಲ್ಲಿದ್ದ ಅಧಿಕಾರಿಗಳು ಸ್ಥಳೀಯ ಅಗತ್ಯತೆಗಳಿಗೆ ಅನುಸಾರವಾಗಿ ಧಾರ್ಮಿಕ, ಆರ್ಥಿಕ ನಿರ್ಣಯ ತೆಗೆದುಕೊಳ್ಳುವಾಗ ತಮ್ಮ ಧಾರ್ಮಿಕ ಸೇವೆಯನ್ನು ಅವರು ದೊರೆಯ ಉಲ್ಲೇಖದೊಡನೆ ಮಾಡುವುದನ್ನು ಕಂಡರೆ ರಾಜ ಪ್ರಭುತ್ವದ ಸಮ್ಮತಿಯ ಅಗತ್ಯವಿತ್ತೆಂಬುದನ್ನು ಬೆಳಕಿಗೆ ತರಲಾಗಿದೆ.

* ಕುಮ್ಮಟದರಸರು ರಾಜ್ಯ ಮತ್ತು ಸಮುದಾಯಗಳ ರಕ್ಷಿಸಿಕೊಳ್ಳಬೇಕಾದ ಸಂಗತಿಗಳಾಗುತ್ತ ಹೋದಂತೆ ತನ್ನ ಎದುರಾಳಿಗಳ ಪರಿಕಲ್ಪನೆಯೂ ಬದಲಾಗುತ್ತಾ ಹೋಗುವುದು ಮತ್ತು ರಾಜ್ಯ ರಕ್ಷಣೆಯ ಭಾಗವಾಗಿ ಮೈದಳೆದ ಶಿಷ್ಟ ವರ್ಗದ ರಾಜರು ಬದಲಾದ ಚಾರಿತ್ರಿಕ ಸನ್ನಿವೇಶದಲ್ಲಿ ವಿಭಿನ್ನ ಸಾಮಾಜಿಕ ಗುಂಪುಗಳ ನಡುವಿದ್ದ ಸಂಘರ್ಷವನ್ನು ಸೂಕ್ಷ್ಮವಾಗಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

* ಕುಮ್ಮಟದರಸರ ಕಾಲದಲ್ಲಿ ಧರ್ಮ, ಜಾತಿ, ಪಂಗಡ, ಭಾಷೆ, ಪ್ರದೇಶಗಳಾಚೆ ಚಲಿಸಿ ಸಹಬಾಳ್ವೆ, ಸಮಾನತೆಯ ಸಮಾಜ ಕಟ್ಟುವ ಜೊತೆಗೆ ಸಾಂಸ್ಕೃತಿಕ ಅರಿವನ್ನು ಶೋಧಿಸುವ ಪ್ರಯತ್ನ ಮಾಡಲಾಗಿದೆ.

* ಕುಮ್ಮಟದರಸರ ಕಾಲದಲ್ಲಿ ನಾಡಿನ ಪ್ರತಿಯೊಂದು ಸೀಮೆಯ ಅಥವಾ ಸಮುದಾಯದ ನಂಬಿಕೆ, ಆಚರಣೆಗಳಲ್ಲಿ ಸಮಾನ ಅಂಶಗಳಿರುವ ಮತ್ತು ರೈತಾಪಿ ವರ್ಗ, ಪಶುಪಾಲನೆ, ಬೇಟೆಯ ಕುರಿತು ವಿಭಿನ್ನ ಜನಾಂಗಗಳ ಜೀವನಕ್ರಮಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ವಾದವಾಗಿದೆ.

* ಆರ್ಥಿಕ ವ್ಯವಸ್ಥೆಗೆ ಮುಖ್ಯವಾದ ಬೆನ್ನೆಲುಬು ನಾಣ್ಯಗಳ ಪರಿಚಯ. ಇಂತಹ ನಾಣ್ಯ ಪರಿಚಯ ಕುಮ್ಮಟದರಸರಿಗೆ ತಿಳಿದಿರಲಿಲ್ಲ ಎನ್ನುವುದು ಹಿಂದಿನ ಅಧ್ಯಯನಗಳಿಗೆ ಸೇರಿತು. ಆದರೆ ಪ್ರಸ್ತುತ ಅಧ್ಯಯನದಲ್ಲಿ ನಾಣ್ಯಗಳು ಟಂಕಿಸುವಿಕೆ ಟಂಕಿಸುವ ಶಾಲೆಯು ಅಲ್ಲಿತ್ತು. ಹೀಗಾಗಿ ಇವರಿಗೆ ನಾಣ್ಯಗಳ ಪರಿಚಯವಿದ್ದಿತ್ತು. ಆದರೆ ಸಣ್ಣ ಪುಟ್ಟ ಹಂತಗಳಲ್ಲಿ ನಡೆದಿದ್ದರಿಂದ ಹೆಚ್ಚು ಬೆಳಕಿಗೆ ಬಂದಿಲ್ಲ ಎನ್ನುವುದು ಪ್ರಸ್ತುತ ಅಧ್ಯಯನದ ವಾದವಾಗಿದೆ.

* ಕುಮ್ಮಟದರಸರ ಕಾಲದಲ್ಲಿ ವ್ಯಾಪಾರ, ಪಶುಪಾಲನೆ, ಕೃಷಿ, ಕುಶಲಕರ್ಮಿ ಕ್ಷೇತ್ರದಲ್ಲಿರುವ ಉತ್ಪಾದನ ವಿಧಾನ ಮತ್ತು ಸಂಬಂಧಗಳಿಗೂ ಅವುಗಳಲ್ಲಿ ತೊಡಗಿಕೊಂಡಿರುವ ಸಮುದಾಯಗಳ ದೈವಕಲ್ಪನೆ, ಪಶುಪಾಲನೆ ಮತ್ತು ವ್ಯಾಪಾರಿ ಸಮುದಾಯಗಳು ಹೆಚ್ಚಾಗಿ ಗಂಡು ದೈವಗಳನ್ನು ನೆಚ್ಚಿಕೊಂಡಿರುವ ಬಗ್ಗೆ ಸೂಕ್ಷ್ಮವಾಗಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

* ಕುಮ್ಮಟದರಸರ ಕಾಲದಲ್ಲಿ ಸೈನಿಕ ಸಂಸ್ಕೃತಿಯು ಕಾಳಿಯನ್ನು, ಕೃಷಿಕರು ಮತ್ತು ಕುಶಲಕರ್ಮಿಗಳು ಗಂಡು ದೈವವನ್ನು ಆರಾಧಿಸುವ ಮತ್ತು ಲೋಹ, ಚರ್ಮ, ಮರ ಸಂಬಂಧಿ ಕುಶಲಕರ್ಮಿಗಳು ಕೃಷಿ ಸಮುದಾಯಗಳು ಶಾಕ್ತಪಂಥಕ್ಕೂ ಇರುವ ದಾರ್ಶನಿಕ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಪೌರಾಣಿಕ, ಅಂತರ್‌ಸಂಬಂಧಗಳನ್ನು ಇವರ ಕಾಲದಲ್ಲಿ ಸೂಕ್ಷ್ಮವಾಗಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

* ಕುಮ್ಮಟದುರ್ಗದ ನಾಯಕರ ಇತಿಹಾಸವನ್ನು ಮೌಖಿಕ ಸಾಹಿತ್ಯ, ಲಿಖಿತ ಸಾಹಿತ್ಯದಲ್ಲಿ ಮಧ್ಯಕಾಲೀನ ಇತಿಹಾಸದಲ್ಲಿ ರಚನೆಯಾದ ಕೃತಿಗಳು, ಲಾವಣಿಗಳು, ಕೋಲಾಟದ ಪದಗಳು,

ಬುರ್ರಕಥಾ, ಯಕ್ಷಗಾನ, ನಾಟಕ, ಕಾದಂಬರಿಗಳಲ್ಲಿ ಕಂಪಿಲರಾಯ ಕುಮಾರರಾಮನ ವ್ಯಕ್ತಿತ್ವ ಆದರ್ಶಗಳನ್ನು ಕಾಣಬಹುದು. ಹಾಗೆಯೇ ಕುಮಾರರಾಮನನ್ನು ಕುರಿತಂತೆ ಹಲವು ಹಾಡುಗಳನ್ನು ಹೇಳಿಕೊಂಡು ಜೀವನ ಮಾಡುವ ವರ್ಗಗಳು ಕರ್ನಾಟಕದಾದ್ಯಂತ ಇವೆ. ಕುಮಾರರಾಮನು ಜೀವನಾಧಾರಕ್ಕೂ ದಾರಿ ತೋರುವ ದೇವರಂತೆ ಬಿಂಬಿತನಾಗಿರುವುದು ಪ್ರಸ್ತುತ ಅಧ್ಯಯನದ ನಿಲುವಾಗಿದೆ.

* ಕುಮ್ಮಟದುರ್ಗದ ನಾಯಕರ ಕಲೆ, ವಾಸ್ತುಶಿಲ್ಪ ಹಾಗೂ ಶಾಸನಗಳು ಕರ್ನಾಟಕದಲ್ಲಿ ದೊರೆತಿರುವ ಅನೇಕ ಸ್ಥಳಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ವಾಸ್ತುಶಿಲ್ಪದಲ್ಲಿ ದೇವಾಲಯಗಳ ರಚನೆ, ವಿನ್ಯಾಸ, ವೀರಗಲ್ಲು, ಮಾಸ್ತಿಗಲ್ಲುಗಳನ್ನು ಅಧ್ಯಯನಕ್ಕೆ ಸೂಕ್ಷ್ಮವಾಗಿ ಒಳಪಡಿಸಲಾಗಿದೆ.

* ಕುಮ್ಮಟದುರ್ಗದ ಅರಸರ ಕಾಲದಲ್ಲಿ ನಿರ್ಮಾಣ ಮಾಡಿದ ಕೆರೆ ಕಟ್ಟೆ, ಬಾವಿ ಮತ್ತು ಕೋಟೆಗಳನ್ನು ಈ ಪ್ರಸ್ತುತ ಅಧ್ಯಾಯದಲ್ಲಿ ತಿಳಿಸಲಾಗಿದೆ. ಅಂದರೆ ಇವುಗಳ ರಚನೆಯಲ್ಲಿ ಸ್ತ್ರೀಯರ ಪಾತ್ರವೂ ಮುಖ್ಯವಾಗಿದೆ. ಸ್ತ್ರೀಯರು ದೇವಾಲಯಗಳನ್ನು ನಿರ್ಮಿಸಿರುವುದು, ಶಾಸನಗಳನ್ನು ಹಾಕಿಸಿರುವುದರಿಂದ ಕುಮಾರರಾಮನ ಆದರ್ಶ ವ್ಯಕ್ತಿತ್ವಕ್ಕೆ ತಿಲಕವಿಟ್ಟಂತೆ. ಸ್ತ್ರೀ ಸಮಾಜಕ್ಕೂ ಕುಮಾರರಾಮನ ಬೆಂಬಲವಿತ್ತು ಎಂಬುದನ್ನು ಇದು ಸೂಚಿಸುತ್ತದೆ.

* ಕುಮಾರರಾಮ ಚಾರಿತ್ರಿಕ ವ್ಯಕ್ತಿಯಾದರೂ ಆರಾಧ್ಯದೈವನಾಗಿ ಕರ್ನಾಟಕ ಸೇರಿದಂತೆ ಗೋವಾ, ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶದ ಭಾಗಗಳಲ್ಲಿ ಪೂಜಿಸುತ್ತಿದ್ದಾರೆ. ಕಾರಣ ದೆಹಲಿ ಸುಲ್ತಾನರ ದಾಳಿಯ ನಂತರ ಆ ಭಾಗದಲ್ಲಿದ್ದ ಜನರು ವಿವಿಧೆಡೆ ವಲಸೆ ಹೋಗಲು ಮುಂದಾಗುತ್ತಾರೆ. ರಕ್ಷಣೆಯನ್ನು ನೀಡುವ ರಾಜ್ಯವೇ ಮುಳುಗಿದಾಗ ಅಲ್ಲಿನ ಪ್ರಜೆಗಳು ಬೇರೆಡೆಗೆ ಸ್ಥಳಾಂತರಗೊಂಡರು. ನಿಜವಾಗಿಯೂ ಈ ಕಾಲಘಟ್ಟದಲ್ಲಿ ವಲಸೆ ಪ್ರಕ್ರಿಯೆ ನಡೆದಿದೆ. ಹೀಗಾಗಿಯೇ ಕುಮಾರರಾಮನನ್ನು ನಾನಾ ಭಾಗಗಳಲ್ಲಿ ಆರಾಧ್ಯದೈವನನ್ನಾಗಿ ಆಚರಿಸುತ್ತಾರೆ ಎಂಬ ನಿಲುವು ಪ್ರಸ್ತುತ ಅಧ್ಯಯನದ್ದಾಗಿದೆ.

* ಕುಮ್ಮಟದುರ್ಗದ ಪತನಾನಂತರ ಆ ವಂಶದಲ್ಲಿದ್ದ ಕೆಲವರು ಬೇರೆ ಬೇರೆ ಕಡೆ ನೆಲೆಸಿದ್ದರು. ಉದಾ: ವಡ್ಡು – ದರೋಜಿ, ಕುಡತಿನಿ, ಬಾಣರಾವಿ, ಸೊಂಡೂರು, ಗುಡೇಕೋಟೆ, ಜರಿಮಲೆ, ಉಜ್ಜಿನಿ ಮೊದಲಾದ ಕಡೆ ಬೊಮ್ಮಂತರಾಜ ಮತ್ತು ಆತನ ಮಕ್ಕಳು ಆಳ್ವಿಕೆ ನಡೆಸಿರುವುದು ಸ್ಮರಣೀಯ.

* ಈಗಲೂ ಚಿತ್ರದುರ್ಗ, ಬಳ್ಳಾರಿ ಮತ್ತು ದಾವಣಗೆರೆ ಜಿಲ್ಲೆಗಳ ಬೇಡರ ಹಟ್ಟಿಗಳಲ್ಲಿ ಕುಮಾರ, ಕುಮಾರರಾಮ, ಕಂಪಳಯ್ಯ, ಕಂಪ್ಲಯ್ಯ, ಕಂಪ್ಲಮ್ಮ, ಸಿಂಗಯ್ಯ, ಸಿಂಗಮ್ಮ, ಸಿಂಗನಾಯಕ ಎಂದು ತಮ್ಮ ಮಕ್ಕಳಿಗೆ ನಾಮಕರಣ ಮಾಡಿರುವುದು ಕಂಡುಬಂದಿರುತ್ತದೆ.

* ಹಕ್ಕ, ಬುಕ್ಕರು ಕಂಪಲಿರಾಯನ ಅಕ್ಕನ ಮಕ್ಕಳೆಂದು, ಇವರ ತಂದೆ ಸಂಗಮರಾಯನೆಂದು,

ಇವರು ಬೇಡ (ನಾಯಕ) ಜನಾಂಗಕ್ಕೆ ಸೇರಿದವರೆಂದು ಸ್ಥಿರಗೊಳಿಸಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಒಪ್ಪಿಕೊಳ್ಳಲಾಗಿದೆ.

* ಕಂಪಿಲ ಬೇಡ ಜಾತಿಗೆ ಸೇರಿದ್ದು ಅವರ ರಾಜ ಲಾಂಛನ ಗಿಳಿಯಾಗಿರುತ್ತದೆ. ಈ ಬಗ್ಗೆ ಹೊಸ ಸಂಗತಿಗಳ ವಿಶ್ಲೇಷಣೆ ಅಗತ್ಯ.



## ಅನುಬಂಧಗಳು

### ಮಾಹಿತಿದಾರರು

| ಕ್ರಸಂ | ಹೆಸರು | ಜಾತಿ | ವಯಸ್ಸು | ಉದ್ಯೋಗ | ಸ್ಥಳ |
|---|---|---|---|---|---|
| ೧. | ಯಮನೂರಪ್ಪ | ಗಂಗಾಮತ | ೪೮ | ಕೃಷಿ | ಮುಕ್ಕುಂಪಿ |
| ೨. | ಸತ್ಯಮ್ಮ | ವಾಲ್ಮೀಕಿ | ೫೫ | ಕೃಷಿ | ಜಬ್ಬಲಗುಡ್ಡ |
| ೩. | ರಾಜೇಶ್ ನಾಯಕ | ವಾಲ್ಮೀಕಿ | ೪೦ | ಕೃಷಿ | ಗಂಗಾವತಿ |
| ೪. | ಗೌರಮ್ಮ | ಕುರುಬ | ೬೫ | ಕೃಷಿ | ಜಬ್ಬಲಗುಡ್ಡ |
| ೫. | ನಾಗಪ್ಪ | ವಾಲ್ಮೀಕಿ | ೫೦ | ಕೃಷಿ | ಜಬ್ಬಲಗುಡ್ಡ |
| ೬. | ರಂಗಪ್ಪ | ಕುರುಬ | ೩೦ | ವ್ಯಾಪಾರ | ಆನೆಗೊಂದಿ |
| ೭. | ಮಂಜಪ್ಪ | ಹರಿಜನ | ೪೦ | ಕೂಲಿ | ಮಲ್ಲಾಪುರ |
| ೮. | ಶರಣಪ್ಪ | ವಾಲ್ಮೀಕಿ | ೪೦ | ಕೂಲಿ | ಆನೆಗೊಂದಿ |
| ೯. | ಹುಲಿಗೆಮ್ಮ ಕಾರಟಗಿ | ವಾಲ್ಮೀಕಿ | ೧೦೦ | ಕೂಲಿ | ಜಬ್ಬಲಗುಡ್ಡ |
| ೧೦. | ಕನಕಮ್ಮ | ವಾಲ್ಮೀಕಿ | ೭೦ | ಒಕ್ಕಲುತನ | ಜಬ್ಬಲಗುಡ್ಡ |
| ೧೧. | ನಾಗಪ್ಪ ಕರೆಕಲ್ಲು | ಕುರುಬ | ೪೫ | ಕೃಷಿ | ಜಬ್ಬಲಗುಡ್ಡ |
| ೧೨. | ಈರಮ್ಮ | ವಾಲ್ಮೀಕಿ | ೭೦ | ಕೃಷಿ | ಮಲ್ಲಾಪುರ |
| ೧೩. | ಹನುಮಪ್ಪ | ಕಬ್ಬೇರ | ೫೨ | ಕೃಷಿ | ಜಬ್ಬಲಗುಡ್ಡ |
| ೧೪. | ವೆಂಕಟೇಶ | ಲಿಂಗಾಯತ | ೫೦ | ಕೃಷಿ | ಜಬ್ಬಲಗುಡ್ಡ |
| ೧೫. | ನಾಗರಾಜ | ವಾಲ್ಮೀಕಿ | ೪೮ | ಕೃಷಿ | ಮಲ್ಲಾಪುರ |
| ೧೬. | ಕನಕಪ್ಪ | ಕುರುಬ | ೭೮ | ಕೃಷಿ | ಇಂದರಗಿ |

| | | | | | |
|---|---|---|---|---|---|
| ೧೭. | ಹನುಮವ್ವ | ಹರಿಜನ | ೮೫ | ಕೃಷಿ | ಜಬ್ಬಲಗುಡ್ಡ |
| ೧೮. | ರುದ್ರಪ್ಪ | ವಾಲ್ಮೀಕಿ | ೮೦ | ಕೃಷಿ | ಕಂಪ್ಲಿ |
| ೧೯. | ಮಲ್ಕೇಶ್ ಕೋಟಿ | ವಾಲ್ಮೀಕಿ | ೫೦ | ನಾಟಕ ಪ್ರಯೋಗಕಾರರು | ಕನಕಗಿರಿ |
| ೨೦. | ಶಿವಪ್ಪನಾಯಕ | ವಾಲ್ಮೀಕಿ | ೪೦ | ಸಂಪಾದಕರು | ಗಂಗಾವತಿ |
| ೨೧. | ನಾಗಮ್ಮ ಕಾರಟಗಿ | ವಾಲ್ಮೀಕಿ | ೬೨ | ಕೃಷಿ | ಜಬ್ಬಲಗುಡ್ಡ |
| ೨೨. | ಮಲ್ಲೇಶ್ ಹಿರೇಗೌಡ್ರು | ಕುರುಬ | ೫೦ | ಕೃಷಿ | ಜಬ್ಬಲಗುಡ್ಡ |
| ೨೩. | ಪೂಜಮ್ಮ | ಹರಿಜನ | ೬೬ | ಕೃಷಿ | ಜಬ್ಬಲಗುಡ್ಡ |
| ೨೪. | ಹಂಪಮ್ಮ | ಹರಿಜನ | ೬೦ | ಕೃಷಿ | ಮುಕ್ಕುಂಪಿ |
| ೨೫. | ರಾಮಲಿಂಗಪ್ಪ | ವಾಲ್ಮೀಕಿ | ೫೫ | ಕೃಷಿ | ವಿಠಲಾಪುರ |
| ೨೬. | ಕನಕಗೌಡ | ವಾಲ್ಮೀಕಿ | ೬೯ | ಕೃಷಿ | ಮುಕ್ಕುಂಪಿ |
| ೨೭. | ಹನುಮಂತಪ್ಪ | | ೨೯ | ಕೃಷಿ | ಮಲ್ಲಾಪುರ |
| ೨೮. | ವೆಂಕಟೇಶ | | ೩೩ | ಕೂಲಿ | ಜಬ್ಬಲಗುಡ್ಡ |
| ೨೯. | ರಾಜೇಶ್ | | ೨೭ | ವ್ಯಾಪಾರ | ಮಲ್ಲಾಪುರ |
| ೩೦. | ಬಂಗ್ಲೆ ಮಲ್ಲಿಕಾರ್ಜುನ್ | | ೪೫ | ಪತ್ರಕರ್ತರು | ಕಂಪ್ಲಿ |
| ೩೧. | ದುರ್ಗಾದಾಸ್ ಯಾದವ್ | | ೫೯ | ಕೂಲಿ | ಕನಕಗಿರಿ |
| ೩೨. | ಪರಶುರಾಮ್ ಪ್ರಿಯ | | ೪೦ | ಸಾಹಿತಿಗಳು | ಗಂಗಾವತಿ |
| ೩೩. | ಲಕ್ಷ್ಮಿ ಕಿರಣ್ | | ೩೮ | ಗ್ರಂಥಪಾಲಕರು | ಬಳ್ಳಾರಿ |
| ೩೪. | ಶಾರದ | | ೪೦ | ಗ್ರಂಥಾಲಯ ಸಹಾಯಕರು | ಬಳ್ಳಾರಿ |

# ಪರಾಮರ್ಶನ ಗ್ರಂಥಗಳು

**ಪ್ರಾಥಮಿಕ ಆಕರಗಳು**

* ಅನಂತರಂಗಾಚಾರ್.ಎನ್. (ಸಂ), ೧೯೬೦, ಕುಮಾರರಾಮ ಸಾಂಗತ್ಯ ಸಂಗ್ರಹ, ಶಾರದಾ ಮಂದಿರ, ಮೈಸೂರು
* ಆಲೂರು ವೆಂಕಟರಾಯ, ೧೯೫೬, ಕರ್ನಾಟಕ ವೀರರತ್ನಗಳು, ವರದರಾಜ ಹುಯಿಲಗೋಳ ಸಾಧನಕೇರಿ, ಧಾರವಾಡ
* ಚದುರಂಗ, ೧೯೬೬, ಕುಮಾರರಾಮ, ನಾಗೇಂದ್ರ ಪ್ರಕಾಶನ ಮೈಸೂರು
* ಚಿದಾನಂದಮೂರ್ತಿ ಎಂ., ೧೯೬೬, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
* ಜವರೇಗೌಡದೇ., ೧೯೬೧, ಗಂಡುಗಲಿ ಕುಮಾರರಾಮ, ನರೇಶಅಂಡ್ ಕಂಪನಿ, ಬೆಂಗಳೂರು
* ತಿಪ್ಪೇರುದ್ರಸ್ವಾಮಿ ಎಚ್., ೧೯೬೮, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿವಿಕೆ ಮೂರ್ತಿ, ಮೈಸೂರು.
* ದೇವೀರಪ್ಪಎಚ್ (ಸಂ), ೧೯೫೬, ೧೯೬೪, ರಾಮನಾಥ ಚರಿತ (ಸಂ.೨,೩), ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
* ನಂಜುಂಡ, ೧೯೬೪, ರಾಮನಾಥ ಚರಿತ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
* ಪುಟ್ಟಣ್ಣ ಎಂ.ಎಸ್., ೧೯೨೪, ಚಿತ್ರದುರ್ಗದ ಪಾಳೆಯಗಾರರು, ಬೆಂಗಳೂರು
* ರಾಮಶರ್ಮ ವೈ.ಹ., ೧೯೬೦, ರಣಧೀರ ರಾಮನಾಥ, ಶಾರದಾ ಮಂದರ, ಮೈಸೂರು
* ವರದರಾಜರಾವ್.ಜಿ, ೧೯೬೩, ಕುಮ್ಮಟಕೇಸರಿ, ಉಷಾ ಸಾಹಿತ್ಯ ಮಾಲೆ, ಮೈಸೂರು.
* ವರದರಾಜರಾವ್. ಜಿ, ೧೯೬೬, ಕುಮಾರರಾಮನ ಸಾಂಗತ್ಯಗಳು, ಪ್ರಸಾರಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
* ಹೊಸಳ್ಳಯ್ಯ ಸಿ.ಆರ್., ೧೯೫೪, ಅಮರಕೀರ್ತಿ, ಕೆ. ಸೀತಾರಾಮ ಶೆಟ್ಟಿ ಸನ್ಸ್, ಬೆಂಗಳೂರು

## Reports


* A corpus of Inscriptions in the Kannada Districts of Hyderabad state Ed. Desai P.B., Delhi, 1949
* Annual Report on South Indian Epigraphy.
* Annual Reports of the Mysore Archaeological Department, Bangalore, 1906-39, Mysore, 1940-56
* Annual Reports on Indian Epigraphy, 1946-1965
* Annual Reports on south Indian Epigraphy, Madras, 1887-1945
* Burton Stein, 1993, Vijayanagara, Foundation books, New Delhi
* Devaraj D.V and Patil.C.S, 1993, V.P.R-1988-91, Pub: Directorate of Archaeology and Museam, Mysore.
* Epigraphia India Vol's XXIII.
* Epigraphy Camatica Vol's IV, VII, VIII, IX, X, XI, XII
* Jainism in South India and Some Jaina Epigraphs, Ed. Desai, P.B. Shalpur, 1957
* Karnataka Inscriptions, Vols 1-3, Ed. Panchamukhi R.S., Vol-4, Ed. Annigeri A.M., Dharawar, 1941-61
* Myore Archaeology Report
* Mysore Inscriptions, Ed. Rice B. Lewis, Bangalore, 1879
* Sources of the Medieval History of the Deccan, 2 vols, Ed. Khare, G.H. Poon, 1930-1934
* South Indian Inscription Vol's, IX and XX
* The Historical Inscriptions of Southern India and outlines of Political History, Ed Sewell, Robert, Madras, 1032

## Books


* Bhandarkar R.G., Early History of the Dekkan, Reprinted from the Bombay Gazetteer, Calcutta, 1957
* Derrett, J., Duncan M., The Hoysalas, oxford, 1957
* Devaraj D.V and Patil.C.S, 1991, Vijayanagar progess of Research, 1987-88, pub: Directorate of Archaeology and Museam, Mysore
* Elliot H.M. and Dawson J., History of India as told by its own Historians, Vol-III, London, 1866
* Kenneth R. Hall, 2001, Structure and Society in Early South India, Oxford University Press, New Delhi
* Mahalingam T.V., 1969, Administration and Social life under Vijayanagara, Part 1, Administration, University of Madras
* Majumdar R.C. (Ed), the Delhi Sulthanate, Bombay, 1960
* Majumdar R.C. (Ed), The struggle for Empire, Bombay, 1957
* Mugali R.S., Kannada Sahitya Charitre, Mysore, 1953
* Narasimhachar R. and S.G. Karnataka Kavicharite, Vol-I, Mysore, 1907
* Nilakantashastry K.A., A History of south India, III Edn, Madras, 1958
* Nilakantashastry K.A., Historical Method in Relation to Indian History, Madras, 1956
* R. Sathyanatha Aiyar, 1991, History of the Nayakas of Madura, Asian Educational Services, New Delhi
* Rama Rao M., Kakatiya Sanchika, Rajamundry, 1935
* Subramanyam R., 1973, Vijayanagar, in History of Medieval Deccan (1295-1726), Vol. Edited by H.K. Sherwani & P.M. Joshi
* Sathish Sanjoo, 1992, Dictionary of History, Anmol Publications, New Delhi
* Venkataramanayya N., 1986, Studies in the History of the third Dynasty of Vijayanagara, Gian Publishing House, Delhi
* Venkataramanappa N, 1993, Vijayanagara, The Origin of the city and the Empire, Madras.

**ಆನುಷಂಗಿಕ ಆಕರಗಳು**


* ಕಪಟರಾಳ ಕೃಷ್ಣರಾವ್, ೧೯೭೦, ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಉಷಾ ಸಾಹಿತ್ಯ ಮಾಲೆ, ಮೈಸೂರು
* ಕರಿಬಸಯ್ಯಟಿ. ಆರ್., ೧೯೮೭, ಕುಮಾರರಾಮ ಕಂಠೀರವ ಕಲಾವೃಂದ, ಬೆಂಗಳೂರು
* ಕಲಬುರ್ಗಿ ಎಂ.ಎಂ. (ಸಂ), ೧೯೯೪, ಕರ್ನಾಟಕದ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಕಲಬುರ್ಗಿ ಎಂ.ಎಂ. (ಸಂ), ೧೯೯೮, ಮಾರ್ಗ-೩, ಕರ್ನಾಟಕ ಬುಕ್‌ಏಜೆನ್ಸಿ, ಗಾಂಧಿನಗರ, ಬೆಂಗಳೂರು
* ಕಲಬುರ್ಗಿ ಎಂ.ಎಂ (ಸಂ) ೨೦೦೦, ಹೊಸ ಕುಮಾರರಾಮನ ಸಾಂಗತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ಕಲಬುರ್ಗಿ ಎಂ.ಎಂ (ಸಂ) ೨೦೦೧, ಕೊಮಾರರಾಮಯ್ಯನ ಚರಿತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ಕಲಬುರ್ಗಿ ಎಂ.ಎಂ (ಸಂ) ೨೦೦೬, ಬಾಲರಾಮನ ಸಾಂಗತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ಕಲಬುರ್ಗಿ ಎಂ.ಎಂ (ಸಂ) ೨೦೦೮, ಪಾಂಚಾಳ ಗಂಗ ವಿರಚಿತ ಹಳೆಯ ಕುಮಾರರಾಮನ ಸಾಂಗತ್ಯ, ಸಪ್ನ ಬುಕ್‌ಹೌಸ್, ಬೆಂಗಳೂರು.
* ಕೃಷ್ಣರಾವ್ ಕೆ.ಎಂ, ೧೯೬೫, ಯಕ್ಷಗಾನ ಸಾಹಿತ್ಯ, ಮಿಂಚಿನಬಳ್ಳಿ, ಗ್ರಂಥಮಾಲೆ, ಧಾರವಾಡ.
* ಕೃಷ್ಣಮೂರ್ತಿ ಹನೂರು, ೧೯೯೭, ಯಕ್ಷಗಾನ ಸಾಹಿತ್ಯ, ಮಿಂಚಿನಬಳ್ಳಿ ಗ್ರಂಥಮಾಲೆ, ಧಾರವಾಡ.
* ಕೃಷ್ಣಮೂರ್ತಿ ಹನೂರು, ೧೯೯೨, ನಂಜುಂಡ, ಪ್ರಬುದ್ಧ ಕರ್ನಾಟಕ, ಮೈಸೂರು
* ಕೃಷ್ಣ ಕೋಲ್ಹಾರ್‌ಕುಲಕರ್ಣಿ (ಸಂ), ೨೦೦೮, ನಾ.ಶ್ರೀ.ರಾಜಪುರೋಹಿತರ ಸಂಶೋಧನಾ ಲೇಖನಗಳು (೧೮೮೭-೧೯೫೩), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
* ಗದ್ದಗಿಮಠ ಬಿ.ಎಸ್ (ಸಂ), ೧೯೬೨, ಕುಮಾರರಾಮನ ದುಂದುಮೆ, ಪ್ರಬುದ್ಧ ಕರ್ನಾಟಕ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
* ಚದುರಂಗ, ೧೯೬೬, ಕುಮಾರರಾಮ, ನಾಗೇಂದ್ರ ಪ್ರಕಾಶನ, ಮೈಸೂರು
* ಚದುರಂಗ, ೧೯೯೩, ಕುಮಾರರಾಮ, ತಳುಕಿನ ವೆಂಕಣ್ಣಯ್ಯ ಸ್ಮಾರಕಗ್ರಂಥಮಾಲೆ, ಮೈಸೂರು.

* ಚಿದಾನಂದಮೂರ್ತಿ ಎಂ., ೧೯೬೬, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು
* ಚಿದಾನಂಮೂರ್ತಿ ಎಂ., ೧೯೯೫, ಗ್ರಾಮೀಣ, ಭಾಷ್ಕೋ ಪ್ರಕಾಶನ, ಬೆಂಗಳೂರು
* ಜವರೇಗೌಡ ದೇ., ೧೯೬೪, ಕಡುಗಲಿ ಕುಮಾರರಾಮ, ನರೇಶ ಅಂಡ್ ಕಂಪನಿ, ಬೆಂಗಳೂರು
* ಜವರೇಗೌಡ ದೇ., ೧೯೮೧, ರಾಮನಾಥ ಚರಿತೆ
* ಜವರೇಗೌಡ ದೇ., ೧೯೯೪, ನಂಜುಂಡ ಕವಿ, ಸರಸ ಸಾಹಿತ್ಯ ಪ್ರಕಾಶನ, ಮೈಸೂರು
* ತಪಸ್ವೀಕುಮಾರ್ ಎನ್., ೧೯೮೩, ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ವಿಶ್ವವಿದ್ಯಾಲಯ, ಮೈಸೂರು
* ತಿಪ್ಪೇರುದ್ರಸ್ವಾಮಿ ಎಚ್., ೧೯೬೮, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ ವಿ ಕೆ ಮೂರ್ತಿ, ಮೈಸೂರು
* ತುಬಾಕಿ ನಿಲೋಗಲ್, ೧೯೯೩, ಕುಮಾರರಾಮನ ಕುಮ್ಮಟದುರ್ಗ ಒಂದು ಪರಿಚಯ; ಬಿ.ಆರ್. ತಿರುಳ್ಗನ್ನಡ, ಗವಿಸಿದ್ಧ ಮತ್ತು ಇತರರು (ಸಂ) ಅಖಿಲಭಾರತ ೬೨ನೇ ಕನ್ನಡ ಸಾಹಿತ್ಯ ಸಮ್ಮೇಳನ, ಕೊಪ್ಪಳ
* ತಳವಾರ ಎಂ.ಎನ್., ನಂಜುಂಡ ಕವಿಯ ರಾಮನಾಥ ಚರಿತೆ, ಅಭಿರುಚಿ ಪ್ರಕಾಶನ, ಮೈಸೂರು.
* ದಿವಾಕರ ಆರ್.ಬಿ. ಮತ್ತು ಕುಮಾರ ಆರ್.ಬಿ., ೨೦೧೪, ಕರ್ನಾಟಕದಲ್ಲಿ ಕುಮಾರರಾಮನ ಹಬ್ಬ-ಜಾತ್ರೆಗಳು, ಗಂಗೋತ್ರಿ ಪ್ರಕಾಶನ, ರಾಮಸಾಗರ
* ದೀಕ್ಷಿತ್ ಜಿ.ಎಸ್., ವಿಶ್ವೇಶ್ವರ ಎಂ.ವಿ., (ಸಂ) ೧೯೯೧ ಸಂಗಮರ ಕಾಲದ ವಿಜಯನಗರ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು.
* ದುರುಗಪ್ಪ ಎಂ.ಕೆ., ೨೦೦೭, ಕನಕಗಿರಿ ನಾಯಕರು, ಪವಿತ್ರ ಪಬ್ಲಿಕೇಷನ್ಸ್, ಬೆಂಗಳೂರು.
* ದುರುಗಪ್ಪ ಎಂ.ಕೆ., ೨೦೧೦ ವಿಜಯನಗರೋತ್ತರ ಕಾಲೀನ ಬೇಡ ಜನಾಂಗ ಚಾರಿತ್ರಿಕ ಅಧ್ಯಯನ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.
* ದೇವೀರಪ್ಪಎಚ್., (ಸಂ) ೧೯೫೯, ರಾಮನಾಥಚರಿತೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
* ದೇವರಕೊಂಡಾರೆಡ್ಡಿ (ಸಂ) ೧೯೯೮, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* ದೇವರಕೊಂಡಾರೆಡ್ಡಿ (ಸಂ) ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ದೇವರಕೊಂಡಾರೆಡ್ಡಿ (ಸಂ) ೨೦೦೦, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೩, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ದೇವರಾಜ. ಡಿ.ವ್ಹಿ ಮತ್ತು ಪಾಟೀಲ.ಸಿ.ಎಸ್ (ಸಂ) ೧೯೯೮, ವಿಜಯನಗರ ಅಧ್ಯಯನ ಸಂ. ೩, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು.
* ನಂಜಮ್ಮಣ್ಣಿ, ೧೯೭೪, ಸಾಮಾಜಿಕ ಮಾನವಶಾಸ್ತ್ರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
* ನಂಜುಂಡಕವಿ, ೧೯೬೪, ರಾಮನಾಥ ಚರಿತ;, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
* ನಂಜುಂಡಸ್ವಾಮಿ ಎ.ಎಸ್., ೧೯೮೮, ಹೊಯ್ಸಳರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ
* ನಾಯಕ ವಿ.ನ,. ೧೯೯೩, ಹರಿಕಾಂತರ ಸಂಸ್ಕೃತಿ; ಕರ್ನಾಟಕ ಸಾಹಿತ್ಯಅಕಾಡೆಮಿ, ಮೈಸೂರು
* ನಾಯಕ ಹಾ.ಮ., ೧೯೭೧, ಜಾನಪದ ಸ್ವರೂಪ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು
* ನರಸಿಂಹಾಚಾರ್ಯ ಆರ್., ೧೯೭೩, ಕರ್ನಾಟಕ ಕವಿ ಚರಿತೆ ಸಂ-೨, ಪ್ರ.ಕ.ಸಾ.ಪ. ಬೆಂಗಳೂರು
* ನರಸಿಂಹಚಾರ್ ಡಿ.ಎಲ್., ೧೯೪೧, ಕುಮಾರರಾಮನ ಸಾಂಗತ್ಯ, ಕನ್ನಡನುಡಿ
* ನಾಗಯ್ಯಜೆ.ಎಂ., ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಸಂಪುಟ ಒಂದು, ಲೋಹಿಯಾ ಪ್ರಕಾಸನ ಬಳ್ಳಾರಿ
* ನಿಂಗಣ್ಣ .ಬಿ.ಸಿ, ೨೦೦೮, ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಸಿದ್ದಲಿಂಗೇಶ್ವರ ಪ್ರಕಾಶನ, ಗುಲಬರ್ಗಾ
* ನೇಗಿನಹಾಳ ಎಂ.ಬಿ., ೧೯೯೯, ನೇಗಿನಹಾಳ ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಪಾಂಡುರಂಗರಾವ್, ೧೯೭೮, ಹಂಪೆ; ಐ ಬಿ ಎಚ್ ಪ್ರಕಾಶನ, ಬೆಂಗಳೂರು
* ಪಾಟೀಲ್ ಸಿ.ಎಸ್., ೧೯೯೮, ಮುಮ್ಮಡಿಸಿಂಗನ ಮೇಲೆ ಮತ್ತಷ್ಟು ಬೆಳಕು, ವಿಜಯನಗರ ಅಧ್ಯಯನ ಸಂ.೩, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

* ಪುಟ್ಟಣ್ಣಎಂ.ಎಸ್., ೧೯೨೪, ಚಿತ್ರದುರ್ಗದ ಪಾಳೆಯಗಾರರು, ಬೆಂಗಳೂರು
* ಪರಮಶಿವಯ್ಯ ಜಿ.ಶಂ. ೧೯೭೯, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು
* ಪುರುಷೋತ್ತಮ ಬಿಳಿಮಲೆ, ೧೯೯೭, ಕರ್ನಾಟಕದಲ್ಲಿ ಕುಮಾರರಾಮನ ಪಂಥ (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಪುರುಷೋತ್ತಮ ಬಿಳಿಮಲೆ, ೧೯೯೯, ಕುಮಾರರಾಮ ಮತ್ತು ಕುಮ್ಮಟದುರ್ಗ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಪ್ರಕಾಶ ಹುಣಸಿಗಿ, ೧೯೮೭, ಗಂಗಾವತಿ ತಾಲ್ಲೂಕು ದರ್ಶನ, ಐಬಿಎಚ್ ಪ್ರಕಾಶನ, ಬೆಂಗಳೂರು
* ಬೋರಲಿಂಗಯ್ಯ ಹಿ.ಚಿ., ಪ್ರಭಾಕರಎ.ಎಸ್. (ಸಂ), ೨೦೦೫, ಬುಡಕಟ್ಟು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಭೂಸನೂರಮಠ (ಸಂ), ೧೯೮೮, ವಿಜಯಕಲ್ಯಾಣ
* ಭೋಜರಾಜ ಪಾಟೀಲ, ೧೯೯೮, ಕುಮಾರರಾಮನನ್ನು ಕುರಿತ ಇತಿಹಾಸ ಮಹತ್ವದ ಒಂದು ಹೊಸ ಶಾಸನ; ಇತಿಹಾಸದರ್ಶನ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
* ಮಹದೇವ ಸಿ., ೨೦೦೧, ಕರ್ನಾಟಕ ಪುರಾತತ್ವ ಶೋಧ; ಶ್ರೀ ಲಕ್ಷ್ಮೀ ಪ್ರಕಾಶನ, ಶ್ರೀರಂಗಪಟ್ಟಣ
* ಮಹದೇವ ಸಿ. ಮತ್ತುಇತರರು, ೨೦೦೩, ಹೊಸಪೇಟೆ ತಾಲೂಕು ದರ್ಶನ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಮಹದೇವ ಸಿ., ೨೦೦೯, ಕುಮ್ಮಟದುರ್ಗದ ಅರಸರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಮಹದೇವ ಸಿ., ೨೦೧೫, ಶಾಸನಗಳಲ್ಲಿ ಕುಮ್ಮಟದುರ್ಗದ ಅರಸರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಯೋಗೀಶ್ವರಪ್ಪ ಡಿ.ಎನ್., ೨೦೧೬, ಕನ್ನಡ ಕಾವ್ಯಗಳಲ್ಲಿ ಚಾರಿತ್ರಿಕ ಅಂಶಗಳು
* ರಾಜಪ್ಪಟಿ.ಎಸ್. (ಸಂ), ೧೯೭೬, ರಾಯಚೂರು ಜಿಲ್ಲೆಯ ಜನಪದ ಗೀತೆಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು
* ರಾಜೇಂದ್ರಡಿ.ಕೆ., (ಸಂ), ೧೯೭೩, ನಮ್ಮ ಸುತ್ತಿನ ನಂಬಿಕೆಗಳು, ಮೈಸೂರು ವಿಶ್ವವಿದ್ಯಾಲಯ ಮೈಸೂರು

* ರಾಜೇಗೌಡ ಹ.ಕ., ೧೯೭೩, ಕರ್ನಾಟಕದ ವ್ಯವಸಾಯ ಪದ್ಧತಿ, ಐ ಬಿ ಏಚ್ ಪ್ರಕಾಶನ, ಬೆಂಗಳೂರು
* ರಾಜಣ್ಣರಾಜನ, ೧೯೮೨, ನಾಯಕ ಜನಾಂಗದ ಇತಿಹಾಸ, ಚಳ್ಳಕೆರೆ
* ರಾಮಚಂದ್ರೇಗೌಡ ಹಿ.ಶಿ., ೧೯೮೭, ಜಾನಪದ ಅಂತರಂಗ, ಮಾನವಿ ಪ್ರಕಾಶನ, ಮೈಸೂರು
* ರಾಮಶರ್ಮ ಎಂ.ಎಚ್., ೧೯೯೦, ರಣಧೀರ ರಾಮನಾಥ, ಬೆಂಗಳೂರು
* ರಾಮೇಗೌಡ, ೧೯೯೨, ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು ಚಿತ್ರಕೂಟ, ಜಯಲಕ್ಷ್ಮೀಪುರ ಮೈಸೂರು.
* ರುದ್ರಪ್ಪ ಪಿ. (ಸಂ) ೧೯೮೦, ಬೆಂಗಳೂರು ಕುಮಾರರಾಮ; ದೀಪಾವಳಿ ಶ್ರೀಕಾರಿ, ಬೆಂಗಳೂರು
* ರುದ್ರಮೂರ್ತಿಶಾಸ್ತ್ರಿ. ಸು, ೧೯೯೦, ಕುಮಾರರಾಮ, ಎಸ್.ಬಿ.ಎಸ್. ಪಬ್ಲಿಷರ್ ಆಂಡ್ ಡಿಸ್ಟ್ರಿಬ್ಯೂಟರ್, ಬೆಂಗಳೂರು.
* ಲಕ್ಷಣ್‌ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ. (ಸಂ) ೧೯೯೫ ಹುಲ್ಲೂರ ಶ್ರೀನಿವಾಸ ಜೋಯಿಸರ ಸಂಶೋಧನ ಲೇಖಗಳು; ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.
* ಲಕ್ಷಣ್‌ತೆಲಗಾವಿ (ಸಂ) ೧೯೮೨ ಹರತಿ ಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಚಿತ್ರದುರ್ಗ.
* ಲಿಂಗಯ್ಯ ಡಿ., ೧೯೭೬, ಕರ್ನಾಟಕ ಜನಪದ ಕಾವ್ಯಗಳು, ದಿನಕರ ಪ್ರಕಾಶನ, ತುಮಕೂರು
* ವರದರಾಜರಾವ್ ಜಿ., ೧೯೬೩, ಕುಮ್ಮಟಕೇಸರಿ ಉಷಾ ಸಾಹಿತ್ಯ ಮಾಲೆ; ಮೈಸೂರು
* ವರದರಾಜರಾವ್ ಜಿ., ೧೯೬೬, ಕುಮಾರರಾಮನ ಸಾಂಗತ್ಯಗಳು
* ವರದರಾಜರಾವ್.ಜಿ, ೧೯೮೫, ಕುಮ್ಮಟಕೇಸರಿ, ಐ.ಬಿ.ಎಸ್. ಪ್ರಕಾಶನ
* ವರದರಾಜ ಹುಯಿಲಗೋಳ, ೧೯೫೨, ಅಮೃತಮತಿ (ರತ್ನಾಜಿ), ಸಂಸ್ಕೃತಿ ಪ್ರಕಾಶನ, ಧಾರವಾಡ.
* ವಸುದೇವ್ ಭೂಪಾಲಂ, ೧೯೫೯, ಕುಮ್ಮಟವಲ್ಲಭ, ಶಶಿ ಪ್ರಕಾಶನ, ಬೆಂಗಳೂರು.
* ವಸುಂದರಾ ಫಿಲೋಜಾ ೧೯೮೦, ವಿಜಯನಗರ ಸ್ಥಾಪನೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

* ವೀರಣ್ಣರಾಜೂರು, ೧೯೮೫, ಕನ್ನಡ ಸಾಂಗತ್ಯ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
* ವೀರಣ್ಣರಾಜೂರು, ೧೯೯೮, ಅಶ್ವಿನಿ ಪ್ರಕಾಶನ, ಗದಗ
* ವೀರಣ್ಣರಾಜೂರು, ೧೯೮೦, ರತ್ನಾಜಿ ಮತ್ತು ಕೆಳದಿ ಚೆನ್ನಮ್ಮಾಜಿ, ಮಂಗಳ ಪ್ರಕಾಶನ, ಕಲ್ಯಾಣನಗರ, ಧಾರವಾಡ
* ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಕರ್ನಾಟಕದಲ್ಲಿ ತಳವಾರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ವಾಲ್ಮೀಕಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ
* ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೭, ಬೇಟೆ ಮತ್ತು ಬೇಡರು, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ
* ವಿರೂಪಾಕ್ಷಿ ಪೂಜಾರಹಳ್ಳಿ, ೨೦೧೫, ವಿಜಯನಗರ ಕಾಲದ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ವೀರೇಶ ಬಡಿಗೇರ (ಸಂ), ೧೯೯೯, ಉತ್ತರಕರ್ನಾಟಕದ ಜಾನಪದ ಗೀತ ಮೇಳಗಳು, ವಿಮೋಚನಾ ಪ್ರಕಾಶನ, ದೇವದಾಸಿ ಪುನರ್ವಸತಿ ಸಂಘ, ಅಥಣಿ
* ಶಿವರಾಮು, ೧೯೭೧, ಕನ್ನಡದ ಕಡುಗಲಿಗಳು, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು
* ಶೇಷಶಾಸ್ತ್ರಿ, ೧೯೮೨, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೪, ಭಾಗ-೨, ೧೯೭೭, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
* ಸಾವಿತ್ರಿ ಎಸ್.ಎಂ., ೨೦೦೨, ಕುಮಾರರಾಮ ಸಂಪ್ರದಾಯದ ಅಧ್ಯಯನ, ಚಿತ್ರಶ್ರೀ ಪ್ರಕಾಶನ, ಹೊಸಪೇಟೆ
* ಸೋಮಶೇಖರ್ ಎಸ್.ವೈ., ೨೦೧೭, ಕರ್ನಾಟಕ ದೇವಾಲಯ ಕೋಶ ಚಿತ್ರದುರ್ಗ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಹರ್ಲಾಪುರ ಬಿ, ೧೯೯೯, ಕೈಫಿಯತ್ತುಗಳಲ್ಲಿ ಕುಮಾರರಾಮ, ಮಹರ್ಷಿ ವಾಲ್ಮೀಕಿ ಪ್ರಕಾಶನ, ಹರ್ಲಾಪುರ

* ಹಾ.ಮಾ. ನಾಯಕ, ೧೯೭೧, ಜಾನಪದ ಸ್ವರೂಪ, ತಳುಕಿನ ವಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ

* ಹುಲ್ಲೂರು ಶ್ರೀನಿವಾಸ ಜೋಯಿಸ, ೧೯೪೧ (ಪ್ರಮು), ಗಂಡುಗಲಿ ಕುಮಾರರಾಮ, ಮಿಂಚಿನ ಬಳ್ಳಿ ಗ್ರಂಥಮಾಲೆ, ಧಾರವಾಡ.

* ಹುಲ್ಲೂರು ಶ್ರೀನಿವಾಸ ಜೋಯಿಸ, ೧೯೫೫, ರಸಿಕರಂಜಿನಿ ಪ್ರಕಾಶನ, ಅರಸಿಕೆರೆ

**ಜಾನಪದ ಸಾಹಿತ್ಯ ಕೃತಿಗಳು:**

* ಕೃಷ್ಣಮೂರ್ತಿ ಹನೂರು : ೧೯೮೭, ಜನಪದ ವೀರ ಗೀತೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

* ಕೃಷ್ಣಶರ್ಮ ಬೆಟಗೇರಿ ; ೧೯೭೬, ಕನ್ನಡಜಾನಪದ ಸಮೀಕ್ಷೆ, ಧಾರವಾಡ

* ಕೃಷ್ಣಸ್ವಾಮಿ ಕ.ರಾ. : ೧೯೬೫, ಪಾಳೆಯಗಾರರ ಪದಗಳು, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು.

* ಗದ್ದಗಿಮಠ ಬಿ.ಎಸ್. : ೧೯೬೩, ಕನ್ನಡ ಜನಪದ ಗೀತೆಗಳು, ಕ.ವಿ.ವಿ, ಧಾರವಾಡ

* ಚನ್ನಬಸಪ್ಪ ಗೊ.ರು. : ೧೯೭೭, ಕರ್ನಾಟಕ ಜಾನಪದ ಕಲೆಗಳು. ಕ.ಸಾ.ಪ, ಬೆಂಗಳೂರು

* ಜವರೇಗೌಡ ದೇ : ೧೯೭೬, ಜಾನಪದ ಅಧ್ಯಯನ, ಡಿ.ವಿ.ಕೆ. ಮೂರ್ತಿ, ಮೈಸೂರು

* ಪರಮಶಿವಯ್ಯ ಜಿ.ಶಂ. : ೧೯೭೯, ದಕ್ಷಿಣಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಪ್ರಸಾರಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

**ಸ್ಮರಣ ಸಂಚಿಕೆಗಳು:**

* ನಾಯಕ ವಾಲ್ಮೀಕಿ ಜನಾಂಗದ ಮಹಾಸಮ್ಮೇಳನ ಸ್ಮರಣ ಸಂಚಿಕೆ, ಹುಬ್ಬಳ್ಳಿ.

* ವಾಲ್ಮೀಕಿ ಬಂಧು, (ಅಖಿಲ ಕರ್ನಾಟಕ ನಾಯಕ ಜನಾಂಗದ ದ್ವಿತಿಯ ಮಹಾಸಮ್ಮೇಳನ, ದಾವಣಗೆರೆ-೧೯೭೩)

* ವಾಲ್ಮೀಕಿ ಮಂದಾರ, ೧೪.೧೦.೨೦೦೮, ಪು. ೨೪೫-೨೪೭

* ವಾಲ್ಮೀಕಿಜ್ಯೋತಿ (ಅಖಿಲ ಕರ್ನಾಟಕ ನಾಯಕ ಜನಾಂಗದತೃತೀಯ ಮಹಾಸಮ್ಮೇಳನ, ಹುಬ್ಬಳ್ಳಿ-೧೯೮೯)

* ಹರ್ತಿಕೋಟೆ ವೀರೇಂದ್ರಸಿಂಹ (ಸಂ), ಬಿಚ್ಚುಗತ್ತಿ (ಅಖಿಲ ಕರ್ನಾಟಕ ಗಿರಿಜನ ನಾಯಕ ಜನಾಂಗದ ಸಂಘಟನಾ ಸಮ್ಮೇಳನ ಹರ್ತಿಕೋಟೆ-೧೯೮೭)

* ಹರ್ತಿಕೋಟೆ ವಿರೇಂದ್ರಸಿಂಹ (ಸಂ): ವಾಲ್ಮೀಕಿ ಕಿರಣ, ೧೯೯೮, ಶ್ರೀ ವಾಲ್ಮೀಕಿ ಮಹಾಸಂಸ್ಥಾನ, ರಾಜನಹಳ್ಳಿ.

**ಲೇಖನಗಳು**

* ಅಭಿಶಂಕರ್ ಕಂಪಲಿ/ಕುಮ್ಮಟ: ಚಿಕ್ಕರಾಜ್ಯದದೊಡ್ಡ ಮಾರ್ಮಿಕ ಪಾತ್ರ, (ಸಂ) ಸೂರ್ಯನಾಥ ಕಾಮತ್, ಲಕ್ಷ್ಮಣ್‌ತೆಲಗಾವಿ, ಇತಿಹಾಸದರ್ಶನ, ಸಂ.೫, ೧೯೯೦, ಪು. ೧೩೮-೧೪೧
* ಕಣಗಲಿ ಸಿದ್ದೇಶ್ವರ ಬಿ., ವೀರಜನಾಂಗ, ವಾಲ್ಮೀಕಿ ಸಂದೇಶ, ಗದಗ ಬೆಟಗೇರಿ, ಆಗಸ್ಟ್ ೧೫, ೧೯೮೪, ಪು. ೧೦
* ಕಿತ್ತೂರ ಆರ್.ಬಿ: ವಾಲ್ಮೀಕಿ ವಂಶಜರು, ವಾಲ್ಮೀಕಿ ಸಂದೇಶ, ಗದಗ ಬೆಟಗೇರಿ, ಫೆಬ್ರವರಿ ೧೫, ೧೯೪೮ ಪು ೬-೭ ಮತ್ತು ೧೦
* ಕೋಲುಕಾರ ನೇ.ಹ:(ಸಂ)ವಾಲ್ಮೀಕಿ ಸಂದೇಶ, ಗದಗ ೧೯೮೭ ಸಂಪುಟ ೫, ಸಂಚಿಕೆ ೪,
* ಚಿತ್ರಲಿಂಗಯ್ಯ ಎಂ.ವಿ: ಪರನಾರಿ ಸೋದರನಕಥೆ, ವಾಲ್ಮೀಕಿ ಸಂದೇಶ, ಆಗಸ್ಟ್ ೧೫, ೧೯೮೩, ಪು. ೧೮-೧೯
* ಚಿತ್ರಲಿಂಗಯ್ಯ ಎಂ.ವಿ: ಮುಮ್ಮಡಿ ಸಿಂಗೆಯ ನಾಯಕ, ವಾಲ್ಮೀಕಿ ಸಂದೇಶ, ಜೂನ್ ೧೫, ೧೯೮೬, ಪು ೯-೧೮-೨೦.
* ಚಿಕಾಗುಡ್ಡ ಡಿ.ಬಿ. ಥಂಗೆ, ಬೇಡರ ಸಮಾಜ, ವಾಲ್ಮೀಕಿ ಸಂದೇಶ, ಆಗಸ್ಟ್ ೧೫, ೧೯೮೩, ಪು. ೯-೧೦
* ತುಬಾಕಿ ಬಿ.ಆರ್., ಕುಮ್ಮಟದುರ್ಗ ವಿಜಯನಗರದ ಅಡಿಗಲ್ಲು, ವಾಲ್ಮೀಕಿ ಸಂದೇಶ, ಮಾರ್ಚ್ ೧೫, ೧೯೮೬
* ಭೋಜರಾಜ ಪಾಟೀಲ, ಕುಮಾರರಾಮನನ್ನು ಕುರಿತ ಐತಿಹಾಸಿಕ ಮಹತ್ವದ ಒಂದು ಹೊಸ ಶಾಸನ, ಸಂ-೧೩, ೧೯೧೮, ಪು. ೩೨
* ರಾಧಾಕೃಷ್ಣಮೂರ್ತಿ, ಸಂಸ್ಕೃತ ಕಾವ್ಯಗಳಲ್ಲಿ ರಾಜ ಮನೋರಂಜನೆಯಾಗಿ ಬೇಟೆ, ಇತಿಹಾಸ ದರ್ಶನ, ಸಂ.೭, ೧೯೯೨, ಪು. ೨೩೩
* ಹರ್ತಿಕೋಟೆ ವೀರೇಂದ್ರಸಿಂಹ (ಸಂಗ್ರಹ), ಬೇಡರ ವಂಶೀಯರಾದ ಹಕ್ಕ-ಬುಕ್ಕರಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆ
* ಹನುಮಂತರೆಡ್ಡಿ ವೈ., ಕುಮಾರರಾಮನ ಭಟ್ಟರಹಳ್ಳಿಯ ಶೋಧನೆ, ಇತಿಹಾಸ ದರ್ಶನ, ಸಂ-೨೦, ೨೦೦೫, ಪು. ೨೯೮-೩೦೦

**ನಾಟಕಗಳು**

* ಉಮಾಪತಿಎಸ್., ೧೯೭೫, ಎರಡು ಐತಿಹಾಸಿಕ ನಾಟಕಗಳು, ಸಂಸ್ಕೃತ ಸಾಹಿತ್ಯ ಸದನ, ಮೈಸೂರು.
* ಕನಕಗಿರಿ ವಾದಿರಾಜ, ೧೯೯೪, ಕುಮಾರರಾಮ, ನಟರಾಜ ಪ್ರಕಾಶನ, ಕಂಪ್ಲಿ
* ಚದುರಂಗ, ೧೯೯೩, ಕುಮಾರರಾಮ, ನಾಗೇಂದ್ರ ಪ್ರಕಾಶನ, ಮೈಸೂರು
* ವೀರಣ್ಣರಾಜೂರ, ೧೯೮೦, ರತ್ನಾಜಿ ಮತ್ತು ಕೆಳದಿ ಚೆನ್ನಮ್ಮ, ಮಂಗಳ ಪ್ರಕಾಶನ, ಧಾರವಾಡ.
* ಶ್ರೀಕಂಠ ಕೂಡಿಗೆ (ಸಂ). ೨೦೦೬, ವಸುದೇವ ಭೂಪಾಲಂಅವರ ಸಮಗ್ರ ಸಾಹಿತ್ಯ ಸಂ.೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

**ಕಾದಂಬರಿಗಳು**

* ಕೊರಟಿ ಶ್ರೀನಿವಾಸರಾವ್, ೨೦೦೬, ಕನ್ನಡಿಗರ ಕಾಳರಾತ್ರಿ, ಆನಂದ ನಿಲಯ ಪ್ರಕಾಶನ, ಬೆಂಗಳೂರು.
* ಕೊರಟಿ ಶ್ರೀನಿವಾಸರಾವ್, ೨೦೦೬, ಕುಮಾರರಾಮ, ಆನಂದ ನಿಲಯ ಪ್ರಕಾಶನ, ಬೆಂಗಳೂರು.
* ರುದ್ರಮೂರ್ತಿ ಶಾಸ್ತ್ರ ಸು., ೨೦೦೫, ಕುಮಾರರಾಮ, ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು.
* ಹರ್ತಿಕೋಟೆ ವೀರೇಂದ್ರ ಸಿಂಹ (ಸಂ), ದುರ್ಗದ ದವಳಕೀರ್ತಿ ಪು. ೫೩–೫೭

**ಗದ್ಯ ಬರಹಗಳು**

* ಕರಿಬಸವಯ್ಯ ಟಿ.ಆರ್., ೧೯೮೭, ಕುಮಾರರಾಮ, ಕಂಠೀರವಕಲಾವೃಂದ, ಬೆಂಗಳೂರು
* ತಲಗಡೆ ಬಿ.ಎಂ. (ಸಂ) ೧೯೮೧, ಪರದಾರ ಸೋದರ, ಯುವಜನ ಸಾಹಿತ್ಯಾಧ್ಯಯನ ವೇದಿಕೆ, ಇಳಕಲ್ಲು.
* ರಾಮಶರ್ಮ ವೈ.ಹ. ೧೯೬೦, ರಣಧೀರರಾಮನಾಥ, ಶಾರದಾ ಮಂದಿರ, ಮೈಸೂರು.
* ವರದರಾಜರಾವ್ ಜಿ, ೧೯೮೫, ಕುಮ್ಮಟದುರ್ಗ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು
* ವರದರಾಜರಾವ್ ಜಿ, ೧೯೯೩, ಕುಮ್ಮಟದಕೇಸರಿ, ಉಷಾ ಸಾಹಿತ್ಯ ಮಾಲೆ, ಮೈಸೂರು
* ಶ್ರೀಧರ ಕೋಟೆಕಾರ, ೧೯೭೦, ಕುಮಾರರಾಮ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು
* ಹುಲ್ಲೂರು ಶ್ರೀನಿವಾಸ ಜೋಯಿಸ್, ೧೯೫೫, ಕಡುಗಲಿ ಕುಮಾರರಾಮ, ರಸಿಕ ರಂಜನಾ ಪ್ರಕಾಶನ, ಅರಸೀಕೆರೆ

## ಯಕ್ಷಗಾನ ಪ್ರಸಂಗ


* ಮಧುಕುಮಾರ ಬೋಳಾರ, ೧೯೮೪, ಕಡುಗಲಿ ಕುಮಾರರಾಮ, ಮರೊಳಿ ಪ್ರಕಾಶನ, ಮಂಗಳೂರು


## ಪಿಎಚ್.ಡಿ. ಮತ್ತುಎಂ.ಫಿಲ್. ಮಹಾಪ್ರಬಂಧ


* ಅಮರೇಶ, ಕುಮಾರರಾಮನ ಕಾವ್ಯಗಳು, ಪಿಎಚ್.ಡಿ. ಮಹಾಪ್ರಬಂಧ
* ಕರಡೋಣಿ ಡಿ.ಬಿ., ೨೦೦೮, ಜನಪದ ಸಾಹಿತ್ಯದಲ್ಲಿ ಕುಮಾರರಾಮ, ಪಿಎಚ್.ಡಿ. ಮಹಾಪ್ರಬಂಧ
* ಮಂಜುನಾಥ ಟಿ.ಎಂ., ಕುಮ್ಮಟದ ನಾಯಕರು, ಒಂದು ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ
* ಷಣ್ಮುಕ, ೨೦೦೮, ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುಮಾರರಾಮ, ಎಂ.ಫಿಲ್. ಸಂಪ್ರಬಂಧ, ಅಪ್ರಕಟಿತ
* ಸುರೇಶ ಹರ್ಲಾಪುರ ಬಿ., ಕುಮಾರರಾಮನ ಅಧ್ಯಯನ ಆಕರಗಳು, ಪಿಎಚ್.ಡಿ. ಮಹಾಪ್ರಬಂಧ


## ಎಂ.ಎ. ನಿಬಂಧಗಳು


* ಚಂದ್ರಪ್ಪ ಬಂಡಿ, ೨೦೧೪, ಗಂಗಾವತಿ ತಾಲ್ಲೂಕಿನ ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು ಸಾಂಸ್ಕೃತಿಕ ಅಧ್ಯಯನ, ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ
* ತಾಯಪ್ಪ, ೨೦೧೩, ಕುಮ್ಮಟದುರ್ಗದ ಕುಮಾರರಾಮ ಸಾಂಸ್ಕೃತಿಕ ಅಧ್ಯಯನ, ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ
* ಭೀಮನಗೌಡ, ೨೦೧೩, ಗಂಗಾವತಿ ಪರಿಸರದ ಐತಿಹ್ಯಗಳು, ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ
* ಶ್ರೀ ಸುಖಮುನಿ, ೨೦೧೫, ಗಂಗಾವತಿ ಪರಿಸರದ ಏಳು ಗುಡ್ಡಗಳ ಸಾಂಸ್ಕೃತಿಕ ಅಧ್ಯಯನ, ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ

**ಪತ್ರಿಕೆಗಳು**

* ಕನ್ನಡಪ್ರಭ
* ಕರ್ಮವೀರ
* ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ
* ಜಯಕರ್ನಾಟಕ
* ಪ್ರಜಾವಾಣಿ
* ಪ್ರಬುದ್ಧ ಕರ್ನಾಟಕ
* ವಾಗ್ಭೂಷಣ
* ಶರಣ ಸಾಹಿತ್ಯ
* ಸುಬೋಧ

## ಕರ್ನಾಟಕ ರಾಜ್ಯ

### ಕುಮ್ಮಟದುರ್ಗದ ನಾಯಕರ ಪ್ರಮುಖ ಶಾಸನಗಳು ದೊರೆತಿರುವ ನೆಲೆಗಳು

ಬೀದರ್
ಕಲಬುರ್ಗಿ
ವಿಜಯಪುರ
ಯಾದಗಿರಿ
ಬಾಗಲಕೋಟೆ
ಬೆಳಗಾವಿ
ರಾಯಚೂರು
ಕೊಪ್ಪಳ
ಧಾರವಾಡ
ಬಳ್ಳಾರಿ
ಉತ್ತರ ಕನ್ನಡ
ದಾವಣಗೆರೆ
ಚಿತ್ರದುರ್ಗ
ಉಡುಪಿ
ಚಿಕ್ಕಮಗಳೂರು
ಚಿಕ್ಕಬಳ್ಳಾಪುರ
ಬೆಂಗಳೂರು
ಕೋಲಾರ
ಹಾಸನ
ದಕ್ಷಿಣ ಕನ್ನಡ
ಬೆಂಗಳೂರು ನಗರ
ಮಂಡ್ಯ
ರಾಮನಗರ
ಕೊಡಗು
ಮೈಸೂರು
ಚಾಮರಾಜನಗರ



1. ಬೇಲೂರು
2. ಹೀರೆಕೋಗಿಲೂರು
3. ಹೀರೆಕೋಗಿಲೂರು
4. ಲೋಕದೊಳಲು
5. ಚಳ್ಳಕೆರೆ
6. ಲಕ್ಷ್ಮೇಶ್ವರ
7. ಹರಿಹರ
8. ಜೇನುಕಲ್ಲು
9. ಹೊಳೆನರಸೀಪುರ
10. ಚಿಟ್ಟನಹಳ್ಳಿ
11. ಕುಮ್ಮಟದುರ್ಗ
12. ಕುಮ್ಮಟದುರ್ಗ
13. ಹೊಸನಗರ(ಹೊಸಕೋಟೆ)
14. ರಾಮಗಡ
15. ಯರಬಳ್ಳಿ
16. ಕಡಸೂರು
17. ಕೂಡ್ಲಿ
18. ಹಂಪಿ
19. ಲಕ್ಷ್ಮೇಶ್ವರ
20. ಸಂಗೂರು
21. ಕೊಕ್ಕೋಡು
22. ರಾಮಗಡ
23. ಬನ್ನಿಗೋಳ

# ಕರ್ನಾಟಕ ರಾಜ್ಯ

## ಕುಮಾರರಾಮನನ್ನು ಆರಾಧಿಸುವ ಕರ್ನಾಟಕದಲ್ಲಿನ ನೆಲೆಗಳು



ನಕ್ಷೆ: ಕುಮ್ಮಟದುರ್ಗ




ಕೃಪೆ: ವಿಜಯನಗರ ಪ್ರೋಗ್ರೆಸ್ಸ್ ಆಫ್ ರಿಸರ್ಚ್ ೧೯೮೭-೮೮

## ಕುಮ್ಮಟದುರ್ಗದ ನಕ್ಷೆಯ ವಿವರ

೧. ಗಂಗಾವತಿ-ಕೊಪ್ಪಳ ರಸ್ತೆ
೨. ಮುಕ್ಕುಂಪಿ ಗ್ರಾಮ
೩. ಮುಕ್ಕುಂಪಿ ಕೆರೆ
೪. ಪಾಪಸುಗುಡ್ಡ
೫. ಜಬ್ಬಲಗುಡ್ಡ
೬. ಕೆರೆಯ ಏರಿ
೭. ವಾಯವ್ಯ ದಿಕ್ಕಿನ ಹೊರಭಾಗದ ಕೋಟೆ
೮. ವಾಯವ್ಯ ದಿಕ್ಕಿನ ಮಧ್ಯದ ಕೋಟೆ
೯. ವಾಯವ್ಯ ದಿಕ್ಕಿನ ಒಳಭಾಗದ ಕೋಟೆ
೧೦. ವೀರಗಲ್ಲುಗಳು
೧೧. ದೇವಿ, ಸೂರ್ಯ ಮತ್ತು ಲಿಂಗಪೀಠ
೧೨. ಭಗ್ನವಾದ ದೇವಾಲಯ
೧೩. ವಕ್ರಾಣಿ ಕೆರೆ
೧೪. ಮಾದಿಗ ಹಂಪೆಯನ ಗುಡ್ಡ
೧೫. ಜೇನುಕಲ್ಲು
೧೬. ಈಶ್ವರ ದೇವಾಲಯ
೧೭. ಕುಮಾರರಾಮನಗುಡ್ಡ
೧೮. ಜೈನ ದೇವಾಲಯ
೧೯. ಅರಮನೆಗಳ ಅಧಿಷ್ಠಾನಗಳು
೨೦. ಮಧ್ಯಭಾಗದಲ್ಲಿರುವ ಮುಖ್ಯ ಕೋಟೆ
೨೧. ರಾಮಸ್ವಾಮಿ ದೇವಾಲಯ
೨೨. ಆನೆಪಾದ
೨೩. ಕುಮಾರರಾಮನಗುಡ್ಡದ ನೈರುತ್ಯಕ್ಕಿರುವ ಒಳಭಾಗದ ಕೋಟೆ
೨೪. ಕುಮಾರರಾಮನಗುಡ್ಡದ ದಕ್ಷಿಣಕ್ಕಿರುವ ಒಳಭಾಗದ ಕೋಟೆ
೨೫. ವೀರಗಲ್ಲು
೨೬. ತೋರಣ
೨೭. ಶಾಸನೋಕ್ತ ವೀರಗಲ್ಲು
೨೮. ಕುಮಾರಾರಮನಗುಡ್ಡ ಮತ್ತು ಗುಲಗಂಜಿಗುಡ್ಡ ಮಧ್ಯದಲ್ಲಿರುವ ಕೋಟೆ
೨೯. ಗುಲಗಂಜಿಗುಡ್ಡ
೩೦. ಗುಲಂಗಜಿಗುಡ್ಡ ಮತ್ತು ಕಾಟಪ್ಪನಗುಡ್ಡದ ಮಧ್ಯದ ಕೋಟೆ
೩೧. ಭಗ್ನವಾದ ದೇವಾಲಯ ಮತ್ತು ವೀರಗಲ್ಲು
೩೨. ಕುಮಾರರಾಮನಗುಡ್ಡದ ಹೊರ ಭಾಗದ ಕೋಟೆ
೩೩. ಕುಮಾರರಾಮನಗುಡ್ಡದ ನೈರುತ್ಯ ದಿಕ್ಕಿನ ಹೊರಭಾಗದ ಕೋಟೆ
೩೪. ಹಾಳುಬಿದ್ದ ಗ್ರಾಮ
೩೫. ಹಾಲುಬಾವಿ
೩೬. ಕುಮಾರರಾಮನಗುಡ್ಡದ ನೈರುತ್ಯಕ್ಕಿರುವ ಕುದುರೆ ಕಲ್ಲುಗಳು
೩೭. ಕುಮಾರರಾಮನಗುಡ್ಡದ ನೈರುತ್ಯಕ್ಕಿರುವ ಕುದುರೆ ಕಲ್ಲುಗಳು
೩೮. ಕುಮಾರರಾಮನಗುಡ್ಡದ ನೈರುತ್ಯಕ್ಕಿರುವ ಕುದುರೆ ಕಲ್ಲುಗಳು
೩೯. ಕುಮಾರರಾಮನಗುಡ್ಡದ ನೈರುತ್ಯಕ್ಕಿರುವ ಕುದುರೆ ಕಲ್ಲುಗಳು
೪೦. ಹಳೆ ಕುಮ್ಮಟ ಗ್ರಾಮ
೪೧. ಹಳೆ ಕುಮ್ಮಟ ಬೂದಗುಂಪ ರಸ್ತೆ
೪೨. ಕಾಟಪ್ಪನಗುಡ್ಡ
೪೩. ಬೊಲ್ಲನಗುಡ್ಡ ಮತ್ತು ಕಾಟಪ್ಪನ ಗುಡ್ಡದ ಮಧ್ಯದ ಕೋಟೆ
೪೪. ಬೊಲ್ಲನಗುಡ್ಡ ಮತ್ತು ಕಾಟಪ್ಪನ ಗುಡ್ಡದ ಮಧ್ಯದ ಕೋಟೆ
೪೫. ಬೊಲ್ಲನಗುಡ್ಡ ಮತ್ತು ಕಾಟಪ್ಪನ ಗುಡ್ಡದ ಮಧ್ಯದ ಕೋಟೆ
೪೬. ಬೊಲ್ಲನಗುಡ್ಡ
೪೭. ಹನುಮಂತದೇವರ ಗುಡ್ಡ
೪೮. ಬೊಲ್ಲನಕೆರೆ
೪೯. ಭಗ್ನವಾದ ದೇವಾಲಯ ಮತ್ತು ವೀರಗಲ್ಲುಗಳು
೫೦. ಕುಮಾರರಾಮನಗುಡ್ಡದ ಪೂರ್ವಕ್ಕಿರುವ ಪ್ರಮುಖ ಭಾಗದ ಕೋಟೆ

ಕುಮ್ಮಟದುರ್ಗದಲ್ಲಿ ಶಿಥಿಲಗೊಂಡಿರುವ ಕೋಟೆ



ಕಂಪಲಿರಾಯನ ಕೋಟೆ, ಕಂಪ್ಲಿ

ಮೆಟ್ರಿಕಿಯಲ್ಲಿರುವ ಕುಮಾರರಾಮನ ದೇವಾಲಯ



ಕುಮಾರರಾಮನ ಮೂರ್ತಿ ಇರುವ ಪೆಟ್ಟಿಗೆ, ಮೆಟ್ರಿಕಿ

ಕುಮ್ಮಟದುರ್ಗದ ಮೇಲಿರುವ ಜೈನಬಸದಿ



ಕುಮ್ಮಟದುರ್ಗದ ಕೋಟೆಯ ಪ್ರವೇಶ ದ್ವಾರ

